# ಶ್ರೀಮದ್ವಾಲ್ಮೀಕಿ ರಾಮಾಯಣಮ್

# ಕಿಷ್ಕಿಂಧಾಕಾಂಡಃ

( ಕನ್ನಡ ಅನುವಾದ ಸಹಿತ )

ಮುನ್ನುಡಿ

ಡಾ|| ಡಿ. ವಿ. ಗುಂಡಪ್ಪನವರಿಂದ

ಅನುವಾದಕ

ವಿದ್ವಾನ್ ಎನ್. ರಂಗನಾಥಶರ್ಮಾ

ಪ್ರಕಾಶಕರು

ರಾಮಾಯಣ ಪ್ರಕಾಶನ ಸಮಿತಿ

ನರಸಿಂಹರಾಜ ಕಾಲೊನಿ, ಬೆಂಗಳೂರು – ೧೯

# ಬಿನ್ನಹ

ಈಗ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡವನ್ನು ಅನುವಾದ ಸಹಿತವಾಗಿ ಪ್ರಕಟಿಸಿ ಕನ್ನಡಿಗರಿಗೆ ಅರ್ಪಿಸಲು ನಮಗೆ ತುಂಬಾ ಸಂತೋಷ ವಾಗುತ್ತದೆ.

ಪೂಜ್ಯರಾದ ಡಾ|| ಡಿ. ವಿ. ಗುಂಡಪ್ಪನವರು ನಮ್ಮ ಪ್ರಕಟನಾ ಕಾರ್ಯಕ್ಕೆ ಬೆಂಬಲವನ್ನು ನೀಡುತ್ತಾ ಬಂದಿರುತ್ತಾರೆ. ಹಿಂದಿನಂತೆ ಅಮೂಲ್ಯ ವಾದ ಮುನ್ನುಡಿಯನ್ನು ಬರೆದುಕೊಟ್ಟು ಉಪಕರಿಸಿದ್ದಾರೆ. ಅವರಿಗೆ ನಮ್ಮ ಸಮಿತಿಯ ವಂದನೆಗಳು.

ವಿದ್ವಾನ್ ಶ್ರೀ ಎನ್. ರಂಗನಾಥಶರ್ಮರ ಅನುವಾದವನ್ನು ವಿದ್ವಾಂಸರು ಗಳೂ ಮತ್ತು ಮಹಾಜನಗಳೂ ಮೆಚ್ಚಿ ಹೊಗಳಿದ್ದಾರೆ. ಅವರೂ ಸಹ ಹಿಂದಿನಂತೆ ಈಗಲೂ ಅನುವಾದಕಾರ್ಯವನ್ನು ನಡೆಸಿಕೊಟ್ಟಿದ್ದಾರೆ. ಪ್ರಭಾ ಮುದ್ರಣಾಲಯದ ಶ್ರೀ ಡಿ. ಎಸ್. ಕೃಷ್ಣಾಚಾರ್ಯರು ತಪ್ಪಿಲ್ಲದಂತೆ ಅಂದ ವಾಗಿ ಮುದ್ರಿಸಿಕೊಟ್ಟಿದ್ದಾರೆ. ಇವರುಗಳಿಗೆ ಸಮಿತಿಯ ವಂದನೆಗಳು.

ಇಂಡಿಯಾ ಸರಕಾರದ ಕೇಂದ್ರ ಸಂಸ್ಕೃತ ಸಮಿತಿಯವರು ರಾಮಾಯಣ ಪ್ರಕಾಶನ ಕಾರ್ಯವನ್ನು ಮೆಚ್ಚಿ, ಪ್ರತಿ ಒಂದು ಕಾಂಡಕ್ಕೂ ಒಂದು ಸಾವಿರ ರೂಪಾಯಿನಂತೆ ಸಹಾಯಧನವನ್ನು ಮಂಜೂರುಮಾಡಿದ್ದಾರೆ. ಈ ಉಪಕಾರ ವನ್ನು ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತೇವೆ.

ಮುಂದಿನ ಭಾಗವಾದ ಯುದ್ಧಕಾಂಡವನ್ನು ಎರಡು ಸಂಪುಟದಲ್ಲಿ ೧೯೭೦ ನೇ ಇಸವಿಯ ಶ್ರೀರಾಮನವಮಿಯಷ್ಟರಲ್ಲಿ ಪ್ರಕಟಿಸಲು ಸಮಿತಿಯು ಉದ್ದೇಶಿಸಿದೆ. ವಾಚಕಮಹಾಶಯರ ಬೆಂಬಲವು ದೊರೆಯುವದೆಂದು ನಂಬಿ ದ್ದೇವೆ. ಶ್ರೀರಾಮಚಂದ್ರನ ಅನುಗ್ರಹದಿಂದ ಈ ಕಾರ್ಯವು ನೆರವೇರುವಂತಾಗ ಲೆಂದು ಹಾರೈಸುತ್ತೇವೆ.

ಬೆಂಗಳೂರು
ತಾ|| 19-1-1969

ಡಿ. ಸಿ. ಅನಂತರಾಮಯ್ಯ
ಕಾರ್ಯದರ್ಶಿ

# ನಿವೇದನೆ

ಶ್ರೀರಾಮಚಂದ್ರನ ಕೃಪೆಯಿಂದಲೂ ಸಹೃದಯರೂ ಉದಾರಚಿತ್ತರೂ ಆದ ವಾಚಕರ ಬೆಂಬಲದಿಂದಲೂ ಕಿಷ್ಕಿಂಧಾಕಾಂಡವನ್ನು ಕನ್ನಡ ಅನುವಾದ ದೊಡನೆ ಪ್ರಕಟಿಸಲು ಸಾಧ್ಯವಾಯಿತು. ಇನ್ನು ನನ್ನ ಲೇಖನಿಗೆ ಸಮುದ್ರ ವನ್ನು ದಾಟಿ ಯುದ್ಧರಂಗದಲ್ಲಿಳಿಯಬಲ್ಲೆನೆಂಬ ವಿಶ್ವಾಸವು ಮೂಡಿದೆ.

ಪೂಜ್ಯರಾದ ಡಾ|| ಡಿ. ವಿ. ಗುಂಡಪ್ಪನವರು ಈ ಅನುವಾದವನ್ನು ಓದಿಸಿ ಕೇಳಿ ಬೆನ್ನುಚಪ್ಪರಿಸಿ ಪ್ರೋತ್ಸಾಹಿಸುತ್ತಿರುವುದರಿಂದ ನನಗೆ ಧೈರ್ಯ ಬಂದಿದೆ. ಗುಣಜ್ಞರಾದ ಮಹಾಜನರು ಮುಂದಿನ ಪ್ರಕಟನೆ ಯಾವಾಗ— ಎಂದು ವಿಚಾರಿಸುತ್ತಿರುವುದರಿಂದ ಸ್ವಲ್ಪ ಆತ್ಮಪ್ರತ್ಯಯ ಉಂಟಾಗಿದೆ. ಈ ಕಿಷ್ಕಿಂಧಾಕಾಂಡದ ಅನುವಾದವೂ ಇತರ ಕಾಂಡಗಳ ಅನುವಾದದಂತೆ ಕನ್ನಡಿಗರ ಮೆಚ್ಚಿಗೆಯನ್ನು ಗಳಿಸುವುದೆಂದು ನಂಬಿದ್ದೇನೆ.

ಮುನ್ನುಡಿಯನ್ನು ಕೃಪೆಯಿಂದ ಬರೆದುಕೊಟ್ಟ ಶ್ರೀ ಡಿ. ವಿ. ಜಿ. ಯವರಿಗೂ ಸಂಸ್ಕೃತಮೂಲವನ್ನು ಎಂದಿನಂತೆ ಕನ್ನಡಲಿಪಿಯಲ್ಲಿ ಮುದ್ರಣಕ್ಕೆ ಅನುಕೂಲಿಸುವಂತೆ ಬರೆದುಕೊಟ್ಟು ಉಪಕರಿಸಿದ ಶ್ರೀ ಡಿ. ಸಿ. ಅನಂತರಾಮಯ್ಯ ನವರಿಗೂ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ರಾಮಾಯಣ ಪ್ರಕಾಶನ ಸಮಿತಿಯ ಸದಸ್ಯರೆಲ್ಲರೂ ಪ್ರೀತ್ಯಾದರಗಳಿಂದ ಈ ಕಾರ್ಯಕ್ಕೆ ಪ್ರೋತ್ಸಾಹ ವನ್ನಿತ್ತು ಗ್ರಂಥಪ್ರಕಾಶನಕ್ಕೆ ಶ್ರದ್ಧೆಯಿಂದ ನೆರವಾಗಿದ್ದಾರೆ. ಈ ಮಹನೀಯ ರೆಲ್ಲರಿಗೂ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳು ಸಲ್ಲುತ್ತವೆ.

ಬೆಂಗಳೂರು
ಕೀಲಕ–ಮಾಘ ಶುದ್ಧ–ದ್ವಿತೀಯಾ

**ಎನ್. ರಂಗನಾಥಶರ್ಮಾ**
ಅನುವಾದಕ

# ಮುನ್ನುಡಿ

**ಸೀತಾನ್ವೇಷಪರಿಶ್ರಾಂತಂ**
**ಪಂಪಾಕ್ಷೇತ್ರಪ್ರಸಾದಿತಮ್ ।**
**ಹನೂಮತ್ಸಾಂತ್ವಿತಂ ಧ್ಯಾಯೇತ್**
**ಪ್ರಾಪ್ತಸುಗ್ರೀವಸೌಹೃದಮ್ ॥**

ಕಿಷ್ಕಿಂಧಾಕಾಂಡವು ಶ್ರೀಮದ್ರಾಮಾಯಣದ ಕಂಠಭಾಗ. ಅದರ ಶಿರೋಭಾಗವು ಯುದ್ಧಕಾಂಡ. ಅದು ರಾವಣಹನನರೂಪವಾದ ಶ್ರೀರಾಮ ವಿಜಯದ ಕಥೆ. ಅದರ ಭುಜಪರ್ಯಂತದ ಭಾಗ ಅರಣ್ಯಕಾಂಡ. ರಾವಣನ ಅಪರಾಧವಾದ ಸೀತಾಪಹರಣಪ್ರಕರಣಕ್ಕೆ ಅಲ್ಲಿಯವರೆಗೆ ಸನ್ನಿವೇಶಸಿದ್ಧತೆ ಯಾಯಿತು. ಆದರೆ ಸೀತಾಪಹಾರಕನಾರು? ಅವನೆಲ್ಲಿಯವನು? ಅವನೆಂಥವನು?—ಇದು ತಿಳಿಯದೆ ಶ್ರೀರಾಮಚಂದ್ರನ ಕಾರ್ಯ ಮುಂದಕ್ಕೆ ಸಾಗಲಾರದು. ಈ ಅವಶ್ಯಾಂಶಗಳನ್ನು ಒದಗಿಸುವುದು ಕಿಷ್ಕಿಂಧಾಕಾಂಡ.

ಕಿಷ್ಕಿಂಧಾ ಎಂದರೆ ಕನ್ನಡದಲ್ಲಿ "ಇಕ್ಕಟ್ಟಾದದ್ದು" ಎಂಬ ರೂಢಿಯ ಅರ್ಥವಿದೆ. ಬಹುಶಃ ಈ ಮಾತು ಸಂಸ್ಕೃತದ "ಕಿಷ್ಕು" ಎಂಬುದರಿಂದ ಬಂದಿರಬಹುದು. ಕಿಷ್ಕು ಎಂದರೆ ಗೇಣು, ಅಥವಾ ಚೋಟು ಸಣ್ಣ ಪ್ರದೇಶ ಎಂದು ತಾತ್ಪರ್ಯ

ಈ ಕಾಂಡದಲ್ಲಿ ಕಾವ್ಯಧಾರೆ ಎಂದಿನಂತೆ ಮನೋಹರವಾಗಿ ಹರಿಯು ತ್ತದೆ. ಇದರಲ್ಲಿಯ ದೃಶ್ಯಗಳು ರಮಣೀಯವಾಗಿ ಸನ್ನಿವೇಶಗಳು ಕುತೂಹಲಕಾರಿಗಳಾಗಿವೆ. ಜಟಾಯು ಸಂಪಾತಿಗಳಿಗೆ ಸಂಬಂಧಪಟ್ಟ ಕಥಾಭಾಗ ಅತ್ಯಂತ ಸುಂದರವಾದದ್ದು ಪಂಪಾಪ್ರದೇಶದ ವರ್ಣನೆ ಪ್ರಕೃತಿ ಸೌಭಾಗ್ಯವನ್ನು ಅನುಭವಕ್ಕೆ ತಂದುಕೊಡುತ್ತದೆ. ಕೇಶಿರಾಜನು

**........ ಶಬ್ದದಿ- ।**
**ನಾವಾವಿಂದ್ರಿಯದ ವಿಷಯಮಂ ಶ್ರೋತ್ರದೊಳು- ।**
**ದ್ಭಾವಿಪ ...**

ಎಂದು ಹೇಳಿ ವಾಕ್ಕಿನ ಸಾಮರ್ಥ್ಯವನ್ನು ನಿರೂಪಿಸಿದ್ದಾನೆ. ಕಣ್ಣೆದುರಿಗೆ ಇಲ್ಲದ್ದನ್ನು ಕಣ್ಣು ಸ್ವಯಂ ಅನುಭವಿಸುವಂತೆ ಮಾಡಬಲ್ಲದ್ದು ಕವಿಯ

ವಾಕ್ಪ್ರಭಾವ ಇದಕ್ಕೆ ದೃಷ್ಟಾಂತ ಶ್ರೀಮದ್ರಾಮಾಯಣದಲ್ಲಿ ಹೇರಳವಾಗಿ ದೊರೆಯುತ್ತದೆ ಕಿಷ್ಕಿಂಧಾಕಾಂಡದಲ್ಲಿ ಅಂಥ ವರ್ಣನೆಗೆ ಅವಕಾಶ ಅಪಾರವಾಗಿ ದೊರೆಯಿತು ವಾಲ್ಮೀಕಿಮಹರ್ಷಿಗಳಿಗೆ ಕಥಾಸನ್ನಿವೇಶದ ಕಲ್ಪನೆಯಲ್ಲಿಯೂ ಪಾತ್ರಾಭಿವ್ಯಕ್ತಿಯಲ್ಲಿಯೂ ಮಹಾಕವಿಯ ನೈಪುಣಿ ಎದ್ದು ಕಾಣುತ್ತದೆ.

## ಕಾವ್ಯವ್ಯಾಸಂಗದ ಮೂಲಸೂತ್ರಗಳು

ಶ್ರೀಮದ್ರಾಮಾಯಣದಂಥ ಕಾವ್ಯವನ್ನು ಅನುಭವಿಸಬೇಕಾದರೆ ವಾಚಕನು ಸಮಾಹಿತಚಿತ್ತನಾಗಿ, ಅವಧಾನವುಳ್ಳವನಾಗಿ ವ್ಯಾಸಂಗಮಾಡಬೇಕು ಅವಸರವಸರವಾಗಿ ಸರ್ಗ ಮುಗಿಸಬೇಕೆಂಬ ಆತುರದಲ್ಲಿರುವವನಿಗೆ ಕಾವ್ಯರಸ ದೊರೆಯಲಾರದು ವಾಚಕನು ಸರ್ವದಾ ಮನಸ್ಸಿನಲ್ಲಿ ಧರಿಸಿರಬೇಕಾದ ಕೆಲವು ಮೂಲಸೂತ್ರಗಳನ್ನು ನಾನು ಪದೇ ಪದೇ ಅರಿಕೆಮಾಡಿದ್ದೇನೆ. ಈಗ ಅವನ್ನು ಮತ್ತೊಮ್ಮೆ ಜ್ಞಾಪಕಕ್ಕೆ ತರಬಹುದೆಂದು ತೋರುತ್ತದೆ

೧. **ಕಾವ್ಯದೃಷ್ಟಿ :** ಶ್ರೀಮದ್ರಾಮಾಯಣವು ಕಾವ್ಯ ಮಹಾಕಾವ್ಯ. ಅದು ಬರಿಯ ಕಥೆಯಲ್ಲ, ಚರಿತ್ರೆಯ ಪುಸ್ತಕವಲ್ಲ, ಶಾಸ್ತ್ರಗ್ರಂಥವೂ ಅಲ್ಲ. ಕಾವ್ಯವನ್ನೋದುವ ಮನಸ್ಸಿನಿಂದ ಅದನ್ನು ಓದಬೇಕು

೨. **ಜೀವಸಂಸ್ಕಾರ :** ಕಾವ್ಯದಲ್ಲಿ ಕಥೆಯುಂಟೆಂಬುದು ನಿಜ ಆದರೆ ಕಾವ್ಯದ ಕಥೆ ಬರಿಯ ಕಥೆಯಲ್ಲ. ಮಹಾಕಾವ್ಯದ ಕಥೆ ಮನೋರಂಜಕ ಮಾತ್ರವಲ್ಲ ಮಹಾಕಾವ್ಯದಲ್ಲಿ ಕಥೆಯು ಜೀವಸ್ಪರ್ಶಿಯಾಗ ರಸನಾಳಿಕೆಗಳಲ್ಲಿ ಹರಿದುಬರುತ್ತದೆ. ಇಲ್ಲಿ ಮುಖ್ಯವಾದದ್ದು ಕಥೆಯ ಘಟನೆಗಿಂತ ಅದರಲ್ಲಡಗಿರುವ ರಸದ್ರವ್ಯ. ರಸಸಾಮಗ್ರಿಯಲ್ಲಿ ವಿನೋದಕ್ಕಿಂತ ಸಂಸ್ಕಾರಕಾರಕವಾದ ಗುಣ ಮುಖ್ಯ.

೩. **ಆತ್ಮಾರ್ಪಣಬುದ್ಧಿ :** ರಸ ಮುಖ್ಯ, ಜೀವಸಂಸ್ಕಾರ ಮುಖ್ಯ — ಎಂದು ಹೇಳಿದಮೇಲೆ ಮಹಾಕಾವ್ಯವ್ಯಾಸಂಗ ಒಂದು ಮಹಾ ಅನುಷ್ಠಾನವೆಂದು ಸಿದ್ಧವಾಗುತ್ತದೆ. ಅನುಷ್ಠಾನಕ್ಕೆ ಅವಶ್ಯವಾದದ್ದು ಆತ್ಮಾರ್ಪಣಬುದ್ಧಿ : ಎಂದರೆ, ವಾಚಕನು ತನ್ನ ಸ್ವಂತ ಪ್ರಜ್ಞೆ, ತನ್ನ ಸ್ವಂತ ವಿಮರ್ಶನಶಕ್ತಿ, ಸ್ವಂತ ಪಾಂಡಿತ್ಯ, ಸ್ವಂತ ಚಾಲಾಕುತನ—ಇವನ್ನು ವರ್ಜಿಸಬೇಕು. ಈ ಅಹಂಕಾರವರ್ಜನೆಯಿಲ್ಲದಿದ್ದರೆ ಶರಣಾಗತಭಾವವಿಲ್ಲ.

ಶರಣಾಗತಭಾವವಿಲ್ಲದಿದ್ದರೆ ವಾಚಕನು ಗ್ರಂಥವನ್ನು ಅನುಭವಿಸಲಾರ ಈ ಮಾತು ಎಲ್ಲ ಕಲಾಭ್ಯಾಸಕ್ಕೂ, ಎಲ್ಲ ಆತ್ಮೋಪಾಸನೆಗೂ ಅನ್ವಯಿಸುವುದಾಗಿದೆ ಒಂದಾನೊಂದು ಮಹಾವಿಷಯದ ಪೂರ್ಣಜ್ಞಾನ ನಮಗೆ ಉಂಟಾಗಬೇಕಾದರೆ ನಾವು ಆ ವಸ್ತುವಿನಲ್ಲಿ ಸೇರಿಕೊಳ್ಳಬೇಕು, ನಾವು ಆ ವಸ್ತುವಾಗಬೇಕು. ಇದೇ ತಲ್ಲೀನತೆ. ಈ ತಲ್ಲೀನತೆಯುಂಟಾಗುವುದು ಸ್ವಾಹಂಕಾರವರ್ಜನೆಯಿಂದ, ಸ್ವತಾವಿಸ್ಮೃತಿಯಿಂದ ಸ್ವತಾವಿಸ್ಮೃತಿಯನ್ನುಂಟುಮಾಡುವ ಶಕ್ತಿ ಮಹಾಕಾವ್ಯದಲ್ಲಿಯೇ ಇರುತ್ತದೆ. ಆದರೆ ಅದರೊಡನೆ ಸಹಕರಿಸುವ ಯೋಗ್ಯತೆ ವಾಚಕನಲ್ಲಿರಬೇಕು.

೪. **ಯಥಾರ್ಥಗ್ರಹಣ :** ಮೂರನೆಯ ಸೂತ್ರದಿಂದಲೇ ಸಿದ್ಧವಾಗುತ್ತದೆ ಮತ್ತೊಂದು ಸೂತ್ರ ವಾಚಕನು ಕವಿಯ ವಾಕ್ಕನ್ನು ಯಥಾರ್ಥಬುದ್ಧಿಯಿಂದ ಗ್ರಹಿಸಬೇಕು. ಕಾವ್ಯವ್ಯಾಸಂಗಕಾಲದಲ್ಲಿ, ಆ ವ್ಯಾಸಂಗದ ಮಟ್ಟಿಗೆ, ಅವನು ತನ್ನ ಅಪನಂಬಿಕೆಗಳನ್ನೂ ಶಂಕೆಗಳನ್ನೂ ಬದಿಗಿರಿಸಬೇಕು ಎಳೆಯ ಮಕ್ಕಳು ಅಜ್ಜಿ ಹೇಳುವ ಕಥೆಯನ್ನು ಅಕ್ಷರಕ್ಷರವೂ ಯಥಾರ್ಥವೆಂದು ಗ್ರಹಿಸಿ ಹೂಂಗುಟ್ಟುವಂತೆ ನಾವು ವಾಲ್ಮೀಕಿಯ ಸನ್ನಿಧಿಯಲ್ಲಿ ನಡೆದುಕೊಳ್ಳಬೇಕು. ಶ್ರದ್ಧೆ ವಿಶ್ವಾಸಗಳಿಲ್ಲದಿದ್ದರೆ ಕಾವ್ಯದ ಕಾವ್ಯಾಂಶ ಹಾರಿಹೋಗುತ್ತದೆ, ಬೆಂಕಿಯಮೇಲಿನ ಕಾವಲಿಯಲ್ಲಿ ಹಾಕಿದ ಹೂವಿನ ಸುವಾಸನೆಯಂತೆ

೫. **ಪ್ರವಾಹಾರ್ಥಧೋರಣೆ :** ಕಾವ್ಯಪದಗಳ ಧೋರಣೆಯ ಅರ್ಥವನ್ನು ದೃಷ್ಟಿಯಲ್ಲಿರಿಸಿಕೊಳ್ಳಬೇಕು ಪದ ಪದವನ್ನೂ ಅಕ್ಷರಕ್ಷರವನ್ನೂ ವಿಂಗಡಿಸಿ ನೋಡಬಾರದು. ಕಮಲದ ಹೂವಿನಲ್ಲಿ ಸಾವಿರ ರೇಕು ಇರುತ್ತದೆ. ಒಂದೊಂದು ರೇಕಿಗೂ ಏನು ಅರ್ಥ ? ಏನು ತಾತ್ಪರ್ಯ ?—ಎಂದು ಬಿಡಿಸಿ ನೋಡಿದರೆ ಹೂವಿನ ಸಮಗ್ರಸ್ವಾರಸ್ಯ ಹೋಯಿತು ; ಪ್ರತ್ಯೇಕಾಂಶದಲ್ಲಿ ಸೌಂದರ್ಯವಿಲ್ಲ. ಮಹಾಕವಿಯ ವಾಗ್ಧೋರಣೆಯೇ ಒಂದು ಸೊಗಸು. ಅದು ಮಳೆಗಾಲದಲ್ಲಿ ನದಿಯಲ್ಲಿ ಬಂದ ಮಹಾಪ್ರವಾಹದಂತಿರುತ್ತದೆ. ಅದರ ಒಟ್ಟನ್ನು ನೋಡಿ ಅದರ ಸೊಗಸನ್ನು ನಾವು ಅನುಭವಿಸಬೇಕು.

ಈಗ ಒಂದೆರಡು ಪ್ರಶ್ನೆಗಳ ವಿಚಾರ.

## ಅಸಂಗತ ತರ್ಕ

ಕೆಲವು ವರ್ಷಗಳ ಕೆಳಗೆ ಒಬ್ಬ ಸ್ನೇಹಿತರಿಗೂ ನನಗೂ ನಡೆದ ಒಂದು ಚರ್ಚೆಯ ಭಾಗವನ್ನು ಇಲ್ಲಿ ಉದಾಹರಿಸುತ್ತೇನೆ.

**ಪ್ರಶ್ನೆ :** ರಾಮನೂ ಆಂಜನೇಯನೂ ಮಾತನಾಡಿದರಂತಲ್ಲ, ಅದು ಯಾವ ಭಾಷೆಯಲ್ಲಿ ?

**ಉತ್ತರ :** ಕನ್ನಡದಲ್ಲಿ.

**ಪ್ರ :** ನೀವು ಹಾಗೆ ಹೇಳಲು ಏನು ಆಧಾರ ?

**ಉ :** ರಾಮಾಯಣ ಗ್ರಂಥವೇ ಆಧಾರ. ಅದರಲ್ಲಿ ಹೇಳಿದೆ, ರಾಮ ಆಂಜನೇಯರು ಸೇರಿದುದು ಕಿಷ್ಕಿಂಧೆಯಲ್ಲಿ ಎಂದು. ಕಿಷ್ಕಿಂಧೆಯಿರುವುದು ಕನ್ನಡ ದೇಶದಲ್ಲಿ ಆದದ್ದರಿಂದ ಅವರು ಕನ್ನಡದಲ್ಲಿಯೇ ಮಾತನಾಡಿರ ಬೇಕು

**ಪ್ರ :** ಹಾಗಾದರೆ ರಾಮನಿಗೆ ಕನ್ನಡ ಬರುತ್ತಿತ್ತು ಎನ್ನುತ್ತೀರಾ ?

**ಉ :** ಹಾಗೆನ್ನುತ್ತೇನೆ.

**ಪ್ರ :** ಅಲ್ಲ ಸ್ವಾಮಿ, ರಾಮ ಹುಟ್ಟಿದ್ದು ಅಯೋಧ್ಯೆಯಲ್ಲಿ. ಅಲ್ಲಿ ಕನ್ನಡ ಇತ್ತೆ ?

**ಉ :** ಅಯೋಧ್ಯೆಯಲ್ಲಿ ಕನ್ನಡ ಇಲ್ಲದಿದ್ದರೂ ರಾಮನು ಕನ್ನಡ ಕಲಿತುಕೊಂಡಿರಬೇಕು. ನಿಮ್ಮ ಅಭಿಪ್ರಾಯವೇನು ?

**ಪ್ರ :** ರಾಮನಿಗೆ ಸಂಸ್ಕೃತ ಬರುತ್ತಿತ್ತೆಂದು ಊಹಿಸುವುದು ಯುಕ್ತ ವಾಗಿದೆ. ಅವರಿಬ್ಬರೂ ಸಂಸ್ಕೃತದಲ್ಲಿಯೇ ಮಾತನಾಡಿದರೆಂದು ಹೇಳು ವುದಾದರೆ, ಆಂಜನೇಯನಿಗೆ ಸಂಸ್ಕೃತ ಬರುತ್ತಿತ್ತೆಂದು ಹೇಳಬೇಕಾಗುತ್ತದಲ್ಲ ?

**ಉ :** ಹಾಗೆಯೇ ಹೇಳೋಣ. ಆಂಜನೇಯನಿಗೆ ಸಂಸ್ಕೃತ ಬರುತ್ತಿ ತ್ತೆನ್ನಲು ನಾನು ಯಾವಾಗಲೂ ಸಿದ್ಧನಾಗಿದ್ದೇನೆ !

**ಪ್ರ :** ಏನು ಸ್ವಾಮಿ, ಇದು ಹೇಗೆ ಹೊಂದಾವಣೆಯಾಗುತ್ತದೆ ? ರಾಮನಿಗೆ ಸಂಸ್ಕೃತ ಬರುತ್ತಿರಬಹುದು. ಆಂಜನೇಯ ಶುದ್ಧ ಕಪಿ. ಅದಕ್ಕೆ ಸಂಸ್ಕೃತ ಬರೋಣವೆಂದರೇನು ?

**ಉ :** ಸ್ವಾಮಿ, ನೀವು ಆಂಜನೇಯನು ಸಮುದ್ರ ಹಾರಿದ ಕಪಿ ಎಂಬುದನ್ನು ಮರೆತುಬಿಟ್ಟಿದ್ದೀರಿ. ನಿಮ್ಮಂಥವರ ದೃಷ್ಟಿ ಒಂದು. ಬೇರೆ ಇನ್ನೊಂದು ದೃಷ್ಟಿಯುಂಟು. ರಾಮನೂ ಹನುಮಂತನೂ ದೈವಾಂಶ ದಿಂದುಂಟಾದವರು. ಅವರಿಗೆ ಭಾಷೆ ಕಲಿತುಕೊಳ್ಳುವುದು ಅಸಾಧ್ಯವೆ? ಅವರಿಬ್ಬರೂ ಸಂಸ್ಕೃತ ಕನ್ನಡ ಮಾತ್ರವೇ ಅಲ್ಲ, ಹಿಂದಿ ಇಂಗ್ಲಿಷುಗಳನ್ನೂ ಕಲಿತುಕೊಳ್ಳುವ ಶಕ್ತಿಯಿದ್ದವರು. ತಮಿಳು, ತೆಲುಗು, ಮರಾಠಿ, ಗುಜರಾತಿ ಗಳನ್ನೂ ಕಲಿತುಕೊಳ್ಳಬಲ್ಲವರು

**ಪ್ರ :** ಹಾಗಾದರೆ ಏನು ನಿಷ್ಕರ್ಷೆ ?

**ಉ :** ನಿಷ್ಕರ್ಷೆ ಇಷ್ಟು : ಅವರಿಬ್ಬರೂ ತಮಗಿಬ್ಬರಿಗೂ ಬರುತ್ತಿದ್ದ ಯಾವುದೋ ಭಾಷೆಯಲ್ಲಿ ಮಾತನಾಡಿದರು. ಇಲ್ಲಿ ನಮಗೆ ಮುಖ್ಯವಾದದ್ದು ಅವರು ಯಾವ ಭಾಷೆಯಲ್ಲಿ ಮಾತನಾಡಿದರೆಂಬುದಲ್ಲ ; ಏನನ್ನು ಮಾತ ನಾಡಿದರೆಂಬುದು. ಅವರು ಪರಸ್ಪರ ತಿಳಿಸಬೇಕಾಗಿದ್ದ ಸಂಗತಿ ಯಾವುದು ? ಅದನ್ನು ಯಾವ ಮರ್ಯಾದೆಯಿಂದ, ಎಂಥ ನವುರಿನಿಂದ ತಿಳಿಸಿದರು ?— ಇದು ನಮಗೆ ಮುಖ್ಯ. ಭಾಷೆಯ ಪ್ರಶ್ನೆ ಇಲ್ಲಿ ಸಂಪೂರ್ಣವಾಗಿ ಅಸಂಗತ.

## ರಸಭಂಗ

ಈಗ ವ್ಯಾಸಂಗಿಗಳಲ್ಲಿ ಒಂದು ಬಿನ್ನಹ ಮಾಡಬೇಕಾಗಿದೆ : ಕಾವ್ಯೋಪಾಸನೆಯ ನಡುನಡುವೆ ಇಂಥ ತರ್ಕಗಳನ್ನೆತ್ತಬಾರದೆಂಬುದು. ನಮ್ಮ ವ್ಯಾಖ್ಯಾನಕರ್ತರೇ ಈ ನಿಯಮವನ್ನು ಉಲ್ಲಂಘಿಸಿ ರಸಭಂಗಕ್ಕೆ ಅವಕಾಶಮಾಡಿದ್ದಾರೆ. ಹೀಗೆ ತರ್ಕದಿಂದ ರಸಭಂಗಮಾಡುವುದು ಕವಿಯ ವಿಷಯದಲ್ಲಿ ಅಪರಾಧವೆಂದು ನಾನೆಣಿಸಿದ್ದೇನೆ

ಕಾವ್ಯವು ಮನುಷ್ಯಜೀವನದ ರಸಸನ್ನಿವೇಶದರ್ಶನ ಮಹಾಕಾವ್ಯವು ಒಂದು ಮಹಾಜೀವನದ ಒಂದು ಮಹಾರಸಸನ್ನಿವೇಶದ ದರ್ಶನ. ಶಕುಂತಲೆ ಋಷ್ಯಾಶ್ರಮದಿಂದ ಗಂಡನ ಮನೆಗೆ ಹೋಗುವ ಸಂದರ್ಭದಲ್ಲಿ ಕಣ್ವರು ಆಶ್ರಮದ ಗಿಡಬಳ್ಳಿಗಳು ಆಕೆಗೆ ಅನುಜ್ಞೆಕೊಡಬೇಕೆಂದು ಬೇಡಿದರಂತೆ. ಗಿಡಬಳ್ಳಿಗಳು ದುಃಖಿಸುವುದೆಂದರೇನು ? ಅನುಜ್ಞೆ ಕೊಡುವುದೆಂದರೇನು ? ಯಕ್ಷನು ಮೇಘವನ್ನು ದೂತನಾಗೆಂದು ಹೇಳುವುದೆಂದರೇನು ? ಮೇಘಕ್ಕೆ

ಹೃದಯಭಾವಗಳುಂಟೆ ? ಇಂಥ ಪ್ರಶ್ನೆಗಳನ್ನು ಚರ್ಚಿಸುವವರು ಅಕೌಂಟೆನ್ಸಿ ಪರೀಕ್ಷೆಗೆ ಹೋಗಬೇಕು, ಕಾವ್ಯವ್ಯಾಸಂಗಕ್ಕಲ್ಲ. ಅಚೇತನದಲ್ಲಿ ಚೈತನ್ಯವನ್ನು ಆರೋಪಿಸಿ ಅದು ಸಚೇತನವಾಗಿದ್ದಿದ್ದರೆ ಹೇಗೆ ನಡೆದಿದ್ದಿರಬಹುದೋ ಹಾಗೆ ನಡೆಯಿತೆಂದು ಭಾವಿಸಿಕೊಳ್ಳುವುದು ಕವಿಪ್ರಪಂಚಕ್ಕೆ ಸಹಜವಾದ ರೀತಿ.

## ಕಪಿಲೋಕಸೃಷ್ಟಿ ಏಕೆ ?

ಇದಕ್ಕಿಂತ ಹೆಚ್ಚು ಕಚಕುಳಿಯಿಡುವ ಪ್ರಶ್ನೆ ಬೇರೆ ಇದೆ. ವಾಲ್ಮೀಕಿಗಳು ತಮ್ಮ ಪ್ರಪಂಚದೊಳಕ್ಕೆ ಕಪಿಲೋಕವನ್ನು ಏಕೆ ತಂದುಕೊಂಡರು ? ಆ ಕಡೆ ಅಯೋಧ್ಯೆಯಲ್ಲಿಯೂ ಮಿಥಿಲೆಯಲ್ಲಿಯೂ ಮನುಷ್ಯಲೋಕ. ಅದು ಸಹಜವಾದದ್ದು ನಾವೆಲ್ಲ ಅದನ್ನು ಒಪ್ಪಿಕೊಳ್ಳುತ್ತೇವೆ. ಇತ್ತ ಕಡೆ ದಂಡಕಾರಣ್ಯದಲ್ಲಿಯೂ ಲಂಕೆಯಲ್ಲಿಯೂ ರಾಕ್ಷಸಲೋಕ. ರಾಕ್ಷಸರೆಂಬ ಪ್ರಾಣಿವರ್ಗವಿದ್ದದ್ದನ್ನು ವೇದದಲ್ಲಿ ಹೇಳಿದೆ ಮತ್ತು ಗುಣದಲ್ಲಿ ರಾಕ್ಷಸರನ್ನು ಹೋಲುವಂಥ ಮನುಷ್ಯಜಾತಿ ಇರುವುದನ್ನು ನಾವು ಕಣ್ಣಾರ ಕಾಣುತ್ತಿದ್ದೇವೆ. ಆದದ್ದರಿಂದ ರಾಕ್ಷಸಲೋಕವನ್ನು ಒಪ್ಪಿಕೊಳ್ಳೋಣ. ಆದರೆ ಮನುಷ್ಯರಿಗೂ ರಾಕ್ಷಸರಿಗೂ ನಡುವಣ ವಾನರಲೋಕ ಮಿಕ್ಕೆರಡು ಲೋಕಗಳ ವ್ಯಾಪಾರವನ್ನೂ ಪ್ರವೇಶಿಸಿ ಅವಾಂತರ ಮಾಡಿದ್ದು ಎಲ್ಲಿಯ ಯೋಜನೆ ! ವ್ಯಾಸರ ಕಲ್ಪನೆಯಲ್ಲಿ ಇಂಥಾದ್ದಿಲ್ಲ. ಈ ವಿಲಕ್ಷಣ ಲೋಕವನ್ನು ವಾಲ್ಮೀಕಿಗಳು ಏಕೆ ಸೃಷ್ಟಿಮಾಡಿದರು ? ಕಪಿಗಳೆಲ್ಲಿಯಾದರೂ ಮನುಷ್ಯರ ಸಂತೋಷದಲ್ಲಿಯಾಗಲಿ ದುಃಖದಲ್ಲಿಯಾಗಲಿ ಪಾಲುದಾರರಾಗುವುದುಂಟೆ ? ವಾನರನು ನರನೊಡನೆ ಸುಖದುಃಖಸಹಭಾಗಿಯಾದದ್ದುಂಟೆಂಬುದನ್ನು ನಾವು ಒಪ್ಪಿದಮೇಲೆ ನರಭಾಷೆಯನ್ನು ವಾನರನು ಕಲಿತನೆಂಬುದು ಅಸಾಧ್ಯದ ಮಾತಾಗಲಾರದು. ಆದರೆ ಮನುಷ್ಯರ ನೀತಿನಿಯಮಗಳನ್ನೂ ಉತ್ಸಾಹ ವಿಷಾದಗಳನ್ನೂ ಅನುಭವಿಸಿ ನಡೆದುಕೊಂಡ ವಾನರರು ಆಂಜನೇಯ ಸುಗ್ರೀವಾದಿಗಳು. ಇದು ಚೋದ್ಯದ ಸಂಗತಿ.

ಇಲ್ಲಿ ಉತ್ತರ ಕೊಡಲು ನಮಗೆ ಸಹಾಯ ಮಾಡುವ ಶಕ್ತಿ ಊಹಾಪೋಹನವೊಂದೇ ಗ್ರಂಥ ಪ್ರಮಾಣವೇನೂ ಕಾಣುವುದಿಲ್ಲ. ವಾಲ್ಮೀಕಿಗಳು ಸ್ವೋಪಜ್ಞತೆಯಿಂದ ಮಾಡಿದ ಸೃಷ್ಟಿ ಕಪಿರಾಜ್ಯ. ಭಾರತ

ಕಥೆಯಲ್ಲಿ ವ್ಯಾಸರು ನಾಗಲೋಕವನ್ನೂ ಪ್ರಮೀಳಾಲೋಕವನ್ನೂ ತಮ್ಮ ಪ್ರಪಂಚದೊಳಕ್ಕೆ ತಂದಿದ್ದಾರೆ. ಆ ಲೋಕಗಳ ಲಕ್ಷಣವುಳ್ಳ ಜನಾಂಗಗಳು ವಾಸ್ತವವಾಗಿ ಉಂಟೆಂದು ಚಾರಿತ್ರಿಕರೂ ವಂಶತತ್ತ್ವವಿಜ್ಞಾನಿಗಳೂ ಹೇಳುತ್ತಾರೆ. ಆದರೆ ಕಪಿಜನಾಂಗವು ವಾಸ್ತವಿಕವೆಂಬುದಕ್ಕೆ ಅಂಥ ಸಮರ್ಥನೆಯೇನೂ ಕಾಣುವುದಿಲ್ಲ. ವಾಲಿಸುಗ್ರೀವರ ಲೋಕವು ಸಂಪೂರ್ಣವಾಗಿ ವಾಲ್ಮೀಕಿಗಳ ನಿರ್ಮಾಣವೆಂದು ತೋರುತ್ತದೆ. ಕಿಷ್ಕಿಂಧೆಯು ವಾಲ್ಮೀಕಿಗಳ ಖಯಾಲಿಯಿಂದ (Fancy) ಉತ್ಪನ್ನವಾದದ್ದು ಮನುಷ್ಯಲೋಕವನ್ನು ಕೊಂಚ ಹೇಳನಮಾಡಬೇಕೆಂದು ವಾಲ್ಮೀಕಿಗಳಿಗೆ ಅನ್ನಿಸಿರಬೇಕು. ನಮ್ಮ ಕಾಲದಲ್ಲಿ ಸಮಾಜಶ್ರೇಷ್ಠರೆನಿಸಿಕೊಂಡವರಲ್ಲಿ ನಾಯಿಮರಿಯನ್ನು ಸಾಕುವ ಫ್ಯಾಷನ್ ಬೆಳೆದಿದೆಯಷ್ಟೆ? ನಾಯಿಗೆ ಇದೆಷ್ಟು ದೊಡ್ಡತನವೆಂದು ಅವರನ್ನು ಕೇಳಿದರೆ ಅವರು ಹೇಳುತ್ತಾರೆ: "ಮನುಷ್ಯನಿಗಿಂತ ಶ್ರೇಷ್ಠವಾದ ಪ್ರಾಣಿ ನಾಯಿ; ನಾಯಿ ಸತ್ಯಸಂಧವಾದದ್ದು; ನಾಯಿಯಲ್ಲಿರುವ ಕೃತಜ್ಞತೆಯ ಗುಣ ಮನುಷ್ಯನಲ್ಲೆಲ್ಲಿದೆ?"—ಎಂದು. ಹೀಗೆ ಒಂದು ದೃಷ್ಟಿಯಿಂದ ನಾಯಿ ಉತ್ತಮ ಜಂತುವೆಂದು ಹೇಗೆ ಒಪ್ಪಿಕೊಳ್ಳಲಾಗುತ್ತದೋ ಹಾಗೆಯೇ ಇನ್ನೊಂದು ದೃಷ್ಟಿಯಿಂದ ಕಪಿಯು ಮನುಷ್ಯನಿಗಿಂತ ಉತ್ತಮವಾದದ್ದೆಂದು ಕಿಷ್ಕಿಂಧಾಕಾಂಡದ ಕಥೆಯಿಂದ ತೋರುತ್ತದೆ

**ಯಾಂತಿ ನ್ಯಾಯಪ್ರವೃತ್ತಸ್ಯ**
**ತಿರ್ಯಂಚೋಽಪಿ ಸಹಾಯತಾಮ್ ।**
**ಅಪಂಥಾನಂ ತು ಗಚ್ಛಂತಂ**
**ಸೋದರೋಽಪಿ ವಿಮುಂಚತಿ ॥**

ನ್ಯಾಯಕ್ಕೆ ತಿರ್ಯಗ್ಜಂತುಗಳೂ ಸಹಾಯಮಾಡುತ್ತವೆ. ಉದಾಹರಣೆ, ಕಿಷ್ಕಿಂಧೆಯ ಕಪಿಗಳು. ದುರ್ಮಾರ್ಗಿಯಾದವನನ್ನು ಒಡಹುಟ್ಟಿದವನೂ ತೊರೆದುಬಿಡುತ್ತಾನೆ. ಉದಾಹರಣೆ, ವಿಭೀಷಣ.

ಇಂಥ ಅಭಿಪ್ರಾಯವು ವಾಲ್ಮೀಕಿಗಳ ಮನಸ್ಸಿನಲ್ಲಿತ್ತೆಂದು ಅನ್ನಿಸುತ್ತದೆ. ಮನುಷ್ಯ ಜಾತಿಯವರು ತಾವು ಮಾತ್ರವೇ ಧರ್ಮಜ್ಞರು, ನ್ಯಾಯಾನ್ಯಾಯ ವಿವೇಕಿಗಳು—ಎಂದು ಜಂಬಪಟ್ಟುಕೊಳ್ಳಬೇಕಾಗಿಲ್ಲ. ಧರ್ಮವಿವೇಕವೂ

ನ್ಯಾಯದೃಷ್ಟಿಯೂ ಮನುಷ್ಯರಿಗಿಂತ ಕೆಳಗಿನವರೆನಿಸಿಕೊಂಡಿರುವ ಕಪಿಗಳಲ್ಲಿಯೂ ಇರುತ್ತದಂತೆ ಕಪಿಗಳ ನ್ಯಾಯತತ್ಪರತೆಯ ಸೂಚನೆ ರಾ ಮಾ ಂ ಜ ನೇ ಯ ರ ಪ್ರಥಮ ಸಮಾಗಮದಲ್ಲಿಯೇ ದೊರೆಯುತ್ತದೆ (ಪುಟ ೩೪) :

> **ಸುಗ್ರೀವೋ ನಾಮ ಧರ್ಮಾತ್ಮಾ**
> **ಕಶ್ಚಿದ್ವಾನರಯೂಥಪಃ ॥**
>
> —ಸರ್ಗ ೩, ಶ್ಲೋಕ ೨೦

ಇಂಥ ವಾಕ್ಯಗಳು ಪದೇ ಪದೇ ಬರುತ್ತವೆ. ಕಿಷ್ಕಿಂಧೆಯಲ್ಲಿ ಮನುಷ್ಯ ಸಮಾಜದಲ್ಲಿರುವಂತೆ ಮಾನಮರ್ಯಾದೆಗಳ ತಿಳಿವಳಿಕೆಯೂ ಸಭ್ಯನೀತಿಯ ಪರಿಜ್ಞಾನವೂ ಇತ್ತೆಂದು ಸ್ಪಷ್ಟವಾಗುತ್ತದೆ.

ಕವಿಯು ಇಂಥ ಮನುಷ್ಯರಾಜ್ಯ ಮತ್ತೊಂದನ್ನು ಕಲ್ಪನೆಮಾಡುವುದು ಕಷ್ಟವಾಗಿರಲಿಲ್ಲ. ದಶರಥನ ಕಾಲದಲ್ಲಿ ನಾನಾ ರಾಜ್ಯಗಳೂ ರಾಜಾಧಿರಾಜರುಗಳೂ ಬೇರೆ ಎಷ್ಟೋ ಇದ್ದರು. ಸೀತಾಸ್ವಯಂವರ ಕಾಲದಲ್ಲಿ ಮಿಥಿಲಾಪಟ್ಟಣದಲ್ಲಿ ಎಷ್ಟೋ ಮಂದಿ ರಾಜರುಗಳು ಅಹಮಹಮಿಕೆಯಿಂದ ನೆರೆದಿದ್ದರು. ಅಂಥ ಇನ್ನೊಬ್ಬ ರಾಜನನ್ನೂ ಇನ್ನೊಂದು ಅಂಥ ರಾಜ್ಯವನ್ನೂ ವಾಲ್ಮೀಕಿಗಳು ಸುಲಭವಾಗಿ ಕಟ್ಟಬಹುದಾಗಿತ್ತು. ಹಾಗಿಲ್ಲದೆ ಕಪಿರಾಜ್ಯವನ್ನು ಸೃಷ್ಟಿಮಾಡಿದ್ದು ವಾಲ್ಮೀಕಿಗಳ ಒಂದು ವಿಶೇಷ ಮನಃಪ್ರವೃತ್ತಿಯೆಂದು, ಅಥವಾ ಒಂದು ವಿಶೇಷ ಮನೋಲೀಲೆ ಎಂದು ಭಾವಿಸಬೇಕಾಗುತ್ತದೆ. ಮನುಷ್ಯ-ರಾಕ್ಷಸರ ನಡುವೆ ಒಂದು ವಿನೋದವನ್ನು ಕಲ್ಪಿಸುವುದು ಅವರ ತಾತ್ಪರ್ಯವಾಗಿದ್ದಿರಬಹುದು

ಅಯೋಧ್ಯೆಯ ಕಥೆ ಹೃದಯಭೇದಕವಾದದ್ದು. ಲಂಕೆಯದಂತೂ ಭಯಂಕರವಾದದ್ದು. ಎರಡರ ನಡುವೆ ಕೊಂಚ ಮನಸ್ಸಿನ ಉದ್ವೇಗವನ್ನು ಇಳಿಸುವ ಒಂದು ರಚನೆ ಯುಕ್ತವೆಂದು ವಾಲ್ಮೀಕಿಗಳಿಗನ್ನಿಸಿರಬೇಕು. ಶ್ರೀರಾಮನು ಕೂಡ ಹಾಸ್ಯಪ್ರಿಯನೆಂದು ಅಲ್ಲಲ್ಲಿ ಕಾಣಬರುತ್ತದೆ. ವಾಲ್ಮೀಕಿಗಳು ಒಂದು ಉಗ್ರವಾದ ಹಠವನ್ನು ತೊಟ್ಟು ಹುಬ್ಬು ಬಿಗಿದು ಔಡುಕಚ್ಚಿ ಕುಳಿತಿದ್ದವರೆಂದು ನನಗನ್ನಿಸುವುದಿಲ್ಲ. ಅವರು ಸೌಮ್ಯವುಳ್ಳವರು. ಸರಳರು. ವಿನೋದಪ್ರಿಯರು. ತಾವು ನಕ್ಕು ಇತರರನ್ನು

ನಗಿಸುವುದರಲ್ಲಿ ಸಂತೋಷಪಡುವವರು. ವಿನೋದಕ್ಕಾಗಿ ಒಂದು ಮನೋಲೀಲೆಯಿಂದ ಅವರು ಕಪಿರಾಜ್ಯವನ್ನು ನಿರ್ಮಿಸಿರಬೇಕೆಂದು ನನಗನ್ನಿಸುತ್ತದೆ. ಇದಕ್ಕೆ ಇತರ ನಿದರ್ಶನಗಳೂ ಇವೆ ಸುಂದರಕಾಂಡದಲ್ಲಿ ಆಂಜನೇಯನು ಕೃತಕೃತ್ಯನಾಗಿ ಹಿಂದಿರುಗಿದ ವಾರ್ತೆಯಿಂದ ಹರ್ಷಾವೇಶದಲ್ಲಿದ್ದ ಕಪಿಗಳು ಮಧುವನವನ್ನು ಧ್ವಂಸಮಾಡಿದ ವರ್ಣನೆಯನ್ನು ನೋಡಬಹುದು (ಸರ್ಗ ೬೨) ಹೀಗೆ ವಾಲ್ಮೀಕಿಗಳ ಮನಸ್ಸು ಮನುಷ್ಯಗರ್ವಭಂಗ, ಕಿಂಚಿದುಪಹಾಸ—ಈ ಎರಡು ಉದ್ದೇಶಗಳನ್ನೊಳಗೊಂಡು ಕಲ್ಪಿಸಿದ್ದು ಕಪಿರಾಜ್ಯ.

## ಚರಿತ್ರೆಯಲ್ಲ

ಮೊದಲೇ ವಿಜ್ಞಾಪಿಸಿದ್ದೇನೆ, ಮಹಾಕಾವ್ಯವ್ಯಾಸಂಗಿಯು ಕಥಾಘಟನೆಗಳ ಸಾಧ್ಯಾಸಾಧ್ಯತೆಯ ವಿಷಯದಲ್ಲಿ ಉದಿಸುವ ಸಂದೇಹಗಳನ್ನೂ ಶಂಕೆಗಳನ್ನೂ ಬದಿಗಿರಿಸಬೇಕೆಂದು. ಕಾವ್ಯವು ಚರಿತ್ರೆ (History) ಅಲ್ಲ. ಕಾವ್ಯವು ಮುಖ್ಯವಾಗಿ ಅಂತರಂಗಪ್ರಪಂಚವನ್ನು ಕುರಿತದ್ದು. ಚರಿತ್ರೆಯು ಮುಖ್ಯವಾಗಿ ಬಹಿರಂಗಪ್ರಪಂಚವನ್ನು ಕುರಿತದ್ದು. ಚರಿತ್ರೆಗೆ ಬೇಕಾದದ್ದು ಸಾಮಾನ್ಯವಾದ ಮನುಷ್ಯಲೋಕ; ಮತ್ತು ಸಾಮಾನ್ಯಲೋಕದಲ್ಲಿ ಒಪ್ಪಿಕೆಗೆ ಬರುವ ರುಜುವಾತುಗಳು: ದಾಖಲೆಗಳು, ತಾರೀಖುಗಳು, ಕೈಫಿಯತ್ತುಗಳು, ಇತ್ಯಾದಿ. ಅಂತರಂಗಲೋಕದಲ್ಲಾದರೋ ಮುಖ್ಯವಾದವು ಅನುಭವಗಳು. ಕಪಿ ಹೇಗೆ ಸಂತೋಷಪಟ್ಟಿತು, ಅದರ ಸಂತೋಷವನ್ನು ಅದು ಹೇಗೆ ವ್ಯಕ್ತಪಡಿಸಿತು, ಅದನ್ನು ನೋಡಿದಾಗ ನೋಡಿದವರ ಮನಸ್ಸಿಗೆ ಏನನ್ನಿಸಿತು—ಹೀಗೆ. ಆದದ್ದರಿಂದ ಯಾರು ಮಹಾಕಾವ್ಯವು ಚಾರಿತ್ರಿಕವಾಗಿಲ್ಲವೆಂದು ಬೊಬ್ಬೆಯಿಡುತ್ತಾರೋ ಅವರು ಮಲ್ಲಿಗೆ ಹೂವಿನ ರಾಶಿಯಲ್ಲಿ ಗೊಬ್ಬರದ ಗುಣವಿಲ್ಲವೆಂದು ಕೊರಗುವವರು.

ಆಕಾರ ವಿಕಾರಗಳಿಗಿಂತ ಅಂತರಂಗಭಾವ ಮುಖ್ಯವೆಂದು ಸೂಚಿಸುವುದೂ ವಾಲ್ಮೀಕಿಗಳ ಆಶಯವಿದ್ದಿರಬಹುದು.

**ಗುಣಾಃ ಪೂಜಾಸ್ಥಾನಂ ಗುಣಿಷು**
**ನ ಚ ಲಿಂಗಂ ನ ಚ ವಯಃ ॥**

ಕಾವ್ಯವೆಂದರೆ ಜೀವನದರ್ಶನ, ಆ ದರ್ಶನದಲ್ಲಿ ಉಂಟಾಗುವ ರಸಸನ್ನಿವೇಶಗಳ ಅನುಭವ. ಮಹಾಕಾವ್ಯವೆಂದರೆ ಮಹಾಜೀವನದರ್ಶನ; ಮಹಾಜೀವನದಲ್ಲಿ ಕಾಣಲಾಗುವ ರಸಗಳ ಅನುಭವ. ಸೀತಾ ರಾಮ ಭರತ ಲಕ್ಷ್ಮಣಾದಿಗಳ ಮಹಾಪರೀಕ್ಷೆಗಳ ದರ್ಶನದಿಂದಲೂ ಆ ಪರೀಕ್ಷೆಗಳಿಗೆ ಅವರು ಪ್ರತ್ಯುತ್ತರರೂಪವಾಗಿ ತೋರಿಸುವ ಮಹಾಚರ್ಯೆಗಳಿಂದಲೂ ಹೊರಹೊಮ್ಮುವ ಮಹಾರಸಗಳ ಅನುಭವ.

## ರಸವೆಂದರೇನು?

ರಸವೆಂಬುದು ನಮಗೆ ಇಷ್ಟವಾದ ಹೃದಯಾನುಭವವನ್ನು ಮಾಡಿಸಿ ಕೊಡಬಲ್ಲ ದ್ರವ್ಯವಿಶೇಷ ನಾವು ಒಂದಾನೊಂದು ಸಂದರ್ಭವನ್ನು ಕಂಡಾಗ ಅಥವಾ ಕೇಳಿದಾಗ ನಮ್ಮ ಅಂತರಂಗದಲ್ಲಿ "ಅಯ್ಯೋ!" ಎಂದಾಗಲಿ, "ಆಹಾ!" ಎಂದಾಗಲಿ, "ಹೊಹೊ!" ಎಂದಾಗಲಿ, "ಭೇಷ್!" ಎಂದಾಗಲಿ ಎನ್ನುವಂತೆ ಮಾಡಿಸುವ ಸಂಗತಿ ಯಾವುದೋ ಅದು ರಸಮೂಲ. ಆ ವಿಶೇಷಗುಣ ಆ ಸಂದರ್ಭದಲ್ಲಿರುವುದರಿಂದಲೇ ನಮ್ಮ ಅಂತರಂಗದಲ್ಲಿ ಒಂದು ಚಲನೆಯುಂಟಾಗಿ, ಒಂದು ಕಂಪನವುಂಟಾಗಿ, ಒಂದು ಜೀವನ ಪರಾಮರ್ಶೆ ಪ್ರಚೋದಿತವಾಗುತ್ತದೆ ಅದೇ ರಸಾನುಭವ. ಎಲ್ಲಿ ಹೀಗೆ ಅಂತರಂಗವನ್ನು ಚುಚ್ಚುವ ಅಥವಾ ಕಲಕುವ ಅಥವಾ ಕೆಣಕುವ ಪ್ರೇರಣೆ ಯಿಲ್ಲವೋ ಅಲ್ಲಿ ರಸವಿಲ್ಲ.

ರಸವೆಂಬುದು ಬರಿಯ ಶಬ್ದಚಮತ್ಕಾರವಲ್ಲ. ಶಬ್ದಬಾಹುಳ್ಯವೂ ಅಲ್ಲ. ಅಥವಾ ವಾಕ್ಯರಚನೆಯ ವಿಶೇಷವೂ ಅಲ್ಲ ಅದು ಹೃದಯಸ್ಪರ್ಶನ ಶಕ್ತಿಯುಳ್ಳ ದ್ರವ್ಯ ಆ ದ್ರವ್ಯದ ಮೂಲಸ್ಥಾನ ಒಂದು ಮಾನುಷ ಸನ್ನಿವೇಶದಲ್ಲಿರುತ್ತದೆ. ಕವಿ ಆ ಸನ್ನಿವೇಶದ ಕಡೆಗೆ ನಮ್ಮ ದೃಷ್ಟಿಯನ್ನು ತಿರುಗಿಸುತ್ತಾನೆ. ಇದೇ ಅವನಿಂದ ನಮಗಾಗುವ ಉಪಕಾರ.

## ಪಾತ್ರಾಭಿವ್ಯಕ್ತಿ

ಮಹಾಕಾವ್ಯದ ಮುಖ್ಯಸ್ವಾರಸ್ಯವಿರುವುದು ಅದರ ಪಾತ್ರಾಭಿ ವ್ಯಕ್ತಿಯಲ್ಲಿ (Character development) ಅದರ ಚಾರಿತ್ರಿಕ

(Historical) ಘಟನೆಯಲ್ಲಲ್ಲ; ಅದರ ವರ್ಣನೆಗಳಲ್ಲಲ್ಲ; ಶಬ್ದ ಚಮತ್ಕಾರದಲ್ಲೂ ವಾಗ್ಧಾಟಿಯಲ್ಲೂ ಅಲ್ಲ; ಅದರ ಮುಖ್ಯಪಾತ್ರಗಳ ಸ್ವಭಾವವಿಕಾಸದಲ್ಲಿ.

ಒಂದಾನೊಂದು ವಿಶೇಷ ಸಂದರ್ಭದಲ್ಲಿ ಒಬ್ಬ ಮಹಾಪುರುಷನ ಮನಸ್ಸು ಅದಕ್ಕೆ ಹೇಗೆ ಪ್ರತಿಹೇಳುತ್ತದೆ? ಇದು ವ್ಯಾಸಂಗಕ್ಕೆ ತಕ್ಕ ವಿಷಯ. ಹವಾಮಾನಶಾಲೆಯಲ್ಲಿ (Meteorological Observatory) ಒಂದು ಎತ್ತರವಾದ ಶಿಖರದಮೇಲೆ ಒಂದು ಹುಂಜದ ಆಕಾರದ (Weathercock) ಯಂತ್ರವನ್ನಿರಿಸಿರುತ್ತಾರೆ. ಆ ಯಂತ್ರವು ಸಾಮಾನ್ಯವಾಗಿ ಯಾವಾಗಲೂ ಸುತ್ತುತಿರುತ್ತದೆ—ಗಾಳಿ ಯಾವ ದಿಕ್ಕಿಗೆ ಬೀಸುತ್ತದೆಯೋ ಆ ಕಡೆಗೆ, ಎಷ್ಟು ವೇಗದಿಂದ ಬೀಸುತ್ತದೆಯೋ ಅಷ್ಟು ರಭಸದಿಂದ; ಗಿರಗಿರನೆಯೋ ಮೆಲ್ಲಮೆಲ್ಲಗೋ ಸುತ್ತುತ್ತದೆ. ಆ ಹವಾಹುಂಜದ ಗತಿವೇಗಗಳಿಂದ ವಾಯುಚಲನೆಯ ಗತಿವೇಗಗಳನ್ನು ಗೊತ್ತುಮಾಡಲಾಗುತ್ತದೆ. ಮಹಾಕಾವ್ಯವು ಇಂಥ ಹವಾಹುಂಜಗಳ ಪ್ರದರ್ಶನಶಾಲೆ. ಕಷ್ಟ ಬಂದಾಗ, ಸಂಕಟ ಬಂದಾಗ, ಭಯ ಬಂದಾಗ, ಸತ್ತ್ವಪರೀಕ್ಷೆ ಬಂದಾಗ, ಜಯ ಬಂದಾಗ, ಸೋಲು ಬಂದಾಗ, ಯಾವಯಾವ ಕಥಾಪಾತ್ರವ್ಯಕ್ತಿ ಹೇಗೆ ಹೇಗೆ ಪ್ರತಿವರ್ತನೆ ತೋರುತ್ತದೆ? ಇದು ನಮ್ಮ ಗಮನದಲ್ಲಿರಬೇಕಾದ ಸಂಗತಿ.

## ಕಾವ್ಯ–ಸತ್ಯ ಸಂಬಂಧ

ಕಾವ್ಯಕ್ಕೂ ಸತ್ಯಕ್ಕೂ ಏನು ಸಂಬಂಧ? ಇದನ್ನು ವಿಚಾರಮಾಡೋಣ ಲೋಕವ್ಯವಹಾರದಲ್ಲಿ ಸತ್ಯವನ್ನು ಎರಡು ಪ್ರಕಾರಗಳಲ್ಲಿ ಕಾಣುತ್ತೇವೆ:

ಒಂದು ಬಹಿಷ್ಪ್ರಮಾಣದ್ದು: ತಾರೀಖು, ಘಂಟೆ, ಚಹರೆಯ ಪಟ್ಟಿ, ಅಳತೆ, ರುಜುವಾತು; ಸಾಕ್ಷ್ಯಗಳ ಕೈಫಿಯತ್ತು—ಇಂಥವುಗಳಿಂದ ಗೊತ್ತಾಗತಕ್ಕ ಸತ್ಯ. ಕೋರ್ಟುಗಳಲ್ಲಿ ನ್ಯಾಯನಿರ್ಣಯಕ್ಕೆ ಆಧಾರವಾದದ್ದು ಇಂಥ ಸತ್ಯ. ಕಳ್ಳತನದ ಆಪಾದನೆ ಹೊತ್ತಿರುವ ಮನುಷ್ಯನು ಕಳ್ಳ ಹೌದೊ, ಅಲ್ಲವೊ? ಆಪಾದಿತರು ಹೇಳಿದ ದಿನ ಆ ಹೊತ್ತಿನಲ್ಲಿ ಆ ಸ್ಥಳದಲ್ಲಿ ಅದೇ ಪದಾರ್ಥವನ್ನು ಅವನು ಕಳುವು ಮಾಡಿದ್ದು

ರುಜುವಾತಾಗದೆ ಹೋದಲ್ಲಿ ಅವನು ಕಳ್ಳನಲ್ಲ ಪಕ್ಕದ ಮನೆಯವರೂ ಹಿತ್ತಲುಕಡೆಯವರೂ ಅವನು ಕಳ್ಳತನ ನಡಸಿದ್ದನ್ನು ಸಾವಿಗಸಲ ಕಂಡಿರ ಬಹುದು. ಆದರೂ ಅವನು ಸತ್ಯವಂತ ಇದು ಒಂದು ಬಗೆಯ ಸತ್ಯ. ನಮ್ಮ ಚರಿತ್ರೆಯ ಪುಸ್ತಕಗಳನ್ನು ಬರೆಯುವವರಿಗೆ ಬೇಕಾಧದ್ದು ಈ ಸತ್ಯ. ಇದನ್ನು ವಾಸ್ತವಿಕ ಸತ್ಯವೆಂದು ಕರೆಯೋಣ.

ಎರಡನೆಯದು ಕಾಲ್ಪನಿಕ ಸತ್ಯ. ಇದು ಕವಿಕರ್ಮದ್ದು. ಹರಿಶ್ಚಂದ್ರ ಕಥೆ ವಾಸ್ತವಿಕವೋ ಅಲ್ಲವೊ. ಅದು ಕಾಲ್ಪನಿಕವೆಂದೇ ಇಟ್ಟುಕೊಳ್ಳೋಣ. ಆದರೆ ಅದರಲ್ಲಿ ನಕ್ಷತ್ರಿಕನು ಹರಿಶ್ಚಂದ್ರನನ್ನು ಹಿಂಸೆಮಾಡಿದ್ದಾಗಲಿ, ಚಂದ್ರಮತಿಯು ಮಗ ರೋಹಿತಾಶ್ವನ ಶವವನ್ನು ಹೊತ್ತು ಶ್ಮಶಾನಕ್ಕೆ ಬಂದದ್ದಾಗಲಿ ನಾಟಕಶಾಲೆಯಲ್ಲಿ ಕಣ್ಣಮುಂದೆ ಬಂದಾಗ ಕಣ್ಣೀರು ಬಿಡದವರು ಯಾರು ? ಆ ದೃಶ್ಯ ಸಂಪೂರ್ಣ ಸತ್ಯವೆಂದು ಅನುಭವವಾದದ್ದ ರಿಂದಲೇ ಅಲ್ಲವೆ ಕಣ್ಣೀರು ಉಕ್ಕಿದ್ದು ? ಹೀಗೆ ಕಾಲ್ಪನಿಕ ಸತ್ಯವು ಅಂತರಂಗ ದಲ್ಲಿ ರುಜುವಾತಿಗೆ ಬಂದರೆ ಅದು ಕಾವ್ಯದ ಸತ್ಯವಾಗುತ್ತದೆ.

ಕಾವ್ಯದಲ್ಲಿ ನಮಗೆ ಬೇಕಾದದ್ದು ವಾಸ್ತವಿಕ ಸತ್ಯವಲ್ಲ, ಪ್ರತ್ಯಕ್ಷ ಸತ್ಯವಲ್ಲ ; ಆಂತರಂಗಿಕ ಸತ್ಯ, ಊಹನಲಭ್ಯ ಸತ್ಯ. ಇದನ್ನೇ ಇಂಗ್ಲಿಷಿನಲ್ಲಿ "Verisimilitude of truth" ಎನ್ನುತ್ತಾರೆ ಅದು ಸತ್ಯದ ಸಾದೃಶ್ಯ, ಸತ್ಯೌಪಮ್ಯ, ಸತ್ಯಪ್ರತೀತಿ.

ಇಂಥ ಸತ್ಯಪ್ರತೀತಿ ಕಾವ್ಯದಲ್ಲಿರದೆಹೋದರೆ ಅದು ಮನುಷ್ಯರಮೇಲೆ ಪ್ರಭಾವಶಾಲಿಯಾಗಲಾರದು. ಕಾವ್ಯದ ಬಲವೇ ಆ ಅಂತರ್ದೃಷ್ಟವಾದ ಸತ್ಯ. ಕಾವ್ಯಾಭ್ಯಾಸಿಗೆ ಬೇಕಾದದ್ದು ಇಂಥ ಅಂತರ್ದೃಷ್ಟಿ. ಅದರ ಒಂದು ರೂಪವೇ ಪ್ರತಿಭೆ. ಫೋಟೊಗ್ರಾಫ್ ಯಂತ್ರವು ವಸ್ತುವಿನ ಬಾಹ್ಯಾಕಾರವನ್ನು ಹೇಗೆ ಹಿಡಿಯಬಲ್ಲದೋ ಹಾಗೆ ಪ್ರತಿಭೆಯು ಒಂದು ಸಂದರ್ಭದ ಆಂತರ್ಯ ವನ್ನು ಗ್ರಹಿಸಬಲ್ಲದ್ದು.

## ಒಂದು ವಿವಾದ

ಈಗ ಒಂದು ಪ್ರಸಿದ್ಧ ತಕರಾರಿನ ವಿಚಾರಕ್ಕೆ ಹೋಗೋಣ. ಅದು ಅನಿವಾರ್ಯವಾದ ತಕರಾರೆಂದು ನನಗನ್ನಿಸುವುದಿಲ್ಲ. ಪೌರಾಣಿಕರೂ

ಹರಿಕಥಾಕಾರರೂ ಬೆಳಸಿದ ತಕರಾರು ಇದೆಂದು ನನಗನ್ನಿಸುತ್ತದೆ. ಶ್ರೀರಾಮನು ವಾಲಿಯನ್ನು ಕೊಂದದ್ದು ನೀತಿಯೆ? ಮೊದಲನೆಯದಾಗಿ, ರಾಮನು ಆ ಯುದ್ಧಕ್ಕೆ ಸಂಬಂಧಪಟ್ಟವನಲ್ಲ. ಎರಡನೆಯದಾಗಿ, ತಾನು ಅದರಲ್ಲಿ ಭಾಗವಹಿಸತಕ್ಕದ್ದೆಂಬುದನ್ನು ವಾಲಿಗೆ ತಿಳಿಯಪಡಿಸಿರಲಿಲ್ಲ. ಮೂರನೆಯದಾಗಿ, ವಾಲಿ ಬೇರೆಕಡೆ ಮುಖ ತಿರುಗಿಸಿದ್ದಾಗ ಅವನನ್ನು ಹೊಡೆದದ್ದು ಸರಿಯೆ? ಈ ಮೂರು ಸಂದರ್ಭಗಳೂ ಇನ್ನೂ ಎಷ್ಟೋ ಅಸಂದರ್ಭಗಳೂ ರಾಮನ ಮಹಾಪುರುಷತ್ವಕ್ಕೆ ಹಾನಿ ತರುತ್ತವೆ ಆ ಹಾನಿಗಳಿಂದ ರಾಮನನ್ನು ರಕ್ಷಿಸಿ ಪಾರುಮಾಡಬೇಕೆಂಬುದು ನಮ್ಮ ಪೌರಾಣಿಕ ಕಥಕರುಗಳ ಮಹೋದ್ದೇಶ. ಕೆಲವಂದಿ ವ್ಯಾಖ್ಯಾನಕಾರರುಗಳೂ ಈ ಮಹಾ ಪ್ರಯತ್ನಕ್ಕೆ ಸೇರಿದ್ದಾರೆ.

ಆದರೆ ರಾಮನಮೇಲೆ ಹೊರಿಸಬಹುದಾದ ಆಕ್ಷೇಪಣೆಗಳನ್ನು ವಾಲಿಯೇ ಹೊರಿಸಿದ್ದಾನೆ. ಅದಕ್ಕೆ ಹೇಳಬಹುದಾದ ಪ್ರತ್ಯುತ್ತರಗಳನ್ನು ರಾಮನೇ ಹೇಳಿದ್ದಾನೆ. ಈ ಸಮಾಧಾನವನ್ನು ವಾಲಿಯೂ ಅವನ ಸಂಬಂಧಿಗಳೂ ಅಂಗೀಕರಿಸಿದ್ದಾರೆ (ಸರ್ಗ ೧೮). ವಾಲಿಯೇ ರಾಮನಲ್ಲಿ ದೋಷವಿಲ್ಲವೆಂದು ಒಪ್ಪಿಕೊಂಡಮೇಲೆ ತಕರಾರು ಬೆಳಸುವುದಕ್ಕೆ ನಾವು ಯಾರು?

ಈ ವಿಚಾರವನ್ನು ಇನ್ನೊಂದು ದೃಷ್ಟಿಯಿಂದ ನೋಡಬಹುದಾಗಿದೆ. ಪ್ರಶ್ನೆ ಕೇಳುವವರು ರಾಮನ ಮಹಾಪುರುಷತ್ವದ ದೃಷ್ಟಿಯಿಂದತಾನೆ ಹಾಗೆ ಕೇಳುವುದು? ಸಾಮಾನ್ಯ ಮನುಷ್ಯರು ಹಾಗೆ ನಡೆದುಕೊಂಡಿದ್ದಿದ್ದರೆ ಪ್ರಶ್ನೆಯೇಳುತ್ತಿರಲಿಲ್ಲ. ಅದು ಮನುಷ್ಯನಿಗೆ ಸ್ವಾಭಾವಿಕವಾದದ್ದೆಂದು ಉಪೇಕ್ಷೆ ಮಾಡಬಹುದಾಗಿತ್ತು. ಆದರೆ ರಾಮನು ಸಾಮಾನ್ಯ ಮನುಷ್ಯನಲ್ಲ; ಮಹಾಪುರುಷ, ಧೀರೋದಾತ್ತ. ಅಂಥವನು ಹೀಗೆ ಮಾಡಬಹುದೆ?

ಶ್ರೀರಾಮಚಂದ್ರನನ್ನು ಎರಡು ಬೇರೆಬೇರೆ ಪ್ರಸ್ಥಾನಗಳಿಂದ ನೋಡುವುದು ಪೂರ್ವದಿಂದ ಬಂದಿರುವ ವಾಡಿಕೆ:

(೧) ರಾಮನು ಮನುಷ್ಯತ್ವದಿಂದ ದೇವತ್ವಕ್ಕೆ ಹತ್ತಿದವನು. ತನ್ನ ಪ್ರಯತ್ನದಿಂದ ದೇವಸಮಾನತ್ವವನ್ನು ಸಂಪಾದಿಸಿದವನು.

(೨) ರಾಮನು ದೇವತ್ವದಿಂದ ಮನುಷ್ಯತ್ವಕ್ಕೆ ಇಳಿದವನು. ಮನುಷ್ಯತ್ವದ ಉಪಾಧಿಗಳನ್ನು ಮೀರಿದವನು ಸಾಕ್ಷಾತ್ ಮಹಾವಿಷ್ಣು.

ಈ ಎರಡು ದೃಷ್ಟಿಗಳಲ್ಲಿ ಎರಡನೆಯ ದೃಷ್ಟಿಗೆ, ಎಂದರೆ ಸಾಕ್ಷಾತ್ ವಿಷ್ಣು ಎಂಬ ಅಭಿಪ್ರಾಯಕ್ಕೆ ವಾಲಿವಧೋಪಾಯಸಮರ್ಥನೆಯು ಕೊಂಚ ಕಷ್ಟವಾಗುತ್ತದೆ. ಆ ಕಷ್ಟದಿಂದ ರಾಮನನ್ನು ಪಾರುಮಾಡುವುದಕ್ಕಾಗಿ ಕೋರ್ಟಿನಲ್ಲಿ ಲಾಯರುಗಳು ವಾದಿಸುವಂತೆ ಪಾಯಿಂಟ್ ಒಂದು, ಪಾಯಿಂಟ್ ಎರಡು—ಎಂದು ಪ್ರತಿವಾದ ಹೇಳಿ ಚಮತ್ಕಾರವಿಜೃಂಭಣೆ ಮಾಡಬೇಕಾಗುತ್ತದೆ.

ಆದರೆ ರಾಮನು ಮೊದಮೊದಲು ಮನುಷ್ಯನಾಗಿದ್ದವನು ಎಂಬ ಕಕ್ಷಿಯವರಿಗೆ ವಾಲಿವಧಪ್ರಕರಣದಲ್ಲಿ ಅಸಂಗತವೇನೂ ಕಾಣುವುದಿಲ್ಲ. ಎಲ್ಲ ಸಾಮಾನ್ಯ ಮನುಷ್ಯರೂ ಎಂಥ ವಿವೇಕದಿಂದಲೂ ಎಂಥ ಉಪಾಯ ದಿಂದಲೂ ನಡೆದುಕೊಳ್ಳುತ್ತಿದ್ದರೋ ಅದರಂತೆಯೇ ರಾಮನು ನಡೆದ. ಸಂದರ್ಭದ ವಿವರಾಂಶಗಳನ್ನು ಮೊದಲು ಜ್ಞಾಪಕಕ್ಕೆ ತಂದುಕೊಳ್ಳೋಣ.

## ವಾಲಿವಧೆಯ ಪೌರ್ವಾಪರ್ಯ

ಆಂಜನೇಯಸ್ವಾಮಿ ಶ್ರೀರಾಮನಿಗೆ ಸುಗ್ರೀವನ ಪರಿಚಯವನ್ನು ಮಾಡಿಕೊಡುವ ಸಂದರ್ಭದಲ್ಲಿ ಹೇಳಿದ್ದು ಹೀಗೆ (ಪುಟ ೪೩) :

**ಸ ಹಿ ರಾಜ್ಯಾತ್ ಪರಿಭ್ರಷ್ಟಃ**
**ಕೃತವೈರಶ್ಚ ವಾಲಿನಾ ।**
**ಹೃತದಾರೋ ವನೇ ತ್ಯಕ್ತಃ**
**ಭ್ರಾತ್ರಾ ವಿನಿಕೃತೋ ಭೃಶಮ್ ॥**

—*ಸರ್ಗ ೪, ಶ್ಲೋಕ ೨೬*

**ಕರಿಷ್ಯತಿ ಸ ಸಾಹಾಯ್ಯಂ**
**ಯುವಯೋರ್ಭಾಸ್ಕರಾತ್ಮಜಃ ।**
**ಸುಗ್ರೀವಃ ಸಹ ಚಾಸ್ಮಾಭಿಃ**
**ಸೀತಾಯಾಃ ಪರಿಮಾರ್ಗಣೇ ॥**

—*ಸರ್ಗ ೪, ಶ್ಲೋಕ ೨೮*

ಶ್ರೀರಾಮನ ಸಮಸ್ತ ವರ್ತನೆಗೂ ತಳಹದಿ ಇಲ್ಲಿದೆ. ರಾಮನ ಮುಖ್ಯೋದ್ದೇಶ ಸೀತಾನ್ವೇಷಣ. (೧) ಅದು ಆತನಿಗಿದ್ದ ಪ್ರಪ್ರಥಮ ಕರ್ತವ್ಯ. (೨) ಅದಕ್ಕೆ ಆಗಬೇಕಾಗಿದ್ದ ಪ್ರಪ್ರಥಮ ಸಾಧನ ಸಮರ್ಥ ರಾದವರ ಸಹಾಯ. (೩) ಅಂಥ ಸಹಾಯವನ್ನು ಕೊಡಲು ಪ್ರಪ್ರಥಮ ವಾಗಿ ಸಿದ್ಧನಾಗಿ ಬಂದವನು ಸುಗ್ರೀವ. ಆದದ್ದರಿಂದ ಸುಗ್ರೀವನನ್ನು ತೃಪ್ತಿಪಡಿಸುವುದು ಶ್ರೀರಾಮನಿಗೆ ಸ್ವಕರ್ತವ್ಯದ ಪ್ರಪ್ರಥಮಾಂಗವಾಯಿತು.

ರಾಮನು ಹೇಳಿದ ಉತ್ತರ (ಪುಟ ೪೯) :

**ವಾಲಿನಂ ತಂ ವಧಿಷ್ಯಾಮಿ**
**ತವ ಭಾರ್ಯಾಪಹಾರಿಣಮ್ ॥**

—ಸರ್ಗ ೫, ಶ್ಲೋಕ ೨೭

ಹೀಗೆಂದು ಭಾಷೆಕೊಟ್ಟ. ಇದು ಅಗ್ನಿಸಾಕ್ಷಿಕವಾಗಿ ನಡೆಯಿತು. ಅವರು ಕೈಯಮೇಲೆ ಕೈಹಾಕಿ ಪ್ರಮಾಣ ಮಾಡಿಕೊಟ್ಟರು. ಈ ಒಪ್ಪಂದವೇ ರಾಮನ ಚರ್ಯೆಗೆ ಅಡಿಗಲ್ಲು.

ರಾಮನು ವಾಲಿಯ ಸಾಹಾಯ್ಯವನ್ನೇ ಪಡೆದುಕೊಳ್ಳಬಹುದಾಗಿ ತ್ತಲ್ಲ? ವಾಲಿಯು ತಾನು ರಾವಣನಿಗಿಂತ ಮಹಾಪರಾಕ್ರಮಿಯೆಂದೂ ಸೀತೆಯನ್ನು ತಾನೇ ತಂದು ಒಪ್ಪಿಸಬಲ್ಲೆನೆಂದೂ ಹೇಳಿದನಲ್ಲ? ಅಂಥವನನ್ನು ಬಿಟ್ಟು ರಾಮನು ಈ ದುರ್ಬಲನಾದ ಸುಗ್ರೀವನನ್ನೇ ಏಕೆ ಹಿಡಿಯ ಬೇಕಾಗಿತ್ತು? ಇದಕ್ಕೆ ಪ್ರತ್ಯುತ್ತರವಾದ ಮೂರು ಸಂಗತಿಗಳು ರಾಮನ ಮನಸ್ಸಿನಲ್ಲಿದ್ದಿರಬೇಕು :

(೧) ವಾಲಿ ಸಮರ್ಥನೇನೋ ಹೌದು. ಸೀತೆಯನ್ನು ಹುಡುಕಿ ತರುವ ಶಕ್ತಿ ಅವನಲ್ಲುಂಟು. ಆದರೆ ತನ್ನ ಶಕ್ತಿಯನ್ನು ಬೇರೆ ರೀತಿ ತಿರುಗಿಸುವ ಪ್ರವೃತ್ತಿಯೂ ಅವನಲ್ಲುಂಟು. ರಾವಣನು ಶಾಪಭೀತನಾಗಿ ಸೀತೆಯನ್ನು ಮುಟ್ಟುವ ಗೋಜಿಗೆ ಹೋಗಲಿಲ್ಲ. ವಾಲಿಗೆ ಅಂಥ ಭೀತಿ ಯೇನೂ ಇರಲಿಲ್ಲ.

(೨) ವಾಲಿಯಲ್ಲಿ ಚಾಪಲ್ಯವಿದ್ದದ್ದು ರುಜುವಾತಿಗೆ ಬಂದಿತ್ತು.

*

(೩) ಎಲ್ಲಕ್ಕಿಂತ ಮುಖ್ಯವಾಗಿ, ಸುಗ್ರೀವನಿಗೆ ಆಗಲೇ ಮಾತು ಕೊಟ್ಟಿದ್ದಾಗಿತ್ತು. ಅವರ ಸ್ನೇಹ ಅಗ್ನಿಸಾಕ್ಷಿಕವಾದದ್ದು (ಪುಟ ೪೭) :

**ಮರ್ಯಾದಾ ಬಧ್ಯತಾಂ ಧ್ರುವಾ ॥**

—ಸರ್ಗ ೫, ಶ್ಲೋಕ ೧೨

## ಉಪಾಯವು ಗೌಣ

ಹೀಗೆ ಶ್ರೀರಾಮನು ತನ್ನ ಮಾತಿನಿಂದಲೇ ತನ್ನ ನಡವಳಿಕೆಯಿಂದಲೇ ಕಟ್ಟಿಗೊಳಪಟ್ಟಿದ್ದನು. ವಾಲಿವಧೆ ಹೀಗೆ ಅನಿವಾರ್ಯ ಕರ್ತವ್ಯವಾಯಿತು.

ಇದಾದಮೇಲೆ ಉಪಾಯದ ವಿಚಾರ. ಉದ್ದೇಶವು ಮುಖ್ಯ ಪ್ರಶ್ನೆಯಾದ ಮೇಲೆ ಉಪಾಯವು ಗೌಣಪ್ರಶ್ನೆಯಾಗುತ್ತದೆ. ಉದ್ದೇಶವು ಅನಿವಾರ್ಯ ; ಉಪಾಯವು ಐಚ್ಛಿಕ. ವಾಲಿಯ ಬಲಾಬಲಗಳನ್ನು ನಿರ್ಣಯಿಸುವುದೂ ತನ್ನ ಅನುಕೂಲಪ್ರತಿಕೂಲಗಳನ್ನು ನಿರ್ಣಯಿಸಿಕೊಳ್ಳುವುದೂ ರಾಮನ ಕರ್ತವ್ಯವಾಯಿತು. ಇಲ್ಲಿ ಸಂಗತವಾಗತಕ್ಕದ್ದು ಬೇರೊಬ್ಬರು ಮಾಡಿಟ್ಟ ನಿಯಮವಲ್ಲ ; ತನ್ನ ಸ್ವಂತ ವಿವೇಚನೆ, ತನ್ನ ಸ್ವಂತ ನಯಚಿಂತನೆ. ಜಯಸಿದ್ಧಿಗೆ ಯಾವುದು ದಾರಿಯೋ, ಎಂಥ ಪ್ರಯತ್ನದಿಂದ ಬಲವ್ಯಯ ಕಡಮೆಯಾಗಿ ಲಾಭಸಂಪಾದನೆ ಹೆಚ್ಚೋ, ಎಂಥ ಉಪಾಯದಲ್ಲಿ ನಷ್ಟಭಯ ಕಡಮೆಯೋ, ಆದಾಯಸಂಭವ ಹೆಚ್ಚೋ ಅದನ್ನು ಆಲೋಚಿಸಬೇಕಾದದ್ದು ಕಾರ್ಯಮಾರ್ಗ. ಈ ವಿಚಾರ ನೀತಿತತ್ತ್ವದ್ದಲ್ಲ, ಕಾರ್ಯನಯದ್ದು. ಇದನ್ನು ಶ್ರೀರಾಮನು ಅನುಸರಿಸಿದ. ತನಗೆ ಶ್ರಮ ಕಡಮೆಯಾಗಬೇಕು, ಫಲ ಪೂರ್ಣವಾಗಬೇಕು. ಆಶಾಭಂಗದ ಸಂಭವ ಕಡಮೆಯಾಗಬೇಕು, ಉದ್ದೇಶಸಾಧನೆಯ ಸಂಭವ ಹೆಚ್ಚಾಗಬೇಕು. ಇದು ಲೋಕದಲ್ಲಿ ಎಲ್ಲ ಸಜ್ಜನರೂ ಸಂಭಾವಿತರೂ ಅಂಗೀಕರಿಸಿರುವ ಮಾರ್ಗ. ಇದನ್ನು ರಾಮನು ಅನುಸರಿಸಿದ.

ಆದದ್ದರಿಂದ ವಾಲಿವಧೆಪ್ರಕರಣದಲ್ಲಿ ಹೆಚ್ಚಿನ ತತ್ತ್ವಪ್ರಸಕ್ತಿಯೇನೂ ಇಲ್ಲ. ದೈವಾಂಶಪುರುಷನು ಸಾಮಾನ್ಯಪುರುಷನಂತೆ ನಡೆಯಬಹುದೆ ? —ಎಂಬುದು ಒಂದು ಅತಿವಾದಿ ಪಕ್ಷದ ಪ್ರಶ್ನೆ. ನಮ್ಮ ಉತ್ತರ ಅವನು ಹಾಗೆ ನಡೆಯಬಹುದು ಮಾತ್ರವಲ್ಲ, ನಡೆಯಬೇಕು—ಎಂದು. ಶ್ರೀರಾಮನು

ಸಾಮಾನ್ಯಪುರುಷರಂತೆಯೇ ಹಸಿದ; ಅವರಂತೆಯೇ ಊಟಮಾಡಿದ; ಅವರಂತೆಯೇ ನಕ್ಕ; ಅವರಂತೆಯೇ ಅತ್ತ. ನಾಮಾನ್ಯಮನುಷ್ಯನು ತನ್ನ ಪ್ರಿಯೆಗಾಗಿ ಹಾತೊರೆಯುವಂತೆ ಅವನೂ ಹಾತೊರೆದ. ಅವನು ನೂರರಲ್ಲಿ ತೊಂಬತ್ತೊಂಬತ್ತು ಕಡೆ ನಾಮಾನ್ಯನಂತೆ ನಡೆದದ್ದರಿಂದಲೇ ಅವನನ್ನು ಮಿಕ್ಕ ಒಂದು ವಿಷಯದಲ್ಲಿ ಅವನು ತಮಗಿಂತ ಉತ್ಕೃಷ್ಟನೆಂದು ಕಂಡುಕೊಂಡು ಅವನನ್ನು ಅನುಕರಣೀಯನೆಂದು ಅಂಗೀಕರಿಸಿದರು. ಅವನು ಮನುಷ್ಯತ್ವ ದಿಂದ ದೈವತ್ವಕ್ಕೆ ಹತ್ತಿದವನು.

**ಅನೃತಾತ್ಸತ್ಯಮುಪೈಮಿ ।**
**ಮಾನುಷಾದ್ದೈವ್ಯಮುಪೈಮಿ ॥**

—ತೈತ್ತಿರೀಯ ಬ್ರಾಹ್ಮಣ

* * *

ಸೀತಾರಾಮವೃತ್ತಾಂತದ ಕ್ಷೀರಪಾನದ ನಡುವೆ ವಾನರಪ್ರಕರಣವು ದ್ರಾಕ್ಷಿಯ ಕಾಳಿನಂತೆ—ಹುಳ್ಳಹುಳ್ಳಗೆ ಆದರೂ' ಮಧುರದೊಡನೆ ಬೆರೆತು ಕೊಳ್ಳುವ ಹುಳಿಯಾಗಿಯೂ ಮುಖ್ಯರಸದ ಮಧುರವನ್ನು ಪ್ರಗುಣಿತಪಡಿಸಿ ತೋರಿಸುವುದಾಗಿಯೂ ಯಶಸ್ವಿಯಾಗಿದೆ.

## ಎರಡು ಅನುಕರಣೀಯ ಗುಣಗಳು

ಕಿಷ್ಕಿಂಧಾಕಾಂಡದಲ್ಲಿ ಮನೋಹರಗಳಾದ ಪ್ರಕರಣಗಳು ಹತ್ತಾರಿವೆ. ಒಂದು ಪ್ರಕರಣವನ್ನು ಕುರಿತು ಒಂದು ಮಾತನ್ನು ವಿಶೇಷವಾಗಿ ಹೇಳ ಬಯಸುತ್ತೇನೆ. ಅದು ರಾಮ-ಹನುಮಂತರ ಪ್ರಥಮಪರಿಚಯ ಕಥೆ. ಆಂಜನೇಯಸ್ವಾಮಿಯು ಮಾತನಾಡಿದ ರೀತಿಯನ್ನು ಶ್ರೀರಾಮನು ಪ್ರಶಂಸೆ ಮಾಡಿರುವುದರಲ್ಲಿ ಎರಡು ಅಂಶಗಳು ನಮ್ಮ ದೃಷ್ಟಿಯಲ್ಲಿರಬೇಕಾದದ್ದು.

ಮೊದಲನೆಯದು ಆಂಜನೇಯನ ವಾಕ್ಯರೀತಿಯ ಔಚಿತ್ಯ (ಪುಟ ೩೬) :

**ಅವಿಸ್ತರಮಸಂದಿಗ್ಧಂ**
**ಅವಿಲಂಬಿತಮದ್ರುತಮ್ ॥**

—ಸರ್ಗ ೩, ಶ್ಲೋಕ ೩೧

ವಿಷಯುವನ್ನು ಬೆಳಸಿಲ್ಲ ಆದರೆ ಸಂಶಯಕ್ಕೆ ಅವಕಾಶ ಬಿಟ್ಟಿಲ್ಲ. ಮಾತುಗಳ ಉಚ್ಚಾರಣೆ ಬಹು ಸಾವಕಾಶವಲ್ಲ, ಬಹು ವೇಗವೂ ಅಲ್ಲ

ಇದನ್ನು ನಮ್ಮ ಜನ ಗಮನವಿಟ್ಟು ನೋಡಬೇಕಾದದ್ದು. ನಮ್ಮಲ್ಲಿ ಕನ್ನಡದಲ್ಲಿ ಮಾತನಾಡುವವರು ಸಾಮಾನ್ಯವಾಗಿ ಮಾತಿನ ಕಡೆಯ ಅಕ್ಷರ ವನ್ನು, ಅದರಲ್ಲಿಯೂ ಕ್ರಿಯಾಪದದ ಕಡೆಯ ಅಕ್ಷರವನ್ನು, ನುಂಗಿಬಿಡು ತ್ತಾರೆ.

**ಪ್ರಶ್ನೆ :** ಶಾಲೆಗೆ ಹೋಗಿದ್ದೆಯೊ ?

**ಉತ್ತರ :** ಹೋ ....

**ಪ್ರ :** ಆ ?

**ಉ :** ಹೋಗಿ ....

"ದ್ದೆ" ಎಂಬುದು ಹೊರಡುವುದೇ ಇಲ್ಲ.

ಒಂದೊಂದು ಅಕ್ಷರಕ್ಕೂ ಸಲ್ಲಬೇಕಾದ ಬೆಲೆಯುಂಟು. ಆಂಜನೇಯ ಸ್ವಾಮಿ ಹಾಗೆ ಒಂದೊಂದು ಅಕ್ಷರಕ್ಕೂ ಅದಕ್ಕೆ ತಕ್ಕ ಬೆಲೆ ಸಲ್ಲಿಸಿದನಂತೆ. ಅಕ್ಷರಲೋಪ ಸ್ವರಲೋಪಗಳಿರಲಿಲ್ಲ.

ಇದು ರಾಮನಿಗೆ ಮೆಚ್ಚಿಕೆಯಾದ ಮೊದಲನೆಯ ಗುಣ.

ಎರಡನೆಯ ಗುಣ ಆಂಜನೇಯನ ವಿನಯಪೂರ್ವಕವಾದ ನಯ (ಪುಟ ೩೬) :

**ಏವಂ ಗುಣಗಣೈರ್ಯುಕ್ತಾಃ**
**ಯಸ್ಯ ಸ್ಯುಃ ಕಾರ್ಯಸಾಧಕಾಃ ।**
**ತಸ್ಯ ಸಿಧ್ಯಂತಿ ಸರ್ವಾರ್ಥಾಃ**
**ದೂತವಾಕ್ಯಪ್ರಚೋದಿತಾಃ ॥**

**—ಸರ್ಗ ೩, ಶ್ಲೋಕ ೩೫**

ಇಂಡಿಯ ದೇಶದ ಪರವಾಗಿ ಹೊರದೇಶಗಳಿಗೆ ರಾಯಭಾರಿಗಳನ್ನು ನಿಯಮಿಸಿ ಕಳುಹಿಸುವ ಅಧಿಕಾರಸ್ಥರು ಈ ಪ್ರಕರಣವನ್ನು ನಾಲ್ಕಾರು ಬಾರಿ ಮನನಮಾಡಿದರೆ ಒಳ್ಳೆಯದೆನ್ನಿಸುತ್ತದೆ.

ಆಂಜನೇಯನು ಉಪಾಯಜ್ಞ. ಭಿಕ್ಷುವೇಷವನ್ನು ಧರಿಸಿ ಕಾಣಿಸಿಕೊಂಡ ಕಾರ್ಯಸಿದ್ಧಿಯಾದ ಬಳಿಕ ಭಿಕ್ಷುರೂಪವನ್ನು ಬಿಟ್ಟು ಮತ್ತೆ ವಾನರನಾದ. ವೀರಸತ್ಯವಾದಿಗಳು ಈ ಸಂಗತಿಯನ್ನು ಮನನ ಮಾಡಬೇಕು ಸತ್ಯವನ್ನು ಬಿಡಬಾರದು. ಆದರೆ ಸತ್ಯವೆಂಬ ಹೆಸರಿನಿಂದ ಕಾರ್ಯೋಪಾಯವನ್ನು ಮರೆಯಬಾರದು. ಸತ್ಯಕ್ಕೆ ವಿರೋಧವಲ್ಲದ ಉಪಾಯಕ್ಕೆ ಧಾರ್ಮಿಕ ಜೀವನದಲ್ಲಿ ಒಂದು ಸ್ಥಾನ ಅವಶ್ಯವಾಗುಂಟು. ಸತ್ಯಸಹಕಾರಿಯಾದ ಉಪಾಯವನ್ನು ಇಂಗ್ಲಿಷಿನಲ್ಲಿ 'ಟ್ಯಾಕ್ಟ್' (Tact) ಎಂದು ಕರೆಯುತ್ತಾರೆ. ಈ ನಯೋಪಾಯವಿವೇಕವಿಲ್ಲದಿದ್ದರೆ ವ್ಯವಹಾರದಲ್ಲಿ ಸತ್ಯಸಾಧನೆ ದುರ್ಲಭವಾದೀತು.

ಇದು ಕಿಷ್ಕಿಂಧಾಕಾಂಡದಲ್ಲಿ ಬಹು ಸುಂದರವಾದ ಪ್ರಕರಣ.

* * *

ವಿದ್ವಾನ್ ಶ್ರೀ ಎನ್ ರಂಗನಾಥಶರ್ಮಾರವರು ಮಾಡಿರುವ ಕನ್ನಡ ಅನುವಾದವನ್ನು ನಾನು ಅಲ್ಲಲ್ಲಿ ಓದಿಸಿ ಕೇಳಿ ಆನಂದಿತನಾಗಿದ್ದೇನೆ. ಅವರು ನಾಲ್ಕಾರು ವ್ಯಾಖ್ಯಾನಗಳನ್ನು ಪರಿಶೀಲನೆ ಮಾಡಿ ಅರ್ಥನಿಷ್ಕರ್ಷೆ ಮಾಡಿದ್ದಾರೆ. ಅಂಥ ಸಂದರ್ಭಗಳಲ್ಲಿ ಒಂದೆರಡನ್ನು ಕುರಿತು ನಾವಿಬ್ಬರೂ ಅಭಿಪ್ರಾಯವಿನಿಮಯ ಮಾಡಿಕೊಂಡಿದ್ದೇವೆ. ನಾನು ವ್ಯಾಖ್ಯಾನಕಾರರಿಗೆ ಶರಣುಹೊಗುವವನಲ್ಲ. ಹೀಗೆ ನಾನು ವಿಜ್ಞಾಪನೆಮಾಡಿದ್ದನ್ನು ಶರ್ಮಾ ರವರು ಔದ್ಧತ್ಯವೆಂದು ಭಾವಿಸಲಿಲ್ಲ. ಅದು ನನ್ನ ಸುಯೋಗ ಶರ್ಮಾ ರವರು ಸ್ವತಂತ್ರ ವಿಮರ್ಶಕರು; ಅನುವಾದದ ಕಾರ್ಯದಲ್ಲಿ ಶಬ್ದಕ್ಕಿಂತ ಅರ್ಥಪುಷ್ಟಿ, ರಸಪುಷ್ಟಿ ಹೆಚ್ಚಿನದೆಂದು ನಂಬಿದವರು. ಆದದ್ದರಿಂದ ಅವರ ಅನುವಾದವು ಸರ್ವರಿಗೂ ಉಪಾದೇಯವಾಗಿದೆ. ಇಂಥ ಒಳ್ಳೆಯ ಕನ್ನಡ ವಚನಸಾಹಿತ್ಯವನ್ನು ಅವರು ನಮ್ಮ ವಾಚಕರಿಗೆ ಒದಗಿಸಿಕೊಟ್ಟಿರುವುದಕ್ಕಾಗಿ ಅವರನ್ನು ನಾನು ಅಭಿನಂದಿಸುತ್ತೇನೆ.

ಶ್ರೀಮಾನ್ ಡಿ. ಸಿ. ಅನಂತರಾಮಯ್ಯನವರೂ ಅವರ ಸ್ನೇಹಿತರೂ ಈ ಪವಿತ್ರವೂ ಮಂಗಳಕರವೂ ಆದ ಕಾರ್ಯದಲ್ಲಿ ಉತ್ಸಾಹಗುಂದದೆ ಪೂರ್ಣಶ್ರದ್ಧೆಯಿಂದ ದುಡಿದಿದ್ದಾರೆ. ಅವರು ಪಟ್ಟಿರುವ ಶ್ರಮವು ಮಹಾಜನರ ಕೃಪೆಯಿಂದ ಸಾರ್ಥಕವಾದೀತೆಂದು ನಾನು ನಂಬಿಕೊಂಡಿದ್ದೇನೆ.

ಯುದ್ಧಕಾಂಡದ ಅನುವಾದವೂ ಅನಂತರ ಉತ್ತರಕಾಂಡದ ಅನುವಾದವೂ ಶ್ರೀರಾಮಚಂದ್ರಪ್ರಭುವಿನ ಕೃಪೆಯಿಂದ ಬೇಗನೆ ವಾಚಕರಿಗೆ ದೊರೆಯುವಂತಾಗಲಿ ಎಂದು ಹಾರೈಸುತ್ತೇನೆ.

ಹನುಮತ್ಸಮೇತಾಯ
ಹರೀಶಾಭೀಷ್ಟದಾಯಿನೇ ।
ವಾಲಿಪ್ರಮಥನಾಯಾಸ್ತು
ಮಹಾಧೀರಾಯ ಮಂಗಲಮ್ ॥

(ಪಾರಾಯಣ ಶ್ಲೋಕ)

ಡಿ. ವಿ. ಜಿ.

# ಅನುಕ್ರಮಣಿಕೆ

# ರಾಮಾಯಣ ಪ್ರಕಾಶನ ಸಮಿತಿ

## ಸದಸ್ಯರು

ಶ್ರೀಯುತರಾದ

೧ ಹೆಚ್. ಎಸ್. ಕೃಷ್ಣಸ್ವಾಮಿ

೨ ಎಸ್ ಎನ್. ಮೂರ್ತಿ

೩ ಹೆಚ್. ಸಿ. ನಂಜುಂಡಭಟ್ಟ

೪ ಬಿ. ಕೆ. ಅನಂತರಾಮಯ್ಯ

೫ ಟಿ. ಆರ್. ಶಾಮಣ್ಣ

೬ ಹೆಚ್. ವಿ. ಅಪ್ರಮೇಯ

೭ ಕೆ. ಸಿ. ಎಸ್. ರಾಮನ್

೮ ಜಿ. ನಾರಾಯಣರಾವ್

೯ ಎನ್. ರಂಗನಾಥಶರ್ಮಾ

೧೦ ಡಿ. ಸಿ. ಅನಂತರಾಮಯ್ಯ (ಕಾರ್ಯದರ್ಶಿ)

---

# ಪ್ರಾರ್ಥನೆ



ವಂದಾಮಹೇ ಮಹೋದ್ದಂಡದೋರ್ದಂಡೌ ರಘುನಂದನೌ |
ತೇಜೋನಿರ್ಜಿತಮಾರ್ತಂಡಮಂಡಲೌ ಲೋಕನಂದನೌ ||

ಸಂಜೀವನಂ ಮೈಥಿಲಕನ್ಯಕಾಯಾಃ
ಸೌಂದರ್ಯಸರ್ವಸ್ವಮಹಾನಿಧಾನಮ್ |
ಶಶಾಂಕಪಂಕೇರುಹಯೋಃ ಸಮಾನಂ
ರಾಮಸ್ಯ ವಂದೇ ರಮಣೀಯಮಾಸ್ಯಮ್ ||

ಹನುಮತ್ಸಮವೇತಾಯ ಹರೀಶಾಭೀಷ್ಟದಾಯಿನೇ |
ವಾಲಿಪ್ರಮಥನಾಯಾಸ್ತು ಮಹಾಧೀರಾಯ ಮಂಗಲಮ್ ||



॥ ಶ್ರೀಃ ॥

# ॥ ಶ್ರೀಮದ್ವಾಲ್ಮೀಕಿ ರಾಮಾಯಣಮ್ ॥

## ಕಿಷ್ಕಿಂಧಾಕಾಂಡಃ

### ಪ್ರಥಮಃ ಸರ್ಗಃ

ರಾಮವಿಪ್ರಲಂಭಾವೇಶಃ

**ಸ ತಾಂ ಪುಷ್ಕರಿಣೀಂ ಗತ್ವಾ ಪದ್ಮೋತ್ಪಲಝಷಾಕುಲಾಮ್ ।**
**ರಾಮಃ ಸೌಮಿತ್ರಿಸಹಿತೋ ವಿಲಲಾಪಾಕುಲೇಂದ್ರಿಯಃ ॥** ೧

**ತಸ್ಯ ದೃಷ್ಟ್ವೈವ ತಾಂ ಹರ್ಷಾದಿಂದ್ರಿಯಾಣಿ ಚಕಂಪಿರೇ ।**
**ಸ ಕಾಮವಶಸಂಪನ್ನಃ ಸೌಮಿತ್ರಿಮಿದಮಬ್ರವೀತ್ ॥** ೨

**ಸೌಮಿತ್ರೇ ಶೋಭತೇ ಪಂಪಾ ವೈಡೂರ್ಯವಿಮಲೋದಕಾ ।**
**ಫುಲ್ಲಪದ್ಮೋತ್ಪಲವತೀ ಶೋಭಿತಾ ವಿವಿಧೈರ್ದ್ರುಮೈಃ ॥** ೩

## ಕಿಷ್ಕಿಂಧಾಕಾಂಡ

### ಸರ್ಗ ೧

ಪಂಪಾಸರೋವರದ ವರ್ಣನೆ. ಶ್ರೀರಾಮನ ವಿರಹದುಃಖ.

ಶ್ರೀರಾಮನು ಲಕ್ಷ್ಮಣಸಮೇತನಾಗಿ ಪಂಪಾಸರೋವರದ ಬಳಿಗೆ ಹೋದನು. ಆ ಪುಷ್ಕರಿಣಿಯಲ್ಲಿ ತಾವರೆ ನೈದಿಲೆಗಳು ತುಂಬಿದ್ದವು. ಮೀನುಗಳು ಸಳಸಳನೆ ಈಜಾಡುತ್ತಿದ್ದವು ಅದನ್ನು ನೋಡಿದೊಡನೆ ಶ್ರೀರಾಮನಿಗೆ ಸೀತೆಯ ನೆನಪಾಗಿ* ರೋಮಾಂಚವಾಯಿತು ಮನಸ್ಸು ಕದಲಿತು ಇಂದ್ರಿಯಗಳು ಚಂಚಲವಾದವು. ದುಃಖವು ಒತ್ತರಿಸಿತು. ಅವನು ಕಾಮಾರ್ತನಾಗಿ ಸೌಮಿತ್ರಿಯನ್ನು ಕುರಿತು ಹೀಗೆಂದನು (೧–೨) : "ಲಕ್ಷ್ಮಣ, ವೈಡೂರ್ಯದಂತಿರುವ ತಿಳಿನೀರಿನಿಂದ ತುಂಬಿದ ಈ ಪಂಪೆ

---

* ತಾವರೆ–ನೈದಿಲೆ–ಮೀನುಗಳನ್ನು ನೋಡಿ ಅವುಗಳಂತಿದ್ದ ಸೀತೆಯ ಮುಖ–ಕಣ್ಣು–ಕಟಾಕ್ಷಗಳ ಸ್ಮರಣೆಯಾಯಿತು ಎಂದು ಅಭಿಪ್ರಾಯ.

**ಸೌಮಿತ್ರೇ ಪಶ್ಯ ಪಂಪಾಯಾಃ ಕಾನನಂ ಶುಭದರ್ಶನಮ್ ।**
**ಯತ್ರ ರಾಜಂತಿ ಶೈಲಾಭಾ ದ್ರುಮಾಃ ಸಶಿಖರಾ ಇವ ॥** ೪

**ಮಾಂ ತು ಶೋಕಾಭಿಸಂತಪ್ತಮಾಧಯಃ ಪೀಡಯಂತಿ ವೈ ।**
**ಭರತಸ್ಯ ಚ ದುಃಖೇನ ವೈದೇಹ್ಯಾ ಹರಣೇನ ಚ ॥** ೫

**ಶೋಕಾರ್ತಸ್ಯಾಪಿ ಮೇ ಪಂಪಾ ಶೋಭತೇ ಚಿತ್ರಕಾನನಾ ।**
**ವ್ಯವಕೀರ್ಣಾ ಬಹುವಿಧೈಃ ಪುಷ್ಪೈಃ ಶೀತೋದಕಾ ಶಿವಾ ॥** ೬

**ನಲಿನೈರಪಿ ಸಂಛನ್ನಾ ಹ್ಯತ್ಯರ್ಥಂ ಶುಭದರ್ಶನಾ ।**
**ಸರ್ಪವ್ಯಾಲಾನುಚರಿತಾ ಮೃಗದ್ವಿಜಸಮಾಕುಲಾ ॥** ೭

**ಅಧಿಕಂ ಪ್ರತಿಭಾತ್ಯೇತನ್ನೀಲಪೀತಂ ತು ಶಾದ್ವಲಮ್ ।**
**ದ್ರುಮಾಣಾಂ ವಿವಿಧೈಃ ಪುಷ್ಪೈಃ ಪರಿಸ್ತೋಮೈರಿವಾರ್ಪಿತಮ್ ॥** ೮

---

ಎಷ್ಟು ಚೆನ್ನಾಗಿದೆ! ತಾವರೆ ನೈದಿಲೆಗಳು ಅರಳಿ ನಿಂತಿವೆ. ತೀರದಲ್ಲಿರುವ ವಿವಿಧವೃಕ್ಷಗಳಿಂದ ಈ ಕೊಳವು ಮನೋಹರವಾಗಿದೆ. ಸುತ್ತಲೂ ಬೆಳೆದಿರುವ ಮನೋಜ್ಞವಾದ ಈ ಕಾನನವನ್ನು ನೋಡು! ಪರ್ವತಾಕಾರವಾದ ಉನ್ನತವೃಕ್ಷಗಳನ್ನು ನೋಡು! ಎತ್ತರದಲ್ಲಿರುವ ಕೊಂಬೆಗಳು ಶಿಖರಗಳಂತೆ ಕಾಣಿಸುತ್ತವೆ (೩-೪). ತಮ್ಮ, ಭರತನ ಕಷ್ಟವನ್ನು ನೆನೆದು ಶೋಕಸಂತಪ್ತನಾಗಿದ್ದ ನನಗೆ, ವೈದೇಹಿಯ ಅಪಹಾರದಿಂದ ಮನೋವ್ಯಥೆಗಳು ಕಾಡಿಸತೊಡಗಿದವು ಶೋಕಾರ್ತನಾದ ನನಗೂ ಈ ಪಂಪೆಯು ಮನೋಹರವಾಗಿ ಕಾಣುವುದು! ವಿವಿಧ ಪುಷ್ಪಗಳಿಂದ ಚಿತ್ರವರ್ಣವಾದ ವನವು ತೀರದಲ್ಲಿ ಹೇಗೆ ಶೋಭಿಸುತ್ತಿದೆ! ಕೊಳದಲ್ಲಿ ತಿಳಿಯಾದ ತಣ್ಣೀರು ತುಂಬಿದೆ (೫-೬). ಕಮಲಗಳಿಂದ ಮುಚ್ಚಿಹೋದ ಈ ಸರೋವರವು ನೋಡಲು ಎಷ್ಟು ಸುಂದರವಾಗಿದೆ! ಇಲ್ಲಿ ಸರ್ಪಗಳೂ ಇತರ ಹಾವುಗಳೂ ಸಂಚರಿಸುತ್ತಿವೆ. (ನೀರಿಗಾಗಿ) ಮೃಗಗಳೂ ಹಕ್ಕಿಗಳೂ ಮುತ್ತಿಕೊಂಡಿವೆ. ಹಸಿರುಬಣ್ಣದ ಈ ಹುಲ್ಲುಗಾವಲು ಮರಗಳ ಬಗೆಬಗೆಯ ಉದುರಿದ ಹೂಗಳಿಂದ ಅಲ್ಲಲ್ಲಿ ಕಪ್ಪಾಗಿಯೂ ಹಳದಿಯಾಗಿಯೂ ಗೋಚರಿಸುತ್ತದೆ. ನೆಲದಮೇಲೆ ಚಿತ್ರವರ್ಣದ ರತ್ನಗಂಬಳಿಗಳನ್ನು ಹಾಸಿದಂತಿದೆ (೭-೮)

**ಪುಷ್ಪಭಾರಸಮೃದ್ಧಾನಿ ಶಿಖರಾಣಿ ಸಮಂತತಃ ।**
**ಲತಾಭಿಃ ಪುಷ್ಪಿತಾಗ್ರಾಭಿರುಪಗೂಢಾನಿ ಸರ್ವತಃ ॥ ೯**

**ಸುಖಾನಿಲೋಽಯಂ ಸೌಮಿತ್ರೇ ಕಾಲಃ ಪ್ರಚುರಮನ್ಮಥಃ ।**
**ಗಂಧವಾನ್ ಸುರಭಿರ್ಮಾಸೋ ಜಾತಪುಷ್ಪಫಲದ್ರುಮಃ ॥ ೧೦**

**ಪಶ್ಯ ರೂಪಾಣಿ ಸೌಮಿತ್ರೇ ವನಾನಾಂ ಪುಷ್ಪಶಾಲಿನಾಮ್ ।**
**ಸೃಜತಾಂ ಪುಷ್ಪವರ್ಷಾಣಿ ತೋಯಂ ತೋಯಮುಚಾಮಿವ ॥ ೧೧**

**ಪ್ರಸ್ತರೇಷು ಚ ರಮ್ಯೇಷು ವಿವಿಧಾಃ ಕಾನನದ್ರುಮಾಃ ।**
**ವಾಯುವೇಗಪ್ರಚಲಿತಾಃ ಪುಷ್ಪೈರವಕಿರಂತಿ ಗಾಮ್ ॥ ೧೨**

**ಪತಿತೈಃ ಪತಮಾನೈಶ್ಚ ಪಾದಪಸ್ಥೈಶ್ಚ ಮಾರುತಃ ।**
**ಕುಸುಮೈಃ ಪಶ್ಯ ಸೌಮಿತ್ರೇ ಕ್ರೀಡನ್ನಿವ ಸಮಂತತಃ ॥ ೧೩**

**ವಿಕ್ಷಿಪನ್ ವಿವಿಧಾಃ ಶಾಖಾ ನಗಾನಾಂ ಕುಸುಮೋತ್ಕಚಾಃ ।**
**ಮಾರುತಶ್ಚಲಿತಸ್ಥಾನೈಃ ಷಟ್ಪದೈರನುಗೀಯತೇ ॥ ೧೪**

---

ವೃಕ್ಷಾಗ್ರಗಳು ಸುತ್ತಲೂ ಹೂವಿನ ಭಾರದಿಂದ ಬೀಗುತ್ತಿವೆ. ಈ ವೃಕ್ಷಗಳನ್ನು ಪುಷ್ಪಿತಲತೆಗಳು ಗಾಢವಾಗಿ ಅಪ್ಪಿಕೊಂಡಿವೆ! ಲಕ್ಷ್ಮಣ, ಇದು ಕಾಮಪ್ರಚೋದಕವಾದ ವಸಂತಕಾಲ. ಹಿತಕರವಾಗಿ ತಂಗಾಳಿಯು ಬೀಸುವ ಕಾಲ. ಮರಗಳಲ್ಲಿ ಹೂಗಳರಳಿ ಹಣ್ಣುಗಳು ಸೂಸುವ ಸುಗಂಧಮಯವಾದ ಕಾಲ (೯-೧೦). ಸೌಮಿತ್ರಿ, ಹೂಗಳಿಂದ ಬೀಗಿದ ಈ ವನಗಳು, ಮೋಡಗಳು ಮಳೆಗರೆಯುವಂತೆ, ಹೂಮಳೆಗೈಯುವುದನ್ನು ನೋಡು! ನಾನಾಜಾತಿಯ ಕಾನನವೃಕ್ಷಗಳು ಗಾಳಿಯ ವೇಗಕ್ಕೆ ತೂಗುತ್ತ ರಮ್ಯವಾದ ಬಂಡೆಗಳ ಮೇಲೆ ಹೂಗಳನ್ನು ಸುರಿಸುತ್ತ ಭೂಮಿಯನ್ನು ಮುಚ್ಚುತ್ತಿವೆ (೧೧-೧೨). ಅತ್ತ ನೋಡು, ಲಕ್ಷ್ಮಣ! ಬಿದ್ದಿರುವ ಹೂಗಳನ್ನೂ ಬೀಳುತ್ತಿರುವ ಹೂಗಳನ್ನೂ ಹಾರಿಸುತ್ತ, ಮರದಲ್ಲಿರುವ ಹೂಗಳನ್ನೂ ಅಲ್ಲಾಡಿಸುತ್ತ ಮಾರುತನು ಆಟವಾಡುವಂತೆ ಕಾಣುವನು! ಹೂಗಳನ್ನು ಹೇರಿಕೊಂಡಿರುವ ಮರದ ಕೊಂಬೆಗಳನ್ನು ಚಾಲಿಸುತ್ತ ಮಾರುತನು ಮುಂದೆ ಸಾಗುವನು. ದುಂಬಿಗಳು ಕುಳಿತ ಸ್ಥಳವನ್ನು ಬಿಟ್ಟು ಹಾರಿ ಹಾಡುತ್ತ ಹಿಂದೆ

ಮತ್ತಕೋಕಿಲಸಂನಾದೈರ್ನರ್ತಯನ್ನಿವ ಪಾದಪಾನ್ ।
ಶೈಲಕಂದರನಿಷ್ಕ್ರಾಂತಃ ಪ್ರಗೀತ ಇವ ಚಾನಿಲಃ ॥ ೧೫

ತೇನ ವಿಕ್ಷಿಪತಾತ್ಯರ್ಥಂ ಪವನೇನ ಸಮಂತತಃ ।
ಅಮೀ ಸಂಸಕ್ತಶಾಖಾಗ್ರಾ ಗ್ರಥಿತಾ ಇವ ಪಾದಪಾಃ ॥ ೧೬

ಸ ಏಷ ಸುಖಸಂಸ್ಪರ್ಶೋ ವಾತಿ ಚಂದನಶೀತಲಃ ।
ಗಂಧಮಭ್ಯಾವಹನ್ ಪುಣ್ಯಂ ಶ್ರಮಾಪನಯನೋಽನಿಲಃ ॥ ೧೭

ಅಮೀ ಪವನವಿಕ್ಷಿಪ್ತಾ ವಿನದಂತೀವ ಪಾದಪಾಃ ।
ಷಟ್ಪದೈರನುಕೂಜದ್ಭಿರ್ವನೇಷು ಮಧುಗಂಧಿಷು ॥ ೧೮

ಗಿರಿಪ್ರಸ್ಥೇಷು ರಮ್ಯೇಷು ಪುಷ್ಪವದ್ಭಿರ್ಮನೋರಮೈಃ ।
ಸಂಸಕ್ತಶಿಖರಾಃ ಶೈಲಾ ವಿರಾಜಂತೇ ಮಹಾದ್ರುಮೈಃ ॥ ೧೯

ಪುಷ್ಪಸಂಛನ್ನಶಿಖರಾ ಮಾರುತೋತ್ಕ್ಷೇಪಚಂಚಲಾಃ ।
ಅಮೀ ಮಧುಕರೋತ್ತಂಸಾಃ ಪ್ರಗೀತಾ ಇವ ಪಾದಪಾಃ ॥ ೨೦

---

ಸಾಗುವುವು ! (೧೩-೧೪) ಈ ಮಾರುತನು ಮತ್ತಕೋಗಿಲೆಗಳಿಂದ ಕುಹೂ ಎಂದು ಕೂಗಿಸುತ್ತ ಮರಗಳಿಂದ ನೃತ್ಯಮಾಡಿಸುವಂತಿದೆ ! ಗಿರಿಗುಹೆಗಳಿಂದ ಹೊರಟು ' ತನನನ ' ಎಂದು ಹಾಡಲಾರಂಭಿಸಿದಂತಿದೆ ! ಗಾಳಿಯು ಬಲವಾಗಿ ಬೀಸಿದ್ದರಿಂದ ಮರದ ತುದಿಗಳನ್ನು ಒಂದಕ್ಕೊಂದು ಸೇರಿಸಿ ಹೆಣೆದಂತೆ ಕಾಣುತ್ತದೆ (೧೫-೧೬). ಸುಗಂಧವನ್ನು ಹೊತ್ತಿರುವ ಚಂದನಶೀತಲವಾದ ಮಂದಾನಿಲವು ಸುಖಕರವಾಗಿ ಬೀಸುತ್ತ ಬಳಲಿಕೆಯನ್ನು ನೀಗಿಸುತ್ತದೆ. ಮಕರಂದಗಂಧಿಯಾದ ಈ ವನಗಳಲ್ಲಿ ದುಂಬಿಗಳು ಝೇಂಕರಿಸುವುದನ್ನು ಕೇಳಿದರೆ, ವಾಯುವು ತಮ್ಮನ್ನು ತಳ್ಳುತ್ತಿರುವನೆಂದು ಮರಗಳು ಕೂಗಿಕೊಳ್ಳುತ್ತಿವೆಯೋ ಎನ್ನಿಸುತ್ತದೆ (೧೭-೧೮). ರಮ್ಯವಾದ ಬೆಟ್ಟದ ತಪ್ಪಲುಗಳಲ್ಲಿ ಹೂಗಳಿಂದ ಮನೋರಮವಾದ ಮಹಾವೃಕ್ಷಗಳು ಬೆಟ್ಟದ ಶಿಖರದವರೆಗೂ ಬೆಳೆದು ವಿರಾಜಿಸುತ್ತಿವೆ. ಪುಷ್ಪಮಾಲೆಗಳನ್ನು ಮುಡಿದು ಗಾಳಿಯಿಂದ ತೂಗುತ್ತ, ಗುಂಯ್ ಎನ್ನುವ ದುಂಬಿಗಳಿಂದ ತುಂಬಿದ ಈ ಮರಗಳು ಹಾಡಲಾರಂಭಿಸಿದ ಸಂಗೀತಗಾರರಂತೆ ಶೋಭಿಸುತ್ತವೆ ! (೧೯-೨೦).

**ಸುಪುಷ್ಪಿತಾಂಸ್ತು ಪಶ್ಯೇಮಾನ್ ಕರ್ಣಿಕಾರಾನ್ ಸಮಂತತಃ ।**
**ಹಾಟಕಪ್ರತಿಸಂಛನ್ನಾನ್ನರಾನ್ ಪೀತಾಂಬರಾನಿವ ॥** ೨೧

**ಅಯಂ ವಸಂತಃ ಸೌಮಿತ್ರೇ ನಾನಾವಿಹಗನಾದಿತಃ ।**
**ಸೀತಯಾ ವಿಪ್ರಹೀಣಸ್ಯ ಶೋಕಸಂದೀಪನೋ ಮಮ ॥** ೨೨

**ಮಾಂ ಹಿ ಶೋಕಸಮಾಕ್ರಾಂತಂ ಸಂತಾಪಯತಿ ಮನ್ಮಥಃ ।**
**ಹೃಷ್ಟಃ ಪ್ರವದಮಾನಶ್ಚ ಮಾಮಾಹ್ವಯತಿ ಕೋಕಿಲಃ ॥** ೨೩

**ಏಷ ದಾತ್ಯೂಹಕೋ ಹೃಷ್ಟೋ ರಮ್ಯೇ ಮಾಂ ವನನಿರ್ಝರೇ ।**
**ಪ್ರಣದನ್ ಮನ್ಮಥಾವಿಷ್ಟಂ ಶೋಚಯಿಷ್ಯತಿ ಲಕ್ಷ್ಮಣ ॥** ೨೪

**ಶ್ರುತ್ವೈತಸ್ಯ ಪುರಾ ಶಬ್ದಮಾಶ್ರಮಸ್ಥಾ ಮಮ ಪ್ರಿಯಾ ।**
**ಮಾಮಾಹೂಯ ಪ್ರಮುದಿತಾ ಪರಮಂ ಪ್ರತ್ಯನಂದತ ॥** ೨೫

**ಏವಂ ವಿಚಿತ್ರಾಃ ಪತಗಾ ನಾನಾರಾವವಿರಾವಿಣಃ ।**
**ವೃಕ್ಷಗುಲ್ಮಲತಾಃ ಪಶ್ಯ ಸಂಪತಂತಿ ಸಮಂತತಃ ॥** ೨೬

---

ಲಕ್ಷ್ಮಣ, ಇತ್ತ ನೋಡು! ಪುಷ್ಪಿತಗಳಾದ ಈ ಬೆಟ್ಟದಾವರೆಯ ಗಿಡಗಳು, ಪೀತಾಂಬರವನ್ನುಟ್ಟು ಚಿನ್ನದ ಒಡವೆಗಳನ್ನು ತೊಟ್ಟಿರುವ ಜನರಂತೆ ಒಪ್ಪುತ್ತಿವೆ ಹಕ್ಕಿಗಳ ಬಗೆಬಗೆಯ ನಾದಗಳಿಂದ ರಂಜಿಸುವ ಈ ವಸಂತವು, ಸೌಮಿತ್ರಿ, ಸೀತಾಹೀನನಾದ ನನ್ನ ಶೋಕವನ್ನು ದೀಪ್ತಗೊಳಿಸುತ್ತದೆ (೨೧-೨೨). ಶೋಕದಿಂದ ನೊಂದಿರುವ ನನ್ನನ್ನು ಮನ್ಮಥನು ಮತ್ತೆ ಪೀಡಿಸುವನು. ಆ ಕೋಗಿಲೆಯು ಸಂತೋಷದಿಂದ ಉಬ್ಬಿ ಗರ್ವದಿಂದ ಕೂಗುತ್ತ ನನ್ನನ್ನು ಕರೆದು ಹಂಗಿಸುತ್ತಿದೆ! ರಮ್ಯವಾದ ಆ ಹೊಳೆಯಲ್ಲಿ ಆನಂದದಿಂದ ಕೂಗುವ ನೀರುಕೋಳಿಯು ಮದನಾವಿಷ್ಟನಾದ ನನಗೆ ಮತ್ತಷ್ಟು ಶೋಕವನ್ನು ತಂದೊಡ್ಡುವುದು (೨೩-೨೪). ಹಿಂದೆ ಆಶ್ರಮದಲ್ಲಿದ್ದಾಗ ಈ ಬಗೆಯ ಹಕ್ಕಿಯ ಕೂಗನ್ನು ಕೇಳಿದೊಡನೆ, ನನ್ನ ಕಾಂತೆ ನನ್ನನ್ನು ಸಂತೋಷದಿಂದ ಕರೆದು ಎಷ್ಟು ನಲಿಯುತ್ತಿದ್ದಳು! ಲಕ್ಷ್ಮಣ, ಬಣ್ಣಬಣ್ಣದ ಹಕ್ಕಿಗಳು ಬಗೆಬಗೆಯಾಗಿ ಚಿಲಿಪಿಲಿಗುಟ್ಟುತ್ತ ಮರ ಬಳ್ಳಿ ಪೊದೆಗಳಿಗೆ ಬಂದು ಎರಗುವುದನ್ನು ನೋಡಿದೆಯಾ? (೨೫-೨೬).

**ವಿಮಿಶ್ರಾ ವಿಹಗಾಃ ಪುಂಭಿರಾತ್ಮವ್ಯೂಹಾಭಿನಂದಿತಾಃ ।**
**ಭೃಂಗರಾಜಪ್ರಮುದಿತಾಃ ಸೌಮಿತ್ರೇ ಮಧುರಸ್ವರಾಃ ॥ ೨೭**

**ಅಸ್ಯಾಃ ಕೂಲೇ ಪ್ರಮುದಿತಾಃ ಶಕುನಾಃ ಸಂಘಶಸ್ತ್ವಿಹ ।**
**ದಾತ್ಯೂಹರತಿವಿಕ್ರಂದ್ಯೈಃ ಪುಂಸ್ಕೋಕಿಲರುತೈರಪಿ ॥ ೨೮**

**ಸ್ವನಂತಿ ಪಾದಪಾಶ್ಚೇಮೇ ಮಮಾನಂಗಪ್ರದೀಪನಾಃ ।**
**ಅಶೋಕಸ್ತಬಕಾಂಗಾರಃ ಷಟ್ಪದಸ್ವನನಿಃಸ್ವನಃ ॥ ೨೯**

**ಮಾಂ ಹಿ ಪಲ್ಲವತಾಮ್ರಾರ್ಚಿರ್ವಸಂತಾಗ್ನಿಃ ಪ್ರಧಕ್ಷ್ಯತಿ ।**
**ನ ಹಿ ತಾಂ ಸೂಕ್ಷ್ಮಪಕ್ಷ್ಮಾಕ್ಷೀಂ ಸುಕೇಶೀಂ ಮೃದುಭಾಷಿಣೀಮ್ ॥**

**ಅಪಶ್ಯತೋ ಮೇ ಸೌಮಿತ್ರೇ ಜೀವಿತೇಽಸ್ತಿ ಪ್ರಯೋಜನಮ್ ।**
**ಅಯಂ ಹಿ ದಯಿತಸ್ತಸ್ಯಾಃ ಕಾಲೋ ರುಚಿರಕಾನನಃ ॥ ೩೧**

---

ಈ ಹೆಣ್ಣುಹಕ್ಕಿಗಳು ಗಂಡುಹಕ್ಕಿಗಳೊಡನೆ ನಲಿಯುವಾಗ, ಅವುಗಳ ಅನುರೂಪದಾಂಪತ್ಯವನ್ನು ಕಂಡು ಗುಂಪಿನ ಉಳಿದ ಹಕ್ಕಿಗಳು ಅಭಿನಂದಿಸುತ್ತಿವೆ! ಆ ಸಮಯದಲ್ಲಿ ದುಂಬಿಗಳ ಝೇಂಕಾರವನ್ನು ಕೇಳಿ ಮತ್ತಷ್ಟು ಉಬ್ಬಿ ಈ ಹಕ್ಕಿಗಳು ಮಧುರವಾಗಿ ಕೂಗುತ್ತಿವೆ, ನೋಡು ಲಕ್ಷ್ಮಣ! (೨೭). ಈ ಪಂಪಾತೀರದಲ್ಲಿ ಹಕ್ಕಿಗಳು ಹಿಂಡುಹಿಂಡಾಗಿ ಆನಂದದಿಂದ ನಲಿಯುತ್ತಿವೆ. ಇತ್ತ ನೀರ್ಗೋಳಿಗಳ ನಲ್ಮೆಯ ಚೀತ್ಕಾರ! ಅತ್ತ ಪುಂಸ್ಕೋಕಿಲಗಳ ಮಧುರಗಾನ! ಇವುಗಳೊಡನೆ ಈ ಪುಷ್ಪಿತವೃಕ್ಷಗಳು ದನಿಗೂಡಿಸಿ ನನ್ನ ವಿರಹದುಃಖವನ್ನು ಕೆರಳಿಸುತ್ತಿವೆ! (೨೮). ವತ್ಸ, ಈ ವಸಂತನು ಅಗ್ನಿಯಾಗಿ ನನ್ನನ್ನು ಸುಡುವನು. ಅಶೋಕಪುಷ್ಪದ ಗೊಂಚಲುಗಳೇ ಕೆಂಡಗಳು. ದುಂಬಿಗಳ ಝೇಂಕಾರವೇ ಇದರ ಛಟಛಟತ್ಕಾರ. ಚಿಗುರೆಲೆಗಳು ಕೆಂಪನೆಯ ಜ್ವಾಲೆಗಳು. ನನ್ನ ಸೀತೆಯ ಕಣ್ಣೆವೆಗಳು ಎಷ್ಟು ನವಿರಾದವು! ತಲೆಗೂದಲು ಎಷ್ಟು ಸುಂದರವಾದವು! ಲಕ್ಷ್ಮಣ, ಆ ಮೃದುಭಾಷಿಣಿಯನ್ನು ಕಾಣದಮೇಲೆ ನಾನು ಬದುಕಿ ಪ್ರಯೋಜನವಿಲ್ಲ. ಎಲ್ಲೆಲ್ಲಿಯೂ ಕೋಗಿಲೆಗಳಿಂದ ಆಕುಲವಾಗಿ, ಅರಣ್ಯಕ್ಕೆ ಸೌಂದರ್ಯವನ್ನು ತಂದುಕೊಡುವ ಈ ವಸಂತಕಾಲವು ನನ್ನ ದಯಿತೆಗೆ

**ಕೋಕಿಲಾಕುಲಸೀಮಾಂತೋ ದಯಿತಾಯಾ ಮಮಾನಘ ।**
**ಮನ್ಮಥಾಯಾಸಸಂಭೂತೋ ವಸಂತಗುಣವರ್ಧಿತಃ ॥ ೩೨**

**ಅಯಂ ಮಾಂ ಧಕ್ಷ್ಯತಿ ಕ್ಷಿಪ್ರಂ ಶೋಕಾಗ್ನಿರ್ನಚಿರಾದಿವ ।**
**ಅಪಶ್ಯತಸ್ತಾಂ ದಯಿತಾಂ ಪಶ್ಯತೋ ರುಚಿರದ್ರುಮಾನ್ ॥ ೩೩**

**ಮಮಾಯಮಾತ್ಮಪ್ರಭವೋ ಭೂಯಸ್ತ್ವಮುಪಯಾಸ್ಯತಿ ।**
**ಅದೃಶ್ಯಮಾನಾ ವೈದೇಹೀ ಶೋಕಂ ವರ್ಧಯತೀಹ ಮೇ ॥ ೩೪**

**ದೃಶ್ಯಮಾನೋ ವಸಂತಶ್ಚ ಸ್ವೇದಸಂಸರ್ಗದೂಷಕಃ ।**
**ಮಾಂ ಹಿ ಸಾ ಮೃಗಶಾಬಾಕ್ಷೀ ಚಿಂತಾಶೋಕಬಲಾತ್ಕೃತಮ್ ॥ ೩೫**

**ಸಂತಾಪಯತಿ ಸೌಮಿತ್ರೇ ಕ್ರೂರಶ್ಚೈತ್ರೋ ವನಾನಿಲಃ ।**
**ಅಮೀ ಮಯೂರಾಃ ಶೋಭಂತೇ ಪ್ರನೃತ್ಯಂತಸ್ತತಸ್ತತಃ ॥ ೩೬**

**ಸ್ವೈಃ ಪಕ್ಷೈಃ ಪವನೋದ್ಧೂತೈರ್ಗವಾಕ್ಷೈಃ ಸ್ಫಾಟಿಕೈರಿವ ।**
**ಶಿಖಿನೀಭಿಃ ಪರಿವೃತಾಸ್ತ ಏತೇ ಮದಮೂರ್ಛಿತಾಃ ॥ ೩೭**

---

ಬಹಳ ಪ್ರಿಯವಾದುದು (೨೯-೩೧). ಮದನಪೀಡೆಯಿಂದ ಜನಿಸಿ ವಸಂತನ ರಮಣೀಯತೆಯಿಂದ ಭುಗಿಲ್ ಎನ್ನುವ ಈ ಶೋಕಾಗ್ನಿಯು ನನ್ನನ್ನು ಬೇಗನೆ ದಹಿಸಿಬಿಡುವುದು ; ವಿಳಂಬವಾಗದು. ಆ ದಯಿತೆಯನ್ನು ಕಾಣದೆ ಈ ಸುಂದರವೃಕ್ಷಗಳನ್ನು ಮಾತ್ರ ನೋಡುತ್ತಿರುವ ನನಗೆ ಕಾಮಸಂತಾಪವು ಹೆಚ್ಚುವುದು (೩೨-೩೩). ಕಣ್ಣಿಗೆ ಕಾಣಿಸದ ವೈದೇಹಿ, (ಮಲಯಾನಿಲದಿಂದ) ಬೆವರಿನ ಸೋಂಕನ್ನೇ ತೊಡೆಯುತ್ತ ಕಣ್ಣಿಗೆ ಕಾಣಿಸುವ ಈ ವಸಂತ—ಇವರಿಬ್ಬರು ನನ್ನ ಶೋಕವನ್ನು ಬೆಳೆಸುತ್ತಿದ್ದಾರೆ. ಚಿಂತಾಶೋಕಗಳಿಂದ ಬಸವಳಿದ ನನಗೆ, ಲಕ್ಷ್ಮಣ, ಚಿಗರಿಯ ಕಣ್ಣಿನ ನನ್ನ ಕಾಂತೆಯು ಸಂತಾಪವನ್ನು ತಂದಿದ್ದಾಳೆ. ವನದಲ್ಲಿ ಬೀಸುವ ಈ ವಸಂತಾನಿಲನು ಬಹಳ ಕ್ರೂರ ! (೩೪-೩೫). ಅಲ್ಲಲ್ಲಿ ಕುಣಿಯುತ್ತಿರುವ ಈ ನವಿಲುಗಳು ಎಷ್ಟು ಸುಂದರವಾಗಿ ಕಾಣುತ್ತವೆ! ಗಾಳಿಯಿಂದ ಕೆದರಿದ ಗರಿಗಳು ಸ್ಫಟಿಕಮಯವಾದ ಗವಾಕ್ಷಗಳಂತೆ ರಾಜಿಸುತ್ತವೆ. ಸುತ್ತಲೂ ಹೆಣ್ಣುನವಿಲುಗಳಿಂದ ಪರಿವೃತವಾಗಿರುವ ಈ ನವಿಲುಗಳು ಮದದಿಂದ

ಮನ್ಮಥಾಭಿಪರೀತಸ್ಯ ಮಮ ಮನ್ಮಥವರ್ಧನಾಃ ।
ಪಶ್ಯ ಲಕ್ಷ್ಮಣ ನೃತ್ಯಂತಂ ಮಯೂರಮುಪನೃತ್ಯತಿ ॥ ೩೮

ಶಿಖಿನೀ ಮನ್ಮಥಾರ್ತೈಷಾ ಭರ್ತಾರಂ ಗಿರಿಸಾನುಷು ।
ತಾಮೇವ ಮನಸಾ ರಾಮಾಂ ಮಯೂರೋಽಪ್ಯುಪಧಾವತಿ ॥ ೩೯

ವಿತತ್ಯ ರುಚಿರೌ ಪಕ್ಷೌ ರುತೈರುಪಹಸನ್ನಿವ ।
ಮಯೂರಸ್ಯ ವನೇ ನೂನಂ ರಕ್ಷಸಾ ನ ಹೃತಾ ಪ್ರಿಯಾ ॥ ೪೦

ತಸ್ಮಾನ್ನೃತ್ಯತಿ ರಮ್ಯೇಷು ವನೇಷು ಸಹ ಕಾಂತಯಾ ।
ಮಮ ತ್ವಯಂ ವಿನಾ ವಾಸಃ ಪುಷ್ಪಮಾಸೇ ಸುದುಃಸಹಃ ॥ ೪೧

ಪಶ್ಯ ಲಕ್ಷ್ಮಣ ಸಂರಾಗಂ ತಿರ್ಯಗ್ಯೋನಿಗತೇಷ್ವಪಿ ।
ಯದೇಷಾ ಶಿಖಿನೀ ಕಾಮಾದ್ಭರ್ತಾರಮಭಿವರ್ತತೇ ॥ ೪೨

ಮಮಾಪ್ಯೇವಂ ವಿಶಾಲಾಕ್ಷೀ ಜಾನಕೀ ಜಾತಸಂಭ್ರಮಾ ।
ಮದನೇನಾಭಿವರ್ತೇತ ಯದಿ ನಾಪಹೃತಾ ಭವೇತ್ ॥ ೪೩

---

ವೈಮರೆತಿವೆ (೩೬-೩೭). ಕಾಮಸಂತಪ್ತನಾದ ನನ್ನ ವಿರಹದುಃಖವನ್ನು ವರ್ಧಿಸುತ್ತಿವೆ. ಲಕ್ಷ್ಮಣ, ಇಲ್ಲಿ ನೋಡು ! ಈ ಬೆಟ್ಟದ ತಪ್ಪಲಿನಲ್ಲಿ ನರ್ತಿಸುವ ಮಯೂರವನ್ನು ಕಂಡು ಕಾಮಾರ್ತಳಾದ ಈ ಮಯೂರಿಯು ತನ್ನ ಪತಿಯಂತೆ ತಾನೂ ನೃತ್ಯವಾಡುತ್ತಿದೆ! ಮಯೂರವು ತನ್ನ ಕಾಂತೆಯ ಭಾವವನ್ನರಿತು ಸುಂದರವಾದ ರೆಕ್ಕೆಗಳನ್ನು ಕೆದರಿಕೊಂಡು ಕೇಕೆಹಾಕುತ್ತ ಮಯೂರಿಯ ಬಳಿಗೆ ಓಡುತ್ತಿದೆ ಅದು ಕೇಕಾಧ್ವನಿಯಿಂದ ನನ್ನನ್ನು ಅಣಕಿಸುವಂತೆ ಕಾಣುತ್ತದೆ! ಆಹಾ! ಈ ಮಯೂರದ ಕಾಂತೆಯನ್ನು ರಾಕ್ಷಸನು ಅಪಹರಿಸಿಲ್ಲ! (೩೮-೪೦) ಆದ್ದರಿಂದ ರಮ್ಯವಾದ ವನಪ್ರದೇಶದಲ್ಲಿ ಕಾಂತೆಯೊಡನೆ ಕುಣಿಯುತ್ತಿದೆ ನನಗಾದರೋ ಈ ಪುಷ್ಪಮಾಸದಲ್ಲಿ ಸೀತೆಯಿಲ್ಲದಿರುವುದು ದುಸ್ಸಹವಾಗಿದೆ. ಲಕ್ಷ್ಮಣ, ಈ ತಿರ್ಯಗ್ಜಂತುಗಳಲ್ಲಿಯೂ ಎಷ್ಟು ಅನುರಾಗವಿರುವುದು, ನೋಡು ಈ ಹೆಣ್ಣುನವಿಲು ಕಾಮವಶವಾಗಿ ತನ್ನ ಪತಿಯ ಬಳಿಗೆ ಹೋಗುತ್ತಿದೆ (೪೧-೪೨). ಜಾನಕಿಯನ್ನು ರಾಕ್ಷಸನು ಅಪಹರಿಸದಿದ್ದರೆ, ಈ ಸಮಯದಲ್ಲಿ ಸಂಭ್ರಮದಿಂದ ಅವಳು ಕಣ್ಣರಳಿಸಿಕೊಂಡು ನನ್ನ ಬಳಿಗೂ ಬರುತ್ತಿದ್ದಳು. ಲಕ್ಷ್ಮಣ,

**ಪಶ್ಯ ಲಕ್ಷ್ಮಣ ಪುಷ್ಪಾಣಿ ನಿಷ್ಫಲಾನಿ ಭವಂತಿ ಮೇ ।**
**ಪುಷ್ಪಭಾರಸಮೃದ್ಧಾನಾಂ ವನಾನಾಂ ಶಿಶಿರಾತ್ಯಯೇ ॥ ೪೪**

**ರುಚಿರಾಣ್ಯಪಿ ಪುಷ್ಪಾಣಿ ಪಾದಪಾನಾಮತಿಶ್ರಿಯಾ ।**
**ನಿಷ್ಫಲಾನಿ ಮಹೀಂ ಯಾಂತಿ ಸಮಂ ಮಧುಕರೋತ್ಕರೈಃ ॥ ೪೫**

**ನದಂತಿ ಕಾಮಂ ಮುದಿತಾಃ ಶಕುನಾಃ ಸಂಘಶಃ ಕಲಮ್ ।**
**ಆಹ್ವಯಂತ ಇವಾನ್ಯೋಽನ್ಯಂ ಕಾಮೋನ್ಮಾದಕರಾ ಮಮ ॥ ೪೬**

**ವಸಂತೋ ಯದಿ ತತ್ರಾಪಿ ಯತ್ರ ಮೇ ವಸತಿ ಪ್ರಿಯಾ ।**
**ನೂನಂ ಪರವಶಾ ಸೀತಾ ಸಾಪಿ ಶೋಚತ್ಯಹಂ ಯಥಾ ॥ ೪೭**

**ನೂನಂ ನ ತು ವಸಂತೋಽಯಂ ದೇಶಂ ಸ್ಪೃಶತಿ ಯತ್ರ ಸಾ ।**
**ಕಥಂ ಹ್ಯಸಿತಪದ್ಮಾಕ್ಷೀ ವರ್ತಯೇತ್ ಸಾ ಮಯಾ ವಿನಾ ॥ ೪೮**

**ಅಥವಾ ವರ್ತತೇ ತತ್ರ ವಸಂತೋ ಯತ್ರ ಮೇ ಪ್ರಿಯಾ ।**
**ಕಿಂ ಕರಿಷ್ಯತಿ ಸುಶ್ರೋಣೀ ಸಾ ತು ನಿರ್ಭರ್ತ್ಸಿತಾ ಪರೈಃ ॥ ೪೯**

**ಶ್ಯಾಮಾ ಪದ್ಮಪಲಾಶಾಕ್ಷೀ ಮೃದುಪೂರ್ವಾಭಿಭಾಷಿಣೀ ।**
**ನೂನಂ ವಸಂತಮಾಸಾದ್ಯ ಪರಿತ್ಯಕ್ಷ್ಯತಿ ಜೀವಿತಮ್ ॥ ೫೦**

---

ಪುಷ್ಪಭಾರದಿಂದ ಬಳುಕುವ ಈ ವನದ ಹೂಗಳೆಲ್ಲವೂ ವಸಂತಕಾಲದಲ್ಲಿ ನನ್ನ ಪಾಲಿಗೆ ನಿಷ್ಫಲವಾಗಿವೆ (೪೩-೪೪). ಮರಗಳ ಸೊಬಗಿನಿಂದ ಮನೋಹರವಾದ ಈ ಹೂಗಳು ವ್ಯರ್ಥವಾಗಿ ದುಂಬಿಗಳ ಹಿಂಡಿನೊಡನೆ ನೆಲದಮೇಲುದುರುವುವು. ಹಕ್ಕಿಗಳು ಗುಂಪುಗುಂಪಾಗಿ ನಲಿಯುತ್ತ ಒಂದನ್ನೊಂದು ಕರೆಯುವಂತೆ ಇಂಪಾಗಿ ಕೂಗುತ್ತಿವೆ. ಇವೆಲ್ಲವೂ ನನಗೆ ಕಾಮೋನ್ಮಾದವನ್ನುಂಟುಮಾಡುತ್ತಿವೆ (೪೫-೪೬). ನನ್ನ ಇನಿಯಳು ಇರುವಲ್ಲಿಯೂ, ಲಕ್ಷ್ಮಣ, ಈ ವಸಂತನ ದಾಳಿಯು ನಡೆದಿದ್ದರೆ, ಸೀತೆಯೂ ಪರವಶಳಾಗಿ ನನ್ನಂತೆಯೇ ದುಃಖಪಡುವಳು. ಅಥವಾ ನನ್ನ ಇನಿಯಳು ಇರುವ ಸ್ಥಳದಲ್ಲಿ ವಸಂತನ ಸೋಂಕು ಇರಲಾರದು. ಇದ್ದರೆ, ಆ ನೀಲೋತ್ಪಲಾಕ್ಷಿಯು ನಾನಿಲ್ಲದೆ ಹೇಗೆತಾನೆ ಬದುಕಿಯಾಳು ? (೪೭-೪೮). ಒಂದುವೇಳೆ ನನ್ನ ಪ್ರಿಯಳಿದ್ದಲ್ಲಿ ವಸಂತಕಾಲವು ಬಂದಿರಬಹುದು. ಆದರೂ ಶತ್ರುಗಳ ಹಂಗಿನಲ್ಲಿರುವ ಆ ಸುಂದರಿಯು ಏನು ಮಾಡಿಯಾಳು ?

ದೃಢಂ ಹಿ ಹೃದಯೇ ಬುದ್ಧಿರ್ಮಮ ಸಂಪ್ರತಿ ವರ್ತತೇ ।
ನಾಲಂ ವರ್ತಯಿತುಂ ಸೀತಾ ಸಾಧ್ವೀ ಮದ್ವಿರಹಂ ಗತಾ ॥ ೫೦

ಮಯಿ ಭಾವೋ ಹಿ ವೈದೇಹ್ಯಾಸ್ತತ್ತ್ವತೋ ವಿನಿವೇಶಿತಃ ।
ಮಮಾಪಿ ಭಾವಃ ಸೀತಾಯಾಂ ಸರ್ವಥಾ ವಿನಿವೇಶಿತಃ ॥ ೫೨

ಏಷ ಪುಷ್ಪವಹೋ ವಾಯುಃ ಸುಖಸ್ಪರ್ಶೋ ಹಿಮಾವಹಃ ।
ತಾಂ ವಿಚಿಂತಯತಃ ಕಾಂತಾಂ ಪಾವಕಪ್ರತಿಮೋ ಮಮ ॥ ೫೩

ಸದಾ ಸುಖಮಹಂ ಮನ್ಯೇ ಯಂ ಪುರಾ ಸಹ ಸೀತಯಾ ।
ಮಾರುತಃ ಸ ವಿನಾ ಸೀತಾಂ ಶೋಕಂ ವರ್ಧಯತೇ ಮಮ ॥ ೫೪

ತಾಂ ವಿನಾ ಸ ವಿಹಂಗೋಽಸೌ ಪಕ್ಷೀ ಪ್ರಣದಿತಸ್ತದಾ ।
ವಾಯಸಃ ಪಾದಪಗತಃ ಪ್ರಹೃಷ್ಟಮಭಿನರ್ದತಿ ॥ ೫೫

ಏಷ ವೈ ತತ್ರ ವೈದೇಹ್ಯಾ ವಿಹಗಃ ಪ್ರತಿಹಾರಕಃ ।
ಪಕ್ಷೀ ಮಾಂ ತು ವಿಶಾಲಾಕ್ಷ್ಯಾಃ ಸಮೀಪಮುಪನೇಷ್ಯತಿ ॥ ೫೬

---

ಪದ್ಮದಳಾಯತಾಕ್ಷಿಯೂ ಮೃದುಭಾಷಿಣಿಯೂ ಆದ ಆ ತರುಣಿಯು ಪ್ರಾಣವನ್ನು ಬಿಡುವುದೇ ನಿಶ್ಚಯ (೪೯-೫೦) ನನ್ನ ಮನಸ್ಸಿಗೆ ದೃಢವಾದ ನಂಬುಗೆಯಾಗುತ್ತಿದೆ—ಸಾಧ್ವಿಯಾದ ಸೀತೆಗೆ ನನ್ನ ವಿರಹದಲ್ಲಿ ಜೀವದಿಂದ ಉಳಿಯಲು ಶಕ್ಯವಿಲ್ಲ ವೈದೇಹಿಯ ಹೃದಯವು ಸಂಪೂರ್ಣವಾಗಿ ನನ್ನಲ್ಲಿ ಎರಕವಾಗಿದೆ. ನನ್ನ ಹೃದಯವೂ ವೈದೇಹಿಯಲ್ಲಿ ಪೂರ್ತಿಯಾಗಿ ಎರಕವಾಗಿದೆ (೫೧-೫೨). ಹೂಗಳನ್ನು ಹಾರಿಸುತ್ತ ಸುಗಂಧಿಯೂ ಸುಖಸ್ಪರ್ಶನೂ ಆದ ಈ ಶೀತಲಮಾರುತನು ಕಾಂತೆಯನ್ನೇ ಚಿಂತಿಸುವ ನನಗೆ ಬೆಂಕಿಯಾಗಿದ್ದಾನೆ. ಹಿಂದೆ ಸೀತೆಯೊಡನಿದ್ದಾಗ ಯಾವ ಮಾರುತನು ಸದಾ ಸುಖಕರನೆಂದು ತಿಳಿದಿದ್ದೆನೋ, ಆತನೇ ಸೀತೆಯಿಲ್ಲದಾಗ ನನ್ನ ದುಃಖವನ್ನು ಹೆಚ್ಚಿಸುತ್ತಿದ್ದಾನೆ (೫೩-೫೪). ಲಕ್ಷ್ಮಣ, ನನಗೆ ಮುಂದೊದಗುವ ಸೀತಾವಿಯೋಗವನ್ನು ಸೂಚಿಸುತ್ತ ಕಾಗೆಯು ಆಕಾಶದಲ್ಲಿ ಕೆಟ್ಟಸ್ವರದಿಂದ ಕೂಗುತ್ತಿತ್ತು. ಈಗ ಮರದಮೇಲೆ ಕುಳಿತು ಕಾಗೆಯು ಹರ್ಷದಿಂದ ಕೂಗುತ್ತಿದೆ. ಆಗ ಸೀತಾವಿರಹವನ್ನು ಸೂಚಿಸಿದ ಈ ಪಕ್ಷಿ, ಈಗ ಆ ವಿಶಾಲಾಕ್ಷಿಯ ಪುನಃ

ಶೃಣು ಲಕ್ಷ್ಮಣ ಸಂನಾದಂ ವನೇ ಮದವಿವರ್ಧನಮ್ ।
ಪುಷ್ಪಿತಾಗ್ರೇಷು ವೃಕ್ಷೇಷು ದ್ವಿಜಾನಾಮುಪಕೂಜತಾಮ್ ॥ ೫೭

ವಿಕ್ಷಿಪ್ತಾಂ ಪವನೇನೈತಾಮಸೌ ತಿಲಕಮಂಜರೀಮ್ ।
ಷಟ್ಪದಃ ಸಹಸಾಭ್ಯೇತಿ ಮದೋದ್ಧೂತಾಮಿವ ಪ್ರಿಯಾಮ್ ॥ ೫೮

ಕಾಮಿನಾಮಯಮತ್ಯಂತಮಶೋಕಃ ಶೋಕವರ್ಧನಃ ।
ಸ್ತಬಕೈಃ ಪವನೋತ್ಕ್ಷಿಪ್ತೈಸ್ತರ್ಜಯನ್ನಿವ ಮಾಂ ಸ್ಥಿತಃ ॥ ೫೯

ಅಮೀ ಲಕ್ಷ್ಮಣ ದೃಶ್ಯಂತೇ ಚೂತಾಃ ಕುಸುಮಶಾಲಿನಃ ।
ವಿಭ್ರಮೋತ್ಸಿಕ್ತಮನಸಃ ಸಾಂಗರಾಗಾ ನರಾ ಇವ ॥ ೬೦

ಸೌಮಿತ್ರೇ ಪಶ್ಯ ಪಂಪಾಯಾಶ್ಚಿತ್ರಾಸು ವನರಾಜಿಷು ।
ಕಿಂನರಾ ನರಶಾರ್ದೂಲ ವಿಚರಂತಿ ತತಸ್ತತಃ ॥ ೬೧

ಇಮಾನಿ ಶುಭಗಂಧೀನಿ ಪಶ್ಯ ಲಕ್ಷ್ಮಣ ಸರ್ವಶಃ ।
ನಲಿನಾನಿ ಪ್ರಕಾಶಂತೇ ಜಲೇ ತರುಣಸೂರ್ಯವತ್ ॥ ೬೨

---

ಸಮಾಗಮವನ್ನು ಸೂಚಿಸುತ್ತಿದೆ (೫೫-೫೬) ಕೇಳಿದೆಯಾ, ಲಕ್ಷ್ಮಣ, ಹೂವರಳಿದ ಮರಗಳಲ್ಲಿ ಕುಳಿತು ಚಿಲಿಪಿಲಿಗುಟ್ಟುವ ಹಕ್ಕಿಗಳ ಮದವಿವರ್ಧಕವಾದ ಕೋಲಾಹಲಧ್ವನಿಯನ್ನು? ಗಾಳಿಯಿಂದ ಚಾಲಿತವಾದ ತಿಲಕಮಂಜರಿಯನ್ನು ದುಂಬಿಯು ಹಿಂಬಾಲಿಸಿ ಹಾರಿಹೋಗುವುದನ್ನು ನೋಡು! ಯೌವನಮದದಿಂದ ಓಡುವ ಪ್ರಿಯಳನ್ನು ಕಾಮಿಯು ಹಿಂಬಾಲಿಸಿ ಹೋಗಿ ಹಿಡಿಯುವಂತಿದೆ! (೫೭-೫೮). ಈ ವೃಕ್ಷವು ಅಶೋಕವೆನಿಸಿದರೂ ವಿರಹಿಗಳಿಗೆ ಶೋಕವನ್ನೇ ವರ್ಧಿಸುವುದು ತನ್ನ ಹೂಗೊಂಚಲುಗಳನ್ನು ಗಾಳಿಯಿಂದ ಅಲುಗಿಸುತ್ತ ನನ್ನನ್ನು ಹೆದರಿಸುತ್ತಿದೆ! ಲಕ್ಷ್ಮಣ, ಹೂವಿನ ತೆನೆಗಳಿಂದ ಮೆರೆಯುವ ಈ ಮಾವಿನಮರಗಳನ್ನು ನೋಡು. ಅಂಗರಾಗಗಳನ್ನು ಬಳಿದುಕೊಂಡು ಗರ್ವದಿಂದ ಉಬ್ಬಿದ ಕಾಮುಕರಂತೆ ಕಾಣುತ್ತವೆ (೫೯-೬೦). ಪಂಪಾಸರೋವರದ ವಿಚಿತ್ರವಾದ ವನರಾಜಿಗಳಲ್ಲಿ ಕಿನ್ನರರು ಅಲ್ಲಲ್ಲಿ ವಿಹರಿಸುವುದನ್ನು ನೋಡು. ಇತ್ತ ನೋಡು, ಲಕ್ಷ್ಮಣ. ಸುಗಂಧವನ್ನು ಬೀರುತ್ತ ನೀರಿನಲ್ಲಿ ರಾಜಿಸುವ ತಾವರೆಗಳು ಜಲದಲ್ಲಿ ಪ್ರತಿಬಿಂಬಿಸಿದ

ಏಷಾ ಪ್ರಸನ್ನಸಲಿಲಾ ಪದ್ಮನೀಲೋತ್ಪಲಾಯುತಾ ।
ಹಂಸಕಾರಂಡವಾಕೀರ್ಣಾ ಪಂಪಾ ಸೌಗಂಧಿಕಾನ್ವಿತಾ ॥ ೬೩

ಜಲೇ ತರುಣಸೂರ್ಯಾಭೈಃ ಷಟ್ಪದಾಹತಕೇಸರೈಃ ।
ಪಂಕಜೈಃ ಶೋಭತೇ ಪಂಪಾ ಸಮಂತಾದಭಿಸಂವೃತಾ ॥ ೬೪

ಚಕ್ರವಾಕಯುತಾ ನಿತ್ಯಂ ಚಿತ್ರಪ್ರಸ್ಥವನಾಂತರಾ ।
ಮಾತಂಗಮೃಗಯೂಥೈಶ್ಚ ಶೋಭತೇ ಸಲಿಲಾರ್ಥಿಭಿಃ ॥ ೬೫

ಪವನಾಹಿತವೇಗಾಭಿರೂರ್ಮಿಭಿರ್ವಿಮಲೇಽಂಭಸಿ ।
ಪಂಕಜಾನಿ ವಿರಾಜಂತೇ ತಾಡ್ಯಮಾನಾನಿ ಲಕ್ಷ್ಮಣ ॥ ೬೬

ಪದ್ಮಪತ್ರವಿಶಾಲಾಕ್ಷೀಂ ಸತತಂ ಪ್ರಿಯಪಂಕಜಾಮ್ ।
ಅಪಶ್ಯತೋ ಮೇ ವೈದೇಹೀಂ ಜೀವಿತಂ ನಾಭಿರೋಚತೇ ॥ ೬೭

ಅಹೋ ಕಾಮಸ್ಯ ವಾಮತ್ವಂ ಯೋ ಗತಾಮಪಿ ದುರ್ಲಭಾಮ್ ।
ಸ್ಮಾರಯಿಷ್ಯತಿ ಕಲ್ಯಾಣೀಂ ಕಲ್ಯಾಣತರವಾದಿನೀಮ್ ॥ ೬೮

---

ಬಾಲಸೂರ್ಯರಂತೆ ಕಾಣುತ್ತವೆ (೬೧-೬೨). ಈ ಪಂಪೆಯು ಬಹು ಮನೋಹರವಾಗಿದೆ. ತಿಳಿಯಾದ ನೀರು, ಪದ್ಮ ನೀಲೋತ್ಪಲ ಸೌಗಂಧಿಕಾದಿ ಜಲಪುಷ್ಪಗಳು, ಹಂಸಕಾರಂಡವಾದಿ ಜಲಪಕ್ಷಿಗಳು ಬಾಲಸೂರ್ಯ ರಂತಿರುವ ಕಮಲಗಳ ಕೇಸರಗಳಿಗೆ ದುಂಬಿಗಳು ಬಂದೆರಗುತ್ತಿವೆ (೬೩-೬೪). (ಸ್ತನಗಳೆಂಬ) ಚಕ್ರವಾಕಗಳಿಂದೊಪ್ಪುವ ಈ ಪಂಪೆಯು ತೀರಕಾನನವೆಂಬ ಚಿತ್ರವರ್ಣದ ಸೀರೆಯನ್ನುಟ್ಟು ನಿಂತಿದೆ! ನೀರು ಕುಡಿಯುವುದಕ್ಕಾಗಿ ಆನೆ, ಜಿಂಕೆ ಮೊದಲಾದ ಮೃಗಯೂಥಗಳು ಬಂದಿವೆ (೬೫). ಲಕ್ಷ್ಮಣ, ಗಾಳಿಯ ವೇಗಕ್ಕೆ ನುಗ್ಗಿಬಂದ ಅಲೆಗಳು ಕಮಲಗಳನ್ನು ತಾಡಿಸಿ ಅಲ್ಲಾಡಿಸುವುದು ಎಂತಹ ಮನೋಹರವಾದ ದೃಶ್ಯ! ಈ ಕಮಲಗಳಿಗಾಗಿ ಹಾತೊರೆಯುತ್ತಿದ್ದ ನನ್ನ ಕಮಲದಳಾಯತಾಕ್ಷಿಯು ನನಗೆ ಕಾಣದಾದಳಲ್ಲ! ನನಗೆ ಈ ಜೀವಿತವು ಬೇಡವಾಗಿದೆ (೬೬-೬೭). ಆಹಾ! ಕಾಮನ ವಾಮಾಚಾರವೇ! ಕಣ್ಮರೆ ಯಾಗಿ ದುರ್ಲಭಳಾದ, ನಲ್ನುಡಿಯಾಡುವ ನಲ್ಮೆಯ ಮಂಗಳಾಂಗಿಯನ್ನು ಈ ಕಾಮನು (ಸದೃಶವಸ್ತುಗಳನ್ನು ತೋರಿಸಿ) ಮತ್ತೆ ಮತ್ತೆ ನನ್ನ ನೆನಪಿಗೆ

ಶಕ್ಯೋ ಧಾರಯಿತುಂ ಕಾಮೋ ಭವೇದಭ್ಯಾಗತೋ ಮಯಾ ।
ಯದಿ ಭೂಯೋ ವಸಂತೋ ಮಾಂ ನ ಹನ್ಯಾತ್ ಪುಷ್ಪಿತದ್ರುಮಃ ॥

ಯಾನಿ ಸ್ಮ ರಮಣೀಯಾನಿ ತಯಾ ಸಹ ಭವಂತಿ ಮೇ ।
ತಾನ್ಯೇವಾರಮಣೀಯಾನಿ ಜಾಯಂತೇ ಮೇ ತಯಾ ವಿನಾ ॥ ೨೦
ಪದ್ಮಕೋಶಪಲಾಶಾನಿ ದ್ರಷ್ಟುಂ ದೃಷ್ಟಿರ್ಹಿ ಮನ್ಯತೇ ।
ಸೀತಾಯಾ ನೇತ್ರಕೋಶಾಭ್ಯಾಂ ಸದೃಶಾನೀತಿ ಲಕ್ಷ್ಮಣ ॥ ೨೧

ಪದ್ಮಕೇಸರಸಂಸೃಷ್ಟೋ ವೃಕ್ಷಾಂತರವಿನಿಃಸೃತಃ ।
ನಿಃಶ್ವಾಸ ಇವ ಸೀತಾಯಾ ವಾತಿ ವಾಯುರ್ಮನೋಹರಃ ॥ ೨೨

ಸೌಮಿತ್ರೇ ಪಶ್ಯ ಪಂಪಾಯಾ ದಕ್ಷಿಣೇ ಗಿರಿಸಾನುನಿ ।
ಪುಷ್ಪಿತಾಂ ಕರ್ಣಿಕಾರಸ್ಯ ಯಷ್ಟಿಂ ಪರಮಶೋಭನಾಮ್ ॥ ೨೩

ಅಧಿಕಂ ಶೈಲರಾಜೋಽಯಂ ಧಾತುಭಿಃ ಸುವಿಭೂಷಿತಃ ।
ವಿಚಿತ್ರಂ ಸೃಜತೇ ರೇಣುಂ ವಾಯುವೇಗವಿಘಟ್ಟಿತಮ್ ॥ ೨೪

ಗಿರಿಪ್ರಸ್ಥಾಸ್ತು ಸೌಮಿತ್ರೇ ಸರ್ವತಃ ಸಂಪ್ರಪುಷ್ಪಿತೈಃ ।
ನಿಷ್ಪತ್ರೈಃ ಸರ್ವತೋ ರಮ್ಯೈಃ ಪ್ರದೀಪ್ತಾ ಇವ ಕಿಂಶುಕೈಃ ॥ ೨೫

---

ತರುತ್ತಿದ್ದಾನೆ (೧೮). ಮರಗಳನ್ನರಳಿಸುತ್ತ ಬಂದ ಈ ವಸಂತನು ನನ್ನನ್ನು ಹೊಡೆದು ಹಿಂಡದಿದ್ದರೆ, ಕಾಮನ ಪೀಡೆಯೊಂದನ್ನು ಹೇಗಾದರೂ ಸಹಿಸಿಕೊಳ್ಳುತ್ತಿದ್ದೆನು. ನನ್ನ ದಯಿತೆಯಿದ್ದಾಗ ಯಾವ ಯಾವ ವಸ್ತುಗಳು ನನಗೆ ರಮಣೀಯವಾಗಿದ್ದವೋ ಅವೆಲ್ಲವೂ ಈಗ ದುಃಖಕರವಾಗಿ ಪರಿಣಮಿಸಿವೆ (೧೯-೨೦). ತಾವರೆಮೊಗ್ಗುಗಳ ದಳಗಳನ್ನು ನೋಡಿದರೆ, 'ಇವು ಸೀತೆಯ ಕಣ್ಣುರೆಪ್ಪೆಗಳಂತಿವೆ' ಎಂದು ನನ್ನ ಕಣ್ಣು ತಿಳಿದುಕೊಳ್ಳುತ್ತದೆ. ಪದ್ಮಕೇಸರಗಳನ್ನು ಹೊತ್ತು ಮರಗಳ ಸಂದಿಯಲ್ಲಿ ತೂರಿಬರುವ ಗಾಳಿಯು ಜಾನಕಿಯ ನಿಶ್ವಾಸದಂತೆ ಸುಗಂಧಮನೋಹರವಾಗಿದೆ (೨೧-೨೨). ಸೌಮಿತ್ರಿ, ಅಲ್ಲಿ ನೋಡು. ಪಂಪೆಯ ದಕ್ಷಿಣ ದಿಕ್ಕಿನ ಬೆಟ್ಟದ ತಪ್ಪಲಿನಲ್ಲಿ ಒಂದು ಕರ್ಣಿಕಾರ ಗಿಡವು ಹೂವರಳಿ ಎಷ್ಟು ಮನೋಹರವಾಗಿದೆ! ನಾನಾಬಗೆಯ ಧಾತುಗಳಿಂದ ಮಂಡಿತನಾದ ಈ ಶೈಲರಾಜನು ವಾಯುವಿನ ಹೊಡೆತದಿಂದ ಬಣ್ಣಬಣ್ಣದ ಧೂಳಿಯನ್ನು ಹಾರಿಸುತ್ತಿದ್ದಾನೆ (೨೩-೨೪). ಬೆಟ್ಟದ ತಪ್ಪಲು

ಪಂಪಾತೀರರುಹಾಶ್ಚೇಮೇ ಸಂಸಕ್ತಾ ಮಧುಗಂಧಿನಃ ।
ಮಾಲತೀಮಲ್ಲಿಕಾಷಂಡಾಃ ಕರವೀರಾಶ್ಚ ಪುಷ್ಪಿತಾಃ ॥ ೭೬

ಕೇತಕ್ಯಃ ಸಿಂಧುವಾರಾಶ್ಚ ವಾಸಂತ್ಯಶ್ಚ ಸುಪುಷ್ಪಿತಾಃ ।
ಮಾಧವ್ಯೋ ಗಂಧಪೂರ್ಣಾಶ್ಚ ಕುಂದಗುಲ್ಮಾಶ್ಚ ಸರ್ವಶಃ ॥ ೭೭

ಚಿರಿಬಿಲ್ವಾ ಮಧೂಕಾಶ್ಚ ವಂಜುಲಾ ವಕುಲಾಸ್ತಥಾ ।
ಚಂಪಕಾಸ್ತಿಲಕಾಶ್ಚೈವ ನಾಗವೃಕ್ಷಾಃ ಸುಪುಷ್ಪಿತಾಃ ॥ ೭೮

ನೀಪಾಶ್ಚ ವರಣಾಶ್ಚೈವ ಖರ್ಜೂರಾಶ್ಚ ಸುಪುಷ್ಪಿತಾಃ ।
ಪದ್ಮಕಾಶ್ಚೋಪಶೋಭಂತೇ ನೀಲಾಶೋಕಾಶ್ಚ ಪುಷ್ಪಿತಾಃ ॥ ೭೯

ಲೋಧ್ರಾಶ್ಚ ಗಿರಿಪೃಷ್ಠೇಷು ಸಿಂಹಕೇಸರಪಿಂಜರಾಃ ।
ಅಂಕೋಲಾಶ್ಚ ಕುರಂಟಾಶ್ಚ ಪೂರ್ಣಕಾಃ ಪಾರಿಭದ್ರಕಾಃ ॥ ೮೦

ಚೂತಾಃ ಪಾಟಲಯಶ್ಚೈವ ಕೋವಿದಾರಾಶ್ಚ ಪುಷ್ಪಿತಾಃ ।
ಮುಚುಲಿಂದಾರ್ಜುನಾಶ್ಚೈವ ದೃಶ್ಯಂತೇ ಗಿರಿಸಾನುಷು ॥ ೮೧

---

ಗಳಲ್ಲಿರುವ ಮುತ್ತುಗದ ಮರಗಳೆಲ್ಲವೂ ಅರಳಿ ನಿಂತಿವೆ. ಬರಿಯ ಹೂಗಳು; ಎಲೆಗಳೇ ಇಲ್ಲ. (ಕೆಂಪಾದ) ಈ ಹೂಗಳಿಂದ ಬೆಟ್ಟಕ್ಕೆ ಬೆಂಕಿಬಿದ್ದಂತೆ ಕಾಣುತ್ತದೆ (೭೫). ಪಂಪಾತೀರದಲ್ಲಿರುವ ಈ ಮರಗಳೆಲ್ಲವೂ ಮಕರಂದದ ಸುವಾಸನೆಯನ್ನು ಬೀರುತ್ತ ಒಂದಕ್ಕೊಂದು ಹೆಣೆದಂತೆ ಸಾಂದ್ರವಾಗಿವೆ. ಜಾಜಿ, ಮಲ್ಲಿಗೆಯ ಪೊದೆಗಳೂ ಕರವೀರಗಳೂ ಪುಷ್ಪಿತವಾಗಿವೆ (೭೬). ಕೇದಗೆ, ಲಕ್ಕಿ, ಇರುವಂತಿಗೆ, ಮಾಧವಿ, ಮಾಗೀಮಲ್ಲಿಗೆ—ಇವು ಹೂಬಿಟ್ಟಿವೆ. ಹೊಂಗೆ, ಹಿಪ್ಪೆ, ವೇತಸ, ಬಕುಳ, ಸಂಪಗೆ, ತಿಲಕ, ನಾಗಕೇಸರಗಳು ಚೆನ್ನಾಗಿ ಅರಳಿವೆ (೭೭-೭೮). ಈಚಲು, ಬಸಳೆ, ಖರ್ಜೂರ, ಪದ್ಮಪರ್ಣಿ ಮತ್ತು ನೀಲಾಶೋಕಗಳು ಸುಪುಷ್ಪಿತಗಳಾಗಿ ಶೋಭಿಸುತ್ತಿವೆ. ಈ ಪರ್ವತದ ಸಾನುಪ್ರದೇಶಗಳಲ್ಲಿ ಲೋಧ್ರಗಳು ಸಿಂಹದ ಕೇಸರಗಳಂತೆ ಪಿಂಗಳವರ್ಣದ ಹೂಗಳನ್ನು ಬಿಟ್ಟಿವೆ. ಅಂಕೋಲ, ಗೋರಂಟೆ, ಶಾಲ್ಮಲಿ, ದೇವದಾರು, ಮಾವು, ಪಾದರಿ, ಕಾಂಚಾಳ, ಕಿತ್ತಿಳೆ, ಮತ್ತಿಗಳು ಗಿರಿಪ್ರದೇಶಗಳಲ್ಲಿ

**ಕೇತಕೋದ್ದಾಲಕಾಶ್ಚೈವ ಶಿರೀಷಾಃ ಶಿಂಶಪಾ ಧವಾಃ ।**
**ಶಾಲ್ಮಲ್ಯಃ ಕಿಂಶುಕಾಶ್ಚೈವ ರಕ್ತಾಃ ಕುರಬಕಾಸ್ತಥಾ ॥** ೮೨

**ತಿನಿಶಾ ನಕ್ತಮಾಲಾಶ್ಚ ಚಂದನಾಃ ಸ್ಪಂದನಾಸ್ತಥಾ ।**
**ಹಿಂತಾಲಾಸ್ತಿಲಕಾಶ್ಚೈವ ನಾಗವೃಕ್ಷಾಶ್ಚ ಪುಷ್ಪಿತಾಃ ॥** ೮೩

**ಪುಷ್ಪಿತಾನ್ ಪುಷ್ಪಿತಾಗ್ರಾಭಿರ್ಲತಾಭಿಃ ಪರಿವೇಷ್ಟಿತಾನ್ ।**
**ದ್ರುಮಾನ್ ಪಶ್ಯೇಹ ಸೌಮಿತ್ರೇ ಪಂಪಾಯಾ ರುಚಿರಾನ್ ಬಹೂನ್ ॥**

**ವಾತವಿಕ್ಷಿಪ್ತವಿಟಪಾನ್ ಯಥಾಸನ್ನಾನ್ ದ್ರುಮಾನಿಮಾನ್ ।**
**ಲತಾಃ ಸಮನುವೇಷ್ಟಂತೇ ಮತ್ತಾ ಇವ ವರಸ್ತ್ರಿಯಃ ॥** ೮೫

**ಪಾದಪಾತ್ ಪಾದಪಂ ಗಚ್ಛನ್ ಶೈಲಾಚ್ಛೈಲಂ ವನಾದ್ವನಮ್ ।**
**ವಾತಿ ನೈಕರಸಾಸ್ವಾದಸಂಮೋದಿತ ಇವಾನಿಲಃ ॥** ೮೬

**ಕೇಚಿತ್ ಪರ್ಯಾಪ್ತಕುಸುಮಾಃ ಪಾದಪಾ ಮಧುಗಂಧಿನಃ ।**
**ಕೇಚಿನ್ಮುಕುಲಸಂವೀತಾಃ ಶ್ಯಾಮವರ್ಣಾ ಇವಾಬಭುಃ ॥** ೮೭

---

ಅರಳಿರುವುದು ಕಾಣುತ್ತಿದೆ (೭೯-೮೧). ಹೊಂಬಣ್ಣದ ಕೇದಗೆ, ಚಳ್ಳಿ, ಬಾಗೆ, ಶಿಂಶಪಾ, ಧವ, ಬೂರುಗ, ಮುತ್ತುಗ, ಕೆಂಪು ಗೋರಂಟಿಗಳು ಪುಷ್ಪಪೂರ್ಣವಾಗಿವೆ (೮೨). ಹುಲಿಗೆ, ಕೆಂಪುಬೂರಗ, ಚಂದನ, ಸ್ಪಂದನ, ಹಿಂತಾಲ, ತಿಲಕ, ನಾಗವೃಕ್ಷಗಳು ಪುಷ್ಪಿತವಾಗಿವೆ ಸೌಮಿತ್ರಿ, ಪಂಪಾತೀರದಲ್ಲಿ ಪುಷ್ಪಭರಿತಗಳಾದ ಈ ವೃಕ್ಷಗಳು ಪುಷ್ಪಿತಲತೆಗಳಿಂದ ಆವೃತವಾಗಿರುವುದನ್ನು ನೋಡು! (೮೩-೮೪). ಕೊಂಬೆಗಳು ಗಾಳಿಗೆ ತೂಗುತ್ತಿರುವಾಗ ಸಮೀಪದಲ್ಲಿರುವ ಈ ವೃಕ್ಷಗಳನ್ನು ಲತೆಗಳು ಕಾಮೋನ್ಮತ್ತರಾದ ತರುಣಿಯರಂತೆ ಆಲಿಂಗಿಸಿಕೊಳ್ಳುವುದನ್ನು ನೋಡು! ಈ ಮಂದಾನಿಲನು ಮರದಿಂದ ಮರಕ್ಕೆ, ಬೆಟ್ಟದಿಂದ ಬೆಟ್ಟಕ್ಕೆ, ವನದಿಂದ ವನಕ್ಕೆ ಹೋಗಿ ವಿವಿಧ ರಸಗಳನ್ನಾಸ್ವಾದಿಸಿ ಆನಂದತುಂದಿಲನಾದವನಂತೆ ಸುಳಿಯುತ್ತಿರುವನು (೮೫-೮೬). ಕೆಲವು ಮರಗಳು ಹೂಗಳಿಂದ ತುಂಬಿ ಮಧುಗಂಧವನ್ನು ಸೂಸುತ್ತಿರುವುವು. ಕೆಲವು ಮರಗಳು ಮೊಗ್ಗುಗಳಿಂದ ಮುಸುಕಿ ಕಪ್ಪಗೆ ಕಾಣುತ್ತಿರುವುವು. (ಅಭಿನವಮಧುಲೋಲುಪವಾಗಿ) ಕುತೂಹಲಾಕುಲ

ಪಂಪಾತೀರರುಹಾಶ್ಚೇಮೇ ಸಂಸಕ್ತಾ ಮಧುಗಂಧಿನಃ ।
ಮಾಲತೀಮಲ್ಲಿಕಾಷಂಡಾಃ ಕರವೀರಾಶ್ಚ ಪುಷ್ಪಿತಾಃ ॥ ೭೬

ಕೇತಕ್ಯಃ ಸಿಂಧುವಾರಾಶ್ಚ ವಾಸಂತ್ಯಶ್ಚ ಸುಪುಷ್ಪಿತಾಃ ।
ಮಾಧವ್ಯೋ ಗಂಧಪೂರ್ಣಾಶ್ಚ ಕುಂದಗುಲ್ಮಾಶ್ಚ ಸರ್ವಶಃ ॥ ೭೭

ಚಿರಿಬಿಲ್ವಾ ಮಧೂಕಾಶ್ಚ ವಂಜುಲಾ ವಕುಲಾಸ್ತಥಾ ।
ಚಂಪಕಾಸ್ತಿಲಕಾಶ್ಚೈವ ನಾಗವೃಕ್ಷಾಃ ಸುಪುಷ್ಪಿತಾಃ ॥ ೭೮

ನೀಪಾಶ್ಚ ವರಣಾಶ್ಚೈವ ಖರ್ಜೂರಾಶ್ಚ ಸುಪುಷ್ಪಿತಾಃ ।
ಪದ್ಮಕಾಶ್ಚೋಪಶೋಭಂತೇ ನೀಲಾಶೋಕಾಶ್ಚ ಪುಷ್ಪಿತಾಃ ॥ ೭೯

ಲೋಧ್ರಾಶ್ಚ ಗಿರಿಪೃಷ್ಠೇಷು ಸಿಂಹಕೇಸರಪಿಂಜರಾಃ ।
ಅಂಕೋಲಾಶ್ಚ ಕುರಂಟಾಶ್ಚ ಪೂರ್ಣಕಾಃ ಪಾರಿಭದ್ರಕಾಃ ॥ ೮೦

ಚೂತಾಃ ಪಾಟಲಯಶ್ಚೈವ ಕೋವಿದಾರಾಶ್ಚ ಪುಷ್ಪಿತಾಃ ।
ಮುಚುಲಿಂದಾರ್ಜುನಾಶ್ಚೈವ ದೃಶ್ಯಂತೇ ಗಿರಿಸಾನುಷು ॥ ೮೧

---

ಗಳಲ್ಲಿರುವ ಮುತ್ತುಗದ ಮರಗಳೆಲ್ಲವೂ ಅರಳಿ ನಿಂತಿವೆ. ಬರಿಯ ಹೂಗಳು; ಎಲೆಗಳೇ ಇಲ್ಲ. (ಕೆಂಪಾದ) ಈ ಹೂಗಳಿಂದ ಬೆಟ್ಟಕ್ಕೆ ಬೆಂಕಿಬಿದ್ದಂತೆ ಕಾಣುತ್ತದೆ (೭೫). ಪಂಪಾತೀರದಲ್ಲಿರುವ ಈ ಮರಗಳೆಲ್ಲವೂ ಮಕರಂದದ ಸುವಾಸನೆಯನ್ನು ಬೀರುತ್ತ ಒಂದಕ್ಕೊಂದು ಹೆಣೆದಂತೆ ಸಾಂದ್ರವಾಗಿವೆ. ಜಾಜಿ, ಮಲ್ಲಿಗೆಯ ಪೊದೆಗಳೂ ಕರವೀರಗಳೂ ಪುಷ್ಪಿತವಾಗಿವೆ (೭೬). ಕೇದಗೆ, ಲಕ್ಕಿ, ಇರುವಂತಿಗೆ, ಮಾಧವಿ, ಮಾಗೀಮಲ್ಲಿಗೆ—ಇವು ಹೂಬಿಟ್ಟಿವೆ. ಹೊಂಗೆ, ಹಿಪ್ಪೆ, ವೇತಸ, ಬಕುಳ, ಸಂಪಗೆ, ತಿಲಕ, ನಾಗಕೇಸರಗಳು ಚೆನ್ನಾಗಿ ಅರಳಿವೆ (೭೭-೭೮). ಈಚಲು, ಬಸಳೆ, ಖರ್ಜೂರ, ಪದ್ಮಪರ್ಣಿ ಮತ್ತು ನೀಲಾಶೋಕಗಳು ಸುಪುಷ್ಪಿತಗಳಾಗಿ ಶೋಭಿಸುತ್ತಿವೆ. ಈ ಪರ್ವತದ ಸಾನುಪ್ರದೇಶಗಳಲ್ಲಿ ಲೋಧ್ರಗಳು ಸಿಂಹದ ಕೇಸರಗಳಂತೆ ಪಿಂಗಳವರ್ಣದ ಹೂಗಳನ್ನು ಬಿಟ್ಟಿವೆ. ಅಂಕೋಲ, ಗೋರಂಟಿ, ಶಾಲ್ಮಲಿ, ದೇವದಾರು, ಮಾವು, ಪಾದರಿ, ಕಾಂಚಾಳ, ಕಿತ್ತಿಳೆ, ಮತ್ತಿಗಳು ಗಿರಿಪ್ರದೇಶಗಳಲ್ಲಿ

**ಏಷ ಕಾರಂಡವಃ ಪಕ್ಷೀ ವಿಗಾಹ್ಯ ಸಲಿಲಂ ಶುಭಮ್ ।**
**ರಮತೇ ಕಾಂತಯಾ ಸಾರ್ಧಂ ಕಾಮಮುದ್ದೀಪಯನ್ ಮಮ ॥ ೯೪**

**ಮಂದಾಕಿನ್ಯಾಸ್ತು ಯದಿದಂ ರೂಪಮೇವಂ ಮನೋಹರಮ್ ।**
**ಸ್ಥಾನೇ ಜಗತಿ ವಿಖ್ಯಾತಾ ಗುಣಾಸ್ತಸ್ಯಾ ಮನೋರಮಾಃ ॥ ೯೫**

**ಯದಿ ದೃಶ್ಯೇತ ಸಾ ಸಾಧ್ವೀ ಯದಿ ಚೇಹ ವಸೇಮಹಿ ।**
**ಸ್ಪೃಹಯೇಯಂ ನ ಶಕ್ರಾಯ ನಾಯೋಧ್ಯಾಯೈ ರಘೂತ್ತಮ ॥ ೯೬**

**ನ ಹ್ಯೇವಂ ರಮಣೀಯೇಷು ಶಾದ್ವಲೇಷು ತಯಾ ಸಹ ।**
**ರಮತೋ ಮೇ ಭವೇಚ್ಚಿಂತಾ ನ ಸ್ಪೃಹಾನ್ಯೇಷು ವಾ ಭವೇತ್ ॥ ೯೭**

**ಅಮೀ ಹಿ ವಿವಿಧೈಃ ಪುಷ್ಪೈಸ್ತರವೋ ರುಚಿರಚ್ಛದಾಃ ।**
**ಕಾನನೇಽಸ್ಮಿನ್ ವಿನಾ ಕಾಂತಾಂ ಚಿತ್ತಮುನ್ಮಾದಯಂತಿ ಮೇ ॥ ೯೮**

**ಪಶ್ಯ ಶೀತಜಲಾಂ ಚೇಮಾಂ ಸೌಮಿತ್ರೇ ಪುಷ್ಕರಾಯುತಾಮ್ ।**
**ಚಕ್ರವಾಕಾನುಚರಿತಾಂ ಕಾರಂಡವನಿಷೇವಿತಾಮ್ ॥ ೯೯**

---

ಆ ಕಾರಂಡವಪಕ್ಷಿಯು ತನ್ನ ಕಾಂತೆಯೊಡನೆ ನೀರಿಗಿಳಿದು ವಿಹರಿಸುತ್ತ ನನ್ನ ವಿರಹತಾಪವನ್ನು ಉದ್ದೀಪಿಸುತ್ತಿದೆ. (ನಾವು ಹಿಂದೆ ನೋಡಿದ) ಮಂದಾಕಿನಿಯಂತೆ ಈ ಪುಷ್ಕರಿಣಿಯೂ ನೋಡಲು ಬಹು ಮನೋರಮವಾಗಿದೆ. ಆ ಮಂದಾಕಿನಿಯ ಸೌಂದರ್ಯವೂ ಲೋಕವಿಖ್ಯಾತವಾಗಿದೆ (೯೪-೯೫). ಆ ಸಾಧ್ವಿಯಾದ ಸೀತೆಯು ಈಗಲಾದರೂ ನಮಗೆ ಗೋಚರಿಸಿ, ಅವಳೊಡನೆ ಇಲ್ಲಿ ವಾಸಮಾಡುವುದಾದರೆ, ಲಕ್ಷ್ಮಣ, ನನಗೆ ಇಂದ್ರಪದವಿಯು ಬಂದರೂ ಬೇಡ! ಅಯೋಧ್ಯೆಯೂ ಬೇಡ! (೯೬). ಈ ರಮಣೀಯವಾದ ಹಚ್ಚನೆಯ ಹುಲ್ಲುಗಾವಲಿನಲ್ಲಿ ಅವಳೊಡನೆ ವಿನೋದಿಸುತ್ತಿದ್ದರೆ, ನನಗೆ ಯಾವ ಚಿಂತೆಯೂ ಇರದು; ಇನ್ನೊಂದು ಆಸೆಯೂ ಬರದು. ಈ ಕಾನನದಲ್ಲಿ ಅಂದವಾದ ಎಲೆಗಳಿರುವ ಮರಗಳು ತಮ್ಮ ವಿವಿಧಪುಷ್ಪಗಳಿಂದ, ಕಾಂತಾವಿರಹಿತನಾದ ನನಗೆ ಹುಚ್ಚುಹಿಡಿಸುತ್ತಿವೆ (೯೭-೯೮). ವತ್ಸ, ತಣ್ಣೀರಿನಿಂದ ತುಂಬಿ ಕಮಲಗಳಿಂದ ನಿಬಿಡವಾದ ಈ ಪಂಪಾಸರೋವರವನ್ನು ನೋಡು. ಚಕ್ರವಾಕಗಳ ಓಡಾಟ, ಕಾರಂಡವಗಳ ಅಲೆದಾಟ, ನೀರ್ಗೋಳಿಗಳ

ಪ್ಲವೈಃ ಕ್ರೌಂಚೈಶ್ಚ ಸಂಪೂರ್ಣಾಂ ವರಾಹಮೃಗಸೇವಿತಾಮ್ ।
ಅಧಿಕಂ ಶೋಭತೇ ಪಂಪಾ ವಿಕೂಜದ್ಭಿರ್ವಿಹಂಗಮೈಃ ॥ ೧೦೦

ದೀಪಯಂತೀವ ಮೇ ಕಾಮಂ ವಿವಿಧಾ ಮುದಿತಾ ದ್ವಿಜಾಃ ।
ಶ್ಯಾಮಾಂ ಚಂದ್ರಮುಖೀಂ ಸ್ಮೃತ್ವಾ ಪ್ರಿಯಾಂ ಪದ್ಮನಿಭೇಕ್ಷಣಾಮ್

ಪಶ್ಯ ಸಾನುಷು ಚಿತ್ರೇಷು ಮೃಗೀಭಿಃ ಸಹಿತಾನ್ ಮೃಗಾನ್ ।
ಮಾಂ ಪುನರ್ಮೃಗಶಾವಾಕ್ಷ್ಯಾ ವೈದೇಹ್ಯಾ ವಿರಹೀಕೃತಮ್ ॥ ೧೦೨

ವ್ಯಥಯಂತೀವ ಮೇ ಚಿತ್ತಂ ಸಂಚರಂತಸ್ತತಸ್ತತಃ ।
ಅಸ್ಮಿನ್ ಸಾನುನಿ ರಮ್ಯೇ ಹಿ ಮತ್ತದ್ವಿಜಗಣಾಯುತೇ ॥ ೧೦೩

ಪಶ್ಯೇಯಂ ಯದಿ ತಾಂ ಕಾಂತಾಂ ತತಃ ಸ್ವಸ್ತಿ ಭವೇನ್ಮಮ ।
ಜೀವೇಯಂ ಖಲು ಸೌಮಿತ್ರೇ ಮಯಾ ಸಹ ಸುಮಧ್ಯಮಾ ॥ ೧೦೪

ಸೇವತೇ ಯದಿ ವೈದೇಹೀ ಪಂಪಾಯಾಃ ಪವನಂ ಸುಖಮ್ ।
ಪದ್ಮಸೌಗಂಧಿಕವಹಂ ಶಿವಂ ಶೋಕವಿನಾಶನಮ್ ॥ ೧೦೫

---

ನಲಿದಾಟ, ಕೊಂಚೆಗಳ ಸಂಚಾರ, ವರಾಹಾದಿ ಮೃಗಗಳ ಯಾತಾಯಾತ, ಹಕ್ಕಿಗಳ ಇಂಚರ—ಇವುಗಳಿಂದ ಈ ಸರಸ್ಸು ಎಷ್ಟು ಶೋಭಿಸುತ್ತಿದೆ! (೯೯-೧೦೦) ವಿವಿಧಪಕ್ಷಿಗಳು ಆನಂದದಿಂದ ನಲಿಯುವುದನ್ನು ಕಂಡು ನನ್ನ ವಿರಹತಾಪವು ವರ್ಧಿಸುತ್ತಿದೆ. ಇಂದುವದನೆಯೂ ಕಂಜನೇತ್ರೆಯೂ ತರುಣಿಯೂ ಆದ ನನ್ನ ಪ್ರಿಯಳ ಸ್ಮರಣೆಯಾಗುತ್ತಿದೆ (೧೦೧). ಲಕ್ಷ್ಮಣ, ಬಣ್ಣಬಣ್ಣದ ಗಿರಿಸಾನುಗಳಲ್ಲಿ ಹರಿಣಿಗಳೊಡನೆ ವಿಹರಿಸುವ ಹರಿಣಗಳನ್ನೂ ಈಕ್ಷಿಸು; ಹರಿಣಾಕ್ಷಿಯಾದ ವೈದೇಹಿಯಿಲ್ಲದೆ ಕೊರಗುವ ನನ್ನನ್ನೂ ಈಕ್ಷಿಸು! ಸೊಕ್ಕಿದ ಹಕ್ಕಿಗಳಿಂದ ಆಕುಲವಾದ ಈ ರಮ್ಯಸಾನುವಿನಲ್ಲಿ ಕ್ರೀಡಿಸುವ ಈ ಮೃಗಗಳು ನನ್ನ ವ್ಯಥೆಯನ್ನು ಹೆಚ್ಚಿಸುತ್ತಿವೆ (೧೦೨-೧೦೩). ನನ್ನ ಕಾಂತೆಯನ್ನು ಕಂಡರೆ ಮಾತ್ರ ನನಗೆ ಕ್ಷೇಮವಾದೀತು. ವೈದೇಹಿಯು ನನ್ನೊಡನೆ ಬಂದು ಸುಖಶೀತಲವಾದ ಪಂಪಾತೀರದ ಗಾಳಿಯನ್ನು ಸೇವಿಸುವುದಾದರೆ, ನಾನು ಪ್ರಾಣವನ್ನು ಹಿಡಿದೇನು! ಈ ಗಾಳಿಯು ಪದ್ಮಸೌಗಂಧಿಕಗಳ ಕಂಪನ್ನು ಹೊತ್ತು ಶೋಕನಾಶಕವಾಗಿ ಶಿವಕರ

ಧನ್ಯಾ ಲಕ್ಷ್ಮಣ ಸೇವಂತೇ ಪಂಪೋಪವನಮಾರುತಮ್ ।
ಶ್ಯಾಮಾ ಪದ್ಮಪಲಾಶಾಕ್ಷೀ ಪ್ರಿಯಾ ವಿರಹಿತಾ ಮಯಾ ॥ ೧೦೬

ಕಥಂ ಧಾರಯತಿ ಪ್ರಾಣಾನ್ ವಿವಶಾ ಜನಕಾತ್ಮಜಾ ।
ಕಿಂ ನು ವಕ್ಷ್ಯಾಮಿ ರಾಜಾನಂ ಧರ್ಮಜ್ಞಂ ಸತ್ಯವಾದಿನಮ್ ॥ ೧೦೭

ಸೀತಾಯಾ ಜನಕಂ ಪೃಷ್ಟಃ ಕುಶಲಂ ಜನಸಂಸದಿ ।
ಯಾ ಮಾಮನುಗತಾ ಮಂದಂ ಪಿತ್ರಾ ಪ್ರಸ್ಥಾಪಿತಂ ವನಮ್ ॥ ೧೦೮

ಸೀತಾ ಸತ್ಪಥಮಾಸ್ಥಾಯ ಕ್ವ ನು ಸಾ ವರ್ತತೇ ಪ್ರಿಯಾ ।
ತಯಾ ವಿಹೀನಃ ಕೃಪಣಃ ಕಥಂ ಲಕ್ಷ್ಮಣ ಧಾರಯೇ ॥ ೧೦೯

ಯಾ ಮಾಮನುಗತಾ ರಾಜ್ಯಾದ್ಭ್ರಷ್ಟಂ ವಿಗತಚೇತಸಮ್ ।
ತಚ್ಚಾರ್ವಂಚಿತಪಕ್ಷ್ಮಾಕ್ಷಂ ಸುಗಂಧಿ ಶುಭಮವ್ರಣಮ್ ॥ ೧೧೦

ಅಪಶ್ಯತೋ ಮುಖಂ ತಸ್ಯಾಃ ಸೀದತೀವ ಮನೋ ಮಮ ।
ಸ್ಮಿತಹಾಸ್ಯಾಂತರಯುತಂ ಗುಣವನ್ಮಧುರಂ ಹಿತಮ್ ॥ ೧೧೧

---

ವಾಗಿದೆ (೧೦೪–೧೦೫). ಲಕ್ಷ್ಮಣ, ಪಂಪಾತೀರದಲ್ಲಿ (ಕಾಂತಾಸಮೇತರಾಗಿ) ತಂಗಾಳಿಯನ್ನು ಸೇವಿಸುವವರೇ ಧನ್ಯರು! ನಾನಾದರೋ ಯೌವನದಿಂದ ಬೀಗುವ ಪದ್ಮಾಕ್ಷಿಯಾದ ಕಾಂತೆಯನ್ನು ಕಳೆದುಕೊಂಡಿರುವೆನು. ಪರಾಧೀನಳಾಗಿರುವ ಜಾನಕಿಯು ಈಗ ಹೇಗೆ ಪ್ರಾಣವನ್ನು ಹಿಡಿದಿರಬಹುದು? ಧರ್ಮಜ್ಞನೂ ಸತ್ಯವಾದಿಯೂ ಆದ ಜನಕಮಹಾರಾಜನು ಜನರೆದುರಿಗೆ ಸೀತೆಯ ಕುಶಲವನ್ನು ವಿಚಾರಿಸಿದರೆ, ಏನು ಹೇಳಲಿ, ಲಕ್ಷ್ಮಣ? ತಂದೆಯು ನನ್ನನ್ನು ವನಕ್ಕೆ ಕಳಿಸಿದಾಗ ನಿರ್ಭಾಗ್ಯನಾದ ನನ್ನನ್ನು ಅವಳು ಹಿಂಬಾಲಿಸಿ ಬಂದಳಲ್ಲವೆ? (೧೦೬–೧೦೮) ಸನ್ಮಾರ್ಗವನ್ನವಲಂಬಿಸಿ ನನ್ನೊಡನೆ ಬಂದ ಸೀತೆ ಎಲ್ಲಿರಬಹುದು? ಅಂಥ ಸಾಧ್ವಿಯನ್ನು ಕಳೆದುಕೊಂಡು ದೀನನಾಗಿರುವ ನಾನು, ತಮ್ಮ, ಹೇಗೆ ಬದುಕಿರಲಿ? ರಾಜ್ಯಭ್ರಷ್ಟನಾಗಿ ದಿಕ್ಕುಗಾಣದಿದ್ದ ನನ್ನನ್ನು ಕೈಬಿಡದೆ ಹಿಂಬಾಲಿಸಿ ಬಂದಳು. ಆಹಾ! ಅವಳ ನುಣುಪಾದ ಮುದ್ದುಮುಖವು ಎಷ್ಟು ಚೆಲುವಾಗಿತ್ತು! ಸರಿಯಾದ ಎವೆಯುಳ್ಳ ಕಣ್ಣು, ಸುಗಂಧಿಯಾದ ನಿಶ್ವಾಸ! (೧೦೯–೧೧೦). ಆ ಮುಖವನ್ನು ನೋಡದೆ ನನ್ನ ಹೃದಯವು ಸೀದುಹೋಗುತ್ತಿದೆ.

*

**ವೈದೇಹ್ಯಾ ವಾಕ್ಯಮತುಲಂ ಕದಾ ಶ್ರೋಷ್ಯಾಮಿ ಲಕ್ಷ್ಮಣ ।**
**ಪ್ರಾಪ್ಯ ದುಃಖಂ ವನೇ ಶ್ಯಾಮಾ ಸಾ ಮಾಂ ಮನ್ಮಥಕರ್ಶಿತಮ್ ॥**

**ನಷ್ಟದುಃಖೇವ ಹೃಷ್ಟೇವ ಸಾಧ್ವೀ ಸಾಧ್ವಭ್ಯಭಾಷತ ।**
**ಕಿಂ ನು ವಕ್ಷ್ಯಾಮಿ ಕೌಸಲ್ಯಾಮಯೋಧ್ಯಾಯಾಂ ನೃಪಾತ್ಮಜ ॥ ೧೧೩**

**ಕ್ವ ಸಾ ಸ್ನುಷೇತಿ ಪೃಚ್ಛಂತೀಂ ಕಥಂ ಚಾತಿಮನಸ್ವಿನೀಮ್ ।**
**ಗಚ್ಛ ಲಕ್ಷ್ಮಣ ಪಶ್ಯ ತ್ವಂ ಭರತಂ ಭ್ರಾತೃವತ್ಸಲಮ್ ॥ ೧೧೪**

**ನ ಹ್ಯಹಂ ಜೀವಿತುಂ ಶಕ್ತಸ್ತಾಮೃತೇ ಜನಕಾತ್ಮಜಾಮ್ ।**
**ಇತಿ ರಾಮಂ ಮಹಾತ್ಮಾನಂ ವಿಲಪಂತಮನಾಥವತ್ ॥ ೧೧೫**

**ಉವಾಚ ಲಕ್ಷ್ಮಣೋ ಭ್ರಾತಾ ವಚನಂ ಯುಕ್ತಮವ್ಯಯಮ್ ।**
**ಸಂಸ್ತಂಭ ರಾಮ ಭದ್ರಂ ತೇ ಮಾ ಶುಚಃ ಪುರುಷೋತ್ತಮ ॥ ೧೧೬**

---

ಮುಖದಲ್ಲಿ ಸಹಜವಾದ ಮುಗುಳ್ನಗೆ, ನಡುನಡುವೆ ಹಾಸ್ಯ. ಪ್ರಸನ್ನ ಮಧುರವಾಗಿ ಇನ್ನೆಲ್ಲಿಯೂ ಕಂಡುಬರದಿದ್ದ ವೈದೇಹಿಯ ಇಂಪಾದ ಮಾತನ್ನು ಪುನಃ ಯಾವಾಗ ಕೇಳುವೆನು, ಲಕ್ಷ್ಮಣ? ಆ ಹುಡುಗಿಯು ಅರಣ್ಯದಲ್ಲಿ ಎಷ್ಟು ಕಷ್ಟವನ್ನನುಭವಿಸಿದಳು! (೧೧೧-೧೧೨). ಆದರೂ ಅನುರಾಗವಶನಾದ ನನ್ನನ್ನು ಕಂಡು ತನಗೆ ಕಷ್ಟವೇ ಇಲ್ಲವೆಂಬಂತೆ ಸಂತುಷ್ಟಳಾಗಿ ಆ ಪತಿವ್ರತೆ ಎಷ್ಟು ನಯವಾಗಿ ಮಾತನಾಡುತ್ತಿದ್ದಳು! ರಾಜಪುತ್ರ—ಲಕ್ಷ್ಮಣ, ಅಯೋಧ್ಯೆಗೆ ಹೋಗಿ ನನ್ನ ತಾಯಿಗೆ ಏನೆಂದು ಹೇಳಲಿ? ನನ್ನ ತಾಯಿ ಬಹಳವಾಗಿ ಮನಸ್ಸಿಗೆ ಹಚ್ಚಿಕೊಳ್ಳುವ ವಾತ್ಸಲ್ಯಮಯಿ. 'ನನ್ನ ಸೊಸೆ ಎಲ್ಲಿ?' ಎಂದು ಕೇಳಿದರೆ ನಾನು ಏನು ಹೇಳಲಿ, ಲಕ್ಷ್ಮಣ? ತಮ್ಮ, ನೀನು ಅಯೋಧ್ಯೆಗೆ ಹೊರಟುಹೋಗು ಹೋಗಿ ಭ್ರಾತೃವತ್ಸಲನಾದ ಭರತನನ್ನು ನೋಡಿಕೊಂಡಿರು (೧೧೩-೧೧೪). ಜಾನಕಿಯಿಲ್ಲದೆ ನಿಶ್ಚಯವಾಗಿಯೂ ನಾನು ಬದುಕಲಾರೆ" ಎಂದು ಶ್ರೀರಾಮನು ವಿಲಪಿಸಿದನು. ಮಹಾತ್ಮನಾದ ಶ್ರೀರಾಮನು ಅನಾಥನಂತೆ ವಿಲಪಿಸುವುದನ್ನು ಕಂಡು ಸಹೋದರನಾದ ಲಕ್ಷ್ಮಣನು ಯುಕ್ತಿಯುಕ್ತವೂ ಅಚಲನಿರ್ಧಾರವುಳ್ಳದ್ದೂ ಆದ ಮಾತನ್ನು ಹೇಳಿದನು: "ಅಣ್ಣಾ, ಮನಸ್ಸಿಗೆ ಧೈರ್ಯವನ್ನು ತಂದುಕೊ. ನಿನಗೆ ಶುಭವಾಗುವುದು, ದುಃಖಿಸಬೇಡ. ನೀನು ಪುರುಷಶ್ರೇಷ್ಠ

**ನೇದೃಶಾನಾಂ ಮತಿರ್ಮಂದಾ ಭವತ್ಯಕಲುಷಾತ್ಮನಾಮ್ ।**
**ಸ್ಮೃತ್ವಾ ವಿಯೋಗಜಂ ದುಃಖಂ ತ್ಯಜ ಸ್ನೇಹಂ ಪ್ರಿಯೇ ಜನೇ ॥**

**ಅತಿಸ್ನೇಹಪರಿಷ್ವಂಗಾದ್ವರ್ತಿರಾರ್ದ್ರಾಪಿ ದಹ್ಯತೇ ।**
**ಯದಿ ಗಚ್ಛತಿ ಪಾತಾಲಂ ತತೋ ಹ್ಯಧಿಕಮೇವ ವಾ ॥ ೧೧೮**

**ಸರ್ವಥಾ ರಾವಣಸ್ತಾವನ್ನ ಭವಿಷ್ಯತಿ ರಾಘವ ।**
**ಪ್ರವೃತ್ತಿರ್ಲಭ್ಯತಾಂ ತಾವತ್ತಸ್ಯ ಪಾಪಸ್ಯ ರಕ್ಷಸಃ ॥ ೧೧೯**

**ತತೋ ಹಾಸ್ಯತಿ ವಾ ಸೀತಾಂ ನಿಧನಂ ವಾ ಗಮಿಷ್ಯತಿ ।**
**ಯದಿ ಯಾತಿ ದಿತೇರ್ಗರ್ಭಂ ರಾವಣಃ ಸಹ ಸೀತಯಾ ॥ ೧೨೦**

**ತತ್ರಾಪ್ಯೇನಂ ಹನಿಷ್ಯಾಮಿ ನ ಚೇದ್ದಾಸ್ಯತಿ ಮೈಥಿಲೀಮ್ ।**
**ಸ್ವಾಸ್ಥ್ಯಂ ಭದ್ರಂ ಭಜಸ್ವಾರ್ಯ ತ್ಯಜ್ಯತಾಂ ಕೃಪಣಾ ಮತಿಃ ॥ ೧೨೧**

---

ನಾಗಿದ್ದೀಯೆ (೧೧೫-೧೧೭) ಧೀರರಾದ ನಿನ್ನಂಥವರು ಎಂದಿಗೂ ಎದೆಗುಂದಲಾರರು. ಈ ದುಃಖವು (ತಾತ್ಕಾಲಿಕವಾಗಿ) ಪ್ರಿಯಜನವಿಯೋಗದಿಂದ ಬಂದಿದೆ ಎಂಬುದನ್ನು ಲಕ್ಷಿಸು. ಅತಿವ್ಯಾಮೋಹವೆಂಬುದನ್ನು ಪರಿತ್ಯಜಿಸು. ಬತ್ತಿಯು ಒದ್ದೆಯಾಗಿದ್ದರೂ ಸ್ನೇಹವು* ಅತಿಯಾದರೆ ಸುಟ್ಟುಹೋಗುತ್ತದೆ ರಾವಣನು ಪಾತಾಳವನ್ನು ಸೇರಲಿ—ಇನ್ನೂ ಕೆಳಗಿಳಿದು ಅಡಗಲಿ, ಅವನು ಸರ್ವಥಾ ಜೀವಸಹಿತವಾಗಿ ಉಳಿಯನೆಂಬುದು ನಿಶ್ಚಯ. ಆ ಪಾಪಿ ರಾಕ್ಷಸನು ಎಲ್ಲಿರುವನೆಂಬ ಸುದ್ದಿಯೊಂದು ನಮಗೆ ದೊರಕಲಿ (೧೧೭-೧೧೯). ಆಗ ಆ ಪಾಪಿಯು ಸೀತಾದೇವಿಯನ್ನು ತಂದೊಪ್ಪಿಸಬೇಕಾಗುವುದು ; ಇಲ್ಲವೆ, ತನ್ನ ಪ್ರಾಣವನ್ನು ಅರ್ಪಿಸಬೇಕಾಗುವುದು. ದೇವಿಯನ್ನಪಹರಿಸಿದ ರಾವಣನು ದಿತಿಯ ಗರ್ಭವನ್ನೇ ಹೊಗಲಿ, ಮೈಥಿಲಿಯನ್ನು ಒಪ್ಪಿಸದಿದ್ದರೆ ಅಲ್ಲಿಗೂ ನುಗ್ಗಿ ರಾವಣನನ್ನು ಸಂಹರಿಸುವೆನು! ಅಣ್ಣಾ, ನಿನಗೆ ಸಹಜವಾದ ಧೈರ್ಯವನ್ನವಲಂಬಿಸು. ಧೈರ್ಯವೇ ಶ್ರೇಯಸ್ಕರ ಈ ದೀನಭಾವವನ್ನು ಪರಿತ್ಯಜಿಸು (೧೨೦-೧೨೧).

* **ಸ್ನೇಹ=ಎಣ್ಣೆ ; ಪ್ರೀತಿ.**

ಅರ್ಥೋ ಹಿ ನಷ್ಟಕಾರ್ಯಾರ್ಥೈರ್ನಾಯತ್ನೇನಾಧಿಗಮ್ಯತೇ ।
ಉತ್ಸಾಹೋ ಬಲವಾನಾರ್ಯ ನಾಸ್ತ್ಯುತ್ಸಾಹಾತ್ ಪರಂ ಬಲಮ್ ॥

ಸೋತ್ಸಾಹಸ್ಯಾಸ್ತಿ ಲೋಕೇಷು ನ ಕಿಂಚಿದಪಿ ದುರ್ಲಭಮ್ ।
ಉತ್ಸಾಹವಂತಃ ಪುರುಷಾ ನಾವಸೀದಂತಿ ಕರ್ಮಸು ॥ ೧೨೩

ಉತ್ಸಾಹಮಾತ್ರಮಾಶ್ರಿತ್ಯ ಪ್ರತಿಲಪ್ಸ್ಯಾಮ ಜಾನಕೀಮ್ ।
ತ್ಯಜ್ಯತಾಂ ಕಾಮವೃತ್ತತ್ವಂ ಶೋಕಂ ಸಂನ್ಯಸ್ಯ ಪೃಷ್ಠತಃ ॥ ೧೨೪

ಮಹಾತ್ಮಾನಂ ಕೃತಾತ್ಮಾನಮಾತ್ಮಾನಂ ನಾವಬುಧ್ಯಸೇ ।
ಏವಂ ಸಂಬೋಧಿತಸ್ತತ್ರ ಶೋಕೋಪಹತಚೇತನಃ ॥ ೧೨೫

ನ್ಯಸ್ಯ ಶೋಕಂ ಚ ಮೋಹಂ ಚ ತತೋ ಧೈರ್ಯಮುಪಾಗಮತ್ ।
ಸೋಽಭ್ಯತಿಕ್ರಾಮದವ್ಯಗ್ರಸ್ತಾಮಚಿಂತ್ಯಪರಾಕ್ರಮಃ ॥ ೧೨೬

ರಾಮಃ ಪಂಪಾಂ ಸುರುಚಿರಾಂ ರಮ್ಯಾಂ ಪಾರಿಪ್ಲವದ್ರುಮಾಮ್ ॥

---

ಮಿಂಚಿಹೋದ ಕಾರ್ಯವನ್ನು ಪ್ರಯತ್ನದಿಂದ ಸಾಧಿಸಬೇಕಲ್ಲದೆ ಬೇರೆಯ ಮಾರ್ಗವಿಲ್ಲ. ಅಣ್ಣಾ, ಉತ್ಸಾಹವೇ ಕಾರ್ಯಸಿದ್ಧಿಗೆ ಪ್ರಬಲವಾದ ಸಾಧನ. ಉತ್ಸಾಹಕ್ಕಿಂತ ಪ್ರಬಲವಾದದ್ದು ಇನ್ನೊಂದಿಲ್ಲ (೧೨೨) ಉತ್ಸಾಹ ಶಾಲಿಗೆ ಈ ಜಗತ್ತಿನಲ್ಲಿ ದುರ್ಲಭವಾದುದೇ ಇಲ್ಲ. ಉತ್ಸಾಹಿಗಳಾದ ಜನರು ಯಾವ ಕಾರ್ಯದಲ್ಲಿಯೂ ವಿಫಲರಾಗುವುದಿಲ್ಲ. ಆದ್ದರಿಂದ ನಾವು ಉತ್ಸಾಹ ವನ್ನವಲಂಬಿಸಿ ಜಾನಕಿಯು ಲಭಿಸುವಂತೆ ಯತ್ನಿಸೋಣ. ಈ ಕಾಮ ವ್ಯಾಪಾರವನ್ನು ಬಿಟ್ಟುಬಿಡು. ಶೋಕವನ್ನು ಬದಿಗೊತ್ತು (೧೨೩-೧೨೪). ನೀನು ಧೀರಚಿತ್ತನೂ ಪರಿಷ್ಕೃತಬುದ್ಧಿಯುಳ್ಳವನೂ ಎಂಬುದನ್ನರಿಯೆಯಾ ? ನಿನ್ನನ್ನು ನೀನು ಮರೆತೆಯಾ ?" ಎಂದು ಸಮಾಧಾನ ಹೇಳಿದನು. ಹೀಗೆ ಲಕ್ಷ್ಮಣನು ಸಮಾಧಾನ ಹೇಳಿ ವಿವೇಕವನ್ನರುಹಲು, ಶೋಕಾವಿಷ್ಟನಾಗಿದ್ದ ಶ್ರೀರಾಮನು ಶೋಕಮೋಹಗಳನ್ನು ಬಿಟ್ಟು ಧೈರ್ಯವನ್ನು ತಂದು ಕೊಂಡನು. ಅನಂತರ ಅಸಾಧಾರಣ ಪರಾಕ್ರಮಿಯಾದ ಶ್ರೀರಾಮನು ನಿಶ್ಚಲ ಚಿತ್ತನಾಗಿ, ಗಾಳಿಗೆ ಹೊಯ್ದಾಡುವ ತೀರವೃಕ್ಷಗಳಿಂದ ಮನೋಹರವಾದ

ನಿರೀಕ್ಷಮಾಣಃ ಸಹಸಾ ಮಹಾತ್ಮಾ
ಸರ್ವಂ ವನಂ ನಿರ್ಝರಕಂದರಾಂಶ್ಚ ।
ಉದ್ವಿಗ್ನಚೇತಾಃ ಸಹ ಲಕ್ಷ್ಮಣೇನ
ವಿಚಾರ್ಯ ದುಃಖೋಪಹತಃ ಪ್ರತಸ್ಥೇ ॥ ೧೨೭

ತಂ ಮತ್ತಮಾತಂಗವಿಲಾಸಗಾಮೀ
ಗಚ್ಛಂತಮವ್ಯಗ್ರಮನಾ ಮಹಾತ್ಮಾ ।
ಸ ಲಕ್ಷ್ಮಣೋ ರಾಘವಮಿಷ್ಟಚೇಷ್ಟೋ
ರರಕ್ಷ ಧರ್ಮೇಣ ಬಲೇನ ಚೈವ ॥ ೧೨೮

ತಾವೃಶ್ಯಮೂಕಸ್ಯ ಸಮೀಪಚಾರೀ
ಚರನ್ ದದರ್ಶಾದ್ಭುತದರ್ಶನೀಯೌ ।
ಶಾಖಾಮೃಗಾಣಾಮಧಿಪಸ್ತರಸ್ವೀ
ವಿತತ್ರಸೇ ನೈವ ಚಿಚೇಷ್ಟ ಕಿಂಚಿತ್ ॥ ೧೨೯

---

ಪಂಪಾಸರೋವರವನ್ನು ದಾಟಿಹೋದನು (೧೨೫-೧೨೬). ಆ ಮಹಾತ್ಮನು ಲಕ್ಷ್ಮಣನೊಡನೆ ಅರಣ್ಯದ ಸಮಸ್ತಪ್ರದೇಶವನ್ನೂ ಗಿರಿನದಿಗಳನ್ನೂ ಗುಹೆಗಳನ್ನೂ ಶೋಧಿಸುತ್ತ, ಎಲ್ಲಿಯೂ ಜಾನಕಿಯನ್ನು ಕಾಣದೆ ಕೊರಗುತ್ತ, ಅವಳು ಎಲ್ಲಿರಬಹುದೆಂದು ವಿಮರ್ಶಿಸುತ್ತ, ಶೋಕಾವಿಷ್ಟನಾಗಿ ಮುಂದೆ ಹೋದನು (೧೨೭). ಮಹಾಪುರುಷನಾದ ಲಕ್ಷ್ಮಣನಾದರೋ ಮತ್ತಮಾತಂಗದಂತೆ ಗಂಭೀರವಾಗಿ ನಡೆಯುತ್ತ ಏಕಾಗ್ರಚಿತ್ತನಾಗಿ ಶ್ರೀರಾಮನನ್ನು ಹಿಂಬಾಲಿಸಿ ಹೋದನು ಆತನು ರಾಘವನಿಗೆ ಹಿತಕರವಾಗಿ ವರ್ತಿಸುತ್ತ, ಆಗಾಗ ನೀತಿಯನ್ನು ಹೇಳಿ ಸಮಾಧಾನಪಡಿಸುತ್ತ, ತನ್ನ ಪರಾಕ್ರಮದಿಂದ ಅವನಿಗೆ ಧೈರ್ಯವನ್ನು ಹುಟ್ಟಿಸಿ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿದ್ದನು (೧೨೮). ಆಗ ಋಷ್ಯಮೂಕಪರ್ವತಪ್ರಾಂತದಲ್ಲಿ ಸಂಚರಿಸುತ್ತಿದ್ದ ವಾನರೇಶ್ವರನಾದ ಸುಗ್ರೀವನು ಅದ್ಭುತ ಸೌಂದರ್ಯಶಾಲಿಗಳಾದ ಶ್ರೀರಾಮಲಕ್ಷ್ಮಣರನ್ನು ಕಂಡನು ಅವರನ್ನು ಕಂಡು ಆ ಬಲಾಢ್ಯನಿಗೆ ಭಯವಾಯಿತು! ಕ್ಷಣಕಾಲ ಅಲ್ಲಾಡದೆ ನಿಂತುಬಿಟ್ಟನು! (೧೨೯).

ಸ ತೌ ಮಹಾತ್ಮಾ ಗಜಮಂದಗಾಮೀ
ಶಾಖಾಮೃಗಸ್ತತ್ರ ಚಿರಂ ಚರಂತೌ ।
ದೃಷ್ಟ್ವಾ ವಿಷಾದಂ ಪರಮಂ ಜಗಾಮ
ಚಿಂತಾಪರೀತೋ ಭಯಭಾರಭಗ್ನಃ ॥ ೧೩೦

ತಮಾಶ್ರಮಂ ಪುಣ್ಯಸುಖಂ ಶರಣ್ಯಂ
ಸದೈವ ಶಾಖಾಮೃಗಸೇವಿತಾಂತಮ್ ।
ತ್ರಸ್ತಾಶ್ಚ ದೃಷ್ಟ್ವಾ ಹರಯೋಽಭಿಜಗ್ಮು-
ರ್ಮಹೌಜಸೌ ರಾಘವಲಕ್ಷ್ಮಣೌ ತೌ ॥ ೧೩೧

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ
ಚತುರ್ವಿಂಶತಿಸಹಸ್ರಿಕಾಯಾಂ ಸಂಹಿತಾಯಾಂ ಕಿಷ್ಕಿಂಧಾಕಾಂಡೇ ಪ್ರಥಮಃ ಸರ್ಗಃ



ಮಹಾತ್ಮನೂ ಗಜಗಂಭೀರಗಾಮಿಯೂ ಆದ ಆ ಕಪೀಶ್ವರನು ಅಲ್ಲಿ ತಿರುಗುತ್ತಿದ್ದ ಇವರೀರ್ವರನ್ನು ಕಂಡು ಅತ್ಯಂತ ವಿಷಣ್ಣನಾದನು ಅವನಿಗೆ ಚಿಂತೆಯಾವರಿಸಿತು ಅಂಜಿಕೆಯು ಹೊರೆ ಹೇರಿತು (೧೩೦). ಅವನೊಡನಿದ್ದ ಇತರ ಕಪಿಗಳೂ ಮಹಾತೇಜಸ್ವಿಗಳಾದ ಶ್ರೀರಾಮಲಕ್ಷ್ಮಣರನ್ನು ನೋಡಿ (ಅವರನ್ನು ವಾಲಿಯು ಕಳಿಸಿರಬಹುದೆಂದು) ಅಂಜಿದರು ಅಲ್ಲಿದ್ದ ಮತಂಗಾಶ್ರಮವು (ವಾಲಿಗೆ ದುಷ್ಪ್ರವೇಶವಾದ್ದರಿಂದ) ಆ ವಾನರರಿಗೆ ಶರಣ್ಯವಾಗಿತ್ತು. ಅವರು ಭೀತರಾಗಿ ಪುಣ್ಯವೂ ಸುಖಕರವೂ ಆದ ಮತಂಗಾಶ್ರಮವನ್ನು ಸೇರಿಕೊಂಡರು (೧೩೧).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಒಂದನೆಯ ಸರ್ಗ



# ದ್ವಿತೀಯಃ ಸರ್ಗಃ

## ಸುಗ್ರೀವಮಂತ್ರಃ

ತೌ ತು ದೃಷ್ಟ್ವಾ ಮಹಾತ್ಮಾನೌ ಭ್ರಾತರೌ ರಾಮಲಕ್ಷ್ಮಣೌ ।
ವರಾಯುಧಧರೌ ವೀರೌ ಸುಗ್ರೀವಃ ಶಂಕಿತೋಽಭವತ್ ॥ ೧

ಉದ್ವಿಗ್ನಹೃದಯಃ ಸರ್ವಾ ದಿಶಃ ಸಮವಲೋಕಯನ್ ।
ನ ವ್ಯತಿಷ್ಠತ ಕಸ್ಮಿಂಶ್ಚಿದ್ದೇಶೇ ವಾನರಪುಂಗವಃ ॥ ೨

ನೈವ ಚಕ್ರೇ ಮನಃ ಸ್ಥಾನೇ ವೀಕ್ಷಮಾಣೌ ಮಹಾಬಲೌ ।
ಕಪೇಃ ಪರಮಭೀತಸ್ಯ ಚಿತ್ತಂ ವ್ಯವಸಸಾದ ಹ ॥ ೩

ಚಿಂತಯಿತ್ವಾ ಸ ಧರ್ಮಾತ್ಮಾ ವಿಮೃಶ್ಯ ಗುರುಲಾಘವಮ್ ।
ಸುಗ್ರೀವಃ ಪರಮೋದ್ವಿಗ್ನಃ ಸರ್ವೈರನುಚರೈಃ ಸಹ ॥ ೪

ತತಃ ಸ ಸಚಿವೇಭ್ಯಸ್ತು ಸುಗ್ರೀವಃ ಪ್ಲವಗಾಧಿಪಃ ।
ಶಶಂಸ ಪರಮೋದ್ವಿಗ್ನಃ ಪಶ್ಯಂಸ್ತೌ ರಾಮಲಕ್ಷ್ಮಣೌ ॥ ೫

## ಸರ್ಗ ೨

ಸುಗ್ರೀವನು ಸಚಿವರೊಡನೆ ಆಲೋಚಿಸಿ ಹನುಮಂತನನ್ನು
ಶ್ರೀರಾಮಲಕ್ಷ್ಮಣರಿದ್ದೆಡೆಗೆ ಕಳಿಸುವುದು.

ಸುಗ್ರೀವನು ಮಹತ್ತರವಾದ ಆಯುಧಗಳನ್ನು ಧರಿಸಿದ್ದ ಅಣ್ಣ-ತಮ್ಮಂದಿರಾದ ಶ್ರೀರಾಮಲಕ್ಷ್ಮಣರನ್ನು ಕಂಡು ಶಂಕಾಕುಲನಾದನು. ಅವನ ಮನಸ್ಸು ಉದ್ವಿಗ್ನವಾಯಿತು ಆ ಕಪಿಶ್ರೇಷ್ಠನು ಸಕಲ ದಿಕ್ಕುಗಳನ್ನು ಗಾಬರಿಯಿಂದ ನೋಡುತ್ತ ಒಂದು ಕಡೆಯೂ ನಿಲ್ಲದೆ ತಾಕಲಾಡಿದನು (೧-೨). ಆ ಬಲಾಢ್ಯರನ್ನು ನೋಡುವಾಗ ಎಲ್ಲಿಯೂ ನಿಲ್ಲಲು ಅವನಿಗೆ ಧೈರ್ಯ ಬರಲಿಲ್ಲ. ಆ ವಾನರನು ಅತ್ಯಂತ ಭೀತನಾದನು. ಹೃದಯವು ತಲ್ಲಣಿಸಿತು. ರಾಜಧರ್ಮವನ್ನರಿತ ಸುಗ್ರೀವನು ತನ್ನ ಅನುಚರರೊಂದಿಗೆ ಆಲೋಚಿಸಿದನು: "ಅವರಿಬ್ಬರು ಯಾರಿರಬಹುದು? ಈಗ ಓಡಿಹೋಗೋಣವೆ? ಅಥವಾ ಇಲ್ಲಿಯೇ ಇದ್ದು ಪರಿಣಾಮಗಳನ್ನೆದುರಿಸೋಣವೆ?" ಎಂದು ಕಾರ್ಯಾಕಾರ್ಯಗಳನ್ನು ವಿಚಾರಮಾಡಿದನು (೩-೪). ಆ ವಾನರೇಂದ್ರನು

ಏತೌ ವನಮಿದಂ ದುರ್ಗಂ ವಾಲಿಪ್ರಣಿಹಿತೌ ಧ್ರುವಮ್ ।
ಛದ್ಮನಾ ಚೀರವಸನೌ ಪ್ರಚರಂತಾವಿಹಾಗತೌ ॥ ೬

ತತಃ ಸುಗ್ರೀವಸಚಿವಾ ದೃಷ್ಟ್ವಾ ಪರಮಧನ್ವಿನೌ ।
ಜಗ್ಮುರ್ಗಿರಿತಟಾತ್ತಸ್ಮಾದನ್ಯಚ್ಛಿಖರಮುತ್ತಮಮ್ ॥ ೭

ತೇ ಕ್ಷಿಪ್ರಮಧಿಗಮ್ಯಾಥ ಯೂಥಪಾ ಯೂಥಪರ್ಷಭಮ್ ।
ಹರಯೋ ವಾನರಶ್ರೇಷ್ಠಂ ಪರಿವಾರ್ಯೋಪತಸ್ಥಿರೇ ॥ ೮

ಏಕಮೇಕಾಯನಗತಾಃ ಪ್ಲವಮಾನಾ ಗಿರೇರ್ಗಿರಿಮ್ ।
ಪ್ರಕಂಪಯಂತೋ ವೇಗೇನ ಗಿರೀಣಾಂ ಶಿಖರಾಣ್ಯಪಿ ॥ ೯

ತತಃ ಶಾಖಾಮೃಗಾಃ ಸರ್ವೇ ಪ್ಲವಮಾನಾ ಮಹಾಬಲಾಃ ।
ಬಭಂಜುಶ್ಚ ನಗಾಂಸ್ತತ್ರ ಪುಷ್ಪಿತಾನ್ ದುರ್ಗಸಂಶ್ರಿತಾನ್ ॥ ೧೦

ಆಪ್ಲವಂತೋ ಹರಿವರಾಃ ಸರ್ವತಸ್ತಂ ಮಹಾಗಿರಿಮ್ ।
ಮೃಗಮಾರ್ಜಾರಶಾರ್ದೂಲಾಂಸ್ತ್ರಾಸಯಂತೋ ಯಯುಸ್ತದಾ ॥

---

ರಾಮಲಕ್ಷ್ಮಣರನ್ನು ನೋಡುತ್ತ ಬಹಳ ಉದ್ವಿಗ್ನನಾಗಿ ತನ್ನ ಸಚಿವರನ್ನು ಕುರಿತು "ಇವರೀರ್ವರು ದುರ್ಗಮವಾದ ಈ ಅರಣ್ಯಕ್ಕೆ ಬಂದಿರುವುದನ್ನು ಗಮನಿಸಿದರೆ, ಇವರು ವಾಲಿಯಿಂದ ಪ್ರೇಷಿತರಾಗಿರುವುದೇ ನಿಶ್ಚಯ. ವಂಚನೆಗಾಗಿ ನಾರುಬಟ್ಟೆಯನ್ನುಟ್ಟು ಅತ್ತಿತ್ತ ಅಲೆಯುತ್ತ ಇಲ್ಲಿಗೆ ಬಂದಿದ್ದಾರೆ" ಎಂದನು (೫-೬). ಆ ಸಚಿವರು ಮಹಾಧನುರ್ಧಾರಿಗಳಾದ ರಾಮಲಕ್ಷ್ಮಣರನ್ನು ನೋಡಿ, ಸುಗ್ರೀವನ ಮಾತನ್ನು ನಂಬಿ (ಇತರ ಕಪಿಗಳನ್ನು ಕರೆತರುವುದಕ್ಕಾಗಿ) ಆ ಗಿರಿಪ್ರಾಂತವನ್ನು ಬಿಟ್ಟು ಉನ್ನತವಾದ ಇನ್ನೊಂದು ಗಿರಿಶಿಖರವನ್ನೇರಿದರು. ಆ ಸಚಿವರ ಮಾತನ್ನು ಕೇಳಿ ಇತರ ಕಪಿಗಳು ತಮಗೊಡೆಯನಾದ ಸುಗ್ರೀವನ ಸುತ್ತಲೂ ಕಾವಲಾಗಿ ನಿಲ್ಲಲು ಬಂದರು (೭-೮). ಬಲಶಾಲಿಗಳಾದ ಆ ಕಪಿಗಳು ಗಿರಿಶಿಖರಗಳನ್ನು ನಡುಗಿಸುವಂತೆ ಬೆಟ್ಟದಿಂದ ಬೆಟ್ಟಕ್ಕೆ ನೆಗೆಯುತ್ತ, ಪುಷ್ಪಿತವೃಕ್ಷಗಳನ್ನು ಮುರಿದು ಈಡಾಡುತ್ತ, ಜಿಂಕೆ ಕಾಡುಬೆಕ್ಕು ಹುಲಿ ಮೊದಲಾದ ಮೃಗಗಳನ್ನು ಬೆದರಿಸುತ್ತ ಸುಗ್ರೀವನಿದ್ದಲ್ಲಿಗೆ ಬಂದರು (೯-೧೧).

ತತಃ ಸುಗ್ರೀವಸಚಿವಾಃ ಪರ್ವತೇಂದ್ರಂ ಸಮಾಶ್ರಿತಾಃ ।
ಸಂಗಮ್ಯ ಕಪಿಮುಖ್ಯೇನ ಸರ್ವೇ ಪ್ರಾಂಜಲಯಃ ಸ್ಥಿತಾಃ ॥ ೧೨

ತತಸ್ತಂ ಭಯಸಂವಿಗ್ನಂ ವಾಲಿಕಿಲ್ಬಿಷಶಂಕಿತಮ್ ।
ಉವಾಚ ಹನುಮಾನ್ ವಾಕ್ಯಂ ಸುಗ್ರೀವಂ ವಾಕ್ಯಕೋವಿದಃ ॥ ೧೩

ಸಂಭ್ರಮಸ್ತ್ಯಜ್ಯತಾಮೇಷ ಸರ್ವೈರ್ವಾಲಿಕೃತೇ ಮಹಾನ್ ।
ಮಲಯೋಽಯಂ ಗಿರಿವರೋ ಭಯಂ ನೇಹಾಸ್ತಿ ವಾಲಿನಃ ॥ ೧೪

ಯಸ್ಮಾದುದ್ವಿಗ್ನಚೇತಾಸ್ತ್ವಂ ಪ್ರದ್ರುತೋ ಹರಿಪುಂಗವ ।
ತಂ ಕ್ರೂರದರ್ಶನಂ ಕ್ರೂರಂ ನೇಹ ಪಶ್ಯಾಮಿ ವಾಲಿನಮ್ ॥ ೧೫

ಯಸ್ಮಾತ್ತವ ಭಯಂ ಸೌಮ್ಯ ಪೂರ್ವಜಾತ್ ಪಾಪಕರ್ಮಣಃ ।
ಸ ನೇಹ ವಾಲೀ ದುಷ್ಟಾತ್ಮಾ ನ ತೇ ಪಶ್ಯಾಮ್ಯಹಂ ಭಯಮ್ ॥ ೧೬

ಅಹೋ ಶಾಖಾಮೃಗತ್ವಂ ತೇ ವ್ಯಕ್ತಮೇವ ಪ್ಲವಂಗಮ ।
ಲಘುಚಿತ್ತತಯಾತ್ಮಾನಂ ನ ಸ್ಥಾಪಯಸಿ ಯೋ ಮತೌ ॥ ೧೭

---

ಸುಗ್ರೀವನ ಸಚಿವರೂ ಮತ್ತಿತರ ಕಪಿಗಳೂ ಋಷ್ಯಮೂಕಪರ್ವತವನ್ನೇರಿ ತಮ್ಮ ಒಡೆಯನ ಸುತ್ತಲೂ ಕೈಮುಗಿದು ನಿಂತರು. ಆಗ ವಾಲಿಯ ಕಪಟವಿದೆಂದು ಶಂಕಿತನಾಗಿ ಭಯದಿಂದ ದಿಕ್ಕುಗೆಟ್ಟಿದ್ದ ಸುಗ್ರೀವನನ್ನು ನೋಡಿ ವಾಕ್ಯಕೋವಿದನಾದ ಹನುಮಂತನು ಹೀಗೆಂದನು (೧೨-೧೩): "ಸುಗ್ರೀವ, ಈ ಸಂಭ್ರಮವು ಏತಕ್ಕಾಗಿ? ವಾಲಿಯ ಭಯವಿದೆಯೆಂಬ ಶಂಕೆಯನ್ನು ಸರ್ವರೂ ತ್ಯಜಿಸಿರಿ. ಇದು ಋಷ್ಯಮೂಕಪರ್ವತವಲ್ಲವೆ* ? ಇಲ್ಲಿ ವಾಲಿಯ ಭಯವೆಲ್ಲಿದೆ ? ವಾನರೋತ್ತಮ-ಸುಗ್ರೀವ, ಯಾರಿಗೆ ಹೆದರಿ ನೀನು ಓಡಿಬಂದೆಯೋ ಅಂಥ ಕ್ರೂರಾತ್ಮನಾದ ವಾಲಿಯನ್ನು ನಾನು ಕಾಣೆನಲ್ಲ! (೧೪-೧೫). ಸೌಮ್ಯ, ನಿನ್ನ ಅಣ್ಣನಾದ ಆ ಪಾಪಿಯಿಂದ ತಾನೆ ನಿನಗೆ ಹೆದರಿಕೆ? ದುಷ್ಟನಾದ ಆ ವಾಲಿ ಇಲ್ಲಿಲ್ಲ. ನಿನ್ನ ಅಂಜಿಕೆಗೆ ಕಾರಣವನ್ನೇನೂ ನಾನು ಕಾಣೆ. ಆಹಾ! ನೀನು ಶಾಖಾಮೃಗವೆಂಬುದು ಸ್ಪಷ್ಟವಾಯಿತು! ನೀನು ಚಪಲಚಿತ್ತನಾದ್ದರಿಂದ ಸರಿಯಾದ ವಿಮರ್ಶೆಗೆ

---

* ಮಲಯ = ಮಲಯಪರ್ವತಶ್ರೇಣಿಯಲ್ಲಿರುವ ಋಷ್ಯಮೂಕ.

ಬುದ್ಧಿವಿಜ್ಞಾನಸಂಪನ್ನ ಇಂಗಿತೈಃ ಸರ್ವಮಾಚರ ।
ನ ಹ್ಯಬುದ್ಧಿಂ ಗತೋ ರಾಜಾ ಸರ್ವಭೂತಾನಿ ಶಾಸ್ತಿ ಹಿ ॥ ೧೮

ಸುಗ್ರೀವಸ್ತು ಶುಭಂ ವಾಕ್ಯಂ ಶ್ರುತ್ವಾ ಸರ್ವಂ ಹನೂಮತಃ ।
ತತಃ ಶುಭತರಂ ವಾಕ್ಯಂ ಹನೂಮಂತಮುವಾಚ ಹ ॥ ೧೯

ದೀರ್ಘಬಾಹೂ ವಿಶಾಲಾಕ್ಷೌ ಶರಚಾಪಾಸಿಧಾರಿಣೌ ।
ಕಸ್ಯ ನ ಸ್ಯಾದ್ಭಯಂ ದೃಷ್ಟ್ವಾ ಹ್ಯೇತೌ ಸುರಸುತೋಪಮೌ ॥ ೨೦

ವಾಲಿಪ್ರಣಿಹಿತಾವೇತೌ ಶಂಕೇಽಹಂ ಪುರುಷೋತ್ತಮೌ ।
ರಾಜಾನೋ ಬಹುಮಿತ್ರಾಶ್ಚ ವಿಶ್ವಾಸೋ ನಾತ್ರ ಹಿ ಕ್ಷಮಃ ॥ ೨೧

ಅರಯಶ್ಚ ಮನುಷ್ಯೇಣ ವಿಜ್ಞೇಯಾಶ್ಛನ್ನಚಾರಿಣಃ ।
ವಿಶ್ವಸ್ತಾನಾಮವಿಶ್ವಸ್ತಾ ರಂಧ್ರೇಷು ಪ್ರಹರಂತಿ ಹಿ ॥ ೨೨

ಕೃತ್ಯೇಷು ವಾಲೀ ಮೇಧಾವೀ ರಾಜಾನೋ ಬಹುದರ್ಶನಾಃ ।
ಭವಂತಿ ಪರಹಂತಾರಸ್ತೇ ಜ್ಞೇಯಾಃ ಪ್ರಾಕೃತೈರ್ನರೈಃ ॥ ೨೩

---

ಬುದ್ಧಿಯನ್ನು ಉಪಯೋಗಿಸಲಿಲ್ಲ (೧೬-೧೭). ವಿಚಾರ ವಿವೇಕಗಳನ್ನುಪಯೋಗಿಸಿ ಪರೇಂಗಿತವನ್ನರಿತು ಕಾರ್ಯದಲ್ಲಿ ಉದ್ಯುಕ್ತನಾಗು. ವಿಚಾರ ವಿವೇಕಗಳಿಲ್ಲದ ರಾಜನು ಪ್ರಜೆಗಳನ್ನು ಪಾಲಿಸಲಾರ" ಎಂದನು. ಹೀಗೆ ಹನುಮಂತನಾಡಿದ ಯುಕ್ತಿಯುಕ್ತವಾದ ಮಾತೆಲ್ಲವನ್ನೂ ಗಮನಿಸಿ, ಸುಗ್ರೀವನು ಯುಕ್ತತರವಾದ ಮಾತನ್ನಾಡಿದನು (೧೮-೧೯): "ಹನುಮಂತ, ಅವರೀರ್ವರು ಆಜಾನುಬಾಹುಗಳೂ ವಿಶಾಲಾಕ್ಷರೂ ಆಗಿದ್ದಾರೆ. ಧನುರ್ಬಾಣಗಳನ್ನೂ ಖಡ್ಗಗಳನ್ನೂ ಧರಿಸಿದ್ದಾರೆ ದೇವಕುಮಾರರಂತಿರುವ ಅವರನ್ನು ನೋಡಿದರೆ ಯಾರಿಗೆ ತಾನೆ ಭಯವಾಗದು ? ಈ ನರಶ್ರೇಷ್ಠರನ್ನು ವಾಲಿಯು ಕಳಿಸಿರಬಹುದೆಂದು ನನಗೆ ಸಂದೇಹವಾಗಿದೆ. ರಾಜರಿಗೆ ಬಹುಮಂದಿ ಸ್ನೇಹಿತರಿರುತ್ತಾರೆ. ಆದ್ದರಿಂದ ಇವರನ್ನು ನಂಬುವುದು ಯೋಗ್ಯವಲ್ಲ (೨೦-೨೧). ವೈರಿಗಳು ಗೂಢವೃತ್ತಿಯಿಂದ ಸಂಚರಿಸುವರೆಂಬುದನ್ನು ಮನುಷ್ಯನು ಅರಿತಿರಬೇಕು. ಅವರು ಇತರರಿಗೆ ನಂಬಿಕೆಯನ್ನು ಹುಟ್ಟಿಸಿ ತಾವು ಮಾತ್ರ ಯಾರನ್ನೂ ನಂಬದೆ, ಸಮಯದಲ್ಲಿ ಕೈಕೊಡುತ್ತಾರೆ (೨೨). ಇಂತಹ ಕಾರ್ಯದಲ್ಲಿ ವಾಲಿಯು ಬಹಳ ಚತುರ. ರಾಜರು

ತೌ ತ್ವಯಾ ಪ್ರಾಕೃತೇನೇವ ಗತ್ವಾ ಜ್ಞೇಯೌ ಪ್ಲವಂಗಮ ।
ಇಂಗಿತಾನಾಂ ಪ್ರಕಾರೈಶ್ಚ ರೂಪವ್ಯಾಭಾಷಣೇನ ಚ ॥ ೨೪

ಲಕ್ಷಯಸ್ವ ತಯೋರ್ಭಾವಂ ಪ್ರಹೃಷ್ಟಮನಸೌ ಯದಿ ।
ವಿಶ್ವಾಸಯನ್ ಪ್ರಶಂಸಾಭಿರಿಂಗಿತೈಶ್ಚ ಪುನಃ ಪುನಃ ॥ ೨೫

ಮಮೈವಾಭಿಮುಖಂ ಸ್ಥಿತ್ವಾ ಪೃಚ್ಛ ತ್ವಂ ಹರಿಪುಂಗವ ।
ಪ್ರಯೋಜನಂ ಪ್ರವೇಶಸ್ಯ ವನಸ್ಯಾಸ್ಯ ಧನುರ್ಧರೌ ॥ ೨೬

ಶುದ್ಧಾತ್ಮಾನೌ ಯದಿ ತ್ವೇತೌ ಜಾನೀಹಿ ತ್ವಂ ಪ್ಲವಂಗಮ ।
ವ್ಯಾಭಾಷಿತೈರ್ವಾ ವಿಜ್ಞೇಯಾ ಸ್ಯಾದ್ದುಷ್ಟಾದುಷ್ಟತಾ ತಯೋಃ ॥ ೨೭

ಇತ್ಯೇವಂ ಕಪಿರಾಜೇನ ಸಂದಿಷ್ಟೋ ಮಾರುತಾತ್ಮಜಃ ।
ಚಕಾರ ಗಮನೇ ಬುದ್ಧಿಂ ಯತ್ರ ತೌ ರಾಮಲಕ್ಷ್ಮಣೌ ॥ ೨೮

---

ವಿವಿಧೋಪಾಯಗಳನ್ನು ಬಲ್ಲವರು. ಆ ಉಪಾಯಗಳಿಂದ ಆಗದವರನ್ನು ಸಂಹರಿಸುತ್ತಾರೆ ಅವರನ್ನು ಜನರು ಉದಾಸೀನವೃತ್ತಿಯಿಂದ ದೀನರಂತೆ ಹೋಗಿ ಭೇದಿಸಿ ತಿಳಿಯಬೇಕು (೨೩). ಹನುಮಂತ, ನೀನು ಉದಾಸೀನನಂತೆ ದೀನವೇಷಧಾರಿಯಾಗಿ ಹೋಗಿ ಅವರಿಬ್ಬರು ಯಾರೆಂದು ತಿಳಿದುಬಾ. ಅವರ ಮನೋಗತವನ್ನು ಸೂಚಿಸುವ ಚೇಷ್ಟೆಗಳನ್ನೂ ರೂಪವನ್ನೂ ಮಾತಿನ ಜಾಡನ್ನೂ ಸೂಕ್ಷ್ಮವಾಗಿ ಪರಿಶೀಲಿಸು (೨೪). ಪರಿಶೀಲಿಸಿ, ಅವರು ಸಂತುಷ್ಟಚಿತ್ತರಾಗಿರುವರೋ ಹೇಗೆಂದು ಅವರ ಹೃದ್ಗತವನ್ನು ತಿಳಿದುಕೊ. ಅವರನ್ನು ಹೊಗಳಿ ನಿನ್ನಲ್ಲಿ ನಂಬಿಕೆಯಾಗುವಂತೆ ಮಾಡು. ಅವರ ಇಂಗಿತಗಳನ್ನು ಮತ್ತೆ ಮತ್ತೆ ಗಮನಿಸುತ್ತಿರು. ನೀನು ನನಗೆ ಕಾಣುವಂತೆ ನನಗೆ ಅಭಿಮುಖವಾಗಿ ನಿಂತು ಅವರೊಂದಿಗೆ ಪ್ರಶ್ನೆಮಾಡು ! ಧನುರ್ಧಾರಿಗಳಾಗಿ ಈ ವನಕ್ಕೆ ಬಂದ ಕಾರಣವೇನೆಂದು ಕೇಳು (೨೫-೨೬). ಹೇ ವಾನರೋತ್ತಮ, ಅವರು ಪರಿಶುದ್ಧಹೃದಯರೋ ಹೇಗೆಂಬುದನ್ನು ಗೊತ್ತುಮಾಡು. ಅನ್ಯೋನ್ಯ ಸಂಭಾಷಣೆಯಿಂದ ಅವರು ದುಷ್ಟರೋ ಶಿಷ್ಟರೋ ಎಂದು ತಿಳಿಯಬಹುದು" ಎಂದು ಹೇಳಿದನು. ಹೀಗೆ ಸುಗ್ರೀವನು ಸಂದೇಶವನ್ನೀಯಲು ವಾಯುಪುತ್ರನಾದ ಹನುಮಂತನು ಶ್ರೀರಾಮಲಕ್ಷ್ಮಣರಿದ್ದಲ್ಲಿಗೆ ಹೋಗ

**ತಥೇತಿ ಸಂಪೂಜ್ಯ ವಚಸ್ತು ತಸ್ಯ ತತ್**
**ಕಪೇಃ ಸುಭೀತಸ್ಯ ದುರಾಸದಸ್ಯ ಚ ।**
**ಮಹಾನುಭಾವೋ ಹನುಮಾನ್ ಯಯೌ ತದಾ**
**ಸ ಯತ್ರ ರಾಮೋಽತಿಬಲಶ್ಚ ಲಕ್ಷ್ಮಣಃ ॥** ೨೯

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ದ್ವಿತೀಯಃ ಸರ್ಗಃ

---

## ತೃತೀಯಃ ಸರ್ಗಃ

### ಹನೂಮತ್ಪ್ರೇಷಣಮ್

**ವಚೋ ವಿಜ್ಞಾಯ ಹನುಮಾನ್ ಸುಗ್ರೀವಸ್ಯ ಮಹಾತ್ಮನಃ ।**
**ಪರ್ವತಾದೃಶ್ಯಮೂಕಾತ್ತು ಪುಪ್ಲುವೇ ಯತ್ರ ರಾಘವೌ ॥** ೧
**ಕಪಿರೂಪಂ ಪರಿತ್ಯಜ್ಯ ಹನುಮಾನ್ ಮಾರುತಾತ್ಮಜಃ ।**
**ಭಿಕ್ಷುರೂಪಂ ತತೋ ಭೇಜೇ ಶಠಬುದ್ಧಿತಯಾ ಕಪಿಃ ॥** ೨

---

ಬೇಕೆಂದು ನಿರ್ಧರಿಸಿದನು (೨೭–೨೮). ಪರಾಕ್ರಮಿಯಾದರೂ ಸುಗ್ರೀವನು ಭೀತನಾಗಿದ್ದನು. ಸಮರ್ಥನಾದ ಹನುಮಂತನು ಆತನ ಮಾತನ್ನು ಮನ್ನಿಸಿ ಬಲಾಢ್ಯರಾದ ರಾಮಲಕ್ಷ್ಮಣರಿದ್ದಲ್ಲಿಗೆ ಹೊರಡಲು ಸನ್ನದ್ಧನಾದನು (೨೯).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಎರಡನೆಯ ಸರ್ಗ

---

## ಸರ್ಗ ೩

ಹನುಮಂತನು ಶ್ರೀರಾಮಲಕ್ಷ್ಮಣರ ಬಳಿಗೆ ಬಂದು ಅವರನ್ನು ಪ್ರಶಂಸಿಸುವುದು. ಶ್ರೀರಾಮನ ಸಂತೋಷ. ಲಕ್ಷ್ಮಣನ ಉತ್ತರ.

ಹನುಮಂತನು ಮಹಾತ್ಮನಾದ ಸುಗ್ರೀವನ ಅಭಿಪ್ರಾಯವನ್ನು ತಿಳಿದುಕೊಂಡು ಋಷ್ಯಮೂಕಪರ್ವತದಿಂದ ಶ್ರೀರಾಮಲಕ್ಷ್ಮಣರಿದ್ದಲ್ಲಿಗೆ ಧುಮುಕಿದನು. ಮಾರುತಾತ್ಮಜನಾದ ಹನುಮಂತನು ಕಪಿರೂಪವನ್ನು ಪರಿತ್ಯಜಿಸಿ ಭಿಕ್ಷುವೇಷವನ್ನು ಧರಿಸಿದನು. ವಾಲಿಯು ವಂಚಕನೆಂದು ಭಾವಿಸಿ 'ಶಠಂ

ತತಃ ಸ ಹನುಮಾನ್ ವಾಚಾ ಶ್ಲಕ್ಷ್ಣಯಾ ಸುಮನೋಜ್ಞಯಾ ।
ವಿನೀತವದುಪಾಗಮ್ಯ ರಾಘವೌ ಪ್ರಣಿಪತ್ಯ ಚ ॥ ೩

ಆಬಭಾಷೇಽಥ ತೌ ವೀರೌ ಯಥಾವತ್ ಪ್ರಶಶಂಸ ಚ ।
ಸಂಪೂಜ್ಯ ವಿಧಿವದ್ವೀರೌ ಹನುಮಾನ್ ಮಾರುತಾತ್ಮಜಃ ॥ ೪

ಉವಾಚ ಕಾಮತೋ ವಾಕ್ಯಂ ಮೃದು ಸತ್ಯಪರಾಕ್ರಮೌ ।
ರಾಜರ್ಷಿದೇವಪ್ರತಿಮೌ ತಾಪಸೌ ಸಂಶಿತವ್ರತೌ ॥ ೫

ದೇಶಂ ಕಥಮಿಮಂ ಪ್ರಾಪ್ತೌ ಭವಂತೌ ವರವರ್ಣಿನೌ ।
ತ್ರಾಸಯಂತೌ ಮೃಗಗಣಾನನ್ಯಾಂಶ್ಚ ವನಚಾರಿಣಃ ॥ ೬

ಪಂಪಾತೀರರುಹಾನ್ ವೃಕ್ಷಾನ್ ವೀಕ್ಷಮಾಣೌ ಸಮಂತತಃ ।
ಇಮಾಂ ನದೀಂ ಶುಭಜಲಾಂ ಶೋಭಯಂತೌ ತಪಸ್ವಿನೌ ॥ ೭

ಧೈರ್ಯವಂತೌ ಸುವರ್ಣಾಭೌ ಕೌ ಯುವಾಂ ಚೀರವಾಸಸೌ ।
ನಿಃಶ್ವಸಂತೌ ವರಭುಜೌ ಪೀಡಯಂತಾವಿಮಾಃ ಪ್ರಜಾಃ ॥ ೮

---

ಪ್ರತಿ ಶಾಠ್ಯಮ್' ಎಂಬ ನ್ಯಾಯದಂತೆ ತನ್ನ ರೂಪವನ್ನು ಮರೆಸಿಕೊಂಡನು (೧-೨) ಅವನು ವಿನೀತನಂತೆ ರಾಮಲಕ್ಷ್ಮಣರ ಬಳಿಗೆ ಬಂದು ನಮಸ್ಕರಿಸಿ, ಮೃದುಮನೋಜ್ಞವಾದ ವಚನದಿಂದ ಅವರನ್ನು ಮಾತನಾಡಿಸತೊಡಗಿದನು. ಹನುಮಂತನು ಆ ವೀರರನ್ನು ಆದರದಿಂದ ಕಂಡು ಯಥಾವತ್ತಾಗಿ ಪ್ರಶಂಸೆ ಮಾಡುತ್ತ ಸಂಭಾಷಿಸಿದನು (೩-೪). ಸತ್ಯಸಂಧರಾದ ಅವರನ್ನುದ್ದೇಶಿಸಿ ತನಗೆ ಸರಿಯೆನಿಸಿದಂತೆ ಮೃದುವಾಗಿ ಹೇಳಿದನು: "ಎಲೈ ಮಹಾತ್ಮರೆ, ರಾಜರ್ಷಿಗಳಂತೆಯೂ ದೇವಕುಮಾರರಂತೆಯೂ ಇರುವ ನೀವು ಕಠಿಣವ್ರತವನ್ನು ಕೈಕೊಂಡು ತಾಪಸವೇಷವನ್ನು ಧರಿಸಿದ್ದೀರಿ (೫). ನೀವಿಬ್ಬರೂ ಸ್ನಿಗ್ಧವಾದ ಮೈಬಣ್ಣವುಳ್ಳವರಾಗಿದ್ದೀರಿ ನೀವು ಈ ಪ್ರಾಂತಕ್ಕೆ ಯಾವ ನಿಮಿತ್ತದಿಂದ ಬಂದಿರಬಹುದು ? ಈ ಕಾಡಿನಲ್ಲಿರುವ ಮೃಗಗಳನ್ನೂ ಇತರ ವನಚಾರಿಗಳನ್ನೂ ನಿಮ್ಮ ಆಕೃತಿಯಿಂದಲೇ ಅಂಜಿಸುತ್ತಿರುವಿರಿ (೬). ಪಂಪಾತೀರದಲ್ಲಿರುವ ವೃಕ್ಷಗಳನ್ನು ಸುತ್ತಲೂ ವೀಕ್ಷಿಸುತ್ತಿದ್ದೀರಿ ಇಲ್ಲಿ ಹರಿಯುವ ತಿಳಿನೀರಿನ ಈ ನದಿಗೆ ತಪಸ್ವಿಗಳಾದ ನಿಮ್ಮ ಆಗಮನದಿಂದ ಅಪೂರ್ವವಾದ ಒಂದು ಶೋಭೆಯುಂಟಾಗಿದೆ. ಧೀರರಾದ ನೀವು ಸುವರ್ಣ

ಸಿಂಹವಿಪ್ರೇಕ್ಷಿತೌ ವೀರೌ ಸಿಂಹಾತಿಬಲವಿಕ್ರಮೌ ।
ಶಕ್ರಚಾಪನಿಭೇ ಚಾಪೇ ಗೃಹೀತ್ವಾ ಶತ್ರುಸೂದನೌ ॥ ೯

ಶ್ರೀಮಂತೌ ರೂಪಸಂಪನ್ನೌ ವೃಷಭಶ್ರೇಷ್ಠವಿಕ್ರಮೌ ।
ಹಸ್ತಿಹಸ್ತೋಪಮಭುಜೌ ದ್ಯುತಿಮಂತೌ ನರರ್ಷಭೌ ॥ ೧೦

ಪ್ರಭಯಾ ಪರ್ವತೇಂದ್ರೋಽಯಂ ಯುವಯೋರವಭಾಸಿತಃ ।
ರಾಜ್ಯಾರ್ಹಾವಮರಪ್ರಖ್ಯೌ ಕಥಂ ದೇಶಮಿಹಾಗತೌ ॥ ೧೧

ಪದ್ಮಪತ್ರೇಕ್ಷಣೌ ವೀರೌ ಜಟಾಮಂಡಲಧಾರಿಣೌ ।
ಅನ್ಯೋನ್ಯಸದೃಶೌ ವೀರೌ ದೇವಲೋಕಾದಿವಾಗತೌ ॥ ೧೨

ಯದೃಚ್ಛಯೇವ ಸಂಪ್ರಾಪ್ತೌ ಚಂದ್ರಸೂರ್ಯೌ ವಸುಂಧರಾಮ್ ।
ವಿಶಾಲವಕ್ಷಸೌ ವೀರೌ ಮಾನುಷೌ ದೇವರೂಪಿಣೌ ॥ ೧೩

---

ದಂತೆ ಥಳಥಳಿಸುವ ನಿಮ್ಮ ದೇಹದಮೇಲೆ ನಾರುಬಟ್ಟೆಗಳನ್ನು ಸುತ್ತಿಕೊಂಡಿದ್ದೀರಲ್ಲ! (ಮಾರ್ಗಾಯಾಸದಿಂದ) ನಿಟ್ಟುಸಿರುಬಿಡುತ್ತಿದ್ದೀರಿ. ಆಜಾನುಬಾಹುಗಳಾದ ನಿಮ್ಮನ್ನು ಕಂಡು ಇಲ್ಲಿರುವ ಪ್ರಾಣಿಗಳು ಹೆದರುತ್ತಿವೆ (೭-೮). ನಿಮ್ಮ ನೋಟವು ಸಿಂಹಗಳ ನೋಟದಂತೆ ಗಂಭೀರವಾಗಿದೆ. ಪರಾಕ್ರಮದಲ್ಲಿ ಸಿಂಹಗಳನ್ನು ಮೀರಿಸುವ ವೀರಾಗ್ರಣಿಗಳು ನೀವು. ಇಂದ್ರಚಾಪಗಳಂತಿರುವ ದಿವ್ಯಚಾಪಗಳನ್ನು ಹಿಡಿದಿರುವ ಶತ್ರುಸೂದನರು ನೀವು (೯). ಕಾಂತಿಶಾಲಿಗಳೂ ರೂಪಸಂಪನ್ನರೂ ಆಗಿದ್ದೀರಿ. ಮಹಾವೃಷಭದಂತೆ ಹೆಜ್ಜೆಯಿಡುತ್ತಿದ್ದೀರಿ. ನಿಮ್ಮ ದೀರ್ಘಬಾಹುಗಳು ಆನೆಯ ಶುಂಡಾದಂಡದಂತೆ ಮನೋಹರವಾಗಿವೆ ತೇಜೋವಂತರಾದ ನರಶ್ರೇಷ್ಠರು ನೀವು (೧೦). ನಿಮ್ಮ ಪ್ರಭೆಯಿಂದ ಈ ಪರ್ವತರಾಜನು ಬೆಳಗುತ್ತಿದ್ದಾನೆ. ದೇವತಾಸದೃಶರಾದ ನೀವು ರಾಜ್ಯವನ್ನಾಳಲು ಅರ್ಹರಾಗಿದ್ದೀರಿ. ನೀವು ಈ ವನಪ್ರದೇಶಕ್ಕೆ ಬಂದ ನಿಮಿತ್ತವಾದರೂ ಯಾವುದು? ವೀರಾಗ್ರೇಸರರಾದ ನಿಮ್ಮ ನೇತ್ರಗಳು ಪದ್ಮದಳದಂತಿವೆ. ಜಟೆಗಳನ್ನು ಧರಿಸಿದ್ದೀರಿ. ರೂಪಲಾವಣ್ಯಗಳಲ್ಲಿ ಒಬ್ಬರಿಗೊಬ್ಬರು ಹೋಲುತ್ತಿದ್ದೀರಿ. ಶೂರರಾದ ನೀವು ದೇವಲೋಕದಿಂದ ಇಳಿದು ಬಂದಂತೆ ಕಾಣುತ್ತೀರಿ (೧೧-೧೨). ನಿಮ್ಮನ್ನು ನೋಡಿದರೆ ಚಂದ್ರಸೂರ್ಯರೇ ಸ್ವೇಚ್ಛೆಯಾಗಿ ಧರೆಗೆ ಬಂದಂತೆ ಕಾಣುತ್ತದೆ. ವಿಶಾಲವಕ್ಷರಾದ

ಸಿಂಹಸ್ಕಂಧೌ ಮಹೋತ್ಸಾಹೌ ಸಮದಾವಿವ ಗೋವೃಷೌ ।
ಆಯತಾಶ್ಚ ಸುವೃತ್ತಾಶ್ಚ ಬಾಹವಃ ಪರಿಘೋಪಮಾಃ ॥ ೧೪

ಸರ್ವಭೂಷಣಭೂಷಾರ್ಹಾಃ ಕಿಮರ್ಥಂ ನ ವಿಭೂಷಿತಾಃ ।
ಉಭೌ ಯೋಗ್ಯಾವಹಂ ಮನ್ಯೇ ರಕ್ಷಿತುಂ ಪೃಥಿವೀಮಿಮಾಮ್ ॥ ೧೫

ಸಸಾಗರವನಾಂ ಕೃತ್ಸ್ನಾಂ ವಿಂಧ್ಯಮೇರುವಿಭೂಷಿತಾಮ್ ।
ಇಮೇ ಚ ಧನುಷೀ ಚಿತ್ರೇ ಶ್ಲಕ್ಷ್ಣೇ ಚಿತ್ರಾನುಲೇಪನೇ ॥ ೧೬

ಪ್ರಕಾಶೇತೇ ಯಥೇಂದ್ರಸ್ಯ ವಜ್ರೇ ಹೇಮವಿಭೂಷಿತೇ ।
ಸಂಪೂರ್ಣಾ ನಿಶಿತೈರ್ಬಾಣೈಸ್ತೂಣಾಶ್ಚ ಶುಭದರ್ಶನಾಃ ॥ ೧೭

ಜೀವಿತಾಂತಕರೈರ್ಘೋರೈಃ ಶ್ವಸದ್ಭಿರಿವ ಪನ್ನಗೈಃ ।
ಮಹಾಪ್ರಮಾಣೌ ವಿಸ್ತೀರ್ಣೌ ತಪ್ತಹಾಟಕಭೂಷಿತೌ ॥ ೧೮

---

ನೀವು ದೇವರೂಪಿಗಳಾದ ಮಾನುಷರಾಗಿರಬಹುದೆ? (೧೩) ಸಿಂಹಸ್ಕಂಧರೂ ಉತ್ಸಾಹಶಾಲಿಗಳೂ ಆದ ನೀವು ಮದಿಸಿದ ವೃಷಭಗಳಂತೆ ಗೋಚರಿಸುತ್ತೀರಿ. ಪರಿಘದಂತೆ ನಿಮ್ಮ ಬಾಹುಗಳು ದೀರ್ಘವಾಗಿ ದುಂಡಾಗಿವೆ. ಈ ಬಾಹುಗಳು ಸಕಲಭೂಷಣಗಳಿಂದ ಭೂಷಿತವಾಗಬೇಕಾಗಿದ್ದರೂ ಭೂಷಣಗಳನ್ನು ತೊಡದಿರಲು ಕಾರಣವೇನು ? ನೀವಿಬ್ಬರೂ ಈ ಜಗತ್ತನ್ನೇ ಸಂರಕ್ಷಿಸಲು ಸಮರ್ಥರೆಂದು ನನ್ನ ಮನಸ್ಸಿಗೆ ತೋರುತ್ತದೆ (೧೪-೧೫). ಸಮುದ್ರಾಂತವಾಗಿ ಅರಣ್ಯಗಳಿಂದಲೂ ವಿಂಧ್ಯಮೇರುಪರ್ವತಗಳಿಂದಲೂ ಯುಕ್ತವಾದ ಸಮಸ್ತಭೂಮಂಡಲವನ್ನೇ ನೀವು ರಕ್ಷಿಸಬಲ್ಲಿರಿ. ನುಣುಪಾಗಿಯೂ ಚಿತ್ರಾಕಾರವಾದ ಸುವರ್ಣಾನುಲೇಪನವುಳ್ಳದ್ದಾಗಿಯೂ ಇರುವ ಈ ಅದ್ಭುತಧನುಸ್ಸುಗಳು ದೇವೇಂದ್ರನ ಹೇಮಭೂಷಿತವಾದ ವಜ್ರಾಯುಧದಂತೆ ಕಂಗೊಳಿಸುತ್ತಿವೆ ಸುಂದರಾಕೃತಿಯ ಬತ್ತಳಿಕೆಗಳು ನಿಶಿತಾಸ್ತ್ರಗಳಿಂದ ತುಂಬಿವೆ (೧೬-೧೭). ಘೋರವಾದ ಈ ಅಸ್ತ್ರಗಳು ಶತ್ರುವಿನ ಜೀವಿತವನ್ನು ಕೊನೆಗಾಣಿಸಬಲ್ಲವು. ಇವು ರೋಷದಿಂದ ಬುಸುಗುಟ್ಟುವ ಸರ್ಪಗಳಂತೆ ಕಾಣುತ್ತಿವೆ ಅತಿದೀರ್ಘವಾಗಿಯೂ ಅಗಲವಾಗಿಯೂ ಇರುವ ನಿಮ್ಮ ಖಡ್ಗಗಳು ಚಿನ್ನದ ಹಿಡಿಗಳಿಂದ ಅಲಂಕೃತ

ಖಡ್ಗಾವೇತೌ ವಿರಾಜೇತೇ ನಿರ್ಮುಕ್ತಾವಿವ ಪನ್ನಗೌ ।
ಏವಂ ಮಾಂ ಪರಿಭಾಷಂತಂ ಕಸ್ಮಾದ್ವೈ ನಾಭಿಭಾಷಥಃ ॥ ೧೯

ಸುಗ್ರೀವೋ ನಾಮ ಧರ್ಮಾತ್ಮಾ ಕಶ್ಚಿದ್ವಾನರಯೂಥಪಃ ।
ವೀರೋ ವಿನಿಕೃತೋ ಭ್ರಾತ್ರಾ ಜಗದ್ಭ್ರಮತಿ ದುಃಖಿತಃ ॥ ೨೦

ಪ್ರಾಪ್ತೋಽಹಂ ಪ್ರೇಷಿತಸ್ತೇನ ಸುಗ್ರೀವೇಣ ಮಹಾತ್ಮನಾ ।
ರಾಜ್ಞಾ ವಾನರಮುಖ್ಯಾನಾಂ ಹನೂಮಾನ್ನಾಮ ವಾನರಃ ॥ ೨೧

ಯುವಾಭ್ಯಾಂ ಸಹ ಧರ್ಮಾತ್ಮಾ ಸುಗ್ರೀವಃ ಸಖ್ಯಮಿಚ್ಛತಿ ।
ತಸ್ಯ ಮಾಂ ಸಚಿವಂ ವಿತ್ತಂ ವಾನರಂ ಪವನಾತ್ಮಜಮ್ ॥ ೨೨

ಭಿಕ್ಷುರೂಪಪ್ರತಿಚ್ಛನ್ನಂ ಸುಗ್ರೀವಪ್ರಿಯಕಾಮ್ಯಯಾ ।
ಋಶ್ಯಮೂಕಾದಿಹ ಪ್ರಾಪ್ತಂ ಕಾಮಗಂ ಕಾಮರೂಪಿಣಮ್ ॥ ೨೩

ಏವಮುಕ್ತ್ವಾ ತು ಹನುಮಾಂಸ್ತೌ ವೀರೌ ರಾಮಲಕ್ಷ್ಮಣೌ ।
ವಾಕ್ಯಜ್ಞೌ ವಾಕ್ಯಕುಶಲಃ ಪುನರ್ನೋವಾಚ ಕಿಂಚನ ॥ ೨೪

---

ವಾಗಿವೆ. ಪರೆಯುರ್ಚಿದ ಪನ್ನಗಗಳಂತೆ ಹೊಳೆಯುತ್ತಿವೆ. ಎಲೈ ಮಹಾತ್ಮರೆ, ಈ ಪ್ರಕಾರವಾಗಿ ನಾನು ಮಾತಾಡಿಸುತ್ತಿದ್ದರೂ ನೀವು ಉತ್ತರವನ್ನೇಕೆ ಕೊಡುವುದಿಲ್ಲ? (೧೮-೧೯) (ಒಳ್ಳೆಯದು) ಸುಗ್ರೀವ ನೆಂಬ ಧರ್ಮಾತ್ಮನಾದ ವಾನರೇಂದ್ರನೊಬ್ಬನಿದ್ದಾನೆ ಆ ವೀರನು ಅಣ್ಣನ ಉಪಟಳಕ್ಕೆ ಒಳಗಾಗಿ ದುಃಖದಿಂದ ಈ ಲೋಕದಲ್ಲಿ ಅಲೆಯುತ್ತಿದ್ದಾನೆ (೨೦). ಕಪಿರಾಜನೂ ಮಹಾತ್ಮನೂ ಆದ ಸುಗ್ರೀವನು ನನ್ನನ್ನು ಕಳಿಸಿದ್ದರಿಂದ ಇಲ್ಲಿಗೆ ಬಂದಿದ್ದೇನೆ. ನಾನು ಹನುಮಂತನೆಂಬ ಒಬ್ಬ ವಾನರ. ಧರ್ಮಾತ್ಮ ನಾದ ಸುಗ್ರೀವನು ನಿಮ್ಮೊಡನೆ ಸ್ನೇಹವನ್ನು ಬೆಳೆಸಬೇಕೆಂದಿದ್ದಾನೆ. ನಾನು ಆತನ ಸಚಿವನೆಂದೂ ವಾಯುಪುತ್ರನೆಂದೂ ತಿಳಿಯಿರಿ (೨೧-೨೨). ಸುಗ್ರೀವನಿಗೆ ಹಿತವನ್ನು ಬಯಸಿ ನಾನು ಭಿಕ್ಷುವೇಷದಿಂದ ರೂಪವನ್ನು ಮರೆಸಿಕೊಂಡಿದ್ದೇನೆ. ಋಷ್ಯಮೂಕಗಿರಿಯಿಂದಿಳಿದು ಬಂದಿದ್ದೇನೆ. ನಾನು ಇಷ್ಟಬಂದ ಕಡೆಗೆ ಕ್ಷಣಮಾತ್ರದಲ್ಲಿ ಹೋಗಬಲ್ಲೆ. ಇಷ್ಟಬಂದ ರೂಪವನ್ನು ಧರಿಸಬಲ್ಲೆ" ಎಂದನು. ಮಾತಾಡುವುದರಲ್ಲಿ ನಿಪುಣನಾದ ಹನುಮಂತನು, ಮಾತಿನ ಭಾವವನ್ನು ತಿಳಿಯಬಲ್ಲ ರಾಮಲಕ್ಷ್ಮಣರಿಗೆ ಈ ಪ್ರಕಾರ ಹೇಳಿ

ಏತಚ್ಛ್ರುತ್ವಾ ವಚಸ್ತಸ್ಯ ರಾಮೋ ಲಕ್ಷ್ಮಣಮಬ್ರವೀತ್ ।
ಪ್ರಹೃಷ್ಟವದನಃ ಶ್ರೀಮಾನ್ ಭ್ರಾತರಂ ಪಾರ್ಶ್ವತಃ ಸ್ಥಿತಮ್ ॥ ೨೫

ಸಚಿವೋಽಯಂ ಕಪೀಂದ್ರಸ್ಯ ಸುಗ್ರೀವಸ್ಯ ಮಹಾತ್ಮನಃ ।
ತಮೇವ ಕಾಂಕ್ಷಮಾಣಸ್ಯ ಮಮಾಂತಿಕಮುಪಾಗತಃ ॥ ೨೬

ಅಭಿಭಾಷಸ್ವ ಸೌಮಿತ್ರೇ ಸುಗ್ರೀವಸಚಿವಂ ಕಪಿಮ್ ।
ವಾಕ್ಯಜ್ಞಂ ಮಧುರೈರ್ವಾಕ್ಯೈಃ ಸ್ನೇಹಯುಕ್ತಮರಿಂದಮ ॥ ೨೭

ನಾನೃಗ್ವೇದವಿನೀತಸ್ಯ ನಾಯಜುರ್ವೇದಧಾರಿಣಃ ।
ನಾಸಾಮವೇದವಿದುಷಃ ಶಕ್ಯಮೇವಂ ಪ್ರಭಾಷಿತುಮ್ ॥ ೨೮

ನೂನಂ ವ್ಯಾಕರಣಂ ಕೃತ್ಸ್ನಮನೇನ ಬಹುಧಾ ಶ್ರುತಮ್ ।
ಬಹು ವ್ಯಾಹರತಾನೇನ ನ ಕಿಂಚಿದಪಶಬ್ದಿತಮ್ ॥ ೨೯

ನ ಮುಖೇ ನೇತ್ರಯೋರ್ವಾಪಿ ಲಲಾಟೇ ಚ ಭ್ರುವೋಸ್ತಥಾ ।
ಅನ್ಯೇಷ್ವಪಿ ಚ ಗಾತ್ರೇಷು ದೋಷಃ ಸಂವಿದಿತಃ ಕ್ವಚಿತ್ ॥ ೩೦

---

ಸುಮ್ಮನಾದನು (೨೩–೨೪). ಹನುಮಂತನ ಮಾತನ್ನು ಕೇಳಿ ಶ್ರೀರಾಮನ ಮುಖವು ಅರಳಿತು. ಅವನು ಪಾರ್ಶ್ವದಲ್ಲಿ ನಿಂತಿದ್ದ ತಮ್ಮನಾದ ಲಕ್ಷ್ಮಣನ ಕಡೆಗೆ ತಿರುಗಿ ಉಲ್ಲಾಸದಿಂದ "ಸೌಮಿತ್ರಿ, ಇವನು ಮಹಾತ್ಮನೂ ಕಪೀಂದ್ರನೂ ಆದ ಸುಗ್ರೀವನ ಸಚಿವನಂತೆ. ಅವನನ್ನೇ ಹುಡುಕುತ್ತಿರುವ ನಮ್ಮ ಬಳಿಗೆ ದೈವಿಕವಾಗಿ ಬಂದಿದ್ದಾನೆ (೨೫–೨೬). ಲಕ್ಷ್ಮಣ, ಸುಗ್ರೀವ ಸಚಿವನಾದ ಈತನೊಡನೆ ಮಾತನಾಡು. ಇವನು ಮಾತಿನ ಭಾವವನ್ನು ಅರಿಯಬಲ್ಲ ಮೃದುವಾಕ್ಯಗಳಿಂದ ಸ್ನೇಹಯುಕ್ತವಾಗಿ ಸಂಭಾಷಿಸು (೨೭). ಋಗ್ವೇದ, ಯಜುರ್ವೇದ, ಸಾಮವೇದಗಳನ್ನು ಅರ್ಥಸಹಿತವಾಗಿ ಅಧ್ಯಯನ ಮಾಡದಿರುವವನಿಗೆ ಈ ರೀತಿಯಲ್ಲಿ ಮಾತನಾಡಲು ಶಕ್ಯವಿಲ್ಲ! ಈ ಹನುಮಂತನು ಸಮಸ್ತ ವ್ಯಾಕರಣಶಾಸ್ತ್ರವನ್ನು ಅನೇಕಸಲ ಚೆನ್ನಾಗಿ ವ್ಯಾಸಂಗ ಮಾಡಿರುವುದೇ ನಿಶ್ಚಯ. ಇವನು ಇಷ್ಟು ಮಾತಾಡಿದರೂ ಒಂದು ಅಪಶಬ್ದವೂ ಹೊರಡಲಿಲ್ಲ! (೨೮–೨೯). ಇವನು ಮಾತಾಡುವಾಗ ಮುಖ, ಕಣ್ಣು, ಹಣೆ, ಹುಬ್ಬುಗಳಲ್ಲಾಗಲಿ ಇತರ ಅಂಗಗಳಲ್ಲಾಗಲಿ ಯಾವ ವಿಕಾರವೂ ಕಾಣಿಸಲಿಲ್ಲ. ಮಾತನ್ನು ಅನಾವಶ್ಯಕವಾಗಿ ವಿಸ್ತರಿಸಲಿಲ್ಲ. ಸಂದೇಹಕ್ಕೆ ಎಡೆಯಾಗುವ ಅಸ್ಫುಟವಾದ ಉಚ್ಚಾರಣೆ ಇಲ್ಲ. ಸ್ವಲ್ಪವೂ

ಅವಿಸ್ತರಮಸಂದಿಗ್ಧಮವಿಲಂಬಿತಮದ್ರುತಮ್ ।
ಉರಃಸ್ಥಂ ಕಂಠಗಂ ವಾಕ್ಯಂ ವರ್ತತೇ ಮಧ್ಯಮೇ ಸ್ವರೇ ॥ ೩೧
ಸಂಸ್ಕಾರಕ್ರಮಸಂಪನ್ನಾಮದ್ರುತಾಮವಿಲಂಬಿತಾಮ್ ।
ಉಚ್ಚಾರಯತಿ ಕಲ್ಯಾಣೀಂ ವಾಚಂ ಹೃದಯಹಾರಿಣೀಮ್ ॥ ೩೨
ಅನಯಾ ಚಿತ್ರಯಾ ವಾಚಾ ತ್ರಿಸ್ಥಾನವ್ಯಂಜನಸ್ಥಯಾ ।
ಕಸ್ಯ ನಾರಾಧ್ಯತೇ ಚಿತ್ತಮುದ್ಯತಾಸೇರರೇರಪಿ ॥ ೩೩
ಏವಂವಿಧೋ ಯಸ್ಯ ದೂತೋ ನ ಭವೇತ್ ಪಾರ್ಥಿವಸ್ಯ ತು ।
ಸಿಧ್ಯಂತಿ ಹಿ ಕಥಂ ತಸ್ಯ ಕಾರ್ಯಾಣಾಂ ಗತಯೋಽನಘ ॥ ೩೪
ಏವಂ ಗುಣಗಣೈರ್ಯುಕ್ತಾ ಯಸ್ಯ ಸ್ಯುಃ ಕಾರ್ಯಸಾಧಕಾಃ ।
ತಸ್ಯ ಸಿಧ್ಯಂತಿ ಸರ್ವಾರ್ಥಾ ದೂತವಾಕ್ಯಪ್ರಚೋದಿತಾಃ ॥ ೩೫
ಏವಮುಕ್ತಸ್ತು ಸೌಮಿತ್ರಿಃ ಸುಗ್ರೀವಸಚಿವಂ ಕಪಿಮ್ ।
ಅಭ್ಯಭಾಷತ ವಾಕ್ಯಜ್ಞೋ ವಾಕ್ಯಜ್ಞಂ ಪವನಾತ್ಮಜಮ್ ॥ ೩೬

---

ತಡವರಿಸಲಿಲ್ಲ (ಅರ್ಥವಾಗದಂತೆ) ಬಹುವೇಗವಾಗಿಯೂ ಮಾತಾಡಲಿಲ್ಲ. ಇವನ ವಾಕ್ಯವು ಉರಸ್ಥವೂ ಕಂಠಗವೂ ಆಗಿ ಮಧ್ಯಮಸ್ವರದಲ್ಲಿದೆ* (೩೦-೩೧) ಲಕ್ಷ್ಮಣ, ಈತನು ವ್ಯಾಕರಣಶುದ್ಧವಾಗಿಯೂ ಕ್ರಮಬದ್ಧವಾಗಿಯೂ ಮಾತಾಡುತ್ತಾನೆ. ಈತನ ವಾಕ್ಯರಚನೆ ತ್ವರಿತವೂ ಅಲ್ಲ, ವಿಲಂಬಿತವೂ ಅಲ್ಲ ಮಾತಿನ ಶೈಲಿ ಮಧುರವೂ ಚೇತೋಹಾರಿಯೂ ಆಗಿದೆ (೩೨) ಉರಸ್ಸು, ಕಂಠ, ಶಿರಸ್ಸುಗಳಲ್ಲಿ ಅಭಿವ್ಯಕ್ತವಾಗಿ ಆಶ್ಚರ್ಯಕರವಾದ ಈ ವಾಣಿಯು ಯಾರನ್ನು ಆನಂದಗೊಳಿಸದು? ಕತ್ತರಿಸಲು ಕತ್ತಿಯನ್ನೆತ್ತಿದ ಶತ್ರುವಿನ ಚಿತ್ತವನ್ನೂ ಪ್ರಸನ್ನಗೊಳಿಸುವುದು (೩೩). ಲಕ್ಷ್ಮಣ, ಯಾವ ರಾಜನ ಬಳಿ ಇಂಥ ದೂತರಿಲ್ಲವೊ, ಅವನ ವಿವಿಧರಾಜಕಾರ್ಯಗಳು ಹೇಗೆ ತಾನೆ ಫಲಪ್ರದವಾದಾವು ? ಈ ಬಗೆಯ ಗುಣಗಳಿಂದೊಡಗೂಡಿದ ದೂತರು ಯಾವ ರಾಜನಿಗೆ ಕಾರ್ಯಸಾಧಕರಾಗಿರುವರೊ, ಆತನ ಸಕಲ ಕಾರ್ಯಗಳೂ ಸಿದ್ಧಿಸುತ್ತವೆ; ದೂತನ ವಾಗ್ವೈಭವದಿಂದಲೇ ನೆರವೇರುತ್ತವೆ" ಎಂದು ನುಡಿದನು (೩೪-೩೫). ಆಗ ವಾಕ್ಯಜ್ಞನಾದ

---

* ಅನುಬಂಧವನ್ನು ನೋಡಿ.

ವಿದಿತಾ ನೌ ಗುಣಾ ವಿದ್ವನ್ ಸುಗ್ರೀವಸ್ಯ ಮಹಾತ್ಮನಃ ।
ತಮೇವ ಚಾವಾಂ ಮಾರ್ಗಾವಃ ಸುಗ್ರೀವಂ ಪ್ಲವಗೇಶ್ವರಮ್ ॥ ೩೭

ಯಥಾ ಬ್ರವೀಷಿ ಹನುಮನ್ ಸುಗ್ರೀವವಚನಾದಿಹ ।
ತತ್ತಥಾ ಹಿ ಕರಿಷ್ಯಾವೋ ವಚನಾತ್ತವ ಸತ್ತಮ ॥ ೩೮

ತತಸ್ತಸ್ಯ ವಾಕ್ಯಂ ನಿಪುಣಂ ನಿಶಮ್ಯ
ಪ್ರಹೃಷ್ಟರೂಪಃ ಪವನಾತ್ಮಜಃ ಕಪಿಃ ।
ಮನಃ ಸಮಾಧಾಯ ಜಯೋಪಪತ್ತೌ
ಸಖ್ಯಂ ತದಾ ಕರ್ತುಮಿಯೇಷ ತಾಭ್ಯಾಮ್ ॥ ೩೯

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ತೃತೀಯಃ ಸರ್ಗಃ



ಸೌಮಿತ್ರಿಯು ಸುಗ್ರೀವನ ಮಂತ್ರಿಯಾದ ಹನುಮಂತನನ್ನು ಕುರಿತು "ಎಲೈ ವಿದ್ವಾಂಸನೆ, ಮಹಾತ್ಮನಾದ ಸುಗ್ರೀವನ ಸದ್ಗುಣಗಳನ್ನು ನಾವು ಕೇಳಿಬಲ್ಲೆವು. ವಾನರೇಂದ್ರನಾದ ಆತನನ್ನೇ ನಾವು ಹುಡುಕಿಕೊಂಡು ಬಂದಿದ್ದೇವೆ. ಹನುಮಂತ, ಸುಗ್ರೀವನ ಮಾತಿನಂತೆ ನೀನು ಏನು ಹೇಳುವೆಯೋ, ಅದನ್ನು ಹಾಗೆಯೇ ನಡೆಸುತ್ತೇವೆ" ಎಂದನು (೩೭-೩೮). ಲಕ್ಷ್ಮಣನ ಮಾತನ್ನಾಲಿಸಿ ಆ ವಾಯುಪುತ್ರನು ಸಂತುಷ್ಟನಾದನು. ಮನಸ್ಸಿಗೆ ಸಮಾಧಾನವಾಯಿತು ವಾಲಿಯನ್ನು ಜಯಿಸಲು ದಾರಿಯು ಸಿಕ್ಕಿತೆಂದುಕೊಂಡು, ಅವರೊಡನೆ ಸ್ನೇಹವನ್ನು ಬೆಳೆಸಬೇಕೆಂದು ಹನುಮಂತನು ಉದ್ದೇಶಿಸಿದನು (೩೯).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಮೂರನೆಯ ಸರ್ಗ



## ಚತುರ್ಥಃ ಸರ್ಗಃ

ಸುಗ್ರೀವಸಮೀಪಗಮನಮ್

**ತತಃ ಪ್ರಹೃಷ್ಟೋ ಹನುಮಾನ್ ಕೃತ್ಯವಾನಿತಿ ತದ್ವಚಃ ।**
**ಶ್ರುತ್ವಾ ಮಧುರಭಾವಂ ಚ ಸುಗ್ರೀವಂ ಮನಸಾ ಗತಃ ॥** ೧

**ಭವ್ಯೋ ರಾಜ್ಯಾಗಮಸ್ತಸ್ಯ ಸುಗ್ರೀವಸ್ಯ ಮಹಾತ್ಮನಃ ।**
**ಯದಯಂ ಕೃತ್ಯವಾನ್ ಪ್ರಾಪ್ತಃ ಕೃತ್ಯಂ ಚೈತದುಪಾಗತಮ್ ॥** ೨

**ತತಃ ಪರಮಸಂಹೃಷ್ಟೋ ಹನುಮಾನ್ ಪ್ಲವಗರ್ಷಭಃ ।**
**ಪ್ರತ್ಯುವಾಚ ತತೋ ವಾಕ್ಯಂ ರಾಮಂ ವಾಕ್ಯವಿಶಾರದಃ ॥** ೩

**ಕಿಮರ್ಥಂ ತ್ವಂ ವನಂ ಘೋರಂ ಪಂಪಾಕಾನನಮಂಡಿತಮ್ ।**
**ಆಗತಃ ಸಾನುಜೋ ದುರ್ಗಂ ನಾನಾವ್ಯಾಲಮೃಗಾಯುತಮ್ ॥** ೪

### ಸರ್ಗ ೪

ಲಕ್ಷ್ಮಣನು ಹನುಮಂತನಿಗೆ ತಮ್ಮ ವೃತ್ತಾಂತವನ್ನು ತಿಳಿಸುವುದು.
ಅವರೆಲ್ಲರೂ ಸುಗ್ರೀವನ ಸಮೀಪಕ್ಕೆ ಹೋಗುವುದು.

ಶ್ರೀರಾಮನು ಸುಗ್ರೀವನಲ್ಲಿ ಕಾರ್ಯಾರ್ಥಿಯಾಗಿರುವನೆಂಬ ಲಕ್ಷ್ಮಣನ ಮಾತನ್ನು ಕೇಳಿ ಹನುಮಂತನಿಗೆ ಆನಂದವಾಯಿತು ಸುಗ್ರೀವನ ವಿಷಯದಲ್ಲಿ ರಾಮಲಕ್ಷ್ಮಣರು ಸೌಮ್ಯಭಾವದಲ್ಲಿರುವರೆಂದು ಗೊತ್ತಾಯಿತು. ಅವನು ಮನಸ್ಸಿನಲ್ಲಿ ಸುಗ್ರೀವನನ್ನು ಸ್ಮರಿಸಿಕೊಂಡು, "ಆಹಾ ! ಮಹಾತ್ಮನಾದ ಸುಗ್ರೀವನಿಗೆ ರಾಜ್ಯಪ್ರಾಪ್ತಿಯು ಮಂಗಳಕರವಾಗಿ ಸನ್ನಿಹಿತವಾಯಿತು. ಈತನು ಅವನಿಂದ ಪ್ರಯೋಜನವನ್ನಪೇಕ್ಷಿಸಿ ಬಂದಿದ್ದಾನೆ. ಈತನ ಕಾರ್ಯವು ಸುಗ್ರೀವನಿಂದ ಸಾಧ್ಯವಾಗಬೇಕಾಗಿದೆ" ಎಂದುಕೊಂಡನು (೧-೨). ವಾಗ್ಮಿಯಾದ ಆ ವಾನರೋತ್ತಮನು ಆನಂದದಿಂದ ಹಿಗ್ಗುತ್ತ ಶ್ರೀರಾಮನನ್ನು ನೋಡಿ "ಹೇ ಮನುಜೋತ್ತಮ, ಘೋರವಾದ ಈ ದಂಡಕಾರಣ್ಯಕ್ಕೆ-ಅದರಲ್ಲಿಯೂ ಈ ಪಂಪಾತೀರವನಕ್ಕೆ ಬಂದುದೇಕೆ ? ದುರ್ಗಮವೂ ಕ್ರೂರಜಂತುಗಳಿಗೆ ನೆಲೆಯೂ ಆದ ಅರಣ್ಯಕ್ಕೆ ತಮ್ಮನೊಡನೆ*

---

* ಲಕ್ಷ್ಮಣನು ತಮ್ಮನೆಂಬುದನ್ನು ರೂಪಸಾದೃಶ್ಯದಿಂದಲೂ ಮಾತಾಡುವಂತೆ ಶ್ರೀರಾಮನು ಲಕ್ಷ್ಮಣನನ್ನು ಪ್ರೇರಿಸಿದ್ದರಿಂದಲೂ ಹನುಮಂತನು ಊಹಿಸಿಕೊಂಡಿದ್ದಾನೆ.

**ತಸ್ಯ ತದ್ವಚನಂ ಶ್ರುತ್ವಾ ಲಕ್ಷ್ಮಣೋ ರಾಮಚೋದಿತಃ ।**
**ಆಚಚಕ್ಷೇ ಮಹಾತ್ಮಾನಂ ರಾಮಂ ದಶರಥಾತ್ಮಜಮ್ ॥ ೫**

**ರಾಜಾ ದಶರಥೋ ನಾಮ ದ್ಯುತಿಮಾನ್ ಧರ್ಮವತ್ಸಲಃ ।**
**ಚಾತುರ್ವರ್ಣ್ಯಂ ಸ್ವಧರ್ಮೇಣ ನಿತ್ಯಮೇವಾಭ್ಯಪಾಲಯತ್ ॥ ೬**

**ನ ದ್ವೇಷ್ಟಾ ವಿದ್ಯತೇ ತಸ್ಯ ನ ಚ ಸ ದ್ವೇಷ್ಟಿ ಕಂಚನ ।**
**ಸ ಚ ಸರ್ವೇಷು ಭೂತೇಷು ಪಿತಾಮಹ ಇವಾಪರಃ ॥ ೭**

**ಅಗ್ನಿಷ್ಟೋಮಾದಿಭಿರ್ಯಜ್ಞೈರಿಷ್ಟವಾನಾಪ್ತದಕ್ಷಿಣೈಃ ।**
**ತಸ್ಯಾಯಂ ಪೂರ್ವಜಃ ಪುತ್ರೋ ರಾಮೋ ನಾಮ ಜನೈಃ ಶ್ರುತಃ ॥ ೮**

**ಶರಣ್ಯಃ ಸರ್ವಭೂತಾನಾಂ ಪಿತುರ್ನಿರ್ದೇಶಪಾರಗಃ ।**
**ವೀರೋ ದಶರಥಸ್ಯಾಯಂ ಪುತ್ರಾಣಾಂ ಗುಣವತ್ತಮಃ ॥ ೯**

**ರಾಜಲಕ್ಷಣಸಂಪನ್ನಃ ಸಂಯುಕ್ತೋ ರಾಜಸಂಪದಾ ।**
**ರಾಜ್ಯಾದ್ಭ್ರಷ್ಟೋ ವನೇ ವಸ್ತುಂ ಮಯಾ ಸಾರ್ಧಮಿಹಾಗತಃ ॥ ೧೦**

---

ಬಂದುದೇಕೆ?" ಎಂದು ಕೇಳಿದನು (೩-೪) ಆಗ ಶ್ರೀರಾಮನ ಇಂಗಿತವನ್ನರಿತು ಲಕ್ಷ್ಮಣನು, ಶ್ರೀರಾಮನು ಮಹಾನುಭಾವನೆಂದೂ ದಶರಥರಾಜನ ಪುತ್ರನೆಂದೂ ತಿಳಿಸಲಾರಂಭಿಸಿದನು: "ವಾನರೋತ್ತಮ, ದಶರಥನೆಂಬ ಮಹಾರಾಜನೊಬ್ಬನಿದ್ದನು. ಅವನು ತೇಜಸ್ವಿಯೂ ಧರ್ಮವತ್ಸಲನೂ ಆಗಿ ಚಾತುರ್ವರ್ಣ್ಯವನ್ನು ರಾಜಧರ್ಮಾನುಸಾರವಾಗಿ ಸದಾ ಪಾಲಿಸಿಕೊಂಡು ಬರುತ್ತಿದ್ದನು (೫-೬). ಈ ಲೋಕದಲ್ಲಿ ಒಬ್ಬರೂ ಅವನನ್ನು ದ್ವೇಷಿಸಲಿಲ್ಲ; ಅವನೂ ಒಬ್ಬರನ್ನೂ ದ್ವೇಷಿಸಲಿಲ್ಲ ಅವನು ಸಕಲ ಜೀವಜಾತಗಳಿಗೆ ಬ್ರಹ್ಮದೇವನಂತೆ ಪೂಜ್ಯನಾಗಿದ್ದನು. ದಶರಥಮಹಾರಾಜನು ಬಹುದಕ್ಷಿಣೆಗಳನ್ನಿತ್ತು ಅಗ್ನಿಷ್ಟೋಮಾದಿ ವಿವಿಧ ಯಜ್ಞಗಳನ್ನು ನೆರವೇರಿಸಿದನು. ಈತನು ಆ ಮಹಾಪುರುಷನ ಜ್ಯೇಷ್ಠಪುತ್ರ. 'ಶ್ರೀರಾಮ' ಎಂದು ಜನರು ಕರೆಯುತ್ತಾರೆ (೭-೮). ಸಕಲಭೂತಗಳೂ ಇವನಿಗೆ ಶರಣಾಗಿ ಸಂರಕ್ಷಣೆಯನ್ನು ಪಡೆಯಬಹುದು. ತಂದೆಯ ಆಜ್ಞೆಯನ್ನು ನಡೆಸುವುದು ಇವನ ವ್ರತ. ಈ ವೀರನು ದಶರಥರಾಜನ ಪುತ್ರರಲ್ಲಿ ಬಹಳ ಗುಣಶಾಲಿ (೯). ಸಮಸ್ತ ರಾಜಲಕ್ಷಣಗಳೂ ಇವನಲ್ಲಿ ನೆಲೆಸಿವೆ. ರಾಜಸಂಪತ್ತಿಗೆ ಇವನು ಅರ್ಹನಾಗಿದ್ದಾನೆ. ಆದರೂ ಒಂದಾನೊಂದು ಕಾರಣದಿಂದ ರಾಜ್ಯಭ್ರಂಶವನ್ನು

ಭಾರ್ಯಯಾ ಚ ಮಹಾತೇಜಾಃ ಸೀತಯಾನುಗತೋ ವಶೀ ।
ದಿನಕ್ಷಯೇ ಮಹಾತೇಜಾಃ ಪ್ರಭಯೇವ ದಿವಾಕರಃ ॥ ೧೧

ಅಹಮಸ್ಯಾವರೋ ಭ್ರಾತಾ ಗುಣೈರ್ದಾಸ್ಯಮುಪಾಗತಃ ।
ಕೃತಜ್ಞಸ್ಯ ಬಹುಜ್ಞಸ್ಯ ಲಕ್ಷ್ಮಣೋ ನಾಮ ನಾಮತಃ ॥ ೧೨

ಸುಖಾರ್ಹಸ್ಯ ಮಹಾರ್ಹಸ್ಯ ಸರ್ವಭೂತಹಿತಾತ್ಮನಃ ।
ಐಶ್ವರ್ಯೇಣ ಚ ಹೀನಸ್ಯ ವನವಾಸಾಶ್ರಿತಸ್ಯ ಚ ॥ ೧೩

ರಕ್ಷಸಾಪಹೃತಾ ಭಾರ್ಯಾ ರಹಿತೇ ಕಾಮರೂಪಿಣಾ ।
ತಚ್ಚ ನ ಜ್ಞಾಯತೇ ರಕ್ಷಃ ಪತ್ನೀ ಯೇನಾಸ್ಯ ಸಾ ಹೃತಾ ॥ ೧೪

ದನುರ್ನಾಮ ದಿತೇಃ ಪುತ್ರಃ ಶಾಪಾದ್ರಾಕ್ಷಸತಾಂ ಗತಃ ।
ಆಖ್ಯಾತಸ್ತೇನ ಸುಗ್ರೀವಃ ಸಮರ್ಥೋ ವಾನರರ್ಷಭಃ ॥ ೧೫

---

ಹೊಂದಿ ವನವಾಸಕ್ಕಾಗಿ ಬಂದಿದ್ದಾನೆ ಇವನೊಡನೆ ನಾನೂ ಬಂದೆನು. ಮಹಾತೇಜಸ್ವಿಯೂ ಜಿತೇಂದ್ರಿಯನೂ ಆದ ಶ್ರೀರಾಮನೊಡನೆ ಈತನ ಪತ್ನಿಯಾದ ಸೀತಾದೇವಿಯೂ ಬಂದಳು. ಹನುಮಂತ, ತೇಜೋರಾಶಿಯಾದ ಸೂರ್ಯನನ್ನು ಸಾಯಂಕಾಲದಲ್ಲಿಯೂ ಪ್ರಭೆಯು ಹಿಂಬಾಲಿಸುವಂತೆ ಅವಳು ಶ್ರೀರಾಮನೊಡನೆ ಬಂದಳು (೧೦-೧೧). ನಾನು ಇವನ ತಮ್ಮ. ಇವನ ಸದ್ಗುಣಗಳಿಗೆ ಮಾರುಹೋಗಿ ಇವನ ದಾಸನಾಗಿದ್ದೇನೆ. ಶ್ರೀರಾಮನು ತನಗೆ ಮಾಡಿದ ಉಪಕಾರವನ್ನು ಮರೆಯುವವನಲ್ಲ. ಇವನು ಸರ್ವಶಾಸ್ತ್ರ ವಿಶಾರದ. ನನ್ನ ಹೆಸರು ಲಕ್ಷ್ಮಣ (೧೨). ಹನುಮಂತ, ಸುಖಾರ್ಹನಾದ ನನ್ನ ಅಣ್ಣನು ಮಹತ್ತರವಾದ ಪದವಿಯಲ್ಲಿರುವ ಅರ್ಹತೆಯನ್ನು ಪಡೆದಿದ್ದಾನೆ. ಸಕಲಪ್ರಾಣಿಗಳಿಗೂ ಇವನು ಹಿತವನ್ನೇ ಬಯಸುತ್ತಾನೆ ಈಗ ಐಶ್ವರ್ಯಹೀನನಾಗಿ ವನವಾಸವನ್ನು ಆಶ್ರಯಿಸಿದ್ದಾನೆ. ವಾನರೋತ್ತಮ, ಹೀಗಿರುವಾಗ ನಾವಿಬ್ಬರೂ ಇಲ್ಲದ ಸಮಯದಲ್ಲಿ ಕಾಮರೂಪಿಯಾದ ಒಬ್ಬ ರಾಕ್ಷಸನು ಈತನ ಪತ್ನಿಯನ್ನು ಅಪಹರಿಸಿಬಿಟ್ಟನು ಆ ರಾಕ್ಷಸನು ಎಲ್ಲಿದ್ದಾನೆಂದು ಇದುವರೆಗೂ ತಿಳಿಯಲಿಲ್ಲ (೧೩-೧೪). ನಾವು ದಿತಿಪುತ್ರನಾದ ದನು ಎಂಬವನನ್ನು ಕಂಡೆವು. ಅವನು ಶಾಪವಶದಿಂದ ರಾಕ್ಷಸನಾಗಿದ್ದನು. ಆತನು ನಮ್ಮನ್ನು ಕುರಿತು 'ಸುಗ್ರೀವನೆಂಬ ಸಮರ್ಥನಾದ

ಸ ಜ್ಞಾಸ್ಯತಿ ಮಹಾವೀರ್ಯಸ್ತವ ಭಾರ್ಯಾಪಹಾರಿಣಮ್ ।
ಏವಮುಕ್ತ್ವಾ ದನುಃ ಸ್ವರ್ಗಂ ಭ್ರಾಜಮಾನೋ ಗತಃ ಸುಖಮ್ ॥

ಏತತ್ತೇ ಸರ್ವಮಾಖ್ಯಾತಂ ಯಾಥಾತಥ್ಯೇನ ಪೃಚ್ಛತಃ ।
ಅಹಂ ಚೈವ ಹಿ ರಾಮಶ್ಚ ಸುಗ್ರೀವಂ ಶರಣಂ ಗತೌ ॥ ೧೭

ಏಷ ದತ್ವಾ ಚ ವಿತ್ತಾನಿ ಪ್ರಾಪ್ಯ ಚಾನುತ್ತಮಂ ಯಶಃ ।
ಲೋಕನಾಥಃ ಪುರಾ ಭೂತ್ವಾ ಸುಗ್ರೀವಂ ನಾಥಮಿಚ್ಛತಿ ॥ ೧೮

ಪಿತಾ ಯಸ್ಯ ಪುರಾ ಹ್ಯಾಸೀಚ್ಛರಣ್ಯೋ ಧರ್ಮವತ್ಸಲಃ ।
ತಸ್ಯ ಪುತ್ರಃ ಶರಣ್ಯಶ್ಚ ಸುಗ್ರೀವಂ ಶರಣಂ ಗತಃ ॥ ೧೯

ಸರ್ವಲೋಕಸ್ಯ ಧರ್ಮಾತ್ಮಾ ಶರಣ್ಯಃ ಶರಣಂ ಪುರಾ ।
ಗುರುರ್ಮೇ ರಾಘವಃ ಸೋಽಯಂ ಸುಗ್ರೀವಂ ಶರಣಂ ಗತಃ ॥ ೨೦

ಯಸ್ಯ ಪ್ರಸಾದೇ ಸತತಂ ಪ್ರಸೀದೇಯುರಿಮಾಃ ಪ್ರಜಾಃ ।
ಸ ರಾಮೋ ವಾನರೇಂದ್ರಸ್ಯ ಪ್ರಸಾದಮಭಿಕಾಂಕ್ಷತೇ ॥ ೨೧

---

ವಾನರೇಂದ್ರನೊಬ್ಬನಿದ್ದಾನೆ. ಅವನು ಮಹಾಶೂರನು. ಸೀತಾದೇವಿಯನ್ನಪಹರಿಸಿದ ರಾಕ್ಷಸನನ್ನು ಸುಗ್ರೀವನು ಗೊತ್ತುಮಾಡಿಕೊಡುವನು' ಎಂದು ಹೇಳಿ ದಿವ್ಯರೂಪದಿಂದ ವಿರಾಜಿಸುತ್ತ ಸ್ವರ್ಗಲೋಕಕ್ಕೆ ಹೊರಟುಹೋದನು (೧೫-೧೬). ವಾನರೋತ್ತಮ, ನೀನು ಕೇಳಿದುದರಿಂದ ನಮ್ಮ ವೃತ್ತಾಂತವನ್ನು ಯಥಾಸ್ಥಿತವಾಗಿ ಹೇಳಿದ್ದೇನೆ. ನಾನೂ ನಮ್ಮಣ್ಣನಾದ ಶ್ರೀರಾಮನೂ ಸುಗ್ರೀವನನ್ನು ನಂಬಿ ಮರೆಹೊಕ್ಕಿದ್ದೇವೆ. ಶ್ರೀರಾಮನು ಅರ್ಥಿಗಳಿಗೆ ಬೇಕಾದಷ್ಟು ಧನವನ್ನು ಕೊಟ್ಟು ಪೋಷಿಸಿದವನು. ಲೋಕೋತ್ತರವಾದ ಕೀರ್ತಿಯನ್ನು ಪಡೆದವನು. ಹಿಂದೆ ಲೋಕನಾಥನೆನಿಸಿಕೊಂಡಿದ್ದವನು ಈಗ ಸುಗ್ರೀವನನ್ನು ನಾಥನನ್ನಾಗಿ ಬಯಸುತ್ತಿದ್ದಾನೆ (೧೭-೧೮). ಯಾರ ತಂದೆಯು ಶರಣಾಗತರಕ್ಷಕನಾಗಿ ಧರ್ಮವತ್ಸಲನೆನಿಸಿಕೊಂಡಿದ್ದನೋ ಆತನ ಪುತ್ರನು—ಸರ್ವಲೋಕಶರಣ್ಯನು—ಈಗ ಸುಗ್ರೀವನಿಗೆ ಶರಣಾಗತನಾಗಿದ್ದಾನೆ (೧೯). ಧರ್ಮಾತ್ಮನಾಗಿ ಸಕಲ ಜನರಿಗೆ ಆಶ್ರಯದಾತನೂ ಭಯತ್ರಾತನೂ ಆಗಿ, ನನ್ನ ಗುರುವಾದ ಈ ರಘುಕುಲತಿಲಕನು ಸುಗ್ರೀವನಿಗೆ ಶರಣಾಗಿದ್ದಾನೆ. ಯಾರ ಅನುಗ್ರಹದಿಂದ ಪ್ರಜೆಗಳು ಸತತವೂ ಸಂತೃಪ್ತರಾಗಿದ್ದರೋ

**ಯೇನ ಸರ್ವಗುಣೋಪೇತಾಃ ಪೃಥಿವ್ಯಾಂ ಸರ್ವಪಾರ್ಥಿವಾಃ |**
**ಮಾನಿತಾಃ ಸತತಂ ರಾಜ್ಞಾ ಸದಾ ದಶರಥೇನ ವೈ || ೨೨**

**ತಸ್ಯಾಯಂ ಪೂರ್ವಜಃ ಪುತ್ರಸ್ತ್ರಿಷು ಲೋಕೇಷು ವಿಶ್ರುತಃ |**
**ಸುಗ್ರೀವಂ ವಾನರೇಂದ್ರಂ ತು ರಾಮಃ ಶರಣಮಾಗತಃ || ೨೩**

**ಶೋಕಾಭಿಭೂತೇ ರಾಮೇ ತು ಶೋಕಾರ್ತೇ ಶರಣಂ ಗತೇ |**
**ಕರ್ತುಮರ್ಹತಿ ಸುಗ್ರೀವಃ ಪ್ರಸಾದಂ ಹರಿಯೂಥಪಃ || ೨೪**

**ಏವಂ ಬ್ರುವಾಣಂ ಸೌಮಿತ್ರಿಂ ಕರುಣಂ ಸಾಶ್ರುಲೋಚನಮ್ |**
**ಹನುಮಾನ್ ಪ್ರತ್ಯುವಾಚೇದಂ ವಾಕ್ಯಂ ವಾಕ್ಯವಿಶಾರದಃ || ೨೫**

**ಈದೃಶಾ ಬುದ್ಧಿಸಂಪನ್ನಾ ಜಿತಕ್ರೋಧಾ ಜಿತೇಂದ್ರಿಯಾಃ |**
**ದ್ರಷ್ಟವ್ಯಾ ವಾನರೇಂದ್ರೇಣ ದಿಷ್ಟ್ಯಾ ದರ್ಶನಮಾಗತಾಃ || ೨೬**

---

ಅಂಥ ಶ್ರೀರಾಮನು ವಾನರೇಂದ್ರನ ಅನುಗ್ರಹವನ್ನು ಬಯಸುತ್ತಿದ್ದಾನೆ (೨೦-೨೧). ಅಯ್ಯಾ ಹನುಮಂತ, ನಮ್ಮ ತಂದೆಯಾದ ದಶರಥಮಹಾರಾಜನು ಗುಣಶಾಲಿಗಳಾದ ಸಮಸ್ತಭೂಪಾಲರನ್ನೂ ಕರೆಸಿ ಸರ್ವದಾ ಆದರಿಸುತ್ತಿದ್ದನು. ಆ ಮಹಾರಾಜನ ಜ್ಯೇಷ್ಠಪುತ್ರನಾದ ಈತನು ಮೂರು ಲೋಕಗಳಲ್ಲಿಯೂ ವಿಖ್ಯಾತನಾದವನು. ಈ ಶ್ರೀರಾಮನು ಸುಗ್ರೀವನನ್ನು ನಂಬಿ ಸಹಾಯಾರ್ಥಿಯಾಗಿ ಬಂದಿದ್ದಾನೆ (೨೨-೨೩). ಹೀಗೆ ಶೋಕಾವಿಷ್ಟನಾದ ಶ್ರೀರಾಮನು ಸುಗ್ರೀವನ ಆಶ್ರಯವನ್ನು ಬಯಸಿ ಬಂದಿದ್ದಾನೆ. ಶೋಕಾರ್ತನಾದ ಈತನ ವಿಷಯದಲ್ಲಿ ವಾನರೇಂದ್ರನು ಪ್ರಸನ್ನನಾಗಲಿ" ಎಂದು ಲಕ್ಷ್ಮಣನು ಹೇಳಿದನು. ಹೀಗೆ ದೈನ್ಯದಿಂದ ಹೇಳುವಾಗ ಲಕ್ಷ್ಮಣನ ಕಣ್ಣಿನಲ್ಲಿ ನೀರು ತುಂಬಿತ್ತು (೨೪-೨೫). ಆಗ ಮಾತಿನಲ್ಲಿ ನಿಪುಣನಾದ ಹನುಮಂತನು "ಆರ್ಯ-ಲಕ್ಷ್ಮಣ, ಇಂಥ ಬುದ್ಧಿಸಂಪನ್ನರೂ ಜಿತಕ್ರೋಧರೂ ಜಿತೇಂದ್ರಿಯರೂ ಆದ ಮಹಾಪುರುಷರನ್ನು ನಮ್ಮ ಸುಗ್ರೀವನು ಹುಡುಕಿಕೊಂಡುಹೋಗಿ ದರ್ಶನಮಾಡಬೇಕಾದದ್ದು ಯುಕ್ತ. ಹೀಗಿರಲು ಅವನ ಭಾಗ್ಯದಿಂದ ನೀವಾಗಿ ದರ್ಶನವನ್ನು ಕೊಟ್ಟದ್ದೀರಿ (೨೬)

**ಸ ಹಿ ರಾಜ್ಯಾತ್ ಪರಿಭ್ರಷ್ಟಃ ಕೃತವೈರಶ್ಚ ವಾಲಿನಾ ।**
**ಹೃತದಾರೋ ವನೇ ತ್ಯಕ್ತೋ ಭ್ರಾತ್ರಾ ವಿನಿಕೃತೋ ಭೃಶಮ್॥ ೨೭**

**ಕರಿಷ್ಯತಿ ಸ ಸಾಹಾಯ್ಯಂ ಯುವಯೋರ್ಭಾಸ್ಕರಾತ್ಮಜಃ ।**
**ಸುಗ್ರೀವಃ ಸಹ ಚಾಸ್ಮಾಭಿಃ ಸೀತಾಯಾಃ ಪರಿಮಾರ್ಗಣೇ ॥ ೨೮**

**ಇತ್ಯೇವಮುಕ್ತ್ವಾ ಹನುಮಾನ್ ಶ್ಲಕ್ಷ್ಣಂ ಮಧುರಯಾ ಗಿರಾ ।**
**ಬಭಾಷೇ ಸಾಧು ಗಚ್ಛೇಮ ಸುಗ್ರೀವಮಿತಿ ರಾಘವಮ್ ॥ ೨೯**

**ಏವಂ ಬ್ರುವಾಣಂ ಧರ್ಮಾತ್ಮಾ ಹನುಮಂತಂ ಸ ಲಕ್ಷ್ಮಣಃ ।**
**ಪ್ರತಿಪೂಜ್ಯ ಯಥಾನ್ಯಾಯಮಿದಂ ಪ್ರೋವಾಚ ರಾಘವಮ್ ॥ ೩೦**

**ಕಪಿಃ ಕಥಯತೇ ಹೃಷ್ಟೋ ಯಥಾಯಂ ಮಾರುತಾತ್ಮಜಃ ।**
**ಕೃತ್ಯವಾನ್ ಸೋಽಪಿ ಸಂಪ್ರಾಪ್ತಃ ಕೃತಕೃತ್ಯೋಽಸಿ ರಾಘವ ॥ ೩೧**

**ಪ್ರಸನ್ನಮುಖವರ್ಣಶ್ಚ ವ್ಯಕ್ತಂ ಹೃಷ್ಟಶ್ಚ ಭಾಷತೇ ।**
**ನಾನೃತಂ ವಕ್ಷ್ಯತೇ ಧೀರೋ ಹನುಮಾನ್ ಮಾರುತಾತ್ಮಜಃ ॥ ೩೨**

---

ಅವನೂ ಕೂಡ ಅಣ್ಣನಾದ ವಾಲಿಯೊಡನೆ ವೈರವನ್ನು ಬೆಳೆಸಿಕೊಂಡು ರಾಜ್ಯಭ್ರಷ್ಟನಾಗಿದ್ದಾನೆ. ವಾಲಿಯು ಸುಗ್ರೀವನ ಹೆಂಡತಿಯನ್ನಪಹರಿಸಿ ಅವನನ್ನು ಪೀಡಿಸಿ ಕಾಡಿಗೆ ಅಟ್ಟಿದ್ದಾನೆ. ಸೂರ್ಯಪುತ್ರನಾದ ಸುಗ್ರೀವನು ನಿಮಗೆ ನಿಶ್ಚಯವಾಗಿಯೂ ಸಹಾಯವನ್ನು ಮಾಡುವನು ಅವನು ನಮ್ಮ ಸಹಾಯದಿಂದ ಸೀತಾದೇವಿಯನ್ನು ಹುಡುಕಲು ನೆರವಾಗುವನು" ಎಂದು ವಿನಯದಿಂದ ಮಧುರವಾಗಿ ನುಡಿದನು. ಅನಂತರ ಆ ವಾಯುಪುತ್ರನು "ಒಳ್ಳೆಯದು, ನಾವು ಸುಗ್ರೀವನ ಸಮೀಪಕ್ಕೆ ಹೋಗೋಣ" ಎಂದನು (೨೭-೨೯). ಆಗ ಧರ್ಮಾತ್ಮನಾದ ಲಕ್ಷ್ಮಣನು ಹನುಮಂತನನ್ನು ಶ್ಲಾಘಿಸಿ, ಶ್ರೀರಾಮನನ್ನುದ್ದೇಶಿಸಿ "ಅಣ್ಣ, ವಾಯುಪುತ್ರನಾದ ಈ ವಾನರನು ಸಂತುಷ್ಟನಾಗಿ ಮಾತನಾಡುತ್ತಿದ್ದಾನೆ. ಇವನೂ ಕಾರ್ಯಾರ್ಥಿಯಾಗಿ ನಮ್ಮಲ್ಲಿಗೆ ಬಂದಿದ್ದಾನೆ. ನಿನ್ನ ಕಾರ್ಯವು ಸಿದ್ಧಿಸಿದಂತೆಯೇ ಸರಿ (೩೦-೩೧). ಸ್ಪಷ್ಟವಾಗಿ ಇವನ ಮುಖವು ಪ್ರಸನ್ನವಾಗಿದೆ. ಸಂತೋಷ ದಿಂದ ಸಂಭಾಷಿಸುತ್ತಿದ್ದಾನೆ. ಧೀರನಾದ ಈ ವಾಯುಪುತ್ರನು ಅಸತ್ಯ

ತತಃ ಸ ತು ಮಹಾಪ್ರಾಜ್ಞೋ ಹನುಮಾನ್ ಮಾರುತಾತ್ಮಜಃ ।
ಜಗಾಮಾದಾಯ ತೌ ವೀರೌ ಹರಿರಾಜಾಯ ರಾಘವೌ ॥ ೩೩

ಭಿಕ್ಷುರೂಪಂ ಪರಿತ್ಯಜ್ಯ ವಾನರಂ ರೂಪಮಾಸ್ಥಿತಃ ।
ಪೃಷ್ಠಮಾರೋಪ್ಯ ತೌ ವೀರೌ ಜಗಾಮ ಕಪಿಕುಂಜರಃ ॥ ೩೪

ಸ ತು ವಿಪುಲಯಶಾಃ ಕಪಿಪ್ರವೀರಃ
ಪವನಸುತಃ ಕೃತಕೃತ್ಯವತ್ ಪ್ರಹೃಷ್ಟಃ ।
ಗಿರಿವರಮುರುವಿಕ್ರಮಃ ಪ್ರಯಾತಃ
ಸುಶುಭಮತಿಃ ಸಹ ರಾಮಲಕ್ಷ್ಮಣಾಭ್ಯಾಮ್ ॥ ೩೫

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಚತುರ್ಥಃ ಸರ್ಗಃ



ವನ್ನು ಹೇಳಲಾರ" ಎಂದು ಹೇಳಿದನು (೩೨). ಅನಂತರ ಮಹಾಮೇಧಾವಿಯಾದ ಆ ಕಪಿಕುಂಜರನು ಭಿಕ್ಷುವೇಷವನ್ನು ಪರಿತ್ಯಜಿಸಿ ತನ್ನ ವಾನರರೂಪವನ್ನು ಧರಿಸಿ, ವೀರಾಗ್ರಗಣ್ಯರಾದ ಶ್ರೀರಾಮಲಕ್ಷ್ಮಣರನ್ನು ತನ್ನ ಹೆಗಲ ಮೇಲೆ ಕುಳ್ಳಿರಿಸಿಕೊಂಡು ಸುಗ್ರೀವನ ಸಮೀಪಕ್ಕೆ ಹೊರಟನು (೩೩-೩೪). ಹೀಗೆ ಕೀರ್ತಿಸಂಪನ್ನನಾದ ಆ ಕಪಿಶ್ರೇಷ್ಠನು ಕೃತಕೃತ್ಯನಾದೆನೆಂದು ಸಂತೃಪ್ತನಾದನು. ಮಹಾಪರಾಕ್ರಮಿಯೂ ಬುದ್ಧಿಸಂಪನ್ನನೂ ಆದ ಆ ಧೀರನು ಶ್ರೀರಾಮಲಕ್ಷ್ಮಣರೊಡನೆ ಋಷ್ಯಮೂಕಪರ್ವತವನ್ನೇರಿದನು (೩೫).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ನಾಲ್ಕನೆಯ ಸರ್ಗ



## ಪಂಚಮಃ ಸರ್ಗಃ

### ಸುಗ್ರೀವಸಖ್ಯಮ್

ಋಷ್ಯಮೂಕಾತ್ತು ಹನುಮಾನ್ ಗತ್ವಾ ತಂ ಮಲಯಂ ಗಿರಿಮ್ ।
ಆಚಚಕ್ಷೇ ತದಾ ವೀರೌ ಕಪಿರಾಜಾಯ ರಾಘವೌ ॥ ೧

ಅಯಂ ರಾಮೋ ಮಹಾಪ್ರಾಜ್ಞಃ ಸಂಪ್ರಾಪ್ತೋ ದೃಢವಿಕ್ರಮಃ ।
ಲಕ್ಷ್ಮಣೇನ ಸಹ ಭ್ರಾತ್ರಾ ರಾಮೋಽಯಂ ಸತ್ಯವಿಕ್ರಮಃ ॥ ೨

ಇಕ್ಷ್ವಾಕೂಣಾಂ ಕುಲೇ ಜಾತೋ ರಾಮೋ ದಶರಥಾತ್ಮಜಃ ।
ಧರ್ಮೇ ಚ ನಿರತಶ್ಚೈವ ಪಿತುರ್ನಿರ್ದೇಶಪಾಲಕಃ ॥ ೩

ರಾಜಸೂಯಾಶ್ವಮೇಧೈಶ್ಚ ವಹ್ನಿರ್ಯೇನಾಭಿತರ್ಪಿತಃ ।
ದಕ್ಷಿಣಾಶ್ಚ ತಥೋತ್ಸೃಷ್ಟಾ ಗಾವಃ ಶತಸಹಸ್ರಶಃ ॥ ೪

## ಸರ್ಗ ೫

### ಶ್ರೀರಾಮನು ಸುಗ್ರೀವನೊಡನೆ ಅಗ್ನಿಸಾಕ್ಷಿಕವಾಗಿ ಅನ್ಯೋನ್ಯ ಸ್ನೇಹವನ್ನು ಬೆಳೆಸುವುದು.

ಹನುಮಂತನು (ಋಷ್ಯಮೂಕಪರ್ವತದಮೇಲೆ ಶ್ರೀರಾಮಲಕ್ಷ್ಮಣರನ್ನು ಇಳಿಸಿ) ಅಲ್ಲಿಂದ (ಸುಗ್ರೀವನಿದ್ದ) ಮಲಯಗಿರಿಗೆ ಹೋದನು. ಅಲ್ಲಿ ಕಪಿರಾಜನನ್ನು ಕಂಡು ವೀರರಾದ ರಾಮಲಕ್ಷ್ಮಣರ ವಿಷಯವನ್ನು ಹೇಳಿದನು* (೧): "ಸುಗ್ರೀವ, ಅಲ್ಲಿ ಬಂದಿರತಕ್ಕವನು ಶ್ರೀರಾಮನೆಂಬವನು. ತಮ್ಮನಾದ ಲಕ್ಷ್ಮಣನೊಡನೆ ಬಂದಿದ್ದಾನೆ ಶ್ರೀರಾಮನು ಮಹಾಪ್ರಾಜ್ಞನೂ ಪರಾಕ್ರಮಿಯೂ ಸತ್ಯಸಂಧನೂ ಎಂದು ತಿಳಿ. ಅವನು ಇಕ್ಷ್ವಾಕುವಂಶದಲ್ಲಿ ಜನಿಸಿದವನು. ದಶರಥಮಹಾರಾಜನ ಪುತ್ರ. ಧರ್ಮನಿರತನೂ ಪಿತೃವಾಕ್ಯಪರಿಪಾಲನಧುರೀಣನೂ ಆಗಿದ್ದಾನೆ (೨-೩). ದಶರಥನು ರಾಜಸೂಯ, ಅಶ್ವಮೇಧ ಮುಂತಾದ ಯಾಗಗಳಿಂದ ಅಗ್ನಿದೇವ

---

* ಸುಗ್ರೀವನ ವಾಸಸ್ಥಾನ ಋಷ್ಯಮೂಕ. ಅದರ ಒಂದು ಭಾಗ ಮಲಯಗಿರಿ. ಹನುಮಂತನು ರಾಮಲಕ್ಷ್ಮಣರನ್ನು ಋಷ್ಯಮೂಕದಲ್ಲಿಳಿಸಿ ಸುಗ್ರೀವನಿಗೆ ಆ ವಾರ್ತೆಯನ್ನರುಹಲು ಪುನಃ ಭಿಕ್ಷುರೂಪವನ್ನು ಧರಿಸಿ ಹೋದನೆಂದು ತಿಳಿಯಬೇಕು. ಅದ್ದರಿಂದ ಇದೇ ಸರ್ಗದ ೧೪ನೆಯ ಶ್ಲೋಕದಲ್ಲಿ "ತತೋ ಹನೂಮಾನ್ ಸಂತ್ಯಜ್ಯ ಭಿಕ್ಷುರೂಪಮರಿಂದಮಃ" ಎಂಬ ಮಾತು ಸರಿಹೋಗುತ್ತದೆ.

ತಪಸಾ ಸತ್ಯವಾಕ್ಯೇನ ವಸುಧಾ ಯೇನ ಪಾಲಿತಾ ।
ಸ್ತ್ರೀಹೇತೋಸ್ತಸ್ಯ ಪುತ್ರೋಽಯಂ ರಾಮೋಽರಣ್ಯಂ ಸಮಾಗತಃ ॥ ೫

ತಸ್ಯಾಸ್ಯ ವಸತೋಽರಣ್ಯೇ ನಿಯತಸ್ಯ ಮಹಾತ್ಮನಃ ।
ರಾವಣೇನ ಹೃತಾ ಭಾರ್ಯಾ ಸ ತ್ವಾಂ ಶರಣಮಾಗತಃ ॥ ೬

ಭವತಾ ಸಖ್ಯಕಾಮೌ ತೌ ಭ್ರಾತರೌ ರಾಮಲಕ್ಷ್ಮಣೌ ।
ಪ್ರತಿಗೃಹ್ಯಾರ್ಚಯಸ್ವೈತೌ ಪೂಜನೀಯತಮಾವುಭೌ ॥ ೭

ಶ್ರುತ್ವಾ ಹನುಮತೋ ವಾಕ್ಯಂ ಸುಗ್ರೀವೋ ಹೃಷ್ಟಮಾನಸಃ ।
ಭಯಂ ಸ ರಾಘವಾದ್ಘೋರಂ ಪ್ರಜಹೌ ವಿಗತಜ್ವರಃ ॥ ೮

ಸ ಕೃತ್ವಾ ಮಾನುಷಂ ರೂಪಂ ಸುಗ್ರೀವಃ ಪ್ಲವಗರ್ಷಭಃ ।
ದರ್ಶನೀಯತಮೋ ಭೂತ್ವಾ ಪ್ರೀತ್ಯಾ ಪ್ರೋವಾಚ ರಾಘವಮ್ ॥

ಭವಾನ್ ಧರ್ಮವಿನೀತಶ್ಚ ವಿಕ್ರಾಂತಃ ಸರ್ವವತ್ಸಲಃ ।
ಆಖ್ಯಾತಾ ವಾಯುಪುತ್ರೇಣ ತತ್ತ್ವತೋ ಮೇ ಭವದ್ಗುಣಾಃ ॥ ೧೦

---

ನನ್ನು ಸಂತೃಪ್ತಿಗೊಳಿಸಿ ದಕ್ಷಿಣೆಗಳನ್ನಿತ್ತು, ಲಕ್ಷಗಟ್ಟಲೆ ಗೋದಾನಗಳನ್ನು ಮಾಡಿದವನು. ಸತ್ಯಧರ್ಮಗಳಿಂದ ಭೂಮಂಡಲವನ್ನು ಪಾಲಿಸಿದವನು. ಶ್ರೀರಾಮನು ಆತನ ಪುತ್ರ. ಯಾವುದೋ ಸ್ತ್ರೀನಿಮಿತ್ತವಾಗಿ ಇವನು ಅರಣ್ಯಕ್ಕೆ ಬರಬೇಕಾಯಿತು (೪-೫) ಈ ಮಹಾಪುರುಷನು ವನವಾಸದಲ್ಲಿರುವಾಗ ರಾವಣನು ಇವನ ಪತ್ನಿಯನ್ನು ಅಪಹರಿಸಿಬಿಟ್ಟನಂತೆ. ಈಗ ಈತನು ನಿನ್ನ ನೆರವನ್ನಪೇಕ್ಷಿಸಿ ಬಂದಿದ್ದಾನೆ. ಸಹೋದರರಾದ ರಾಮಲಕ್ಷ್ಮಣರು ನಿನ್ನೊಡನೆ ಸ್ನೇಹವನ್ನು ಬೆಳೆಸಬೇಕೆಂದಿದ್ದಾರೆ. ವಾನರೇಂದ್ರ, ಇವರಿಬ್ಬರೂ ಪೂಜನೀಯರು. ಇವರನ್ನು ಸ್ವಾಗತಿಸಿ ಸತ್ಕರಿಸು" ಎಂದನು (೬-೭). ಹನುಮಂತನ ನುಡಿಯನ್ನು ಕೇಳಿ ಸುಗ್ರೀವನ ಮನಸ್ಸು ಸಂತೋಷದಿಂದ ಅರಳಿತು. ರಾಘವನನ್ನು ನೋಡಿದೊಡನೆ ಸಂಭವಿಸಿದ ಘೋರವಾದ ಭಯವು ತೊಲಗಿತು. ಚಿಂತೆ ಸರಿಯಿತು. ಅವನು ಮನುಷ್ಯ ರೂಪವನ್ನು ಧರಿಸಿ ಸುಂದರವಾದ ಭವ್ಯಾಕೃತಿಯನ್ನು ತಳೆದು ರಾಘವನಿದ್ದಲ್ಲಿಗೆ ಬಂದನು (೮-೯). ಸುಗ್ರೀವನು ಪ್ರೀತಿಯಿಂದ ಶ್ರೀರಾಮನನ್ನು ಕುರಿತು "ಆರ್ಯ, ನೀನು ಧರ್ಮದಲ್ಲಿ ಸುಶಿಕ್ಷಿತನೆಂದೂ ವೀರನೆಂದೂ ಸರ್ವಭೂತಗಳಲ್ಲಿ

ತನ್ಮಮೈವೈಷ ಸತ್ಕಾರೋ ಲಾಭಶ್ಚೈವೋತ್ತಮಃ ಪ್ರಭೋ ।
ಯತ್ತ್ವಮಿಚ್ಛಸಿ ಸೌಹಾರ್ದಂ ವಾನರೇಣ ಮಯಾ ಸಹ ॥ ೧೧
ರೋಚತೇ ಯದಿ ವಾ ಸಖ್ಯಂ ಬಾಹುರೇಷ ಪ್ರಸಾರಿತಃ ।
ಗೃಹ್ಯತಾಂ ಪಾಣಿನಾ ಪಾಣಿರ್ಮರ್ಯಾದಾ ಬಧ್ಯತಾಂ ಧ್ರುವಾ॥ ೧೨
ಏತತ್ತು ವಚನಂ ಶ್ರುತ್ವಾ ಸುಗ್ರೀವೇಣ ಸುಭಾಷಿತಮ್ ।
ಸ ಪ್ರಹೃಷ್ಟಮನಾ ಹಸ್ತಂ ಪೀಡಯಾಮಾಸ ಪಾಣಿನಾ ॥ ೧೩
ಹೃದ್ಯಂ ಸೌಹೃದಮಾಲಂಬ್ಯ ಪರ್ಯಷ್ವಜತ ಪೀಡಿತಮ್ ।
ತತೋ ಹನೂಮಾನ್ ಸಂತ್ಯಜ್ಯ ಭಿಕ್ಷುರೂಪಮರಿಂದಮಃ ॥ ೧೪
ಕಾಷ್ಠಯೋಃ ಸ್ವೇನ ರೂಪೇಣ ಜನಯಾಮಾಸ ಪಾವಕಮ್ ।
ದೀಪ್ಯಮಾನಂ ತತೋ ವಹ್ನಿಂ ಪುಷ್ಪೈರಭ್ಯರ್ಚ್ಯ ಸತ್ಕೃತಮ್ ॥ ೧೫
ತಯೋರ್ಮಧ್ಯೇಽಥ ಸುಪ್ರೀತೋ ನಿದಧೇ ಸುಸಮಾಹಿತಃ ।
ತತೋಽಗ್ನಿಂ ದೀಪ್ಯಮಾನಂ ತೌ ಚಕ್ರತುಶ್ಚ ಪ್ರದಕ್ಷಿಣಮ್ ॥ ೧೬

---

ದಯಾಳುವೆಂದೂ ನನಗೆ ತಿಳಿಯಿತು. ಈ ವಾಯುಪುತ್ರನು ನಿನ್ನ ಸದ್ಗುಣಗಳನ್ನು ಯಥಾಸ್ಥಿತವಾಗಿ ವಿವರಿಸಿದ್ದಾನೆ (೧೦). ಮಹಾತ್ಮ, ವಾನರನಾದ ನನ್ನೊಡನೆ ನೀನು ಸಖ್ಯವನ್ನು ಬಯಸುವುದಾದರೆ, ಅದು ನನಗೆ ತೋರಿಸಿದ ಗೌರವ; ನನಗಾದ ಉತ್ತಮ ಲಾಭ. ನನ್ನ ಸಖ್ಯವು ನಿನಗೆ ಇಷ್ಟವಾದರೆ, ಇಗೋ–ಕೈ ನೀಡಿದ್ದೇನೆ. ಕೈಯನ್ನು ಹಿಡಿ. ನಮ್ಮ ಸ್ನೇಹಕ್ಕೆ ಚ್ಯುತಿಯಿಲ್ಲವೆಂದು ಪ್ರತಿಜ್ಞೆಯಾಗಲಿ!" ಎಂದನು (೧೧–೧೨). ಸುಗ್ರೀವನ ಮಧುರವಾದ ನುಡಿಯನ್ನು ಕೇಳಿ ಶ್ರೀರಾಮನು ಸಂತೋಷದಿಂದ ಅವನ ಕೈಯನ್ನು ದೃಢವಾಗಿ ಹಿಡಿದನು. ಹೃತ್ಪೂರ್ವಕವಾದ ಸ್ನೇಹದಿಂದ ಸುಗ್ರೀವನನ್ನು ಬಿಗಿಯಾಗಿ ಆಲಿಂಗಿಸಿಕೊಂಡನು (೧೩). ಆಮೇಲೆ ಶೂರನಾದ ಹನುಮಂತನು ಭಿಕ್ಷುವೇಷವನ್ನು ತ್ಯಜಿಸಿ ತನ್ನ ವಾನರರೂಪವನ್ನು ಧರಿಸಿ, ಎರಡು ಕಾಷ್ಠಗಳನ್ನು ಉಜ್ಜಿ ಅಗ್ನಿಯನ್ನು ಉತ್ಪಾದಿಸಿದನು. ಜ್ವಲಿಸುವ ಅಗ್ನಿಯನ್ನು ಪುಷ್ಪಗಳಿಂದ ಅರ್ಚಿಸಿದನು (೧೪–೧೫). ಅನಂತರ ಸಾವಧಾನವಾಗಿ ಅದನ್ನು ಶ್ರೀರಾಮಸುಗ್ರೀವರ ಮಧ್ಯದಲ್ಲಿ ತಂದಿರಿಸಿದನು. ಆಗ ಶ್ರೀರಾಮನೂ ಸುಗ್ರೀವನೂ ಪ್ರಜ್ವಲಿಸುತ್ತಿದ್ದ ಯಜ್ಞೇಶ್ವರನಿಗೆ ಪ್ರದಕ್ಷಿಣೆಮಾಡಿ ಅಗ್ನಿ

**ಸುಗ್ರೀವೋ ರಾಘವಶ್ಚೈವ ವಯಸ್ಯತ್ವಮುಪಾಗತೌ ।**
**ತತಃ ಸುಪ್ರೀತಮನಸೌ ತಾವುಭೌ ಹರಿರಾಘವೌ ॥ ೧೭**

**ಅನ್ಯೋಽನ್ಯಮಭಿವೀಕ್ಷಂತೌ ನ ತೃಪ್ತಿಮುಪಜಗ್ಮತುಃ ।**
**ತ್ವಂ ವಯಸ್ಯೋಽಸಿ ಮೇ ಹೃದ್ಯೋ ಹ್ಯೇಕಂ ದುಃಖಂ ಸುಖಂ ಚ ನೌ**

**ಸುಗ್ರೀವಂ ರಾಘವೋ ವಾಕ್ಯಮಿತ್ಯುವಾಚ ಪ್ರಹೃಷ್ಟವತ್ ।**
**ತತಃ ಸ ಪರ್ಣಬಹುಲಾಂ ಛಿತ್ತ್ವಾ ಶಾಖಾಂ ಸುಪುಷ್ಪಿತಾಮ್ ॥ ೧೯**

**ಸಾಲಸ್ಯಾಸ್ತೀರ್ಯ ಸುಗ್ರೀವೋ ನಿಷಸಾದ ಸರಾಘವಃ ।**
**ಲಕ್ಷ್ಮಣಾಯಾಥ ಸಂಹೃಷ್ಟೋ ಹನುಮಾನ್ ಪ್ಲವಗರ್ಷಭಃ ॥ ೨೦**

**ಶಾಖಾಂ ಚಂದನವೃಕ್ಷಸ್ಯ ದದೌ ಪರಮಪುಷ್ಪಿತಾಮ್ ।**
**ತತಃ ಪ್ರಹೃಷ್ಟಃ ಸುಗ್ರೀವಃ ಶ್ಲಕ್ಷ್ಣಂ ಮಧುರಯಾ ಗಿರಾ ॥ ೨೧**

**ಪ್ರತ್ಯುವಾಚ ತದಾ ರಾಮಂ ಹರ್ಷವ್ಯಾಕುಲಲೋಚನಃ ।**
**ಅಹಂ ವಿನಿಕೃತೋ ರಾಮ ಚರಾಮೀಹ ಭಯಾರ್ದಿತಃ ॥ ೨೨**

---

ಸಾಕ್ಷಿಕವಾಗಿ ಮಿತ್ರರಾದರು. ಅವರೀರ್ವರೂ ಆನಂದದಿಂದ ಒಬ್ಬರನ್ನೊಬ್ಬರು ನೋಡುತ್ತ ನಿಂತರು ಎಷ್ಟು ನೋಡಿದರೂ ಅವರಿಗೆ ತೃಪ್ತಿಯಾಗಲಿಲ್ಲ! (೧೬-೧೭). ಶ್ರೀರಾಮನು "ಮಿತ್ರ-ಸುಗ್ರೀವ, ನೀನು ನನ್ನ ಪ್ರೀತಿಯ ಗೆಳೆಯನಾದೆ ನಮ್ಮಿಬ್ಬರ ಸುಖದುಃಖಗಳು ಒಂದಾದವು" ಎಂಬುದಾಗಿ ಹರ್ಷದಿಂದ ಹೇಳಿದನು ಆಮೇಲೆ ಸುಗ್ರೀವನು ಎಲೆಗಳಿಂದ ತುಂಬಿದ ಸಾಲವೃಕ್ಷದ ಪುಷ್ಪಿತವಾದ ಒಂದು ಕೊಂಬೆಯನ್ನು ಮುರಿದು ಹಾಸಿ ಅದರಮೇಲೆ ರಾಘವನೊಡನೆ ಕುಳಿತುಕೊಂಡನು (೧೮-೧೯). ಆಗ ಹನುಮಂತನು ಪುಷ್ಪಗಳಿಂದ ಜಗ್ಗುತ್ತಿದ್ದ ಚಂದನವೃಕ್ಷದ ಒಂದು ಕೊಂಬೆಯನ್ನು ಹರ್ಷದಿಂದ ಮುರಿದು ಹಾಸಿ, ಲಕ್ಷ್ಮಣನಿಗೆ ಕುಳಿತುಕೊಳ್ಳಲು ಕೊಟ್ಟನು. ಆಗ ಸುಗ್ರೀವನು ನಯವಾಗಿ ಮೃದುವಾದ ವಾಕ್ಯದಿಂದ ಶ್ರೀರಾಮನೊಡನೆ ಮಾತಾಡಿದನು ಅವನ ನಯನಗಳಲ್ಲಿ ಆನಂದಬಾಷ್ಪವು ಸುರಿಯುತ್ತಿತ್ತು : "ಶ್ರೀರಾಮ, ನಾನು ಕಷ್ಟಕ್ಕೆ ಸಿಕ್ಕಿ ಅಂಜಿಕೆಯಿಂದ ಅಲೆಯುತ್ತಿದ್ದೇನೆ (೨೦-೨೧). ನನ್ನ ಹೆಂಡತಿಯನ್ನು ವಾಲಿಯು ಅಪಹರಿಸಿದ್ದಾನೆ. ಅರಣ್ಯದಲ್ಲಿ ಸುತ್ತಿ ಸುತ್ತಿ ಹೆದರಿ ಈ ದುರ್ಗಮವಾದ ಸ್ಥಳವನ್ನು ಆಶ್ರಯಿಸಿದ್ದೇನೆ ನಾನು ಹೆದರಿ ಕಳವಳಿಸುತ್ತಿದ್ದೇನೆ. ನನ್ನ

**ಹೃತಭಾರ್ಯೋ ವನೇ ತ್ರಸ್ತೋ ದುರ್ಗಮೇತದುಪಾಶ್ರಿತಃ ।**
**ಸೋಽಹಂ ತ್ರಸ್ತೋ ವನೇ ಭೀತೋ ವಸಾಮ್ಯುದ್ಭ್ರಾಂತಚೇತನಃ ॥**

**ವಾಲಿನಾ ನಿಕೃತೋ ಭ್ರಾತ್ರಾ ಕೃತವೈರಶ್ಚ ರಾಘವ ।**
**ವಾಲಿನೋ ಮೇ ಮಹಾಭಾಗ ಭಯಾರ್ತಸ್ಯಾಭಯಂ ಕುರು ॥　೨೪**

**ಕರ್ತುಮರ್ಹಸಿ ಕಾಕುತ್ಸ್ಥ ಭಯಂ ಮೇ ನ ಭವೇದ್ಯಥಾ ।**
**ಏವಮುಕ್ತಸ್ತು ತೇಜಸ್ವೀ ಧರ್ಮಜ್ಞೋ ಧರ್ಮವತ್ಸಲಃ ॥　೨೫**

**ಪ್ರತ್ಯಭಾಷತ ಕಾಕುತ್ಸ್ಥಃ ಸುಗ್ರೀವಂ ಪ್ರಹಸನ್ನಿವ ।**
**ಉಪಕಾರಫಲಂ ಮಿತ್ರಂ ವಿದಿತಂ ಮೇ ಮಹಾಕಪೇ ॥　೨೬**

**ವಾಲಿನಂ ತಂ ವಧಿಷ್ಯಾಮಿ ತವ ಭಾರ್ಯಾಪಹಾರಿಣಮ್ ।**
**ಅಮೋಘಾಃ ಸೂರ್ಯಸಂಕಾಶಾ ಮಮೈತೇ ನಿಶಿತಾಃ ಶರಾಃ ॥　೨೭**

**ತಸ್ಮಿನ್ ವಾಲಿನಿ ದುರ್ವೃತ್ತೇ ನಿಪತಿಷ್ಯಂತಿ ವೇಗಿತಾಃ ।**
**ಕಂಕಪತ್ರಪ್ರತಿಚ್ಛನ್ನಾ ಮಹೇಂದ್ರಾಶನಿಸಂನಿಭಾಃ ॥　೨೮**

**ತೀಕ್ಷ್ಣಾಗ್ರಾ ಋಜುಪರ್ವಾಣಃ ಸರೋಷಾ ಭುಜಗಾ ಇವ ।**
**ತಮದ್ಯ ವಾಲಿನಂ ಪಶ್ಯ ಕ್ರೂರೈರಾಶೀವಿಷೋಪಮೈಃ ॥　೨೯**

---

ಚೈತನ್ಯ ಉಡುಗಿ ಈ ವನದಲ್ಲಿ ವಾಸಿಸುತ್ತಿದ್ದೇನೆ. ರಾಘವ, ನನ್ನ ಅಣ್ಣನಾದ ವಾಲಿಯೇ ನನಗೆ ಅಪಕಾರಮಾಡಿದ್ದಾನೆ ನನ್ನೊಡನೆ ವೈರವನ್ನು ಬೆಳೆಸಿದ್ದಾನೆ ಮಹಾನುಭಾವ, ವಾಲಿಯ ಭಯದಿಂದ ಖಿನ್ನನಾದ ನನಗೆ ಅಭಯವನ್ನು ನೀಡು (೨೨-೨೪). ಈ ಭಯವು ತಪ್ಪುವಂತೆ ಮಾಡು" ಎಂದು ಪ್ರಾರ್ಥಿಸಿದನು. ಆಗ ತೇಜಸ್ವಿಯೂ ಧರ್ಮಜ್ಞನೂ ಧರ್ಮಸಂರಕ್ಷಕನೂ ಆದ ಕಾಕುತ್ಸ್ಥನು ಮುಗುಳ್ನಗೆಯಿಂದ "ವಾನರೋತ್ತಮ, ಉಪಕಾರವೇ ಮಿತ್ರನಿಂದಾಗಬೇಕಾದ ಪ್ರಯೋಜನ. ಇದನ್ನು ನಾನು ಬಲ್ಲೆ (೨೫-೨೬). ನಿನ್ನ ಭಾರ್ಯೆಯನ್ನಪಹರಿಸಿದ ವಾಲಿಯನ್ನು ನಾನು ಸಂಹರಿಸುವೆನು. ಸೂರ್ಯನಂತೆ ದೇದೀಪ್ಯಮಾನವಾದ ನನ್ನ ನಿಶಿತಾಸ್ತ್ರಗಳು ಅಮೋಘವಾದವು. ದುರಾಚಾರನಾದ ವಾಲಿಯಮೇಲೆ ಈ ಶರಗಳು ಮಹಾವೇಗದಿಂದ ಎರಗುವುವು. ಗರಿಗಟ್ಟಿದ ಈ ಶರಗಳು ದೇವೇಂದ್ರನ ಸಿಡಿಲಿಗೆ ಸಮಾನವಾದವು (೨೭-೨೮). ನೇರವಾದ ಗಿಣ್ಣುಗಳಿರುವ

ಶರೈರ್ವಿನಿಹತಂ ಭೂಮೌ ವಿಕೀರ್ಣಮಿವ ಪರ್ವತಮ್ ।
ಸ ತು ತದ್ವಚನಂ ಶ್ರುತ್ವಾ ರಾಘವಸ್ಯಾತ್ಮನೋ ಹಿತಮ್ ॥ ೩೦

ಸುಗ್ರೀವಃ ಪರಮಪ್ರೀತಃ ಸುಮಹದ್ವಾಕ್ಯಮಬ್ರವೀತ್ ॥

ತವ ಪ್ರಸಾದೇನ ನೃಸಿಂಹ ರಾಘವ
ಪ್ರಿಯಾಂ ಚ ರಾಜ್ಯಂ ಚ ಸಮಾಪ್ನುಯಾಮಹಮ್ ।
ತಥಾ ಕುರು ತ್ವಂ ನರದೇವ ವೈರಿಣಂ
ಯಥಾ ನ ಹಿಂಸ್ಯಾತ್ ಸ ಪುನರ್ಮಮಾಗ್ರಜಮ್ ॥ ೩೧

ಸೀತಾಕಪೀಂದ್ರಕ್ಷಣದಾಚರಾಣಾಂ
ರಾಜೀವಹೇಮಜ್ವಲನೋಪಮಾನಿ ।
ಸುಗ್ರೀವರಾಮಪ್ರಣಯಪ್ರಸಂಗೇ
ವಾಮಾನಿ ನೇತ್ರಾಣಿ ಸಮಂ ಸ್ಫುರಂತಿ ॥ ೩೨

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಪಂಚಮಃ ಸರ್ಗಃ

---

ತೀಕ್ಷ್ಣಾಗ್ರವಾದ ಈ ಅಸ್ತ್ರಗಳು ಕೆರಳಿದ ಸರ್ಪಗಳೆಂದು ತಿಳಿ ವಿಷದಂಷ್ಟ್ರಗಳಂತಿರುವ ಈ ಕ್ರೂರಾಸ್ತ್ರಗಳಿಂದ ಆ ವಾಲಿಯು ಇಂದೇ ಹತನಾಗಿ ನೆಲದ ಮೇಲೆ ಒರಗುವುದನ್ನು ನೋಡು ! ಛಿನ್ನಭಿನ್ನವಾದ ಪರ್ವತದಂತೆ ಉರುಳುವುದನ್ನು ನೋಡು !" ಎಂದು ಹೇಳಿದನು. ಸುಗ್ರೀವನು ರಾಘವನಾಡಿದ ಹಿತಕರವಾದ ನುಡಿಯನ್ನು ಕೇಳಿ ಆನಂದಭರಿತನಾದನು (೨೯-೩೦). ಅವನು "ನರಶ್ರೇಷ್ಠ—ರಾಘವ, ನಿನ್ನ ಅನುಗ್ರಹದಿಂದ ನನ್ನ ಪ್ರಿಯಳನ್ನೂ ರಾಜ್ಯವನ್ನೂ ಪುನಃ ಪಡೆದೇನು. ಅಣ್ಣನೆನಿಸಿಕೊಂಡ ನನ್ನ ವೈರಿಯು ಪುನಃ ನನಗೆ ಹಿಂಸೆಕೊಡದಂತೆ ಉಪಕಾರಮಾಡು" ಎಂದು ಕೇಳಿಕೊಂಡನು (೩೧) ಹೀಗೆ ಶ್ರೀರಾಮನೂ ಸುಗ್ರೀವನೂ ಸ್ನೇಹವನ್ನು ಬೆಳೆಸಿ ಸಂಭಾಷಿಸುತ್ತಿದ್ದ ಸಮಯದಲ್ಲಿ ಸೀತಾದೇವಿಯ ಕಮಲಸದೃಶವಾದ ಎಡಗಣ್ಣು, ವಾಲಿಯ ಹೊಂಬಣ್ಣದ ಎಡಗಣ್ಣು, ರಾವಣನ ಅಗ್ನಿಸಮಾನವಾದ ಎಡಗಣ್ಣು—ಇವೆಲ್ಲವೂ ಏಕಕಾಲದಲ್ಲಿ ಅದಿರಲಾರಂಭಿಸಿದವು ! (೩೨)

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಐದನೆಯ ಸರ್ಗ

## ಷಷ್ಠಃ ಸರ್ಗಃ

### ಭೂಷಣಪ್ರತ್ಯಭಿಜ್ಞಾನಮ್

ಪುನರೇವಾಬ್ರವೀತ್ ಪ್ರೀತಃ ಸುಗ್ರೀವೋ ರಘುನಂದನಮ್ ।
ಅಯಮಾಖ್ಯಾತಿ ಮೇ ರಾಮ ಸಚಿವೋ ಮಂತ್ರಿಸತ್ತಮಃ ॥ ೧
ಹನುಮಾನ್ ಯನ್ನಿಮಿತ್ತಂ ತ್ವಂ ನಿರ್ಜನಂ ವನಮಾಗತಃ ।
ಲಕ್ಷ್ಮಣೇನ ಸಹ ಭ್ರಾತ್ರಾ ವಸತಶ್ಚ ವನೇ ತವ ॥ ೨
ರಕ್ಷಸಾಪಹೃತಾ ಭಾರ್ಯಾ ಮೈಥಿಲೀ ಜನಕಾತ್ಮಜಾ ।
ತ್ವಯಾ ವಿಯುಕ್ತಾ ರುದತೀ ಲಕ್ಷ್ಮಣೇನ ಚ ಧೀಮತಾ ॥ ೩
ಅಂತರಪ್ರೇಪ್ಸುನಾ ತೇನ ಹತ್ವಾ ಗೃಧ್ರಂ ಜಟಾಯುಷಮ್ ।
ಭಾರ್ಯಾವಿಯೋಗಜಂ ದುಃಖಮಚಿರಾತ್ತ್ವಂ ವಿಮೋಕ್ಷ್ಯಸೇ ॥ ೪
ಅಹಂ ತಾಮಾನಯಿಷ್ಯಾಮಿ ನಷ್ಟಾಂ ವೇದಶ್ರುತಿಂ ಯಥಾ ।
ರಸಾತಲೇ ವಾ ವರ್ತಂತೀಂ ವರ್ತಂತೀಂ ವಾ ನಭಃಸ್ಥಲೇ ॥ ೫

### ಸರ್ಗ ೬

ಸೀತಾದೇವಿಯನ್ನು ಅನ್ವೇಷಿಸಿಕೊಡುವುದಾಗಿ ಸುಗ್ರೀವನು ಶ್ರೀರಾಮನಿಗೆ ಮಾತು ಕೊಡುವುದು. ಸೀತೆಯ ಆಭರಣಗಳನ್ನು ನೋಡಿ ಶ್ರೀರಾಮನ ದುಃಖ.

ಸುಗ್ರೀವನು ಪುನಃ ಶ್ರೀರಾಮನನ್ನು ನೋಡಿ ಹೀಗೆಂದನು : "ಶ್ರೀರಾಮ, ನನ್ನ ಮಂತ್ರಿಸತ್ತಮನಾದ ಹನುಮಂತನು ನಿರ್ಜನವಾದ ವನಕ್ಕೆ ನೀನು ಬಂದ ಕಾರಣವನ್ನು ಹೇಳಿದ್ದಾನೆ ತಮ್ಮನಾದ ಲಕ್ಷ್ಮಣ ನೊಡನೆ ವನವಾಸದಲ್ಲಿರುವಾಗ ನಿನ್ನ ಪತ್ನಿಯಾದ ಜನಕಪುತ್ರಿಯನ್ನು ರಾಕ್ಷಸನೊಬ್ಬನು ಅಪಹರಿಸಿದ್ದಾನಂತೆ. ನೀನೂ ಧೀಮಂತನಾದ ಲಕ್ಷ್ಮಣನೂ ಇಲ್ಲದ ವೇಳೆಯಲ್ಲಿ ಕದ್ದುಕೊಂಡುಹೋಗಿರುವನಂತೆ (೧-೩) ಆ ರಾಕ್ಷಸನು ಸಮಯವನ್ನು ಸಾಧಿಸಿ ಬಂದು, ರೋದಿಸುತ್ತಿದ್ದ ದೇವಿಯನ್ನು ಅಪಹರಿಸಿ, ಅಡ್ಡಲಾಗಿ ಬಂದ ಜಟಾಯುವೆಂಬ ಗೃಧ್ರರಾಜನನ್ನು ಕೊಂದು ಒಯ್ದಿರುವ ನೆಂದು ಕೇಳಿದೆನು. ಸ್ವಲ್ಪಕಾಲದಲ್ಲಿಯೇ ಪತ್ನೀವಿಯೋಗದಿಂದಾದ ದುಃಖವು ನೀಗುವುದೆಂದು ತಿಳಿ (೪). ಶ್ರೀರಾಮ, ಆ ದೇವಿಯು ರಸಾತಳದಲ್ಲಿರಲಿ–

*

ಅಹಮಾನೀಯ ದಾಸ್ಯಾಮಿ ತವ ಭಾರ್ಯಾಮರಿಂದಮ ।
ಇದಂ ತಥ್ಯಂ ಮಮ ವಚಸ್ತ್ವಮವೇಹಿ ಚ ರಾಘವ ॥ ೬

ನ ಶಕ್ಯಾ ಸಾ ಜರಯಿತುಮಪಿ ಸೇಂದ್ರೈಃ ಸುರಾಸುರೈಃ ।
ತವ ಭಾರ್ಯಾ ಮಹಾಬಾಹೋ ಭಕ್ಷ್ಯಂ ವಿಷಕೃತಂ ಯಥಾ ॥ ೭

ತ್ಯಜ ಶೋಕಂ ಮಹಾಬಾಹೋ ತಾಂ ಕಾಂತಾಮಾನಯಾಮಿ ತೇ ।
ಅನುಮಾನಾತ್ತು ಜಾನಾಮಿ ಮೈಥಿಲೀ ಸಾ ನ ಸಂಶಯಃ ॥ ೮

ಹ್ರಿಯಮಾಣಾ ಮಯಾ ದೃಷ್ಟಾ ರಕ್ಷಸಾ ಕ್ರೂರಕರ್ಮಣಾ ।
ಕ್ರೋಶಂತೀ ರಾಮ ರಾಮೇತಿ ಲಕ್ಷ್ಮಣೇತಿ ಚ ವಿಸ್ವರಮ್ ॥ ೯

ಸ್ಫುರಂತೀ ರಾವಣಸ್ಯಾಂಕೇ ಪನ್ನಗೇಂದ್ರವಧೂರ್ಯಥಾ ।
ಆತ್ಮನಾಪಂಚಮಂ ಮಾಂ ಹಿ ದೃಷ್ಟ್ವಾ ಶೈಲತಟೇ ಸ್ಥಿತಮ್ ॥ ೧೦

ಉತ್ತರೀಯಂ ತಯಾ ತ್ಯಕ್ತಂ ಶುಭಾನ್ಯಾಭರಣಾನಿ ಚ ।
ತಾನ್ಯಸ್ಮಾಭಿರ್ಗೃಹೀತಾನಿ ನಿಹಿತಾನಿ ಚ ರಾಘವ ॥ ೧೧

---

ನಭಃಸ್ಥಳದಲ್ಲಿರಲಿ, ನಾನು ಹುಡುಕಿ ತರುವೆನು. ಮಧುಕೈಟಭರು ಅಪಹರಿಸಿದ ವೇದವಾಣಿಯನ್ನು ಶ್ರೀಮನ್ನಾರಾಯಣನು ತಂದಂತೆ, ಮೈಥಿಲಿಯನ್ನು ತಂದು ನಿನಗೊಪ್ಪಿಸುವೆನು. ರಾಘವ, ಇದು ನನ್ನ ಸತ್ಯಪ್ರತಿಜ್ಞೆಯೆಂದು ಅವಧರಿಸು (೫-೬). ಇಂದ್ರನೂ ದೇವಾಸುರರೂ ಒಟ್ಟುಗೂಡಿದರೂ ನಿನ್ನ ಪತ್ನಿಯನ್ನು ದಕ್ಕಿಸಿಕೊಳ್ಳಲಾರರು. ವಿಷಮಿಶ್ರವಾದ ಭಕ್ಷ್ಯವನ್ನು ಯಾವನು ತಿಂದು ಬದುಕಿಯಾನು? ಓ ಮಹಾಬಾಹು, ಶೋಕಿಸಬೇಡ. ನಿನ್ನ ಕಾಂತೆಯನ್ನು ತಂದೊಪ್ಪಿಸುವೆನು ಆಕೆಯೇ ಮೈಥಿಲಿಯಾಗಿರಬೇಕೆಂದು ನಾನು ಅನುಮಾನಿಸುತ್ತೇನೆ, ಸಂದೇಹವಿಲ್ಲ. ಶ್ರೀರಾಮ, ಕ್ರೂರಕರ್ಮಿಯಾದ ಆ ರಾಕ್ಷಸನು ಒಬ್ಬ ಯುವತಿಯನ್ನು ಅಪಹರಿಸಿ ಒಯ್ಯುವುದನ್ನು ನಾನು ನೋಡಿದೆನು. ಅವಳು 'ರಾಮ, ರಾಮ, ಲಕ್ಷ್ಮಣ!' ಎಂದು ಕರುಣಸ್ವರದಿಂದ ಕೂಗಿಕೊಳ್ಳುತ್ತಿದ್ದಳು (೭-೯) ಸರ್ಪಿಣಿಯಂತೆ ರಾವಣನ ಅಂಕದಲ್ಲಿ ಹೊರಳಾಡುತ್ತಿದ್ದಳು. ಆಗ ನಾವೈವರೂ ಈ ಬೆಟ್ಟದ ತಪ್ಪಲಲ್ಲಿ ಕುಳಿತಿದ್ದೆವು. ಆಕೆ ನಮ್ಮನ್ನು ನೋಡಿ ತನ್ನ ಆಭರಣಗಳನ್ನು ಉತ್ತರೀಯದಲ್ಲಿ ಸುತ್ತಿ ನಮ್ಮ ಕಡೆಗೆ ಬಿಸುಟಳು. ಅವನ್ನು ನಾವು ತೆಗೆದು

ಆನಯಿಷ್ಯಾಮ್ಯಹಂ ತಾನಿ ಪ್ರತ್ಯಭಿಜ್ಞಾತುಮರ್ಹಸಿ ।
ತಮಬ್ರವೀತ್ತತೋ ರಾಮಃ ಸುಗ್ರೀವಂ ಪ್ರಿಯವಾದಿನಮ್ ॥ ೧೨

ಆನಯಸ್ವ ಸಖೇ ಶೀಘ್ರಂ ಕಿಮರ್ಥಂ ಪ್ರವಿಲಂಬಸೇ ।
ಏವಮುಕ್ತಸ್ತು ಸುಗ್ರೀವಃ ಶೈಲಸ್ಯ ಗಹನಾಂ ಗುಹಾಮ್ ॥ ೧೩

ಪ್ರವಿವೇಶ ತತಃ ಶೀಘ್ರಂ ರಾಘವಪ್ರಿಯಕಾಮ್ಯಯಾ ।
ಉತ್ತರೀಯಂ ಗೃಹೀತ್ವಾ ತು ಶುಭಾನ್ಯಾಭರಣಾನಿ ಚ ॥ ೧೪

ಇದಂ ಪಶ್ಯೇತಿ ರಾಮಾಯ ದರ್ಶಯಾಮಾಸ ವಾನರಃ ।
ತತೋ ಗೃಹೀತ್ವಾ ತದ್ವಾಸಃ ಶುಭಾನ್ಯಾಭರಣಾನಿ ಚ ॥ ೧೫

ಅಭವದ್ಬಾಷ್ಪಸಂರುದ್ಧೋ ನೀಹಾರೇಣೇವ ಚಂದ್ರಮಾಃ ।
ಸೀತಾಸ್ನೇಹಪ್ರವೃತ್ತೇನ ಸ ತು ಬಾಷ್ಪೇಣ ದೂಷಿತಃ ॥ ೧೬

ಹಾ ಪ್ರಿಯೇತಿ ರುದನ್ ಧೈರ್ಯಮುತ್ಸೃಜ್ಯ ನ್ಯಪತತ್ ಕ್ಷಿತೌ ।
ಹೃದಿ ಕೃತ್ವಾ ತು ಬಹುಶಸ್ತಮಲಂಕಾರಮುತ್ತಮಮ್ ॥ ೧೭

---

ಕೊಂಡು ಸುರಕ್ಷಿತವಾಗಿ ಇಟ್ಟಿದ್ದೇವೆ (೧೦-೧೧) ಅವನ್ನು ನಿನಗೆ ತಂದು ತೋರಿಸುವೆನು. ಆಭರಣಗಳನ್ನು ನೀನು ಗುರುತಿಸಬಹುದು" ಎಂದನು. ಹೀಗೆ ಒಳ್ಳೆಯ ಸುದ್ದಿಯನ್ನು ಹೇಳಿದ ಸುಗ್ರೀವನನ್ನು ಕುರಿತು ಶ್ರೀರಾಮನು "ಮಿತ್ರ, ಬೇಗನೆ ತರಿಸು. ತಡಮಾಡುವೆ ಏಕೆ?" ಎಂದು ಕೇಳಿದನು. ಸುಗ್ರೀವನು ಶ್ರೀರಾಮನಿಗೆ ಸಂತೋಷವಾಗಲೆಂದು ಕೂಡಲೆ ತನ್ನ ದುರ್ಗಮವಾದ ಗುಹೆಯನ್ನು ಪ್ರವೇಶಿಸಿ, ಆ ಉತ್ತರೀಯವನ್ನೂ ಆಭರಣಗಳನ್ನೂ ತಂದನು (೧೨-೧೪). ಆ ಕಪೀಂದ್ರನು ಇದನ್ನು ನೋಡೆಂದು ಶ್ರೀರಾಮನಿಗೆ ತೋರಿಸಿದನು. ಶ್ರೀರಾಮನು ಆ ವಸ್ತ್ರವನ್ನೂ ಸುಂದರವಾದ ಆಭರಣಗಳನ್ನೂ ಕೈಯಲ್ಲಿ ಹಿಡಿದುಕೊಂಡನು. ಕಣ್ಣೀರು ಉಕ್ಕಿಬಂದಿತು. ಮುಖವು ಮಂಜುಮುಸುಕಿದ ಚಂದ್ರಮಂಡಲದಂತಾಯಿತು. ಸೀತಾಪ್ರೇಮದಿಂದ ಹರಿದ ಕಂಬನಿ ಮೈಯನ್ನು ನೆನೆಸಿತು (೧೫-೧೬). ಶ್ರೀರಾಮನು ಧೈರ್ಯಗುಂದಿ ಕಣ್ಣೀರುಬಿಡುತ್ತ 'ಹಾ! ಪ್ರಿಯೇ!' ಎಂದು ಕೂಗುತ್ತ ನೆಲದಮೇಲೆ ಬಿದ್ದುಹೋದನು. ಆ ಉತ್ತಮಾಭರಣಗಳನ್ನು ಮತ್ತೆ ಮತ್ತೆ

ನಿಶಶ್ವಾಸ ಭೃಶಂ ಸರ್ಪೋ ಬಿಲಸ್ಥ ಇವ ರೋಷಿತಃ ।
ಅವಿಚ್ಛಿನ್ನಾಶ್ರುವೇಗಸ್ತು ಸೌಮಿತ್ರಿಂ ವೀಕ್ಷ್ಯ ಪಾರ್ಶ್ವತಃ ॥ ೧೮

ಪರಿದೇವಯಿತುಂ ದೀನಂ ರಾಮಃ ಸಮುಪಚಕ್ರಮೇ ।
ಪಶ್ಯ ಲಕ್ಷ್ಮಣ ವೈದೇಹ್ಯಾ ಸಂತ್ಯಕ್ತಂ ಹ್ರಿಯಮಾಣಯಾ ॥ ೧೯

ಉತ್ತರೀಯಮಿದಂ ಭೂಮೌ ಶರೀರಾದ್ಭೂಷಣಾನಿ ಚ ।
ಶಾದ್ವಲಿನ್ಯಾಂ ಧ್ರುವಂ ಭೂಮ್ಯಾಂ ಸೀತಯಾ ಹ್ರಿಯಮಾಣಯಾ ॥

ಉತ್ಸೃಷ್ಟಂ ಭೂಷಣಮಿದಂ ತಥಾರೂಪಂ ಹಿ ದೃಶ್ಯತೇ ।
ಏವಮುಕ್ತಸ್ತು ರಾಮೇಣ ಲಕ್ಷ್ಮಣೋ ವಾಕ್ಯಮಬ್ರವೀತ್ ॥ ೨೦

ನಾಹಂ ಜಾನಾಮಿ ಕೇಯೂರೇ ನಾಹಂ ಜಾನಾಮಿ ಕುಂಡಲೇ ।
ನೂಪುರೇ ತ್ವಭಿಜಾನಾಮಿ ನಿತ್ಯಂ ಪಾದಾಭಿವಂದನಾತ್ ॥ ೨೨

ತತಃ ಸ ರಾಘವೋ ದೀನಃ ಸುಗ್ರೀವಮಿದಮಬ್ರವೀತ್ ।
ಬ್ರೂಹಿ ಸುಗ್ರೀವ ಕಂ ದೇಶಂ ಹ್ರಿಯಂತೀ ಲಕ್ಷಿತಾ ತ್ವಯಾ ॥ ೨೩

---

ಎದೆಗೊತ್ತಿಕೊಂಡು ಬಿಲದಲ್ಲಿ ಕೆರಳಿಸಿದ ಸರ್ಪದಂತೆ ನಿಟ್ಟುಸಿರುಬಿಡುತ್ತಿದ್ದನು. ಅವನು ಧಾರಾಕಾರವಾಗಿ ಕಂಬನಿಗರೆಯುತ್ತ ಲಕ್ಷ್ಮಣನನ್ನು ನೋಡಿ ಗೋಳಾಡಲಾರಂಭಿಸಿದನು (೧೭–೧೮) : "ಲಕ್ಷ್ಮಣ, ಇಲ್ಲಿ ನೋಡು. ರಾಕ್ಷಸನು ಅಪಹರಿಸಿ ಒಯ್ಯುವಾಗ ವೈದೇಹಿಯು ಇವುಗಳನ್ನು ಎಸೆದಿದ್ದಾಳೆ. ತನ್ನ ಉತ್ತರೀಯವನ್ನೂ ಒಡವೆಗಳನ್ನೂ ನೆಲದಮೇಲೆ ಚೆಲ್ಲಿದ್ದಾಳೆ. ಹುಲ್ಲು ಬೆಳೆದು ಮೃದುವಾದ ನೆಲದಮೇಲೆಯೇ ಒಡವೆಗಳನ್ನು ಬಿಸುಟಿರಬೇಕು. ಯಾವ ಪೆಟ್ಟೂ ತಾಗದೆ ಇವು ಮೊದಲಿನಂತೆಯೇ ಕಾಣುತ್ತವೆ" ಎಂದನು (೧೯–೨೦). ಆಗ ಲಕ್ಷ್ಮಣನು ಆಭರಣಗಳನ್ನು ನೋಡಿ "ಅಣ್ಣ, ಈ ಕೇಯೂರಗಳನ್ನೂ ಕುಂಡಲಗಳನ್ನೂ ನಾನು ಕಂಡವನಲ್ಲ. ನನಗೆ ಇವುಗಳ ಗುರುತಿಲ್ಲ. ಈ ಕಾಲಂದಿಗೆಗಳು ಮಾತ್ರ ಅತ್ತಿಗೆಯುವೇ ಹೌದು ನಿತ್ಯವೂ ದೇವಿಯ ಪಾದಗಳಿಗೆ ವಂದಿಸುವಾಗ ಇವುಗಳನ್ನು ನೋಡಿದ್ದೇನೆ" ಎಂದನು (೨೧–೨೨). ರಾಘವನು ದೈನ್ಯದಿಂದ "ಸುಗ್ರೀವ, ನನ್ನ ಪ್ರಾಣಕಾಂತೆಯನ್ನು ಕ್ರೂರನಾದ ರಾಕ್ಷಸನು ಯಾವ ಕಡೆಗೆ ಒಯ್ಯುವುದನ್ನು ನೋಡಿದೆ?

ರಕ್ಷಸಾ ರೌದ್ರರೂಪೇಣ ಮಮ ಪ್ರಾಣೈಃ ಪ್ರಿಯಾ ಪ್ರಿಯಾ ।
ಕ್ವ ವಾ ವಸತಿ ತದ್ರಕ್ಷೋ ಮಹದ್ವ್ಯಸನದಂ ಮಮ ॥ ೨೪

ಯನ್ನಿಮಿತ್ತಮಹಂ ಸರ್ವಾನ್ನಾಶಯಿಷ್ಯಾಮಿ ರಾಕ್ಷಸಾನ್ ।
ಹರತಾ ಮೈಥಿಲೀಂ ಯೇನ ಮಾಂ ಚ ರೋಷಯತಾ ಭೃಶಮ್ ॥ ೨೫

ಆತ್ಮನೋ ಜೀವಿತಾಂತಾಯ ಮೃತ್ಯುದ್ವಾರಮಪಾವೃತಮ್ ॥

ಮಮ ದಯಿತತರಾ ಹೃತಾ ವನಾಂತಾ-
ದ್ರಜನಿಚರೇಣ ವಿಮಥ್ಯ ಯೇನ ಸಾ ।
ಕಥಯ ಮಮ ರಿಪುಂ ತ್ವಮದ್ಯ ವೈ
ಪ್ಲವಗಪತೇ ಯಮಸಂನಿಧಿಂ ನಯಾಮಿ ॥ ೨೬

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಷಷ್ಠಃ ಸರ್ಗಃ



ಹೇಳು. ನನಗೆ ಮಹಾದುಃಖವನ್ನು ತಂದೊಡ್ಡಿದ ಆ ರಾಕ್ಷಸನು ವಾಸಿಸುವುದೆಲ್ಲಿ? (೨೩-೨೪). ಅವನೊಬ್ಬನಿಗೋಸ್ಕರ ನಾನು ಸಕಲ ರಾಕ್ಷಸರನ್ನೂ ನಾಶಮಾಡಬೇಕಾಗಿದೆ. ಅವನು ಮೈಥಿಲಿಯನ್ನಪಹರಿಸಿ ನನಗೆ ಅತ್ಯಂತ ರೋಷವನ್ನುಂಟುಮಾಡಿದ್ದಾನೆ. ತನ್ನ ಜೀವಿತವು ಕೊನೆಗಾಣಲೆಂದು ಮೃತ್ಯುವಿನ ಬಾಗಿಲನ್ನು ತೆರೆದಿದ್ದಾನೆ (೨೫). ವಾನರೇಶ್ವರ, ಆ ನಿಶಾಚರನು ಹಠಾತ್ತಾಗಿ ಬಂದು ನನ್ನ ಪ್ರಿಯಪತ್ನಿಯನ್ನು ಕಾಡಿನಿಂದ ಅಪಹರಿಸಿ ಒಯ್ದಿದ್ದಾನೆ. ನನ್ನ ವೈರಿಯು ಎಲ್ಲಿರುವನೆಂದು ಹೇಳು. ಈ ಕ್ಷಣವೇ ಅವನನ್ನು ಯಮನ ಬಳಿಗೆ ಕಳಿಸುವೆನು" ಎಂದು ನುಡಿದನು (೨೬).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಆರನೆಯ ಸರ್ಗ



## ಸಪ್ತಮಃ ಸರ್ಗಃ

### ರಾಮಸಮಾಶ್ವಾಸನಮ್

ಏವಮುಕ್ತಸ್ತು ಸುಗ್ರೀವೋ ರಾಮೇಣಾರ್ತೇನ ವಾನರಃ ।
ಅಬ್ರವೀತ್ ಪ್ರಾಂಜಲಿರ್ವಾಕ್ಯಂ ಸಬಾಷ್ಪಂ ಬಾಷ್ಪಗದ್ಗದಃ ॥ ೧

ನ ಜಾನೇ ನಿಲಯಂ ತಸ್ಯ ಸರ್ವಥಾ ಪಾಪರಕ್ಷಸಃ ।
ಸಾಮರ್ಥ್ಯಂ ವಿಕ್ರಮಂ ವಾಪಿ ದೌಷ್ಕುಲೇಯಸ್ಯ ವಾ ಕುಲಮ್ ॥ ೨

ಸತ್ಯಂ ತೇ ಪ್ರತಿಜಾನಾಮಿ ತ್ಯಜ ಶೋಕಮರಿಂದಮ ।
ಕರಿಷ್ಯಾಮಿ ತಥಾ ಯತ್ನಂ ಯಥಾ ಪ್ರಾಪ್ಸ್ಯಸಿ ಮೈಥಿಲೀಮ್ ॥ ೩

ರಾವಣಂ ಸಗಣಂ ಹತ್ವಾ ಪರಿತೋಷ್ಯಾತ್ಮಪೌರುಷಮ್ ।
ತಥಾಸ್ಮಿ ಕರ್ತಾ ನ ಚಿರಾದ್ಯಥಾ ಪ್ರೀತೋ ಭವಿಷ್ಯಸಿ ॥ ೪

ಅಲಂ ವೈಕ್ಲವ್ಯಮಾಲಂಬ್ಯ ಧೈರ್ಯಮಾತ್ಮಗತಂ ಸ್ಮರ ।
ತ್ವದ್ವಿಧಾನಾಮಸದೃಶಮೀದೃಶಂ ವಿದ್ಧಿ ಲಾಘವಮ್ ॥ ೫

## ಸರ್ಗ ೭

ಸುಗ್ರೀವನು ಶ್ರೀರಾಮನನ್ನು ಸಂತೈಸುವುದು. ಸುಗ್ರೀವನ ಕಾರ್ಯವನ್ನು ಸಾಧಿಸುವೆನೆಂದು ಶ್ರೀರಾಮನ ಪ್ರತಿಜ್ಞೆ.

ಶೋಕಾವಿಷ್ಟನಾದ ಶ್ರೀರಾಮನು ಈ ಪ್ರಕಾರ ನುಡಿಯಲಾಗಿ, ಸುಗ್ರೀವನಿಗೆ ಕಂಬನಿ ತುಂಬಿತು. ಅವನು ಗದ್ಗದಧ್ವನಿಯಿಂದ "ವೀರಾಗ್ರಣಿ, ಪಾಪಿಯಾದ ಆ ರಾಕ್ಷಸನ ವಾಸಸ್ಥಾನವು ಸರಿಯಾಗಿ ನನಗೆ ಗೊತ್ತಿಲ್ಲ. ಆ ದುರಾತ್ಮನ ಸಾಮರ್ಥ್ಯವಾಗಲಿ ಸಂಚಾರಕ್ರಮವಾಗಲಿ ಕುಲವಾಗಲಿ ನನಗೆ ತಿಳಿಯದು * (೧-೨). ನೀನು ಶೋಕವನ್ನು ತ್ಯಜಿಸು. ಆಣೆಯಿಟ್ಟು ಹೇಳುತ್ತೇನೆ. ನಿನಗೆ ಮೈಥಿಲಿಯು ಸಿಗುವಂತೆ ನಾನು ಪ್ರಯತ್ನಮಾಡು ವೆನು. ರಾವಣನನ್ನು ಅವನ ಪರಿವಾರಸಮೇತವಾಗಿ ಕೊಂದು ನನ್ನ ಪೌರುಷವನ್ನು ಸಾರ್ಥಕಪಡಿಸುವೆನು. ನೀನು ಸುಪ್ರೀತನಾಗುವಂತೆ ಕ್ಷಿಪ್ರದಲ್ಲಿಯೇ ಕಾರ್ಯವನ್ನೆಸಗುವೆನು (೩-೪). ಈ ದೈನ್ಯವನ್ನು ಬಿಡು. ನಿನಗೆ ಸಹಜವಾದ ಧೈರ್ಯವನ್ನವಲಂಬಿಸು. ಈ ಬಗೆಯ ಲಘುಸ್ವಭಾವವು

* ಅನುಬಂಧವನ್ನು ನೋಡಿ.

ಮಯಾಪಿ ವ್ಯಸನಂ ಪ್ರಾಪ್ತಂ ಭಾರ್ಯಾಹರಣಜಂ ಮಹತ್ ।
ನ ಚಾಹಮೇವಂ ಶೋಚಾಮಿ ನ ಚ ಧೈರ್ಯಂ ಪರಿತ್ಯಜೇ ॥ ೬

ನಾಹಂ ತಾಮನುಶೋಚಾಮಿ ಪ್ರಾಕೃತೋ ವಾನರೋಽಪಿ ಸನ್ ।
ಮಹಾತ್ಮಾ ಚ ವಿನೀತಶ್ಚ ಕಿಂ ಪುನರ್ಧೃತಿಮಾನ್ ಭವಾನ್ ॥ ೭

ಬಾಷ್ಪಮಾಪತಿತಂ ಧೈರ್ಯಾನ್ನಿಗ್ರಹೀತುಂ ತ್ವಮರ್ಹಸಿ ।
ಮರ್ಯಾದಾಂ ಸತ್ತ್ವಯುಕ್ತಾನಾಂ ಧೃತಿಂ ನೋತ್ಸ್ರಷ್ಟುಮರ್ಹಸಿ॥

ವ್ಯಸನೇ ವಾರ್ಥಕೃಚ್ಛ್ರೇ ವಾ ಭಯೇ ವಾ ಜೀವಿತಾಂತಕೇ ।
ವಿಮೃಶನ್ ವೈ ಸ್ವಯಾ ಬುದ್ಧ್ಯಾ ಧೃತಿಮಾನ್ನಾವಸೀದತಿ ॥ ೯

ಬಾಲಿಶಸ್ತು ನರೋ ನಿತ್ಯಂ ವೈಕ್ಲವ್ಯಂ ಯೋಽನುವರ್ತತೇ ।
ಸ ಮಜ್ಜತ್ಯವಶಃ ಶೋಕೇ ಭಾರಾಕ್ರಾಂತೇವ ನೌರ್ಜಲೇ ॥ ೧೦

ಏಷೋಽಂಜಲಿರ್ಮಯಾ ಬದ್ಧಃ ಪ್ರಣಯಾತ್ತ್ವಾಂ ಪ್ರಸಾದಯೇ ।
ಪೌರುಷಂ ಶ್ರಯ ಶೋಕಸ್ಯ ನಾಂತರಂ ದಾತುಮರ್ಹಸಿ ॥ ೧೧

---

ನಿನ್ನಂತಹವರಿಗೆ ಯೋಗ್ಯವಲ್ಲವೆಂದು ತಿಳಿ ನನಗೂ ಸಹ ಭಾರ್ಯಾಪಹರಣದ ಮಹಾವ್ಯಸನವು ಪ್ರಾಪ್ತವಾಗಿದೆ. ಆದರೂ ನಾನು ಹೀಗೆ ಶೋಕಿಸುತ್ತಿಲ್ಲ, ಧೈರ್ಯವನ್ನು ಬಿಟ್ಟಿಲ್ಲ! (೫-೬). ಅಲ್ಪಜ್ಞನಾದ ವಾನರನಾದರೂ ನಾನು ನಿನ್ನಂತೆ ಹೆಂಡತಿಗಾಗಿ ದುಃಖಿಸುತ್ತಿಲ್ಲ. ಮಹಾತ್ಮನೂ ಸುಶಿಕ್ಷಿತನೂ ಧೀರನೂ ಆದ ನಿನ್ನ ವಿಷಯದಲ್ಲಿ ನಾನೇನು ಹೇಳಲಿ? ಉಕ್ಕುವ ಕಣ್ಣೀರನ್ನು ಗಟ್ಟಿಮನಸ್ಸುಮಾಡಿ ಬಿಗಿಹಿಡಿ. ಸತ್ತ್ವಶಾಲಿಗಳ ಶ್ರೇಷ್ಠಗುಣವಾದ ಧೀರತೆಯನ್ನು ಬಿಡಬೇಡ (೭-೮). ದುಃಖಕಾಲದಲ್ಲಾಗಲಿ ಆರ್ಥಿಕವಾದ ಮುಗ್ಗಟ್ಟಿನಲ್ಲಾಗಲಿ ಪ್ರಾಣಾಂತಕವಾದ ವಿಪತ್ತಿನಲ್ಲಾಗಲಿ ಸ್ವಬುದ್ಧಿಯಿಂದ ವಿಮರ್ಶಿಸಿ ಧೈರ್ಯವನ್ನು ತಂದುಕೊಳ್ಳುವವನಿಗೆ ಯಾವ ಹಾನಿಯೂ ಒದಗದು (೯). ಆದರೆ ಯಾವನು ವಿಮರ್ಶೆಯಿಲ್ಲದೆ ಥಟ್ಟನೆ ಎದೆಗುಂದುವನೋ ಅವನು ದಿಕ್ಕಿಲ್ಲದೆ ಶೋಕದಲ್ಲಿ ಮುಳುಗಿಹೋಗುತ್ತಾನೆ. ಹೊರಲಾರದ ಹೊರೆಯನ್ನು ಹೊತ್ತ ದೋಣಿಯು ನೀರಿನಲ್ಲಿ ಮುಳುಗುವಂತೆ ದುಃಖದಿಂದ ಕುಸಿದುಹೋಗುತ್ತಾನೆ (೧೦). ಶ್ರೀರಾಮ, ಇದೋ ಕೈಮುಗಿದು ಬೇಡುತ್ತೇನೆ, ಸ್ನೇಹದಿಂದ ಕೇಳಿಕೊಳ್ಳು

ಯೇ ಶೋಕಮನುವರ್ತಂತೇ ನ ತೇಷಾಂ ವಿದ್ಯತೇ ಸುಖಮ್ ।
ತೇಜಶ್ಚ ಕ್ಷೀಯತೇ ತೇಷಾಂ ನ ತ್ವಂ ಶೋಚಿತುಮರ್ಹಸಿ ॥ ೧೨

ಶೋಕೇನಾಭಿಪ್ರಪನ್ನಸ್ಯ ಜೀವಿತೇ ಚಾಪಿ ಸಂಶಯಃ ।
ಸ ಶೋಕಂ ತ್ಯಜ ರಾಜೇಂದ್ರ ಧೈರ್ಯಮಾಶ್ರಯ ಕೇವಲಮ್ ॥ ೧೩

ಹಿತಂ ವಯಸ್ಯಭಾವೇನ ಬ್ರೂಮಿ ನೋಪದಿಶಾಮಿ ತೇ ।
ವಯಸ್ಯತಾಂ ಪೂಜಯನ್ ಮೇ ನ ತ್ವಂ ಶೋಚಿತುಮರ್ಹಸಿ ॥ ೧೪

ಮಧುರಂ ಸಾಂತ್ವಿತಸ್ತೇನ ಸುಗ್ರೀವೇಣ ಸ ರಾಘವಃ ।
ಮುಖಮಶ್ರುಪರಿಕ್ಲಿನ್ನಂ ವಸ್ತ್ರಾಂತೇನ ಪ್ರಮಾರ್ಜಯನ್ ॥ ೧೫

ಪ್ರಕೃತಿಸ್ಥಸ್ತು ಕಾಕುತ್ಸ್ಥಃ ಸುಗ್ರೀವವಚನಾತ್ ಪ್ರಭುಃ ।
ಸಂಪರಿಷ್ವಜ್ಯ ಸುಗ್ರೀವಮಿದಂ ವಚನಮಬ್ರವೀತ್ ॥ ೧೬

ಕರ್ತವ್ಯಂ ಯದ್ವಯಸ್ಯೇನ ಸ್ನಿಗ್ಧೇನ ಚ ಹಿತೇನ ಚ ।
ಅನುರೂಪಂ ಚ ಯುಕ್ತಂ ಚ ಕೃತಂ ಸುಗ್ರೀವ ತತ್ತ್ವಯಾ ॥ ೧೭

---

ತ್ತೇನೆ ಪೌರುಷವನ್ನಾಶ್ರಯಿಸು. ದುಃಖಕ್ಕೆ ಅವಕಾಶವನ್ನು ಕೊಡಬೇಡ. ವ್ಯಥೆಪಡುತ್ತ ಕುಳಿತುಕೊಳ್ಳುವವರಿಗೆ ಸುಖವು ದೊರೆಯದು. ಅಂಥವರ ತೇಜಸ್ಸೂ ಕ್ಷೀಣಿಸುವುದು. ನೀನು ಚಿಂತಿಸಬೇಡ (೧೧-೧೨). ದುಃಖವಶರಾದವರಿಗೆ ಒಂದುವೇಳೆ ಪ್ರಾಣಕ್ಕೇ ಸಂದೇಹ ಒದಗಬಹುದು. ಆದ್ದರಿಂದ, ರಾಜೇಂದ್ರ, ಕೇವಲ ಧೈರ್ಯವನ್ನವಲಂಬಿಸು. ಮಿತ್ರನೆಂಬ ಸಲಿಗೆಯಿಂದ ಹಿತವನ್ನು ಹೇಳುತ್ತಿದ್ದೇನೆ. ನಿನಗೆ ಬುದ್ಧಿವಾದವನ್ನು ಹೇಳುವ ಶಕ್ತಿ ನನಗಿಲ್ಲ. ನನ್ನ ಸ್ನೇಹಭಾವವನ್ನು ಆದರಿಸಿಯಾದರೂ ದುಃಖಿಸಬೇಡ" ಎಂದು ಮೃದುವಾಗಿ ಹೇಳಿ ಸಂತೈಸಿದನು (೧೩-೧೪). ಸುಗ್ರೀವನ ಮಾತನ್ನು ಕೇಳಿ ರಾಘವನು ಚೇತರಿಸಿಕೊಳ್ಳುತ್ತ, ಮುಖದಮೇಲೆ ಒಸರುತ್ತಿದ್ದ ಕಂಬನಿಯನ್ನು ವಸ್ತ್ರದ ಸೆರಗಿನಿಂದ ಒರಸಿಕೊಳ್ಳುತ್ತ, ಸುಗ್ರೀವನನ್ನು ಆಲಿಂಗಿಸಿಕೊಂಡು ಹೀಗೆಂದನು (೧೫-೧೬): "ಮಿತ್ರ-ಸುಗ್ರೀವ, ಗಾಢವಾದ ಸ್ನೇಹವುಳ್ಳ ಹಿತಕಾರಿಯಾದ ವಯಸ್ಯನ ಕರ್ತವ್ಯವನ್ನು ಮಾಡಿದ್ದೀಯೆ. ಇಂಥ ಸಮಯದಲ್ಲಿ ಸ್ನೇಹಕ್ಕೆ ಉಚಿತವೂ ಯುಕ್ತವೂ ಆದುದನ್ನು ಹೇಳಿದ್ದೀಯೆ.

ಏಷ ಚ ಪ್ರಕೃತಿಸ್ಥೋಽಹಮನುನೀತಸ್ತ್ವಯಾ ಸಖೇ ।
ದುರ್ಲಭೋ ಹೀದೃಶೋ ಬಂಧುರಸ್ಮಿನ್ ಕಾಲೇ ವಿಶೇಷತಃ ॥ ೧೮

ಕಿಂ ತು ಯತ್ನಸ್ತ್ವಯಾ ಕಾರ್ಯೋ ಮೈಥಿಲ್ಯಾಃ ಪರಿಮಾರ್ಗಣೇ ।
ರಾಕ್ಷಸಸ್ಯ ಚ ರೌದ್ರಸ್ಯ ರಾವಣಸ್ಯ ದುರಾತ್ಮನಃ ॥ ೧೯

ಮಯಾ ಚ ಯದನುಷ್ಠೇಯಂ ವಿಸ್ರಬ್ಧೇನ ತದುಚ್ಯತಾಮ್ ।
ವರ್ಷಾಸ್ವಿವ ಚ ಸುಕ್ಷೇತ್ರೇ ಸರ್ವಂ ಸಂಪದ್ಯತೇ ಮಯಿ ॥ ೨೦

ಮಯಾ ಚ ಯದಿದಂ ವಾಕ್ಯಮಭಿಮಾನಾತ್ ಸಮೀರಿತಮ್ ।
ತತ್ತ್ವಯಾ ಹರಿಶಾರ್ದೂಲ ತತ್ತ್ವಮಿತ್ಯುಪಧಾರ್ಯತಾಮ್ ॥ ೨೧

ಅನೃತಂ ನೋಕ್ತಪೂರ್ವಂ ಮೇ ನ ಚ ವಕ್ಷ್ಯೇ ಕದಾಚನ ।
ಏತತ್ತೇ ಪ್ರತಿಜಾನಾಮಿ ಸತ್ಯೇನೈವ ಶಪಾಮಿ ತೇ ॥ ೨೨

ತತಃ ಪ್ರಹೃಷ್ಟಃ ಸುಗ್ರೀವೋ ವಾನರೈಃ ಸಚಿವೈಃ ಸಹ ।
ರಾಘವಸ್ಯ ವಚಃ ಶ್ರುತ್ವಾ ಪ್ರತಿಜ್ಞಾತಂ ವಿಶೇಷತಃ ॥ ೨೩

ಏವಮೇಕಾಂತಸಂಪೃಕ್ತೌ ತತಸ್ತೌ ನರವಾನರೌ ।
ಉಭಾವನ್ಯೋನ್ಯಸದೃಶಂ ಸುಖಂ ದುಃಖಂ ಪ್ರಭಾಷತಾಮ್ ॥ ೨೪

---

ನಿನ್ನ ಹಿತವಾದದಿಂದ ನನ್ನ ಮನಸ್ಸಿಗೆ ನೆಮ್ಮದಿಯೆನಿಸಿದೆ. ಈ ಕಷ್ಟಕಾಲದಲ್ಲಿ ನಿನ್ನಂಥ ಆಪದ್ಬಂಧುವು ದುರ್ಲಭ (೧೭-೧೮) ಮೈಥಿಲಿಯನ್ನು ಹುಡುಕಲು ನೀನು ಪ್ರಯತ್ನಿಸಬೇಕು. ದುರಾತ್ಮನೂ ಕ್ರೂರನೂ ಆದ ರಾವಣನನ್ನು ಗೊತ್ತುಹಚ್ಚಬೇಕು. ಈಗ ನಾನು ಮಾಡಬೇಕಾದ್ದನ್ನು ಸಂಕೋಚವಿಲ್ಲದೆ ಹೇಳು ಒಳ್ಳೆಯ ಹೊಲದಲ್ಲಿ ಮಳೆಗಾಲವನ್ನು ನೋಡಿ ಬಿತ್ತಿದ ಬೀಜದಂತೆ, ನನಗೆ ವಹಿಸಿದ ಕಾರ್ಯವು ಫಲಿಸಿಯೇ ತೀರುವುದೆಂದು ತಿಳಿ (೧೯-೨೦). ಆತ್ಮವಿಶ್ವಾಸದಿಂದ ನಾನೇನು ಹೇಳಿದೆನೋ, ವಾನರೇಂದ್ರ, ಅದು ಸತ್ಯವೆಂದೇ ನಿಶ್ಚಯಿಸು. ನಾನು ಸುಳ್ಳನ್ನು ಆಡಿದವನಲ್ಲ, ಮುಂದೆಯೂ ಆಡತಕ್ಕವನಲ್ಲ. ಈ ವಿಷಯದಲ್ಲಿ ಪ್ರತಿಜ್ಞೆಮಾಡಿಕೊಡುವೆನು. ಸತ್ಯದಮೇಲೆ ಆಣೆಯಿಟ್ಟು ಹೇಳುವೆನು" ಎಂದನು (೨೧-೨೨). ಶ್ರೀರಾಮನು ಈ ರೀತಿಯಾಗಿ ಪ್ರತಿಜ್ಞೆಮಾಡಿ ಹೇಳಲು, ಸುಗ್ರೀವನೂ ಅವನ ಸಚಿವರಾದ ವಾನರರೂ ಸಂತೋಷದಿಂದ ಉಬ್ಬಿದರು. ಹೀಗೆ ವಿಶೇಷವಾಗಿ ಸ್ನೇಹವನ್ನು ಬೆಳೆಸಿಕೊಂಡ ಶ್ರೀರಾಮ-ಸುಗ್ರೀವರು ತಮ್ಮ ತಮ್ಮ

ಮಹಾನುಭಾವಸ್ಯ ವಚೋ ನಿಶಮ್ಯ
ಹರಿರ್ನರಾಣಾಮೃಷಭಸ್ಯ ತಸ್ಯ ।
ಕೃತಂ ಸ ಮೇನೇ ಹರಿವೀರಮುಖ್ಯ-
ಸ್ತದಾ ಸ್ವಕಾರ್ಯಂ ಹೃದಯೇನ ವಿದ್ವಾನ್ ॥ ೨೫

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಸಪ್ತಮಃ ಸರ್ಗಃ

---

## ಅಷ್ಟಮಃ ಸರ್ಗಃ

ವಾಲಿವಧಪ್ರತಿಜ್ಞಾ

ಪರಿತುಷ್ಟಸ್ತು ಸುಗ್ರೀವಸ್ತೇನ ವಾಕ್ಯೇನ ವಾನರಃ ।
ಲಕ್ಷ್ಮಣಸ್ಯಾಗ್ರತೋ ರಾಮಮಿದಂ ವಚನಮಬ್ರವೀತ್ ॥ ೧
ಸರ್ವಥಾಹಮನುಗ್ರಾಹ್ಯೋ ದೇವತಾನಾಮಸಂಶಯಃ ।
ಉಪಪನ್ನಗುಣೋಪೇತಃ ಸಖಾ ಯಸ್ಯ ಭವಾನ್ ಮಮ ॥ ೨

---

ಸುಖದುಃಖಗಳನ್ನು ಹೇಳಿಕೊಂಡರು (೨೩-೨೪). ಮಹಾನುಭಾವನೂ ಪುರುಷಶ್ರೇಷ್ಠನೂ ಆದ ಶ್ರೀರಾಮನ ಮಾತನ್ನು ಕೇಳಿ, ಬುದ್ಧಿವಂತನಾದ ವಾನರೇಂದ್ರನು ತನ್ನ ಕಾರ್ಯವು ಕೈಗೂಡಿತೆಂದು ಮನಸ್ಸಿನಲ್ಲಿ ಸಂತೋಷಿಸಿದನು (೨೫)

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಏಳನೆಯ ಸರ್ಗ

---

## ಸರ್ಗ ೮

ಸುಗ್ರೀವನು ತನ್ನ ದುಃಖದ ಕಾರಣವನ್ನು ವಿವರಿಸುವುದು.
ವಾಲಿಯನ್ನು ವಧಿಸುವೆನೆಂದು ಶ್ರೀರಾಮನ ಪ್ರತಿಜ್ಞೆ.

ಸುಗ್ರೀವನು ಶ್ರೀರಾಮನ ಹೇಳಿಕೆಯಿಂದ ಸಂತುಷ್ಟನಾಗಿ ಲಕ್ಷ್ಮಣನೆದುರಿಗೆ ಶ್ರೀರಾಮನನ್ನುದ್ದೇಶಿಸಿ ಹೇಳಿದನು: "ರಾಘವ, ರಾಜಯೋಗ್ಯವಾದ ಶೌರ್ಯಾದಿ ನಿಖಿಲ ಮಹಾಗುಣಗಳೂ ನಿನ್ನಲ್ಲಿವೆ ನೀನು ನನ್ನ ಗೆಳೆಯನಾದ್ದರಿಂದ ನಾನು ದೇವತಾನುಗ್ರಹಕ್ಕೆ ಪಾತ್ರನಾದೆನು (೧-೨).

ಶಕ್ಯಂ ಖಲು ಭವೇದ್ರಾಮ ಸಹಾಯೇನ ತ್ವಯಾನಘ ।
ಸುರರಾಜ್ಯಮಪಿ ಪ್ರಾಪ್ತುಂ ಸ್ವರಾಜ್ಯಂ ಕಿಂ ಪುನಃ ಪ್ರಭೋ ॥ ೩

ಸೋಽಹಂ ಸಭಾಜ್ಯೋ ಬಂಧೂನಾಂ ಸುಹೃದಾಂ ಚೈವ ರಾಘವ ।
ಯಸ್ಯಾಗ್ನಿಸಾಕ್ಷಿಕಂ ಮಿತ್ರಂ ಲಬ್ಧಂ ರಾಘವವಂಶಜಮ್ ॥ ೪

ಅಹಮಪ್ಯನುರೂಪಸ್ತೇ ವಯಸ್ಯೋ ಜ್ಞಾಸ್ಯಸೇ ಶನೈಃ ।
ನ ತು ವಕ್ತುಂ ಸಮರ್ಥೋಽಹಂ ಸ್ವಯಮಾತ್ಮಗತಾನ್ ಗುಣಾನ್ ॥

ಮಹಾತ್ಮನಾಂ ತು ಭೂಯಿಷ್ಠಂ ತ್ವದ್ವಿಧಾನಾಂ ಕೃತಾತ್ಮನಾಮ್ ।
ನಿಶ್ಚಲಾ ಭವತಿ ಪ್ರೀತಿರ್ಧೈರ್ಯಮಾತ್ಮವತಾಂ ವರ ॥ ೬

ರಜತಂ ವಾ ಸುವರ್ಣಂ ವಾ ವಸ್ತ್ರಾಣ್ಯಾಭರಣಾನಿ ಚ ।
ಅವಿಭಕ್ತಾನಿ ಸಾಧೂನಾಮವಗಚ್ಛಂತಿ ಸಾಧವಃ ॥ ೭

ಆಢ್ಯೋ ವಾಪಿ ದರಿದ್ರೋ ವಾ ದುಃಖಿತಃ ಸುಖಿತೋಽಪಿ ವಾ ।
ನಿರ್ದೋಷೋ ವಾ ಸದೋಷೋ ವಾ ವಯಸ್ಯಃ ಪರಮಾ ಗತಿಃ ॥ ೮

---

ಹೇ ಪ್ರಭು, ನಿನ್ನ ಸಹಾಯದಿಂದ ದೇವರಾಜ್ಯವನ್ನಾದರೂ ಕಸಿದು ಕೊಂಡೇನು. ಇನ್ನು ನನ್ನ ರಾಜ್ಯವನ್ನು ಪಡೆಯುವುದು ದುಷ್ಕರವಾದೀತೆ? ರಘುವಂಶತಿಲಕನು ಅಗ್ನಿಸಾಕ್ಷಿಕವಾಗಿ ನನ್ನ ಮಿತ್ರನಾದಮೇಲೆ, ನನ್ನ ಬಂಧುಮಿತ್ರರೆಲ್ಲರ ಗೌರವಕ್ಕೆ ಪಾತ್ರನಾದೆನು (೩-೪). ಶ್ರೀರಾಮ, ನಾನು ನಿನಗೆ ಅನುರೂಪನಾದ ಮಿತ್ರನೆಂಬುದು ಕಾಲಕ್ರಮದಲ್ಲಿ ನಿನಗೆ ತಿಳಿದೀತು. ನನ್ನ ಗುಣಗಳನ್ನು ನಾನೇ ಹೇಳಿಕೊಳ್ಳಲಾರೆ. ನೀನು ಮನೋನಿಗ್ರಹ ವುಳ್ಳವರಲ್ಲಿ ಅಗ್ರಗಣ್ಯ. ಮಹಾತ್ಮರೂ ಸಂಸ್ಕೃತಿಸಂಪನ್ನರೂ ಆದ ನಿನ್ನಂತಹವರ ಪ್ರೀತಿಯು ಸರ್ವಥಾ ಅಚಲವಾದುದು (೫-೬). ಸಜ್ಜನ ರಾದ ಮಿತ್ರರು ತಮ್ಮ ರಜತ, ಸುವರ್ಣ, ವಸ್ತ್ರ, ಆಭರಣ ಮುಂತಾದ ವಸ್ತು ಗಳನ್ನು ಅನ್ಯೋನ್ಯವಾಗಿ ಅವಿಭಕ್ತವೆಂದೆಣಿಸುತ್ತಾರೆ. ಅವುಗಳಲ್ಲಿ ಭೇದ ಬುದ್ಧಿಯನ್ನು ಇಡುವುದಿಲ್ಲ (೭) ಸ್ನೇಹಿತನು ಸ್ನೇಹಿತನೆಂಬುದೊಂದನ್ನೇ ಮುಖ್ಯವಾಗಿ ಗಣಿಸುತ್ತಾನೆ. ಅವನು ಶ್ರೀಮಂತನಾಗಿರಲಿ-ಬಡವನಾಗಿರಲಿ, ದುಃಖಿಯಾಗಿರಲಿ-ಸುಖಿಯಾಗಿರಲಿ, ದೋಷಿಯಾಗಿರಲಿ-ದೋಷರಹಿತನಾಗಿ

ಧನತ್ಯಾಗಃ ಸುಖತ್ಯಾಗೋ ದೇಹತ್ಯಾಗೋಽಪಿ ವಾ ಪುನಃ ।
ವಯಸ್ಯಾರ್ಥೇ ಪ್ರವರ್ತಂತೇ ಸ್ನೇಹಂ ದೃಷ್ಟ್ವಾ ತಥಾವಿಧಮ್ ॥ ೯
ತತ್ತಥೇತ್ಯಬ್ರವೀದ್ರಾಮಃ ಸುಗ್ರೀವಂ ಪ್ರಿಯವಾದಿನಮ್ ।
ಲಕ್ಷ್ಮಣಸ್ಯಾಗ್ರತೋ ಲಕ್ಷ್ಮ್ಯಾ ವಾಸವಸ್ಯೇವ ಧೀಮತಃ ॥ ೧೦
ತತೋ ರಾಮಂ ಸ್ಥಿತಂ ದೃಷ್ಟ್ವಾ ಲಕ್ಷ್ಮಣಂ ಚ ಮಹಾಬಲಮ್ ।
ಸುಗ್ರೀವಃ ಸರ್ವತಶ್ಚಕ್ಷುರ್ವನೇ ಲೋಲಮಪಾತಯತ್ ॥ ೧೧
ಸ ದದರ್ಶ ತತಃ ಸಾಲಮವಿದೂರೇ ಹರೀಶ್ವರಃ ।
ಸುಪುಷ್ಪಮೀಷತ್ಪತ್ರಾಢ್ಯಂ ಭ್ರಮರೈರುಪಶೋಭಿತಮ್ ॥ ೧೨
ತಸ್ಯೈಕಾಂ ಪರ್ಣಬಹುಲಾಂ ಭಂಕ್ತ್ವಾ ಶಾಖಾಂ ಸುಪುಷ್ಪಿತಾಮ್ ।
ಸಾಲಸ್ಯಾಸ್ತೀರ್ಯ ಸುಗ್ರೀವೋ ನಿಷಸಾದ ಸರಾಘವಃ ॥ ೧೩
ತಾವಾಸೀನೌ ತತೋ ದೃಷ್ಟ್ವಾ ಹನೂಮಾನಪಿ ಲಕ್ಷ್ಮಣಮ್ ।
ಸಾಲಶಾಖಾಂ ಸಮುತ್ಪಾಟ್ಯ ವಿನೀತಮುಪವೇಶಯತ್ ॥ ೧೪

---

ರಲಿ ಸ್ನೇಹಿತನು ಅದೊಂದನ್ನೂ ಲೆಕ್ಕಿಸುವುದಿಲ್ಲ (೮). ದೃಢವಾದ ಸ್ನೇಹವೊಂದನ್ನು ನೋಡಿ ಏನುಬೇಕಾದರೂ ನಡೆಯಬಹುದು. ಸ್ನೇಹಿತನಿಗೋಸ್ಕರ ಐಶ್ವರ್ಯವನ್ನು ತ್ಯಜಿಸಬಹುದು, ಸುಖವನ್ನು ತ್ಯಜಿಸಬಹುದು. ಕಡೆಗೆ ದೇಹವನ್ನಾದರೂ ಒಪ್ಪಿಸಬಹುದು" ಎಂದನು (೯). ಆಗ ಶ್ರೀರಾಮನು ದೇವೇಂದ್ರನಂತೆ ಕಾಂತಿಯುಕ್ತನಾಗಿ ನಿಂತಿದ್ದ ಧೀಮಂತನಾದ ಲಕ್ಷ್ಮಣನೆದುರಿಗೆ (ಅವನ ಮುಖವನ್ನು ನೋಡುತ್ತ) "ಸುಗ್ರೀವ, ನೀನು ಹೇಳುವುದು ಸತ್ಯ" ಎಂದು ಹೇಳಿದನು (೧೦). ಆಮೇಲೆ ಶ್ರೀರಾಮನೂ ಲಕ್ಷ್ಮಣನೂ ನಿಂತಿರುವುದನ್ನು ನೋಡಿ ಸುಗ್ರೀವನು ಸುತ್ತಲೂ ಇದ್ದ ಅರಣ್ಯದಲ್ಲಿ ಅತ್ತಿತ್ತ ದೃಷ್ಟಿಯನ್ನು ಹರಿಸಿದನು. ಚೆನ್ನಾಗಿ ಅರಳಿದ ಒಂದು ಸಾಲವೃಕ್ಷವು ಸಮೀಪದಲ್ಲಿ ಕಾಣಿಸಿತು. ಎಲೆಗಳಿಗಿಂತ ಹೂಗಳೇ ಹೆಚ್ಚಾಗಿದ್ದವು. ದುಂಬಿಗಳು ಮುತ್ತಿದ್ದವು (೧೧-೧೨). ಸುಗ್ರೀವನು ಅದರಲ್ಲಿಯೇ ಹೆಚ್ಚು ಎಲೆಗಳಿದ್ದ ಕೊಂಬೆಯೊಂದನ್ನು ಮುರಿದು ಹಾಸಿ, ಅದರಮೇಲೆ ರಾಘವನೊಡನೆ ಕುಳಿತನು. ಅವರಿಬ್ಬರೂ ಕುಳಿತುದನ್ನು ಕಂಡು ಹನುಮಂತನು ಸಾಲವೃಕ್ಷದ ಮತ್ತೊಂದು ಶಾಖೆಯನ್ನು ಮುರಿದು ಹಾಸಿ,

ಸುಖೋಪವಿಷ್ಟಂ ರಾಮಂ ತು ಪ್ರಸನ್ನಮುದಧಿಂ ಯಥಾ ।
ಫಲಪುಷ್ಪಸಮಾಕೀರ್ಣೇ ತಸ್ಮಿನ್ ಗಿರಿವರೋತ್ತಮೇ ॥ ೧೩

ತತಃ ಪ್ರಹೃಷ್ಟಃ ಸುಗ್ರೀವಃ ಶ್ಲಕ್ಷ್ಣಂ ಮಧುರಯಾ ಗಿರಾ ।
ಉವಾಚ ಪ್ರಣಯಾದ್ರಾಮಂ ಹರ್ಷವ್ಯಾಕುಲಿತಾಕ್ಷರಮ್ ॥ ೧೬

ಅಹಂ ವಿನಿಕೃತೋ ಭ್ರಾತ್ರಾ ಚರಾಮ್ಯೇಷ ಭಯಾರ್ದಿತಃ ।
ಋಶ್ಯಮೂಕಂ ಗಿರಿವರಂ ಹೃತಭಾರ್ಯಃ ಸುದುಃಖಿತಃ ॥ ೧೭

ಸೋಽಹಂ ತ್ರಸ್ತೋ ಭಯೇ ಮಗ್ನೋ ವಸಾಮ್ಯುದ್ಭ್ರಾಂತಚೇತನಃ
ವಾಲಿನಾ ನಿಕೃತೋ ಭ್ರಾತ್ರಾ ಕೃತವೈರಶ್ಚ ರಾಘವ ॥ ೧೮

ವಾಲಿನೋ ಮೇ ಭಯಾರ್ತಸ್ಯ ಸರ್ವಲೋಕಾಭಯಂಕರ ।
ಮಮಾಪಿ ತ್ವಮನಾಥಸ್ಯ ಪ್ರಸಾದಂ ಕರ್ತುಮರ್ಹಸಿ ॥ ೧೯

ಏವಮುಕ್ತಸ್ತು ತೇಜಸ್ವೀ ಧರ್ಮಜ್ಞೋ ಧರ್ಮವತ್ಸಲಃ ।
ಪ್ರತ್ಯುವಾಚ ಸ ಕಾಕುತ್ಸ್ಥಃ ಸುಗ್ರೀವಂ ಪ್ರಹಸನ್ನಿವ ॥ ೨೦

---

ಲಕ್ಷ್ಮಣನಿಗೆ ವಿನಯಪೂರ್ವಕವಾಗಿ ಅರಿಕೆಮಾಡಿ ಅದರಲ್ಲಿ ಕುಳ್ಳಿರಿಸಿದನು (೧೩-೧೪). ಫಲಪುಷ್ಪಗಳಿಂದ ತುಂಬಿದ ಆ ಪರ್ವತದಮೇಲೆ ಶ್ರೀರಾಮನು ಶಾಂತಸಾಗರದಂತೆ ಪ್ರಸನ್ನನಾಗಿ ಕುಳಿತಿದ್ದನು. ಆಗ ಸಂತುಷ್ಟನಾದ ಸುಗ್ರೀವನು ಹರ್ಷಾತಿರೇಕದಿಂದ ತೊದಲುತ್ತ ಮೃದುವಾಕ್ಯದಿಂದ ಮೆಲ್ಲಗೆ ಮಾತಾಡಲಾರಂಭಿಸಿದನು (೧೫-೧೬): "ಶ್ರೀರಾಮ, ನಾನು ಅಣ್ಣನ ಉಪದ್ರವಕ್ಕೊಳಗಾಗಿ ತಲ್ಲಣಿಸಿ ಈ ಋಷ್ಯಮೂಕದಲ್ಲಿ ತೊಳಲುತ್ತಿದ್ದೇನೆ. ನನ್ನ ಹೆಂಡತಿಯನ್ನು ಅವನು ಅಪಹರಿಸಿದ್ದಾನೆ ಅವನಿಗೆ ಹೆದರಿ ಭಯದಲ್ಲಿ ಮುಳುಗಿ ದಿಕ್ಕುಗಾಣದೆ ಕಂಗೆಟ್ಟು ಅಲೆಯುತ್ತಿದ್ದೇನೆ ವಾಲಿಯ ಅಪಕಾರಕ್ಕೆ ತುತ್ತಾಗಿದ್ದೇನೆ ನಮ್ಮಿಬ್ಬರಿಗೆ ವೈರವು ಬೆಳೆದಿದೆ (೧೭-೧೮) ನೀನು ಸರ್ವಲೋಕಗಳಿಗೂ ಅಭಯವನ್ನೀಯಲು ಸಮರ್ಥ. ವಾಲಿಯ ಭಯದಿಂದ ದಿಕ್ಕುಗೆಟ್ಟ ಅನಾಥನಾಗಿರುವ ನನಗೂ ಅಭಯವನ್ನಿತ್ತು ಅನುಗ್ರಹಿಸು" ಎಂದು ಪ್ರಾರ್ಥಿಸಿದನು (೧೯). ಅದನ್ನು ಕೇಳಿ ತೇಜಸ್ವಿಯೂ ಧರ್ಮಜ್ಞನೂ ಧರ್ಮರಕ್ಷಕನೂ ಆದ ಕಾಕುತ್ಸ್ಥನು ಮುಗುಳ್ನಗೆಯನ್ನು ಬೀರುತ್ತ

ಉಪಕಾರಫಲಂ ಮಿತ್ರಮಪಕಾರೋಽರಿಲಕ್ಷಣಮ್ ।
ಅದ್ಯೈವ ತಂ ಹನಿಷ್ಯಾಮಿ ತವ ಭಾರ್ಯಾಪಹಾರಿಣಮ್ ॥ ೨೧

ಇಮೇ ಹಿ ಮೇ ಮಹಾವೇಗಾಃ ಪತ್ರಿಣಸ್ತಿಗ್ಮತೇಜಸಃ ।
ಕಾರ್ತಿಕೇಯವನೋದ್ಭೂತಾಃ ಶರಾ ಹೇಮವಿಭೂಷಿತಾಃ ॥ ೨೨

ಕಂಕಪತ್ರಪ್ರತಿಚ್ಛನ್ನಾ ಮಹೇಂದ್ರಾಶನಿಸಂನಿಭಾಃ ।
ಸುಪರ್ವಾಣಃ ಸುತೀಕ್ಷ್ಣಾಗ್ರಾಃ ಸರೋಷಾ ಇವ ಪನ್ನಗಾಃ ॥ ೨೩

ಭ್ರಾತೃಸಂಜ್ಞಮಮಿತ್ರಂ ತೇ ವಾಲಿನಂ ಕೃತಕಿಲ್ಬಿಷಮ್ ।
ಶರೈರ್ವಿನಿಹತಂ ಪಶ್ಯ ವಿಕೀರ್ಣಮಿವ ಪರ್ವತಮ್ ॥ ೨೪

ರಾಘವಸ್ಯ ವಚಃ ಶ್ರುತ್ವಾ ಸುಗ್ರೀವೋ ವಾಹಿನೀಪತಿಃ ।
ಪ್ರಹರ್ಷಮತುಲಂ ಲೇಭೇ ಸಾಧು ಸಾಧ್ವಿತಿ ಚಾಬ್ರವೀತ್ ॥ ೨೫

ರಾಮ ಶೋಕಾಭಿಭೂತೋಽಹಂ ಶೋಕಾರ್ತಾನಾಂ ಭವಾನ್ ಗತಿಃ ।
ವಯಸ್ಯ ಇತಿ ಕೃತ್ವಾ ಹಿ ತ್ವಯ್ಯಹಂ ಪರಿದೇವಯೇ ॥ ೨೬

---

“ಸುಗ್ರೀವ, ಉಪಕಾರವೇ ಮಿತ್ರನಿಂದಾಗಬೇಕಾದ ಪ್ರಯೋಜನ. ಅಪಕಾರ ಮಾಡುವವನೇ ಶತ್ರು. ನಿನ್ನ ಭಾರ್ಯೆಯನ್ನಪಹರಿಸಿದ ಶತ್ರುವನ್ನು ಈ ದಿನವೇ ವಧಿಸುವೆನು (೨೦-೨೧). ಮಹಾವೇಗಶಾಲಿಗಳಾದ ನನ್ನ ಬಾಣಗಳ ತೇಜಸ್ಸು ಅತ್ಯುಗ್ರವಾದುದು. ಚಿನ್ನದ ಕಟ್ಟುಗಳಿರುವ ಈ ಶರಗಳು ಕಾರ್ತಿಕೇಯನ ಶರವಣದಲ್ಲಿ ಹುಟ್ಟಿ ಬೆಳೆದವು. ಗರಿಗಟ್ಟಿದ ಈ ಶರಗಳು ಇಂದ್ರನ ಸಿಡಿಲಿಗೆ ಸಮಾನವಾದವು. ಇವುಗಳ ಗಿಣ್ಣುಗಳನ್ನೂ ತೀಕ್ಷ್ಣವಾದ ಅಲಗುಗಳನ್ನೂ ಗಮನಿಸು ಕೆರಳಿದ ಸರ್ಪಗಳೇ ಇವು (೨೨-೨೩). ನಿನ್ನ ಅಣ್ಣನೆಂಬ ಶತ್ರುವೂ ಪಾಪಿಯೂ ಆದ ವಾಲಿಯು ಈ ಅಸ್ತ್ರಗಳಿಂದ ಹತನಾಗಿ ಬೀಳುವನು. ಛಿನ್ನಭಿನ್ನವಾದ ಬೆಟ್ಟದಂತೆ ಅವನು ಉರುಳು ವುದನ್ನು ನೋಡುತ್ತಿರು” ಎಂದು ಹೇಳಿದನು (೨೪). ಶ್ರೀರಾಮನ ನುಡಿ ಯನ್ನು ಕೇಳಿ ವಾನರಸೇನಾಪತಿಯಾದ ಸುಗ್ರೀವನು ಆನಂದತುಂದಿಲ ನಾಗಿ ‘ಭಲೆ! ಭಲೆ!’ ಎಂದನು. ಅವನು ಮತ್ತೆ “ಶ್ರೀರಾಮ, ನಾನು ಶೋಕಾಕ್ರಾಂತನಾಗಿದ್ದೇನೆ. ಶೋಕಾರ್ತರಿಗೆ ನೀನೇ ಗತಿ. ನೀನು ನನ್ನ ಮಿತ್ರನೆಂದು ತಿಳಿದು ನನ್ನ ದುಃಖವನ್ನು ತೋಡಿಕೊಳ್ಳುತ್ತಿದ್ದೇನೆ (೨೫-೨೬).

ತ್ವಂ ಹಿ ಪಾಣಿಪ್ರದಾನೇನ ವಯಸ್ಯೋ ಮೇಽಗ್ನಿಸಾಕ್ಷಿಕಮ್ ।
ಕೃತಃ ಪ್ರಾಣೈರ್ಬಹುಮತಃ ಸತ್ಯೇನಾಪಿ ಶಪಾಮಿ ತೇ ॥ ೨೭

ವಯಸ್ಯ ಇತಿ ಕೃತ್ವಾ ಚ ವಿಸ್ರಬ್ಧಂ ಪ್ರವದಾಮ್ಯಹಮ್ ।
ದುಃಖಮಂತರ್ಗತಂ ಯನ್ಮೇ ಮನೋ ಹರತಿ ನಿತ್ಯಶಃ ॥ ೨೮

ಏತಾವದುಕ್ತ್ವಾ ವಚನಂ ಬಾಷ್ಪದೂಷಿತಲೋಚನಃ ।
ಬಾಷ್ಪೋಪಹತಯಾ ವಾಚಾ ನೋಚ್ಚೈಃ ಶಕ್ನೋತಿ ಭಾಷಿತುಮ್ ॥

ಬಾಷ್ಪವೇಗಂ ತು ಸಹಸಾ ನದೀವೇಗಮಿವಾಗತಮ್ ।
ಧಾರಯಾಮಾಸ ಧೈರ್ಯೇಣ ಸುಗ್ರೀವೋ ರಾಮಸಂನಿಧೌ ॥ ೩೦

ಸ ನಿಗೃಹ್ಯ ತು ತಂ ಬಾಷ್ಪಂ ಪ್ರಮೃಜ್ಯ ನಯನೇ ಶುಭೇ ।
ವಿನಿಃಶ್ವಸ್ಯ ಚ ತೇಜಸ್ವೀ ರಾಘವಂ ಪುನರಬ್ರವೀತ್ ॥ ೩೧

ಪುರಾಹಂ ವಾಲಿನಾ ರಾಮ ರಾಜ್ಯಾತ್ ಸ್ವಾದವರೋಪಿತಃ ।
ಪರುಷಾಣಿ ಚ ಸಂಶ್ರಾವ್ಯ ನಿರ್ಧೂತೋಽಸ್ಮಿ ಬಲೀಯಸಾ ॥ ೩೨

---

ನೀನು ಅಗ್ನಿಸಾಕ್ಷಿಕವಾಗಿ ಕೈನೀಡಿ ನನ್ನ ಸ್ನೇಹಿತನಾಗಿದ್ದೀಯೆ. ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತೇನೆ—ನನ್ನ ಪ್ರಾಣಕ್ಕಿಂತಲೂ ನೀನು ಹೆಚ್ಚು ಪ್ರಿಯನಾಗಿದ್ದೀಯೆ ಸ್ನೇಹಿತನೆಂಬ ಸಲಿಗೆಯಿಂದ ಧಾರಾಳವಾಗಿ ಮಾತಾಡುತ್ತಿದ್ದೇನೆ. ಅಂತರ್ಗತವಾದ ನನ್ನ ದುಃಖವು ಸದಾ ನನ್ನ ಮನಸ್ಸನ್ನು ಕೊರೆಯುತ್ತಿದೆ" ಎಂದನು (೨೭-೨೮). ಅಷ್ಟರಲ್ಲಿ ಸುಗ್ರೀವನಿಗೆ ಕಣ್ಣೀರು ಉಕ್ಕಿತು ಕಂಠವು ಬಿಗಿದು ಮಾತು ತೊದಲಿತು. ಅವನಿಗೆ ಗಟ್ಟಿಯಾಗಿ ಮಾತಾಡಲಾಗಲಿಲ್ಲ. ನದೀಪ್ರವಾಹದಂತೆ ಥಟ್ಟನೆ ನುಗ್ಗಿಬಂದ ಬಾಷ್ಪವೇಗವನ್ನು ಸುಗ್ರೀವನು ಬಿಗಿಮನಸ್ಸಿನಿಂದ ತಡೆಹಿಡಿದನು. ಶ್ರೀರಾಮನ ಸನ್ನಿಧಿಯಲ್ಲಿ (ಅಳುವುದು ಯುಕ್ತವಲ್ಲವೆಂದು) ಕಣ್ಣೀರನ್ನು ಬಿಗಿಹಿಡಿದನು (೨೯-೩೦). ಆ ತೇಜಸ್ವಿಯು ಕಣ್ಣುಗಳನ್ನೊರಸಿಕೊಂಡು ನಿಟ್ಟುಸಿರುಬಿಟ್ಟು ರಾಘವನನ್ನು ನೋಡಿ ಮಾತನ್ನು ಮುಂದುವರಿಸಿದನು: "ಶ್ರೀರಾಮ, ಬಲಿಷ್ಠನಾದ ವಾಲಿಯು ನನ್ನನ್ನು ಯುವರಾಜಪದವಿಯಿಂದ ಕೆಳಗಿಳಿಸಿ ಕೆಟ್ಟಮಾತುಗಳಿಂದ ಬಯ್ದು ರಾಜ್ಯದಿಂದ ಅಟ್ಟಿಬಿಟ್ಟನು (೩೧-೩೨).

ಹೃತಾ ಭಾರ್ಯಾ ಚ ಮೇ ತೇನ ಪ್ರಾಣೇಭ್ಯೋಽಪಿ ಗರೀಯಸೀ ।
ಸುಹೃದಶ್ಚ ಮದೀಯಾ ಯೇ ಸಂಯತಾ ಬಂಧನೇಷು ತೇ ॥ ೩೩

ಯತ್ನವಾಂಶ್ಚ ಸುದುಷ್ಟಾತ್ಮಾ ಮದ್ವಿನಾಶಾಯ ರಾಘವ ।
ಬಹುಶಸ್ತತ್ಪ್ರಯುಕ್ತಾಶ್ಚ ವಾನರಾ ನಿಹತಾ ಮಯಾ ॥ ೩೪

ಶಂಕಯಾ ತ್ವೇತಯಾ ಚೇಹ ದೃಷ್ಟ್ವಾ ತ್ವಾಮಪಿ ರಾಘವ ।
ನೋಪಸರ್ಪಾಮ್ಯಹಂ ಭೀತೋ ಭಯೇ ಸರ್ವೇ ಹಿ ಬಿಭ್ಯತಿ ॥ ೩೫

ಕೇವಲಂ ಹಿ ಸಹಾಯಾ ಮೇ ಹನೂಮತ್ಪ್ರಮುಖಾಸ್ತ್ವಮೇ ।
ಅತೋಽಹಂ ಧಾರಯಾಮ್ಯದ್ಯ ಪ್ರಾಣಾನ್ ಕೃಚ್ಛ್ರಗತೋಽಪಿ ಸನ್

ಏತೇ ಹಿ ಕಪಯಃ ಸ್ನಿಗ್ಧಾ ಮಾಂ ರಕ್ಷಂತಿ ಸಮಂತತಃ ।
ಸಹ ಗಚ್ಛಂತಿ ಗಂತವ್ಯೇ ನಿತ್ಯಂ ತಿಷ್ಠಂತಿ ಚ ಸ್ಥಿತೇ ॥ ೩೭

ಸಂಕ್ಷೇಪಸ್ತ್ವೇಷ ತೇ ರಾಮ ಕಿಮುಕ್ತ್ವಾ ವಿಸ್ತರಂ ಹಿ ತೇ ।
ಸ ಮೇ ಜ್ಯೇಷ್ಠೋ ರಿಪುರ್ಭ್ರಾತಾ ವಾಲೀ ವಿಶ್ರುತಪೌರುಷಃ ॥ ೩೮

---

ಅಲ್ಲದೆ ನನ್ನ ಪ್ರಾಣಪ್ರಿಯಳಾದ ಹೆಂಡತಿಯನ್ನು ತನ್ನ ವಶಕ್ಕೆ ತೆಗೆದುಕೊಂಡನು. ನನ್ನ ಹಿತಕಾಂಕ್ಷಿಗಳಾದ ಮಿತ್ರರನ್ನು ಸೆರೆಯಿಟ್ಟನು ಅಷ್ಟೇ ಅಲ್ಲ, ಆ ದುಷ್ಟನು ನನ್ನ ಪ್ರಾಣವನ್ನೇ ತೆಗೆದುಬಿಡಬೇಕೆಂದು ಪ್ರಯತ್ನ ಮಾಡುತ್ತಲೇ ಇದ್ದಾನೆ ಅದಕ್ಕಾಗಿ ಎಷ್ಟೋ ಮಂದಿ ವಾನರರನ್ನು ಕಳಿಸಿದ್ದಾನೆ ನಾನು ಅವರನ್ನು ಕೊಂದುಹಾಕಿದ್ದೇನೆ (೩೩-೩೪) ಈ ಶಂಕೆಯಿಂದಲೇ, ರಾಘವ, ನಿನ್ನನ್ನು ಮೊದಲು ಕಂಡಾಗಲೂ ಹೆದರಿ ನಾನು ನಿನ್ನ ಬಳಿಗೆ ಬರಲಿಲ್ಲ. ಭಯನಿಮಿತ್ತವಿದ್ದಾಗ ಎಲ್ಲರೂ ಭಯಪಡುವುದು ಸಹಜವಲ್ಲವೆ? ಹನುಮಂತನೇ ಮೊದಲಾದ ಈ ನಾಲ್ವರು ಮಾತ್ರವೇ ನನಗೆ ಸಹಾಯಕರಾಗಿದ್ದಾರೆ. ಇವರ ಬೆಂಬಲವಿರುವುದರಿಂದಲೇ ನಾನು ಈ ಕಷ್ಟದಲ್ಲಿಯೂ ಪ್ರಾಣವನ್ನಿಟ್ಟುಕೊಂಡಿದ್ದೇನೆ (೩೫-೩೬). ಇವರು ನನ್ನಲ್ಲಿ ಸ್ನೇಹವಿಟ್ಟು ಎಚ್ಚರಿಕೆಯಿಂದ ನನ್ನನ್ನು ರಕ್ಷಿಸುತ್ತಿದ್ದಾರೆ. ನಾನು ಹೋದ ಕಡೆಗೆ ನನ್ನನ್ನು ಹಿಂಬಾಲಿಸಿ ಬರುವರು. ನಿಂತಲ್ಲಿ ನಿಲ್ಲುವರು. ವಿಸ್ತರದಿಂದ ಆಗಬೇಕಾದ್ದೇನು? ಒಟ್ಟಿನಲ್ಲಿ ಸಾರಾಂಶವಿಷ್ಟು: ನನ್ನ ಅಣ್ಣನಾದ

**ತದ್ವಿನಾಶಾದ್ಧಿ ಮೇ ದುಃಖಂ ಪ್ರನಷ್ಟಂ ಸ್ಯಾದನಂತರಮ್ ।**
**ಸುಖಂ ಮೇ ಜೀವಿತಂ ಚೈವ ತದ್ವಿನಾಶನಿಬಂಧನಮ್ ॥** ೩೯

**ಏಷ ಮೇ ರಾಮ ಶೋಕಾಂತಃ ಶೋಕಾರ್ತೇನ ನಿವೇದಿತಃ ।**
**ದುಃಖಿತಃ ಸುಖಿತೋ ವಾಪಿ ಸಖ್ಯುರ್ನಿತ್ಯಂ ಸಖಾ ಗತಿಃ ॥** ೪೦

**ಶ್ರುತ್ವೈತದ್ವಚನಂ ರಾಮಃ ಸುಗ್ರೀವಮಿದಮಬ್ರವೀತ್ ।**
**ಕಿಂನಿಮಿತ್ತಮಭೂದ್ವೈರಂ ಶ್ರೋತುಮಿಚ್ಛಾಮಿ ತತ್ತ್ವತಃ ॥** ೪೧

**ಸುಖಂ ಹಿ ಕಾರಣಂ ಶ್ರುತ್ವಾ ವೈರಸ್ಯ ತವ ವಾನರ ।**
**ಆನಂತರ್ಯಂ ವಿಧಾಸ್ಯಾಮಿ ಸಂಪ್ರಧಾರ್ಯ ಬಲಾಬಲಮ್ ॥** ೪೨

**ಬಲವಾನ್ ಹಿ ಮಮಾಮರ್ಷಃ ಶ್ರುತ್ವಾ ತ್ವಾಮವಮಾನಿತಮ್ ।**
**ವರ್ಧತೇ ಹೃದಯೋತ್ಕಂಪೀ ಪ್ರಾವೃಡ್ವೇಗ ಇವಾಂಭಸಃ ॥** ೪೩

**ಹೃಷ್ಟಃ ಕಥಯ ವಿಸ್ರಬ್ಧೋ ಯಾವದಾರೋಪ್ಯತೇ ಧನುಃ ।**
**ಸೃಷ್ಟಶ್ಚ ಹಿ ಮಯಾ ಬಾಣೋ ನಿರಸ್ತಶ್ಚ ರಿಪುಸ್ತವ ॥** ೪೪

---

ವಾಲಿ ಮಹಾಪರಾಕ್ರಮಿ. ಅವನೇ ನನ್ನ ವೈರಿ (೩೭-೩೮). ಅವನ ಅಂತ್ಯವಾದೊಡನೆ ನನ್ನ ದುಃಖವೂ ಅಂತ್ಯವಾಗುವುದು. ನನ್ನ ಸುಖ, ನನ್ನ ಬದುಕು—ಎಲ್ಲವೂ ಅವನ ಸಾವನ್ನು ಅವಲಂಬಿಸಿದೆ. ರಾಘವ, ನನ್ನ ಶೋಕವು ಕೊನೆಗೊಳ್ಳುವ ಬಗೆ ಇದೊಂದೇ. ಶೋಕಾರ್ತನಾಗಿ ಇದನ್ನು ನಿವೇದಿಸಿಕೊಂಡಿದ್ದೇನೆ. ದುಃಖದಲ್ಲಿರಲಿ-ಸುಖದಲ್ಲಿರಲಿ, ಮಿತ್ರನಿಗೆ ಮಿತ್ರನೇ ಗತಿ" ಎಂದು ಹೇಳಿದನು (೩೯-೪೦). ಆಗ ಶ್ರೀರಾಮನು ಸುಗ್ರೀವನನ್ನು ಕುರಿತು "ವಾನರೋತ್ತಮ, ನಿಮ್ಮಿಬ್ಬರಿಗೆ ವೈರ ಉಂಟಾಗಲು ನಿಮಿತ್ತ ವಾದರೂ ಏನು? ಅದನ್ನು ಸರಿಯಾಗಿ ಕೇಳಲಿಚ್ಛಿಸುತ್ತೇನೆ. ಯಥಾಸ್ಥಿತ ವಾಗಿ ಹೇಳು. ಮೊದಲು ವೈರಕಾರಣವನ್ನು ಕೇಳಿ, ಅದರ ಬಲಾಬಲಗಳನ್ನು ತೂಕಮಾಡಿ, ಅನಂತರ ನಿನಗೆ ಸುಖವಾಗುವಂತೆ ಪ್ರತಿಕ್ರಿಯೆಯನ್ನು ಕೈಗೊಳ್ಳಬೇಕಾಗಿದೆ (೪೧-೪೨). ನಿನಗೆ ಅವಮಾನವಾಗಿರುವುದನ್ನು ಕೇಳಿ ನನ್ನ ಕ್ರೋಧವು ಅತಿಯಾಗಿ ವರ್ಧಿಸುತ್ತಿದೆ. ಹೃದಯದ ತಾಳ್ಮೆಯನ್ನು ಕದಲಿಸುತ್ತಿದೆ. ಮಳೆಗಾಲದ ಪ್ರವಾಹವೇಗದಂತೆ ಏರುತ್ತಿದೆ. ನನ್ನಲ್ಲಿ ವಿಶ್ವಾಸವಿಟ್ಟು ಸಂತೋಷದಿಂದ ನಿಸ್ಸಂಕೋಚವಾಗಿ ವಿವರಿಸು. ಕೂಡಲೆ

ಏವಮುಕ್ತಸ್ತು ಸುಗ್ರೀವಃ ಕಾಕುತ್ಸ್ಥೇನ ಮಹಾತ್ಮನಾ ।
ಪ್ರಹರ್ಷಮತುಲಂ ಲೇಭೇ ಚತುರ್ಭಿಃ ಸಹ ವಾನರೈಃ ॥ ೪೫

ತತಃ ಪ್ರಹೃಷ್ಟವದನಃ ಸುಗ್ರೀವೋ ಲಕ್ಷ್ಮಣಾಗ್ರಜೇ ।
ವೈರಸ್ಯ ಕಾರಣಂ ತತ್ತ್ವಮಾಖ್ಯಾತುಮುಪಚಕ್ರಮೇ ॥ ೪೬

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಅಷ್ಟಮಃ ಸರ್ಗಃ



ಧನುಸ್ಸಿಗೆ ಹೆದೆಯೇರಿಸುವೆನು. ನಾನು ಬಾಣವನ್ನು ಬಿಡುವುದೇ ತಡ, ನಿನ್ನ ಶತ್ರುವು ಸತ್ತನೆಂದೇ ತಿಳಿ" ಎಂದು ಹೇಳಿದನು (೪೩-೪೪). ಮಹಾತ್ಮನಾದ ಕಾಕುತ್ಸ್ಥನು ಹೀಗೆನ್ನಲು ಸುಗ್ರೀವನಿಗೂ ಅವನ ಸಚಿವರಾದ ನಾಲ್ವರು ವಾನರರಿಗೂ ಪರಮಾನಂದವಾಯಿತು. ಸುಗ್ರೀವನ ಮುಖವು ಅರಳಿತು. ಅವನು ವಾಲಿಯೊಡನೆ ಬೆಳೆದ ವೈರಕ್ಕೆ ಯಥಾರ್ಥವಾದ ಕಾರಣವನ್ನು ಹೇಳತೊಡಗಿದನು (೪೫-೪೬)

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಎಂಟನೆಯ ಸರ್ಗ



## ನವಮಃ ಸರ್ಗಃ

### ವೈರವೃತ್ತಾಂತಾನುಕ್ರಮಃ

ವಾಲೀ ನಾಮ ಮಮ ಭ್ರಾತಾ ಜ್ಯೇಷ್ಠಃ ಶತ್ರುನಿಷೂದನಃ ।
ಪಿತುರ್ಬಹುಮತೋ ನಿತ್ಯಂ ಮಮಾಪಿ ಚ ತಥಾ ಪುರಾ ॥ ೧

ಪಿತರ್ಯುಪರತೇಽಸ್ಮಾಕಂ ಜ್ಯೇಷ್ಠೋಽಯಮಿತಿ ಮಂತ್ರಿಭಿಃ ।
ಕಪೀನಾಮೀಶ್ವರೋ ರಾಜ್ಯೇ ಕೃತಃ ಪರಮಸಂಮತಃ ॥ ೨

ರಾಜ್ಯಂ ಪ್ರಶಾಸತಸ್ತಸ್ಯ ಪಿತೃಪೈತಾಮಹಂ ಮಹತ್ ।
ಅಹಂ ಸರ್ವೇಷು ಕಾಲೇಷು ಪ್ರಣತಃ ಪ್ರೇಷ್ಯವತ್ ಸ್ಥಿತಃ ॥ ೩

ಮಾಯಾವೀ ನಾಮ ತೇಜಸ್ವೀ ಪೂರ್ವಜೋ ದುಂದುಭೇಃ ಸುತಃ ।
ತೇನ ತಸ್ಯ ಮಹದ್ವೈರಂ ಸ್ತ್ರೀಕೃತಂ ವಿಶ್ರುತಂ ಪುರಾ ॥ ೪

## ಸರ್ಗ ೯

ಸುಗ್ರೀವನು ವಾಲಿಯ ವೈರಕ್ಕೆ ಕಾರಣವನ್ನು ಹೇಳುವುದು.
ಮಾಯಾವಿಯೆಂಬ ರಾಕ್ಷಸನ ವೃತ್ತಾಂತ.

ಸುಗ್ರೀವನು ಹೀಗೆಂದನು: "ಶ್ರೀರಾಮ, ನನ್ನ ಅಣ್ಣನಾದ ವಾಲಿಯು ಶತ್ರುಗಳನ್ನು ಹುಟ್ಟಡಗಿಸುವ ಮಹಾಶೂರ ನನ್ನ ತಂದೆಗೆ ಆತನಲ್ಲಿ ಅಭಿಮಾನವಿತ್ತು. ನನಗೂ ಅವನಲ್ಲಿ ಪೂಜ್ಯಭಾವವಿತ್ತು ನಮ್ಮ ತಂದೆಯು ದಿವಂಗತನಾಗಲು ವಾಲಿಯು ಕಪಿರಾಜ್ಯಕ್ಕೆ ಒಡೆಯನಾದನು ಅವನು ಹಿರಿಯನೆಂದು ಮಂತ್ರಿಗಳು ರಾಜಪಟ್ಟಕ್ಕೇರಿಸಿದರು. ಈ ಕಾರ್ಯವು ಸರ್ವಸಮ್ಮತವಾಗಿತ್ತು (೧-೨). ಪಿತೃಪರಂಪರೆಯಿಂದ ಬಂದ ದೊಡ್ಡ ರಾಜ್ಯವನ್ನು ಅವನು ಆಳುತ್ತಿರುವಾಗ, ನಾನು ಸರ್ವಕಾಲದಲ್ಲಿಯೂ ಅವನಿಗೆ ವಿಧೇಯನಾಗಿ ಭೃತ್ಯನಂತೆ ನಡೆದುಕೊಂಡಿದ್ದೆನು ಹೀಗಿರಲು ಮಾಯಾವಿಯೆಂಬ ಶೂರನೊಬ್ಬನಿದ್ದನು. ಅವನು ದುಂದುಭಿಯೆಂಬ ದೈತ್ಯನ ಹಿರಿಯ ಮಗ. ಮಾಯಾವಿಗೂ ವಾಲಿಗೂ ಒಂದಾನೊಂದು ಸ್ತ್ರೀನಿಮಿತ್ತವಾಗಿ ಮಹತ್ತರವಾದ ವೈರವು ಬೆಳೆದಿತ್ತು. ಇದು ಲೋಕವಿದಿತವಾದ

**ಸ ತು ಸುಪ್ತಜನೇ ರಾತ್ರೌ ಕಿಷ್ಕಿಂಧಾದ್ವಾರಮಾಗತಃ ।**
**ನರ್ದತಿ ಸ್ಮ ಸುಸಂರಬ್ಧೋ ವಾಲಿನಂ ಚಾಹ್ವಯದ್ರಣೇ ॥ ೫**

**ಪ್ರಸುಪ್ತಸ್ತು ಮಮ ಭ್ರಾತಾ ನರ್ದಿತಂ ಭೈರವಸ್ವನಮ್ ।**
**ಶ್ರುತ್ವಾ ನ ಮಮೃಷೇ ವಾಲೀ ನಿಷ್ಪಪಾತ ಜವಾತ್ತದಾ ॥ ೬**

**ಸ ತು ವೈ ನಿಃಸೃತಃ ಕ್ರೋಧಾತ್ತಂ ಹಂತುಮಸುರೋತ್ತಮಮ್ ।**
**ವಾರ್ಯಮಾಣಸ್ತತಃ ಸ್ತ್ರೀಭಿರ್ಮಯಾ ಚ ಪ್ರಣತಾತ್ಮನಾ ॥ ೭**

**ಸ ತು ನಿರ್ಧೂಯ ಸರ್ವಾನ್ನೋ ನಿರ್ಜಗಾಮ ಮಹಾಬಲಃ ।**
**ತತೋಽಹಮಪಿ ಸೌಹಾರ್ದಾನ್ನಿಃಸೃತೋ ವಾಲಿನಾ ಸಹ ॥ ೮**

**ಸ ತು ಮೇ ಭ್ರಾತರಂ ದೃಷ್ಟ್ವಾ ಮಾಂ ಚ ದೂರಾದವಸ್ಥಿತಮ್ ।**
**ಅಸುರೋ ಜಾತಸಂತ್ರಾಸಃ ಪ್ರದುದ್ರಾವ ತತೋ ಭೃಶಮ್ ॥ ೯**

**ತಸ್ಮಿನ್ ದ್ರವತಿ ಸಂತ್ರಸ್ತೇ ಹ್ಯಾವಾಂ ದ್ರುತತರಂ ಗತೌ ।**
**ಪ್ರಕಾಶಶ್ಚ ಕೃತೋ ಮಾರ್ಗಶ್ಚಂದ್ರೇಣೋದ್ಗಚ್ಛತಾ ತದಾ ॥ ೧೦**

---

ವೃತ್ತಾಂತ (೩ ೪). ಆ ಮಾಯಾವಿಯು ಒಂದುಸಲ ರಾತ್ರಿ ಎಲ್ಲರೂ ನಿದ್ರಿಸುತ್ತಿದ್ದಾಗ ಕಿಷ್ಕಿಂಧಾನಗರದ ಹೆಬ್ಬಾಗಿಲಿಗೆ ಬಂದು ಗರ್ಜಿಸ ತೊಡಗಿದನು ಅತ್ಯಂತ ಆವೇಶದಿಂದ ವಾಲಿಯನ್ನು ಹೊಡೆದಾಟಕ್ಕೆ ಕರೆದನು (೫). ಮಲಗಿದ್ದ ನನ್ನ ಅಣ್ಣನು ಭೀಕರಧ್ವನಿಯ ಆ ಗರ್ಜನೆಯನ್ನು ಕೇಳಿದನು ಅವನ ಸಹನೆ ತಪ್ಪಿತು. ಕೂಡಲೆ ಮೇಲಕ್ಕೆ ಜಿಗಿದು ಯುದ್ಧಕ್ಕೆ ಹೊರಟನು ಆ ದೈತ್ಯನನ್ನು ಕೊಲ್ಲಲು ವಾಲಿಯು ಸಿಟ್ಟಿನ ಭರದಿಂದ ನುಗ್ಗುತ್ತಿರಲು ಸ್ತ್ರೀಯರೆಲ್ಲರೂ ಬೇಡಬೇಡವೆಂದರು ನಾನೂ ಅವನಿಗೆ ವಂದಿಸಿ ಸಂತೈಸಲು ಯತ್ನಿಸಿದೆನು (೬–೭). ಆದರೆ ವಾಲಿಯು ನಮ್ಮೆಲ್ಲರನ್ನೂ ತಳ್ಳಿ ಯುದ್ಧಕ್ಕೆ ಹೊರಟೇಬಿಟ್ಟನು. ಅವನು ಮಹಾ ಬಲಶಾಲಿಯೇನೋ ಹೌದು. ಆದರೂ ನಾನು ಸೌಹಾರ್ದದಿಂದ ವಾಲಿಯ ಬೆಂಬಲಕ್ಕಾಗಿ ಅವನೊಡನೆ ಹೋದೆನು (೮). ಆ ದೈತ್ಯನು ನನ್ನ ಅಣ್ಣನನ್ನೂ ಸ್ವಲ್ಪ ದೂರದಲ್ಲಿ ನಿಂತಿದ್ದ ನನ್ನನ್ನೂ ಕಂಡೊಡನೆ ಹೆದರಿ ಓಡಿ ಹೋದನು! ನಾವಿಬ್ಬರೂ ಅವನನ್ನು ವೇಗದಿಂದ ಅಟ್ಟಿಸಿಕೊಂಡುಹೋದೆವು. ಆಗತಾನೇ ಚಂದ್ರನು ಉದಯಿಸಿ ಮೇಲಕ್ಕೆ ಏರುತ್ತಿದ್ದ; ದಾರಿಯು

**ಸ ತೃಣೈರಾವೃತಂ ದುರ್ಗಂ ಧರಣ್ಯಾ ವಿವರಂ ಮಹತ್ ।**
**ಪ್ರವಿವೇಶಾಸುರೋ ವೇಗಾದಾವಾಮಾಸಾದ್ಯ ವಿಷ್ಠಿತೌ ॥ ೧೧**

**ತಂ ಪ್ರವಿಷ್ಟಂ ರಿಪುಂ ದೃಷ್ಟ್ವಾ ಬಿಲಂ ರೋಷವಶಂ ಗತಃ ।**
**ಮಾಮುವಾಚ ತದಾ ವಾಲೀ ವಚನಂ ಕ್ಷುಭಿತೇಂದ್ರಿಯಃ ॥ ೧೨**

**ಇಹ ತ್ವಂ ತಿಷ್ಠ ಸುಗ್ರೀವ ಬಿಲದ್ವಾರಿ ಸಮಾಹಿತಃ ।**
**ಯಾವದತ್ರ ಪ್ರವಿಶ್ಯಾಹಂ ನಿಹನ್ಮಿ ಸಹಸಾ ರಿಪುಮ್ ॥ ೧೩**

**ಮಯಾ ತ್ವೇತದ್ವಚಃ ಶ್ರುತ್ವಾ ಯಾಚಿತಃ ಸ ಪರಂತಪಃ ।**
**ಶಾಪಯಿತ್ವಾ ಚ ಮಾಂ ಪದ್ಭ್ಯಾಂ ಪ್ರವಿವೇಶ ಬಿಲಂ ಮಹತ್ ॥ ೧೪**

**ತಸ್ಯ ಪ್ರವಿಷ್ಟಸ್ಯ ಬಿಲಂ ಸಾಗ್ರಃ ಸಂವತ್ಸರೋ ಗತಃ ।**
**ಸ್ಥಿತಸ್ಯ ಚ ಮಮ ದ್ವಾರಿ ಸ ಕಾಲೋ ವ್ಯತ್ಯವರ್ತತ ॥ ೧೫**

**ಅಹಂ ತು ನಷ್ಟಂ ತಂ ಜ್ಞಾತ್ವಾ ಸ್ನೇಹಾದಾಗತಸಂಭ್ರಮಃ ।**
**ಭ್ರಾತರಂ ನ ಚ ಪಶ್ಯಾಮಿ ಪಾಪಾಶಂಕಿ ಚ ಮೇ ಮನಃ ॥ ೧೬**

---

ಸ್ಪಷ್ಟವಾಗಿ ಕಾಣುತ್ತಿತ್ತು (೯-೧೦). ಆಗ ರಾಕ್ಷಸನು ನೆಲದೊಳಗೆ ಹುಲ್ಲು ಮುಚ್ಚಿದ್ದ ಒಂದು ದುರ್ಗಮವಾದ ದೊಡ್ಡ ಬಿಲವನ್ನು ಪ್ರವೇಶಿಸಿಬಿಟ್ಟನು. ನಾವಿಬ್ಬರೂ ಆ ಬಿಲದ ಬಳಿಗೆ ಹೋಗಿ ನಿಂತೆವು ಶತ್ರುವು ಬಿಲದೊಳಗೆ ಹೋದುದನ್ನು ಕಂಡು ವಾಲಿಯು ರೋಷಾವಿಷ್ಟನಾದನು. ಅವನ ಮನಸ್ಸು ಕ್ಷುಬ್ಧವಾಯಿತು (೧೧-೧೨). ಅವನು ನನ್ನನ್ನು ಕುರಿತು "ಸುಗ್ರೀವ, ನೀನು ಈ ಬಿಲದ್ವಾರದಲ್ಲಿ ಎಚ್ಚರಿಕೆಯಿಂದ ಕಾವಲಾಗಿ ನಿಂತಿರು. ನಾನು ಒಳಗೆ ನುಗ್ಗಿ ಹೋಗಿ ಆ ವೈರಿಯನ್ನು ಕೊಂದುಹಾಕುತ್ತೇನೆ" ಎಂದನು (೧೩). ಅದನ್ನು ಕೇಳಿ ನಾನೂ ಅವನ ಜೊತೆಯಲ್ಲಿಯೇ ಬರುವೆನೆಂದೆನು. ಆದಕ್ಕೆ ವಾಲಿಯು ನಾನು ಬರಕೂಡದೆಂದು ತನ್ನ ಪಾದಗಳನ್ನು ಮುಟ್ಟಿಸಿ ಆಣೆಯನ್ನು ತೆಗೆದುಕೊಂಡು, ತಾನೊಬ್ಬನೇ ಆ ಬಿಲವನ್ನು ಪ್ರವೇಶಿಸಿದನು (೧೪). ಅವನು ಬಿಲವನ್ನು ಹೊಕ್ಕಮೇಲೆ ಒಂದು ವರ್ಷಕ್ಕೂ ಹೆಚ್ಚುಕಾಲ ಕಳೆದುಹೋಯಿತು. ನಾನು ಬಿಲದ್ವಾರದಲ್ಲಿಯೇ ನಿಂತಿರಲು ಅಷ್ಟುಕಾಲ ಕಳೆಯಿತು. ನಾನು ಆಗ ಅಣ್ಣನು ಮೃತನಾದನೆಂದೆಣಿಸಿ ಭ್ರಾತೃವಾತ್ಸಲ್ಯದಿಂದ ತಳಮಳಗೊಂಡೆನು. ಅಣ್ಣನು ಕಾಣಲಿಲ್ಲ. ಅವನಿಗೆ ಕೇಡು

ಅಥ ದೀರ್ಘಸ್ಯ ಕಾಲಸ್ಯ ಬಿಲಾತ್ತಸ್ಮಾದ್ವಿನಿಃಸೃತಮ್ ।
ಸಫೇನಂ ರುಧಿರಂ ರಕ್ತಮಹಂ ದೃಷ್ಟ್ವಾ ಸುದುಃಖಿತಃ ॥ ೧೭

ನರ್ದತಾಮಸುರಾಣಾಂ ಚ ಧ್ವನಿರ್ಮೇ ಶ್ರೋತ್ರಮಾಗತಃ ।
ನ ರತಸ್ಯ ಚ ಸಂಗ್ರಾಮೇ ಕ್ರೋಶತೋ ನಿಃಸ್ವನೋ ಗುರೋಃ ॥ ೧೮

ಅಹಂ ತ್ವವಗತೋ ಬುದ್ಧ್ಯಾ ಚಿಹ್ನೈಸ್ತೈರ್ಭ್ರಾತರಂ ಹತಮ್ ।
ಪಿಧಾಯ ಚ ಬಿಲದ್ವಾರಂ ಶಿಲಯಾ ಗಿರಿಮಾತ್ರಯಾ ॥ ೧೯

ಶೋಕಾರ್ತಶ್ಚೋದಕಂ ಕೃತ್ವಾ ಕಿಷ್ಕಿಂಧಾಮಾಗತಃ ಸಖೇ ।
ಗೂಹಮಾನಸ್ಯ ಮೇ ತತ್ತ್ವಂ ಯತ್ನತೋ ಮಂತ್ರಿಭಿಃ ಶ್ರುತಮ್ ॥

ತತೋಽಹಂ ತೈಃ ಸಮಾಗಮ್ಯ ಸಂಮತೈರಭಿಷೇಚಿತಃ ।
ರಾಜ್ಯಂ ಪ್ರಶಾಸತಸ್ತಸ್ಯ ನ್ಯಾಯತೋ ಮಮ ರಾಘವ ॥ ೨೦

---

ಸಂಭವಿಸಿರಬಹುದೆಂದು ನನ್ನ ಮನಸ್ಸಿಗೆ ಅನಿಸಿತು (೧೫-೧೬). ಅಲ್ಲದೆ ಬಹಳ ಕಾಲವಾದಮೇಲೆ ಆ ಬಿಲದ್ವಾರದಿಂದ ನೊರೆನೊರೆಯಾದ ರಕ್ತವು ಹೊರಟಿತು. ಅದನ್ನು ಕಂಡು ಬಹುದುಃಖವಾಯಿತು ಮತ್ತು ಬಿಲದೊಳಗೆ ಗರ್ಜಿಸುತ್ತಿದ್ದ ರಾಕ್ಷಸರ ಕೋಲಾಹಲಧ್ವನಿಯು ನನ್ನ ಕಿವಿಗೆ ಕೇಳಿಸಿತು. ಆದರೆ ಯುದ್ಧನಿರತನಾಗಿ ಗರ್ಜಿಸುವ ನನ್ನ ಅಣ್ಣನ ಧ್ವನಿಯು ಕೇಳಿಸಲಿಲ್ಲ (೧೭-೧೮). ಶ್ರೀರಾಮ, ಈ ಚಿಹ್ನೆಗಳಿಂದ ನನ್ನ ಅಣ್ಣನು ಹತನಾಗಿರಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿದೆನು. (ಒಳಗಿದ್ದ ರಾಕ್ಷಸರು ಅಲ್ಲಿಯೇ ಸಾಯಲೆಂದು) ಬೆಟ್ಟದಂತಿದ್ದ ಒಂದು ಮಹಾಶಿಲೆಯಿಂದ ಬಿಲದ್ವಾರವನ್ನು ನಾನು ಮುಚ್ಚಿಬಿಟ್ಟೆನು (೧೯). ಮಿತ್ರ, ಶೋಕಾರ್ತನಾಗಿ ಅಣ್ಣನಿಗೆ ತರ್ಪಣವನ್ನಿತ್ತು ಕಿಷ್ಕಿಂಧೆಗೆ ಬಂದೆನು. ವಾಲಿಯು ಹತನಾದನೆಂಬ ಅಂಶವನ್ನು ನಾನು ಯಾರಿಗೂ ತಿಳಿಸದೆ ರಹಸ್ಯವಾಗಿಟ್ಟೆನು. ಆದರೆ ಮಂತ್ರಿಗಳು ಬಹುಪ್ರಯತ್ನದಿಂದ ಅದನ್ನು ತಿಳಿದುಕೊಂಡರು (೨೦) ಆಮೇಲೆ ಮಂತ್ರಿಗಳೆಲ್ಲರೂ ಸೇರಿ ಸರ್ವಸಮ್ಮತಿಯಿಂದ ನನಗೆ ಪಟ್ಟಾಭಿಷೇಕವನ್ನು ನಡೆಸಿಬಿಟ್ಟರು. ರಾಘವ, ಆದು ನ್ಯಾಯವಾಗಿ ಅಣ್ಣನ ರಾಜ್ಯವೆಂದೇ

ನ ಪ್ರಾವರ್ತತ ಮೇ ಬುದ್ಧಿರ್ಭ್ರಾತುರ್ಗೌರವಯಂತ್ರಿತಾ ।
ಹತ್ವಾ ಶತ್ರುಂ ಸ ಮೇ ಭ್ರಾತಾ ಪ್ರವಿವೇಶ ಪುರಂ ತದಾ ॥ ೨೨

ಮಾನಯಂಸ್ತಂ ಮಹಾತ್ಮಾನಂ ಯಥಾವಚ್ಚಾಭ್ಯವಾದಯಮ್ ।
ಉಕ್ತಾಶ್ಚ ನಾಶಿಷಸ್ತೇನ ಸಂತುಷ್ಟೇನಾಂತರಾತ್ಮನಾ ॥ ೨೩

ನತ್ವಾ ಪಾದಾವಹಂ ತಸ್ಯ ಮುಕುಟೇನಾಸ್ಪೃಶಂ ಪ್ರಭೋ ।
ಅಪಿ ವಾಲೀ ಮಮ ಕ್ರೋಧಾನ್ನ ಪ್ರಸಾದಂ ಚಕಾರ ಸಃ ॥ ೨೪

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ನವಮಃ ಸರ್ಗಃ



ತಿಳಿದು ನಾನು ರಾಜ್ಯವನ್ನಾಳುತ್ತಿದ್ದೆನು. ಅಣ್ಣನಲ್ಲಿದ್ದ ಗೌರವಕ್ಕೆ ಬಾಗಿದ ನನ್ನ ಬುದ್ಧಿಗೆ ರಾಜ್ಯವಾಳುವ ಪ್ರವೃತ್ತಿಯೇ ಉಂಟಾಗಲಿಲ್ಲ. ಹೀಗಿರಲು ವಾಲಿಯು ಶತ್ರುವಾದ ಮಾಯಾವಿಯನ್ನು ಕೊಂದು ನಗರಕ್ಕೆ ಬಂದನು (೨೧-೨೨). ಅವನು ಮಹಾತ್ಮನೆಂದು ನಾನು ಯೋಗ್ಯರೀತಿಯಲ್ಲಿ ಗೌರವಿಸಿ ಅಭಿವಾದನೆಮಾಡಿದೆನು. ಅವನು ನನಗೆ ಆಶೀರ್ವಾದವನ್ನು ಮಾಡಲಿಲ್ಲ. ಅವನ ಹೃದಯಕ್ಕೆ ಸಂತೋಷವಾಗಲಿಲ್ಲ ಪ್ರಭು-ಶ್ರೀರಾಮ, ಅವನ ಎರಡು ಪಾದಗಳಿಗೂ ನನ್ನ ಕಿರೀಟವನ್ನು ಮುಟ್ಟಿಸಿ ವಂದಿಸಿದೆನು. ಆದರೂ ವಾಲಿಯು ನನ್ನಮೇಲಿನ ಕೋಪದಿಂದ ಪ್ರಸನ್ನನಾಗಲಿಲ್ಲ (೨೩-೨೪).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಒಂಬತ್ತನೆಯ ಸರ್ಗ



## ದಶಮಃ ಸರ್ಗಃ

ರಾಜ್ಯನಿರ್ವಾಸಕಥನಮ್

ತತಃ ಕ್ರೋಧಸಮಾವಿಷ್ಟಂ ಸಂರಬ್ಧಂ ತಮುಪಾಗತಮ್ ।
ಅಹಂ ಪ್ರಸಾದಯಾಂಚಕ್ರೇ ಭ್ರಾತರಂ ಹಿತಕಾಮ್ಯಯಾ ॥ ೧

ದಿಷ್ಟ್ಯಾಸಿ ಕುಶಲೀ ಪ್ರಾಪ್ತೋ ದಿಷ್ಟ್ಯಾಪಿ ನಿಹತೋ ರಿಪುಃ ।
ಅನಾಥಸ್ಯ ಹಿ ಮೇ ನಾಥಸ್ತ್ವಮೇಕೋಽನಾಥನಂದನಃ ॥ ೨

ಇದಂ ಬಹುಶಲಾಕಂ ತೇ ಪೂರ್ಣಚಂದ್ರಮಿವೋದಿತಮ್ ।
ಛತ್ರಂ ಸವಾಲವ್ಯಜನಂ ಪ್ರತೀಚ್ಛಸ್ವ ಮಯೋದ್ಯತಮ್ ॥ ೩

ಆರ್ತಶ್ಚಾಥ ಬಿಲದ್ವಾರಿ ಸ್ಥಿತಃ ಸಂವತ್ಸರಂ ನೃಪ ।
ದೃಷ್ಟ್ವಾಹಂ ಶೋಣಿತಂ ದ್ವಾರಿ ಬಿಲಾಚ್ಚಾಪಿ ಸಮುತ್ಥಿತಮ್ ॥ ೪

### ಸರ್ಗ ೧೦

ಅನೇಕ ವಿಧದಲ್ಲಿ ಪ್ರಾರ್ಥಿಸಿದರೂ ವಾಲಿಯು ಪ್ರಸನ್ನನಾಗದೆ ತನ್ನನ್ನು
ರಾಜ್ಯದಿಂದ ಹೊರಗೆ ಅಟ್ಟಿದನೆಂದು ಸುಗ್ರೀವನು ಹೇಳುವುದು.
ವಾಲಿಯನ್ನು ವಧಿಸುವೆನೆಂದು ಶ್ರೀರಾಮನು ಹೇಳಿ
ಸುಗ್ರೀವನನ್ನು ಸಂತೈಸುವುದು.

ಸುಗ್ರೀವನು ಮತ್ತೆ ಹೇಳಿದನು : "ಶ್ರೀರಾಮ, ಹೀಗೆ ಕ್ರೋಧೋದ್ದೀಪಿತನಾಗಿ ಆವೇಗದಿಂದ ಬಂದ ನನ್ನ ಅಣ್ಣನು ಪ್ರಸನ್ನನಾಗುವಂತೆ ಬೇಡಿಕೊಂಡೆನು. ಉಭಯರಿಗೂ ಹಿತವಾಗಲೆಂದು ಈ ರೀತಿಯಲ್ಲಿ ಪ್ರಾರ್ಥಿಸಿದೆನು (೧): "ಅಣ್ಣ, ನೀನು ಕುಶಲದಿಂದ ಬಂದುದು ನನ್ನ ಭಾಗ್ಯ. ನಮ್ಮ ಭಾಗ್ಯದಿಂದ ಶತ್ರುವು ಹತನಾದನು. ಅನಾಥನಾದ ನನಗೆ ನಾಥನಾಗಿದ್ದೀಯೆ. ದಿಕ್ಕಿಲ್ಲದವರಿಗೆ ಗತಿಯಾಗಿದ್ದೀಯೆ. ಅನೇಕ ಶಲಾಕೆಗಳಿಂದ ಕೂಡಿ ಪೂರ್ಣಚಂದ್ರನಂತಿರುವ ಈ ಶ್ವೇತಚ್ಛತ್ರವನ್ನು ನಿನಗೆ ಹಿಡಿಯುತ್ತೇನೆ. ಈ ಚಾಮರಗಳನ್ನು ಬೀಸುತ್ತೇನೆ, ಸ್ವೀಕರಿಸು (೨-೩). ಮಹಾರಾಜ, ನಿನ್ನಾಜ್ಞೆಯಂತೆ ಒಂದು ವರ್ಷದವರೆಗೆ ಬಿಲದ್ವಾರದಲ್ಲಿ ಶೋಕಾರ್ತನಾಗಿ ನಿನಗೋಸ್ಕರ ಕಾದುಕೊಂಡಿದ್ದೆನು. ಆ ಬಿಲದಿಂದ ದ್ವಾರದವರೆಗೆ ರಕ್ತವು ಹರಿದು ಬಂದಿತು. ಅದನ್ನು ಕಂಡು ನನ್ನ ಹೃದಯವು ಶೋಕಸಂತಪ್ತವಾಯಿತು.

**ಶೋಕಸಂವಿಗ್ನಹೃದಯೋ ಭೃಶಂ ವ್ಯಾಕುಲಿತೇಂದ್ರಿಯಃ ।**
**ಅಪಿಧಾಯ ಬಿಲದ್ವಾರಂ ಗಿರಿಶೃಂಗೇಣ ತತ್ತದಾ ॥ ೫**

**ತಸ್ಮಾದ್ದೇಶಾದಪಾಕ್ರಮ್ಯ ಕಿಷ್ಕಿಂಧಾಂ ಪ್ರಾವಿಶಂ ಪುನಃ ।**
**ವಿಷಾದಾತ್ತ್ವಿಹ ಮಾಂ ದೃಷ್ಟ್ವಾ ಪೌರೈರ್ಮಂತ್ರಿಭಿರೇವ ಚ ॥ ೬**

**ಅಭಿಷಿಕ್ತೋ ನ ಕಾಮೇನ ತನ್ಮೇ ತ್ವಂ ಕ್ಷಂತುಮರ್ಹಸಿ ।**
**ತ್ವಮೇವ ರಾಜಾ ಮಾನಾರ್ಹಃ ಸದಾ ಚಾಹಂ ಯಥಾ ಪುರಮ್ ॥ ೭**

**ರಾಜಭಾವನಿಯೋಗೋಽಯಂ ಮಯಾ ತ್ವದ್ವಿರಹಾತ್ ಕೃತಃ ।**
**ಸಾಮಾತ್ಯಪೌರನಗರಂ ಸ್ಥಿತಂ ನಿಹತಕಂಟಕಮ್ ॥ ೮**

**ನ್ಯಾಸಭೂತಮಿದಂ ರಾಜ್ಯಂ ತವ ನಿರ್ಯಾತಯಾಮ್ಯಹಮ್ ।**
**ಮಾ ಚ ರೋಷಂ ಕೃಥಾಃ ಸೌಮ್ಯ ಮಯಿ ಶತ್ರುನಿಬರ್ಹಣ ॥ ೯**

**ಯಾಚೇ ತ್ವಾಂ ಶಿರಸಾ ರಾಜನ್ ಮಯಾ ಬದ್ಧೋಽಯಮಂಜಲಿಃ ।**
**ಬಲಾದಸ್ಮಿ ಸಮಾಗಮ್ಯ ಮಂತ್ರಿಭಿಃ ಪುರವಾಸಿಭಿಃ ॥ ೧೦**

---

ಇಂದ್ರಿಯಗಳು ಅತಿಯಾಗಿ ಕಳವಳಿಸಿದವು. (ನಿನ್ನ ವೈರಿಯಾದ ರಾಕ್ಷಸನು ಅಲ್ಲಿಯೇ ಸಾಯಲೆಂದು) ಗಿರಿಶಿಖರದ ಕಲ್ಲಿನಿಂದ ಬಿಲದ್ವಾರವನ್ನು ಮುಚ್ಚಿದೆನು (೪-೫). ಅನಂತರ ಕಿಷ್ಕಿಂಧೆಗೆ ಬಂದು ನಿನ್ನ ಶೋಕದಲ್ಲಿ ಮುಳುಗಿದ್ದೆನು ನನ್ನ ಶೋಕವನ್ನು ಕಂಡು ಪೌರರೂ ಮಂತ್ರಿಗಳೂ (ನಿನಗೆ ಏನೋ ಕೇಡಾಗಿದೆಯೆಂದು ಊಹಿಸಿ) ನನಗೆ ಪಟ್ಟಾಭಿಷೇಕ ಮಾಡಿದರು ಆದಕ್ಕಾಗಿ ನಾನು ಆಸೆಪಡಲಿಲ್ಲ. ನನ್ನನ್ನು ಮನ್ನಿಸು. ನೀನೇ ಕಿಷ್ಕಿಂಧೆಗೆ ರಾಜನಲ್ಲದೆ ನಾನಲ್ಲ. ನೀನು ನನಗೆ ಪೂಜ್ಯನು. ನಾನು ಮೊದಲಿನಂತೆಯೇ ಭೃತ್ಯನಾಗಿದ್ದೇನೆ (೬-೭). ನೀನಿಲ್ಲದುದರಿಂದ ಈ ರಾಜ ಕಾರ್ಯವನ್ನು ನಡೆಸುತ್ತಿದ್ದೆನು. ಮೊದಲಿನಂತೆಯೇ ಅಮಾತ್ಯರು, ಪೌರರು, ರಾಜಧಾನಿ—ಎಲ್ಲವೂ ನಿಷ್ಕಂಟಕವಾಗಿ ನಿನ್ನ ಸ್ವಾಧೀನದಲ್ಲಿದೆ (೮). ಇಷ್ಟು ದಿನ ಈ ರಾಜ್ಯವು ನನ್ನಲ್ಲಿ ನ್ಯಾಸವಾಗಿತ್ತೆಂದು ತಿಳಿ. ಇದನ್ನು ಪುನಃ ನಿನಗೇ ಒಪ್ಪಿಸುತ್ತಿದ್ದೇನೆ ಸೌಮ್ಯ, ನನ್ನಮೇಲೆ ಕೋಪಿಸಬೇಡ. ಶತ್ರುವನ್ನು ನಿರ್ಮೂಲಮಾಡಿ ಬಂದ ವೀರ ನೀನು (೯). ಮಹಾ ರಾಜ, ತಲೆಬಾಗಿ ಬೇಡಿಕೊಳ್ಳುತ್ತೇನೆ. ಕೈಮುಗಿದು ಕೇಳಿಕೊಳ್ಳುತ್ತೇನೆ.

ರಾಜಭಾವೇ ನಿಯುಕ್ತೋಽಹಂ ಶೂನ್ಯದೇಶಜಿಗೀಷಯಾ ।
ಸ್ನಿಗ್ಧಮೇವಂ ಬ್ರುವಾಣಂ ಮಾಂ ಸ ತು ನಿರ್ಭರ್ತ್ಸ್ಯ ವಾನರಃ ॥ ೧೧
ಧಿಕ್ ತ್ವಾಮಿತಿ ಚ ಮಾಮುಕ್ತ್ವಾ ಬಹು ತತ್ತದುವಾಚ ಹ ।
ಪ್ರಕೃತೀಶ್ಚ ಸಮಾನೀಯ ಮಂತ್ರಿಣಶ್ಚೈವ ಸಂಮತಾನ್ ॥ ೧೨
ಮಾಮಾಹ ಸುಹೃದಾಂ ಮಧ್ಯೇ ವಾಕ್ಯಂ ಪರಮಗರ್ಹಿತಮ್ ।
ವಿದಿತಂ ವೋ ಯಥಾ ರಾತ್ರೌ ಮಾಯಾವೀ ಸ ಮಹಾಸುರಃ ॥ ೧೩
ಮಾಂ ಸಮಾಹ್ವಯತ ಕ್ರೂರೋ ಯುದ್ಧಕಾಂಕ್ಷೀ ಸುದುರ್ಮತಿಃ ।
ತಸ್ಯ ತದ್ಗರ್ಜಿತಂ ಶ್ರುತ್ವಾ ನಿಃಸೃತೋಽಹಂ ನೃಪಾಲಯಾತ್ ॥ ೧೪
ಅನುಯಾತಶ್ಚ ಮಾಂ ತೂರ್ಣಮಯಂ ಭ್ರಾತಾ ಸುದಾರುಣಃ ।
ಸ ತು ದೃಷ್ಟ್ವೈವ ಮಾಂ ರಾತ್ರೌ ಸದ್ವಿತೀಯಂ ಮಹಾಬಲಃ ॥ ೧೫
ಪ್ರಾದ್ರವದ್ಭಯಸಂತ್ರಸ್ತೋ ವೀಕ್ಷ್ಯಾವಾಂ ತಮನುದ್ರುತೌ ।
ಅನುದ್ರುತಶ್ಚ ವೇಗೇನ ಪ್ರವಿವೇಶ ಮಹಾಬಿಲಮ್ ॥ ೧೬

---

ಮಂತ್ರಿಗಳೂ ಪೌರರೂ ಒತ್ತಾಯದಿಂದ ರಾಜ್ಯಭಾರವನ್ನು ನನ್ನಮೇಲೆ ಹೇರಿದರು. ರಾಜ್ಯವು ಅನಾಯಕವಾದರೆ ಶತ್ರುಗಳ ಕಣ್ಣು ಬೀಳುವುದೆಂದು ಹೀಗೆ ಮಾಡಿದರು". ಹೀಗೆ ಮನಃಪೂರ್ವಕವಾಗಿ ಪ್ರೀತಿಯಿಂದ ಹೇಳಿದರೂ ಆ ವಾನರನು ನನ್ನನ್ನು ಜರಿದನು (೧೦-೧೧). ಅವನು 'ಥೂ ! ನಿನಗೆ ಧಿಕ್ಕಾರ!' ಎಂದು ಬಯ್ದು ನಾನಾಬಗೆಯ ಕೆಟ್ಟಮಾತುಗಳನ್ನಾಡಿದನು. ಆಮೇಲೆ ವಾಲಿಯು ಪ್ರಜೆಗಳನ್ನೂ ತನಗೆ ಇಷ್ಟರಾದ ಮಂತ್ರಿಗಳನ್ನೂ ಕರೆಸಿ, ಅವರೆದುರಿಗೆ ನನ್ನನ್ನು ತುಚ್ಛೀಕರಿಸುವ ದುರ್ವಚನಗಳನ್ನಾಡಿದನು: "ಎಲೈ ಪ್ರಜೆಗಳೆ, ಮಾಯಾವಿಯೆಂಬ ಮಹಾಸುರನೊಬ್ಬನು ಒಂದು ರಾತ್ರಿ ಇಲ್ಲಿಗೆ ಬಂದುದು ನಿಮಗೆ ಗೊತ್ತಿದೆ (೧೨-೧೩). ದುರ್ಬುದ್ಧಿಯಾದ ಆ ಕ್ರೂರನು ನನ್ನೊಡನೆ ಯುದ್ಧವನ್ನು ಬಯಸಿ ನನ್ನನ್ನು ಆಹ್ವಾನಿಸಿದನು ಅವನ ಗರ್ಜನೆಯನ್ನು ಕೇಳಿ ನಾನು ಅರಮನೆಯಿಂದ ಹೊರಟೆನು. ಕ್ರೂರಾತ್ಮನಾದ ಈ ಅನುಜನೆಂಬವನೂ ಕೂಡಲೆ ನನ್ನನ್ನು ಹಿಂಬಾಲಿಸಿ ಬಂದನು. ನಾನು ಜೊತೆಗೂಡಿ ಬಂದಿರುವುದನ್ನು ಆ ರಾಕ್ಷಸನು ಕಂಡು ಹೆದರಿ ಓಡಿಹೋದನು (೧೪-೧೫). ನಾವಿಬ್ಬರೂ ಅವನನ್ನು ಅಟ್ಟಿಸಿಕೊಂಡುಹೋದೆವು. ಅವನು

ತಂ ಪ್ರವಿಷ್ಟಂ ವಿದಿತ್ವಾ ತು ಸುಘೋರಂ ಸುಮಹದ್ಬಿಲಮ್ ।
ಅಯಮುಕ್ತೋಽಥ ಮೇ ಭ್ರಾತಾ ಮಯಾ ತು ಕ್ರೂರದರ್ಶನಃ ॥ ೧೭

ಅಹತ್ವಾ ನಾಸ್ತಿ ಮೇ ಶಕ್ತಿಃ ಪ್ರತಿಗಂತುಮಿತಃ ಪುರೀಮ್ ।
ಬಿಲದ್ವಾರಿ ಪ್ರತೀಕ್ಷ ತ್ವಂ ಯಾವದೇನಂ ನಿಹನ್ಮ್ಯಹಮ್ ॥ ೧೮

ಸ್ಥಿತೋಽಯಮಿತಿ ಮತ್ವಾ ತು ಪ್ರವಿಷ್ಟೋಽಹಂ ದುರಾಸದಮ್ ।
ತಂ ಚ ಮೇ ಮಾರ್ಗಮಾಣಸ್ಯ ಗತಃ ಸಂವತ್ಸರಸ್ತದಾ ॥ ೧೯

ಸ ತು ದೃಷ್ಟೋ ಮಯಾ ಶತ್ರುರನಿರ್ವೇದಾದ್ಭಯಾವಹಃ ।
ನಿಹತಶ್ಚ ಮಯಾ ತತ್ರ ಸೋಽಸುರೋ ಬಂಧುಭಿಃ ಸಹ ॥ ೨೦

ತಸ್ಯಾಸ್ಯಾತ್ತು ಪ್ರವೃತ್ತೇನ ರುಧಿರೌಘೇಣ ತದ್ಬಿಲಮ್ ।
ಪೂರ್ಣಮಾಸೀದ್ದುರಾಕ್ರಾಮಂ ಸ್ವನತಸ್ತಸ್ಯ ಭೂತಲೇ ॥ ೨೧

ಸೂದಯಿತ್ವಾ ತು ತಂ ಶತ್ರುಂ ವಿಕ್ರಾಂತಂ ದುಂದುಭೇಃ ಸುತಮ್ ।
ನಿಷ್ಕ್ರಾಮನ್ನೇವ ಪಶ್ಯಾಮಿ ಬಿಲಸ್ಯಾಪಿಹಿತಂ ಮುಖಮ್ ॥ ೨೨

---

ಓಡಿಹೋಗಿ ಒಂದು ಮಹಾಬಿಲವನ್ನು ಪ್ರವೇಶಿಸಿದನು. ದೊಡ್ಡದೂ ಘೋರವೂ ಆದ ಬಿಲವನ್ನು ಅವನು ಹೊಕ್ಕನೆಂದರಿತು, ನಾನು ಈ ಸೋದರನಿಗೆ ಒಂದು ಮಾತನ್ನು ತಿಳಿಸಿದೆನು ಈತನ ಉದ್ದೇಶ ಬಹಳ ಕ್ರೂರವಾಗಿತ್ತು (೧೬-೧೭). 'ಎಲಾ ಸುಗ್ರೀವ, ಈ ರಾಕ್ಷಸನನ್ನು ಕೊಲ್ಲದೆ ರಾಜಧಾನಿಗೆ ಹಿಂದಿರುಗುವುದು ನನ್ನಿಂದ ಸಾಧ್ಯವಿಲ್ಲ. ಈತನನ್ನು ಕೊಂದುಬರುವವರೆಗೆ ನೀನು ಬಿಲದ್ವಾರದಲ್ಲಿ ನನ್ನನ್ನು ನಿರೀಕ್ಷಿಸುತ್ತಿರು' ಎಂದು ತಿಳಿಸಿದೆನು. ಇವನು ಬಿಲದ ಬಾಗಿಲಿನಲ್ಲಿರುವನೆಂದು ನಂಬಿ ನಾನು ದುರ್ಗಮವಾದ ಆ ಬಿಲವನ್ನು ಪ್ರವೇಶಿಸಿದೆನು ಅಲ್ಲಿ ಆ ರಾಕ್ಷಸನನ್ನು ಹುಡುಕಿ ಗೊತ್ತು ಹಚ್ಚುವುದಕ್ಕೆ ಒಂದು ವರ್ಷವೇ ಬೇಕಾಯಿತು (೧೮-೧೯) ಆದರೂ ಬೇಸರವಿಲ್ಲದೆ ಹುಡುಕಿ ಭಯಂಕರನಾದ ಮಾಯಾವಿಯನ್ನು ಕಂಡು ಹಿಡಿದೆನು. ಅಲ್ಲಿಯೇ ಆ ರಾಕ್ಷಸನನ್ನೂ ಅವನ ಬಂಧುಗಳನ್ನೂ ಕೊಂದು ಹಾಕಿದೆನು. ಕಿರಿಚಿಕೊಳ್ಳುತ್ತಿದ್ದ ಆ ದೈತ್ಯನ ಬಾಯಿಂದ ರಕ್ತವು ಕೋಡಿಯಾಗಿ ಹರಿದು, ನೆಲದಮೇಲೆ ಹೆಜ್ಜೆಯಿಡಲಾರದಂತೆ ಆ ಬಿಲವು ರಕ್ತದಿಂದ ತುಂಬಿಹೋಯಿತು (೨೦-೨೧). ಪರಾಕ್ರಮಿಯೂ ದುಂದುಭಿಯ ಪುತ್ರನೂ

ವಿಕ್ರೋಶಮಾನಸ್ಯ ತು ಮೇ ಸುಗ್ರೀವೇತಿ ಪುನಃ ಪುನಃ ।
ಯದಾ ಪ್ರತಿವಚೋ ನಾಸ್ತಿ ತತೋಽಹಂ ಭೃಶದುಃಖಿತಃ ॥ ೨೩

ಪಾದಪ್ರಹಾರೈಸ್ತು ಮಯಾ ಬಹುಭಿಸ್ತದ್ವಿದಾರಿತಮ್ ।
ತತೋಽಹಂ ತೇನ ನಿಷ್ಕ್ರಮ್ಯ ಪಥಾ ಪುರಮುಪಾಗತಃ ॥ ೨೪

ಅತ್ರಾನೇನಾಸ್ಮಿ ಸಂರುದ್ಧೋ ರಾಜ್ಯಂ ಪ್ರಾರ್ಥಯತಾತ್ಮನಃ ।
ಸುಗ್ರೀವೇಣ ನೃಶಂಸೇನ ವಿಸ್ಮೃತ್ಯ ಭ್ರಾತೃಸೌಹೃದಮ್ ॥ ೨೫

ಏವಮುಕ್ತ್ವಾ ತು ಮಾಂ ತತ್ರ ವಸ್ತ್ರೇಣೈಕೇನ ವಾನರಃ ।
ತದಾ ನಿರ್ವಾಸಯಾಮಾಸ ವಾಲೀ ವಿಗತಸಾಧ್ವಸಃ ॥ ೨೬

ತೇನಾಹಮಪವಿದ್ಧಶ್ಚ ಹೃತದಾರಶ್ಚ ರಾಘವ ।
ತದ್ಭಯಾಚ್ಚ ಮಹೀ ಕೃತ್ಸ್ನಾ ಕ್ರಾಂತೇಯಂ ಸವನಾರ್ಣವಾ ॥ ೨೭

ಋಶ್ಯಮೂಕಂ ಗಿರಿವರಂ ಭಾರ್ಯಾಹರಣದುಃಖಿತಃ ।
ಪ್ರವಿಷ್ಟೋಽಸ್ಮಿ ದುರಾಧರ್ಷಂ ವಾಲಿನಃ ಕಾರಣಾಂತರೇ ॥ ೨೮

---

ಆದ ಆ ಶತ್ರುವನ್ನು ನಿರ್ನಾಮಗೊಳಿಸಿ ಹೊರಗೆ ಬರುತ್ತೇನೆ, ಬಿಲದ ಬಾಯಿ ಮುಚ್ಚಿಹೋಗಿದೆ! 'ಸುಗ್ರೀವ! ಸುಗ್ರೀವ!' ಎಂದು ಮತ್ತೆ ಮತ್ತೆ ಕೂಗಿಕೊಂಡರೂ ಪ್ರತ್ಯುತ್ತರವಿಲ್ಲ! ಆಗ ನನ್ನ ಮನಸ್ಸಿಗೆ ಬಹಳ ನೋವಾಯಿತು (೨೨-೨೩) ಕಾಲುಗಳಿಂದ ಒದೆದು ಒದೆದು ದ್ವಾರವನ್ನು ಸೀಳಿ, ಬಿಲದಿಂದ ಹೊರಟು ನೆಟ್ಟಗೆ ದಾರಿಹಿಡಿದು ನಗರಕ್ಕೆ ಬಂದೆನು. ಪ್ರಜೆಗಳೆ, ಘಾತುಕನಾದ ಈ ಸುಗ್ರೀವನು ಬಿಲದಿಂದ ನಾನು ಹೊರಗೆ ಬರಬಾರದೆಂದು ಬಂಡೆಗಳಿಂದ ಮುಚ್ಚಿದನು. ಒಡಹುಟ್ಟಿದವನೆಂಬ ಪ್ರೀತಿಯನ್ನೂ ಮರೆತು ರಾಜ್ಯದ ಆಸೆಗಾಗಿ ಹೀಗೆ ಮಾಡಿದ್ದಾನೆ" ಎಂದು ದೂರಿದನು (೨೪-೨೫). ಆ ವಾನರನು ಉಟ್ಟಬಟ್ಟೆಯಲ್ಲಿ ನನ್ನನ್ನು ಹೊರಗಟ್ಟಿದನು ವಾಲಿಗೆ ಯಾರ ಭಯವೂ ಇಲ್ಲ. "ಶ್ರೀರಾಮ, ಅವನು ನನ್ನನ್ನು ಹೊಡೆದು ನನ್ನ ಹೆಂಡತಿಯನ್ನು ಅಪಹರಿಸಿದ್ದಾನೆ ಅವನ ಭಯದಿಂದ ಭೂಮಂಡಲವನ್ನೇ ಸುತ್ತಿದೆನು. ಅರಣ್ಯದಲ್ಲಿ ಅಲೆದೆನು. ಸಮುದ್ರವನ್ನು ಲಂಘಿಸಿದೆನು (೨೬-೨೭). ಭಾರ್ಯಾಪಹಾರದಿಂದ ದುಃಖಿತನಾಗಿ ಕೊನೆಗೆ ಈ ಋಶ್ಯಮೂಕಪರ್ವತದಲ್ಲಿ ಬಂದು ಸೇರಿಕೊಂಡಿದ್ದೇನೆ. ಒಂದಾನೊಂದು ವಿಶೇಷ

**ಏತತ್ತೇ ಸರ್ವಮಾಖ್ಯಾತಂ ವೈರಾನುಕಥನಂ ಮಹತ್ ।**
**ಅನಾಗಸಾ ಮಯಾ ಪ್ರಾಪ್ತಂ ವ್ಯಸನಂ ಪಶ್ಯ ರಾಘವ ॥** ೨೯

**ವಾಲಿನಸ್ತು ಭಯಾರ್ತಸ್ಯ ಸರ್ವಲೋಕಾಭಯಂಕರ ।**
**ಕರ್ತುಮರ್ಹಸಿ ಮೇ ವೀರ ಪ್ರಸಾದಂ ತಸ್ಯ ನಿಗ್ರಹಾತ್ ॥** ೩೦

**ಏವಮುಕ್ತಸ್ತು ತೇಜಸ್ವೀ ಧರ್ಮಜ್ಞೋ ಧರ್ಮಸಂಹಿತಮ್ ।**
**ವಚನಂ ವಕ್ತುಮಾರೇಭೇ ಸುಗ್ರೀವಂ ಪ್ರಹಸನ್ನಿವ ॥** ೩೧

**ಅಮೋಘಾಃ ಸೂರ್ಯಸಂಕಾಶಾ ಮಮೈತೇ ನಿಶಿತಾಃ ಶರಾಃ ।**
**ತಸ್ಮಿನ್ ವಾಲಿನಿ ದುರ್ವೃತ್ತೇ ನಿಪತಿಷ್ಯಂತಿ ವೇಗಿತಾಃ ॥** ೩೨

**ಯಾವತ್ತಂ ನಾಭಿಪಶ್ಯಾಮಿ ತವ ಭಾರ್ಯಾಪಹಾರಿಣಮ್ ।**
**ತಾವತ್ ಸ ಜೀವೇತ್ ಪಾಪಾತ್ಮಾ ವಾಲೀ ಚಾರಿತ್ರದೂಷಕಃ ॥** ೩೩

**ಆತ್ಮಾನುಮಾನಾತ್ ಪಶ್ಯಾಮಿ ಮಗ್ನಂ ತ್ವಾಂ ಶೋಕಸಾಗರೇ ।**
**ತ್ವಾಮಹಂ ತಾರಯಿಷ್ಯಾಮಿ ಕಾಮಂ ಪ್ರಾಪ್ಸ್ಯಸಿ ಪುಷ್ಕಲಮ್ ॥** ೩೪

---

ಕಾರಣದಿಂದ ವಾಲಿಯು ಇಲ್ಲಿಗೆ ನುಗ್ಗಿ ಬರಲಾರ. ರಾಘವ, ನಮ್ಮ ವೈರಕ್ಕೆ ಸಂಬಂಧಿಸಿದ ಮಹಾಕಥೆಯೆಲ್ಲವನ್ನೂ ಹೇಳಿದ್ದೇನೆ ನಾನು ಯಾವ ಅಪರಾಧವನ್ನು ಮಾಡದಿದ್ದರೂ ನನಗೆ ಎಂತಹ ಕಷ್ಟ ಬಂದಿದೆ, ನೋಡು! (೨೮-೨೯). ವಾಲಿಯ ಭಯದಿಂದ ಕಂಗೆಟ್ಟಿರುವ ನನ್ನಲ್ಲಿ ಪ್ರಸನ್ನನಾಗು. ಸರ್ವರಿಗೂ ಅಭಯವನ್ನು ನೀಡಬಲ್ಲ ವೀರಾಗ್ರಣಿ ನೀನು. ಅವನನ್ನು ನಿಗ್ರಹಿಸಿ ನನ್ನನ್ನು ಅನುಗ್ರಹಿಸು" ಎಂದು ನಿವೇದಿಸಿದನು (೩೦). ಆಗ ತೇಜಸ್ವಿಯೂ ಧರ್ಮಜ್ಞನೂ ಆದ ಶ್ರೀರಾಮನು ಧರ್ಮಯುಕ್ತವಾದ ಮಾತನ್ನಾಡಿದನು. ಅವನು ಕಿರುನಗೆಯಿಂದ "ಸುಗ್ರೀವ, ನನ್ನ ತೀಕ್ಷ್ಣಾಸ್ತ್ರಗಳು ಅಮೋಘವಾದವು. ಸೂರ್ಯನಂತೆ ಪ್ರಖರವಾದವು. ದುರಾಚಾರನಾದ ವಾಲಿಯಮೇಲೆ ಮಹಾವೇಗದಿಂದ ನುಗ್ಗುವುವು (೩೧-೩೨). ವಾಲಿಯು ಸದಾಚಾರವನ್ನು ಕೆಡಿಸಿದ ಚಾರಿತ್ರದೂಷಕ. ನಿನ್ನ ಭಾರ್ಯೆಯನ್ನಪಹರಿಸಿದ ಆ ಪಾಪಾತ್ಮನು ನನ್ನ ಕಣ್ಣಿಗೆ ಬೀಳುವ ಪರ್ಯಂತ ಬದುಕಿ ಉಳಿದಾನು. ಮಿತ್ರ, ನನ್ನ ಸ್ಥಿತಿಯನ್ನು ಊಹಿಸಿಕೊಂಡರೆ, ನೀನು ಎಂತಹ ಶೋಕಸಮುದ್ರದಲ್ಲಿ ಮುಳುಗಿರುವೆಯೆಂಬುದು ನನಗೆ ತಿಳಿಯುತ್ತದೆ.

**ತಸ್ಯ ತದ್ವಚನಂ ಶ್ರುತ್ವಾ ರಾಘವಸ್ಯಾತ್ಮನೋ ಹಿತಮ್ ।**
**ಸುಗ್ರೀವಃ ಪರಮಪ್ರೀತಃ ಸುಮಹದ್ವಾಕ್ಯಮಬ್ರವೀತ್ ॥** ೩೫

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ದಶಮಃ ಸರ್ಗಃ

---

## ಏಕಾದಶಃ ಸರ್ಗಃ

ವಾಲಿಬಲಾವಿಷ್ಕರಣಮ್

**ರಾಮಸ್ಯ ವಚನಂ ಶ್ರುತ್ವಾ ಹರ್ಷಪೌರುಷವರ್ಧನಮ್ ।**
**ಸುಗ್ರೀವಃ ಪೂಜಯಾಂಚಕ್ರೇ ರಾಘವಂ ಪ್ರಶಶಂಸ ಚ ॥** ೧

**ಅಸಂಶಯಂ ಪ್ರಜ್ವಲಿತೈಸ್ತೀಕ್ಷ್ಣೈರ್ಮರ್ಮಾತಿಗೈಃ ಶರೈಃ ।**
**ತ್ವಂ ದಹೇಃ ಕುಪಿತೋ ಲೋಕಾನ್ ಯುಗಾಂತ ಇವ ಭಾಸ್ಕರಃ ॥** ೨

---

ನಿನ್ನನ್ನು ದಡಗಾಣಿಸುವೆನು. ನಿನ್ನ ಇಷ್ಟಾರ್ಥವು ಕೈಗೂಡುವುದು" ಎಂದನು (೩೩-೩೪). ರಾಘವನಾಡಿದ ಹಿತವಾಕ್ಯವನ್ನು ಸುಗ್ರೀವನು ಆಲಿಸಿ ಬಹಳ ಸಂತುಷ್ಟನಾದನು ಶ್ರೀರಾಮನನ್ನು ಹೊಗಳಿ, ಒಂದು ಮುಖ್ಯವಾದ ವಿಷಯವನ್ನು ಪ್ರಸ್ತಾವಿಸಿದನು (೩೫).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಹತ್ತನೆಯ ಸರ್ಗ

---

## ಸರ್ಗ ೧೧

ಸುಗ್ರೀವನು ವಾಲಿಯ ಪರಾಕ್ರಮವನ್ನು ವರ್ಣಿಸುವುದು. ವಾಲಿದುಂದುಭಿಗಳ ಯುದ್ಧ. ಮತಂಗಮುನಿಗಳ ಶಾಪ. ಶ್ರೀರಾಮನು ದುಂದುಭಿಯ ಅಸ್ಥಿಪಂಜರವನ್ನು ಪಾದಾಂಗುಷ್ಠದಿಂದ ಚಿಮ್ಮುವುದು.

ಶ್ರೀರಾಮನ ವಚನವನ್ನಾಲಿಸಿ ಸುಗ್ರೀವನಿಗೆ ಹರ್ಷವಾಯಿತು. ಉತ್ಸಾಹವು ಹೆಚ್ಚಿತು. ಅವನು ಕೈಮುಗಿದು ಶ್ರೀರಾಮನನ್ನು ಪ್ರಶಂಸೆ ಮಾಡಿದನು : "ರಾಘವ, ಧಗಧಗಿಸುವ ನಿನ್ನ ತೀಕ್ಷ್ಣಾಸ್ತ್ರಗಳು ಮರ್ಮಚ್ಛೇದಕರವಾದವು. ನೀನು ಕುಪಿತನಾದರೆ ಸಮಸ್ತಲೋಕಗಳನ್ನೂ ದಹಿಸಬಲ್ಲೆ. ಪ್ರಳಯಕಾಲದ ಭಾಸ್ಕರನಂತೆ ಸುಟ್ಟು ಬೂದಿಮಾಡಬಲ್ಲೆ (೧-೨).

ವಾಲಿನಃ ಪೌರುಷಂ ಯತ್ತದ್ಯಚ್ಚ ವೀರ್ಯಂ ಧೃತಿಶ್ಚ ಯಾ ।
ತನ್ಮಮೈಕಮನಾಃ ಶ್ರುತ್ವಾ ವಿಧತ್ಸ್ವ ಯದನಂತರಮ್ ॥ ೩

ಸಮುದ್ರಾತ್ ಪಶ್ಚಿಮಾತ್ ಪೂರ್ವಂ ದಕ್ಷಿಣಾದಪಿ ಚೋತ್ತರಮ್ ।
ಕ್ರಾಮತ್ಯನುದಿತೇ ಸೂರ್ಯೇ ವಾಲೀ ವ್ಯಪಗತಕ್ಲಮಃ ॥ ೪

ಅಗ್ರಾಣ್ಯಾರುಹ್ಯ ಶೈಲಾನಾಂ ಶಿಖರಾಣಿ ಮಹಾಂತ್ಯಪಿ ।
ಊರ್ಧ್ವಮುತ್ಪಾತ್ಯ ತರಸಾ ಪ್ರತಿಗೃಹ್ಣಾತಿ ವೀರ್ಯವಾನ್ ॥ ೫

ಬಹವಃ ಸಾರವಂತಶ್ಚ ವನೇಷು ವಿವಿಧಾ ದ್ರುಮಾಃ ।
ವಾಲಿನಾ ತರಸಾ ಭಗ್ನಾ ಬಲಂ ಪ್ರಥಯತಾತ್ಮನಃ ॥ ೬

ಮಹಿಷೋ ದುಂದುಭಿರ್ನಾಮ ಕೈಲಾಸಶಿಖರಪ್ರಭಃ ।
ಬಲಂ ನಾಗಸಹಸ್ರಸ್ಯ ಧಾರಯಾಮಾಸ ವೀರ್ಯವಾನ್ ॥ ೭

ವೀರ್ಯೋತ್ಸೇಕೇನ ದುಷ್ಟಾತ್ಮಾ ವರದಾನಾಚ್ಚ ಮೋಹಿತಃ ।
ಜಗಾಮ ಸುಮಹಾಕಾಯಃ ಸಮುದ್ರಂ ಸರಿತಾಂ ಪತಿಮ್ ॥ ೮

---

ಆದರೆ ವಾಲಿಯ ಪೌರುಷವು ಯಾವ ಬಗೆಯದು, ಅವನ ವೀರ್ಯ-ಧೈರ್ಯಗಳು ಎಂತಹವು ಎಂಬುದನ್ನು ಏಕಾಗ್ರತೆಯಿಂದ ಅವಧರಿಸು. ಅನಂತರ ಏನು ಮಾಡಬೇಕೆಂಬುದನ್ನು ನಿಶ್ಚಯಿಸು (೩): ವಾಲಿಯು (ಬ್ರಾಹ್ಮಮುಹೂರ್ತದಲ್ಲಿ) ಸೂರ್ಯನು ಉದಯಿಸುವಷ್ಟರೊಳಗೆ ಪಶ್ಚಿಮ ಸಮುದ್ರದಿಂದ ಪೂರ್ವಸಮುದ್ರದವರೆಗೂ ದಕ್ಷಿಣಸಮುದ್ರದಿಂದ ಉತ್ತರ ಸಮುದ್ರದವರೆಗೂ ( ಸಂಧ್ಯಾನುಷ್ಠಾನಗಳಿಗಾಗಿ ) ಹೋಗಿಬರುತ್ತಾನೆ. ಆದರೂ ಆಯಾಸಪಡುವುದಿಲ್ಲ (೪). ಆ ವೀರನು ಪರ್ವತಾಗ್ರಗಳನ್ನೇರಿ ದೊಡ್ಡದೊಡ್ಡ ಶಿಖರಗಳನ್ನು ವೇಗದಿಂದ ಮೇಲಕ್ಕೆಸೆದು, ಹಾಗೆಯೇ ಅವುಗಳನ್ನು ಆತುಕೊಳ್ಳಬಲ್ಲನು. ವಾಲಿಯು ತನ್ನ ಬಲವನ್ನು ಪ್ರಕಟಿಸುವುದಕ್ಕಾಗಿ, ಕಾಡಿನಲ್ಲಿ ದೃಢವಾಗಿ ಬೆಳೆದುನಿಂತ ವಿವಿಧ ವೃಕ್ಷಗಳನ್ನು ಭುಜಬಲದಿಂದ ಮುರಿದು ಈಡಾಡುವನು (೫-೬). ದುಂದುಭಿಯೆಂಬ ಮಹಿಷಾಕಾರದ ರಾಕ್ಷಸನೊಬ್ಬನಿದ್ದನು ಅವನು ಕೈಲಾಸಶಿಖರದಂತೆ ಅತ್ಯುನ್ನತನಾಗಿದ್ದನು. ಆ ವೀರನಿಗೆ ಸಾವಿರ ಆನೆಗಳ ಬಲವಿತ್ತು. ಶೌರ್ಯದ ಕೊಬ್ಬಿನಿಂದ ಮೆರೆಯುತ್ತಿದ್ದ ಆ ದುಷ್ಟನು ವರಬಲದಿಂದ ಬುದ್ಧಿಗೆಟ್ಟು

ಊರ್ಮಿಮಂತಮತಿಕ್ರಮ್ಯ ಸಾಗರಂ ರತ್ನಸಂಚಯಮ್ ।
ಮಹ್ಯಂ ಯುದ್ಧಂ ಪ್ರಯಚ್ಛೇತಿ ತಮುವಾಚ ಮಹಾರ್ಣವಮ್ ॥ ೯

ತತಃ ಸಮುದ್ರೋ ಧರ್ಮಾತ್ಮಾ ಸಮುತ್ಥಾಯ ಮಹಾಬಲಃ ।
ಅಬ್ರವೀದ್ವಚನಂ ರಾಜನ್ನಸುರಂ ಕಾಲಚೋದಿತಮ್ ॥ ೧೦

ಸಮರ್ಥೋ ನಾಸ್ಮಿ ತೇ ದಾತುಂ ಯುದ್ಧಂ ಯುದ್ಧವಿಶಾರದ ।
ಶ್ರೂಯತಾಮಭಿಧಾಸ್ಯಾಮಿ ಯಸ್ತೇ ಯುದ್ಧಂ ಪ್ರದಾಸ್ಯತಿ ॥ ೧೧

ಶೈಲರಾಜೋ ಮಹಾರಣ್ಯೇ ತಪಸ್ವಿಶರಣಂ ಪರಮ್ ।
ಶಂಕರಶ್ವಶುರೋ ನಾಮ್ನಾ ಹಿಮವಾನಿತಿ ವಿಶ್ರುತಃ ॥ ೧೨

ಮಹಾಪ್ರಸ್ರವಣೋಪೇತೋ ಬಹುಕಂದರನಿರ್ದರಃ ।
ಸ ಸಮರ್ಥಸ್ತವ ಪ್ರೀತಿಮತುಲಾಂ ಕರ್ತುಮಾಹವೇ ॥ ೧೩

ತಂ ಭೀತ ಇತಿ ವಿಜ್ಞಾಯ ಸಮುದ್ರಮಸುರೋತ್ತಮಃ ।
ಹಿಮವದ್ವನಮಾಗಚ್ಛಚ್ಛರಶ್ಚಾಪಾದಿವ ಚ್ಯುತಃ ॥ ೧೪

---

ನದೀಪತಿಯಾದ ಸಮುದ್ರರಾಜನ ಬಳಿಗೆ ಹೋದನು (೭-೮) ತರಂಗಮಾಲಾಕುಲನೂ ರತ್ನಾಕರನೂ ಆದ ಸಮುದ್ರರಾಜನನ್ನು ನೋಡಿ ದುಂದುಭಿಯು 'ಎಲೈ, ನನ್ನೊಡನೆ ಯುದ್ಧಮಾಡು!' ಎಂದು ಆಹ್ವಾನಿಸಿದನು (೯). ಆಗ, ಶ್ರೀರಾಮ, ಮಹಾಬಲನೂ ಧರ್ಮಾತ್ಮನೂ ಆದ ಸಮುದ್ರರಾಜನು ಮೃತ್ಯುವಶನಾಗಿ ಬಂದಿದ್ದ ಆ ರಾಕ್ಷಸನನ್ನು ನೋಡಿ 'ಅಯ್ಯಾ, ನೀನು ಯುದ್ಧವಿಶಾರದ. ನಿನ್ನೊಡನೆ ಯುದ್ಧಮಾಡಲು ನನಗೆ ಸಾಮರ್ಥ್ಯವಿಲ್ಲ! ನಿನಗೆ ಸರಿಯಾಗಿ ಯುದ್ಧವನ್ನು ನೀಡಬಲ್ಲ ವೀರನು ಯಾರೆಂದು ಹೇಳುವೆನು, ಕೇಳು (೧೦-೧೧): (ಉತ್ತರ ದಿಕ್ಕಿನ) ಮಹಾರಣ್ಯದಲ್ಲಿ ಪರ್ವತರಾಜನೊಬ್ಬನಿದ್ದಾನೆ. ತಪಸ್ವಿಗಳಿಗೆ ಆಶ್ರಯವನ್ನು ಕೊಟ್ಟಿದ್ದಾನೆ. ಪರಮೇಶ್ವರನಿಗೆ ಅವನು ಶ್ವಶುರನಾಗಬೇಕು ಹಿಮವಂತನೆಂದು ಅವನ ಹೆಸರು (೧೨). ದೊಡ್ಡದೊಡ್ಡ ಗಿರಿನದಿಗಳಿಂದಲೂ ಗುಹೆ ಕೊರಕಲುಗಳಿಂದಲೂ ವಿರಾಜಿಸುತ್ತಿದ್ದಾನೆ. ಅವನು ಯುದ್ಧರಂಗದಲ್ಲಿ ನಿನಗೆ ಸಂಪೂರ್ಣತೃಪ್ತಿಯನ್ನು ಕೊಡಲು ಸಮರ್ಥ' ಎಂದು ಹೇಳಿದನು (೧೩). 'ಈ ಸಮುದ್ರನು ಹೆದರಿ ಹೋದನು!' ಎಂದು ತಿಳಿದು, ಆ ರಾಕ್ಷಸೇಂದ್ರನು ಬಿಲ್ಲಿನಿಂದ ಚಿಮ್ಮಿದ

**ತತಸ್ತಸ್ಯ ಗಿರೇಃ ಶ್ವೇತಾ ಗಜೇಂದ್ರವಿಪುಲಾಃ ಶಿಲಾಃ ।**
**ಚಿಕ್ಷೇಪ ಬಹುಧಾ ಭೂಮೌ ದುಂದುಭಿರ್ವಿನನಾದ ಚ ॥** ೧೫

**ತತಃ ಶ್ವೇತಾಂಬುದಾಕಾರಃ ಸೌಮ್ಯಃ ಪ್ರೀತಿಕರಾಕೃತಿಃ ।**
**ಹಿಮವಾನಬ್ರವೀದ್ವಾಕ್ಯಂ ಸ್ವ ಏವ ಶಿಖರೇ ಸ್ಥಿತಃ ॥** ೧೬

**ಕ್ಲೇಷ್ಟುಮರ್ಹಸಿ ಮಾಂ ನ ತ್ವಂ ದುಂದುಭೇ ಧರ್ಮವತ್ಸಲ ।**
**ರಣಕರ್ಮಸ್ವಕುಶಲಸ್ತಪಸ್ವಿಶರಣಂ ಹ್ಯಹಮ್ ॥** ೧೭

**ತಸ್ಯ ತದ್ವಚನಂ ಶ್ರುತ್ವಾ ಗಿರಿರಾಜಸ್ಯ ಧೀಮತಃ ।**
**ಉವಾಚ ದುಂದುಭಿರ್ವಾಕ್ಯಂ ರೋಷಾತ್ ಸಂರಕ್ತಲೋಚನಃ ॥** ೧೮

**ಯದಿ ಯುದ್ಧೇಽಸಮರ್ಥಸ್ತ್ವಂ ಮದ್ಭಯಾದ್ವಾ ನಿರುದ್ಯಮಃ ।**
**ತಮಾಚಕ್ಷ್ವ ಪ್ರದದ್ಯಾನ್ಮೇ ಯೋಽದ್ಯ ಯುದ್ಧಂ ಯುಯುತ್ಸತಃ ॥**

**ಹಿಮವಾನಬ್ರವೀದ್ವಾಕ್ಯಂ ಶ್ರುತ್ವಾ ವಾಕ್ಯವಿಶಾರದಃ ।**
**ಅನುಕ್ತಪೂರ್ವಂ ಧರ್ಮಾತ್ಮಾ ಕ್ರೋಧಾತ್ತಮಸುರೋತ್ತಮಮ್ ॥**

ಬಾಣದಂತೆ ನೆಟ್ಟನೆ ಹಿಮಾಲಯಪ್ರಾಂತಕ್ಕೆ ಹೋದನು. ದುಂದುಭಿಯು ಹಿಮಾಲಯದಲ್ಲಿ ಐರಾವತದಂತಿದ್ದ ದೊಡ್ಡದೊಡ್ಡ ಬಿಳಿಯ ಬಂಡೆಗಳನ್ನು ಮನಬಂದಂತೆ ಉರುಳಿಸಿ ಈಡಾಡಿ ಗರ್ಜಿಸಿದನು (೧೪–೧೫). ಆಗ ಹಿಮವಂತನು ಸೌಮ್ಯವೂ ಪ್ರೀತಿಜನಕವೂ ಆದ ಆಕೃತಿಯನ್ನು ಧರಿಸಿ, ತನ್ನ ಶಿಖರದಮೇಲೆ ಒಂದು ಬಿಳಿಯ ಮೋಡದಂತೆ ಕಾಣಿಸಿಕೊಂಡು 'ದುಂದುಭಿ, ಧರ್ಮವತ್ಸಲ ! ನನ್ನನ್ನೇಕೆ ಪೀಡಿಸುವೆ ? ರಣರಂಗದಲ್ಲಿ ಹೊಡೆದಾಡುವ ಕೌಶಲ ನನಗಿಲ್ಲ. ಕೈಲಾಗದ ತಪಸ್ವಿಗಳಿಗೆ ಸ್ವಲ್ಪ ಆಶ್ರಯವನ್ನು ಕೊಟ್ಟಿದ್ದೇನೆ, ಅಷ್ಟೆ!' ಎಂದನು (೧೬–೧೭). ಬುದ್ಧಿಶಾಲಿಯಾದ ಗಿರಿರಾಜನ ಮಾತನ್ನು ಕೇಳಿ ದುಂದುಭಿಯ ಕಣ್ಣುಗಳು ಸಿಟ್ಟಿನಿಂದ ಕೆಂಪಡರಿದವು. ಅವನು 'ಎಲೈ ಹಿಮವಂತ, ನೀನು ಯುದ್ಧದಲ್ಲಿ ಕೈಲಾಗದವನೇ ಇರಬಹುದು ; ಕೈಲಾದರೂ ನನಗೆ ಹೆದರಿ ಹಿಂಜರಿಯುತ್ತಿರಬಹುದು. ಇರಲಿ ; ಹೊಡೆದಾಡಲು ಬಂದಿರುವ ನನಗೆ ಸಮನಾಗಿ ನಿಂತು ಯಾವನು ಯುದ್ಧವನ್ನು ಕೊಡಬಲ್ಲ ? ಅದನ್ನಾದರೂ ಹೇಳು !' ಎಂದು ಕೇಳಿದನು (೧೮–೧೯). ಇಂಥ ಮಾತನ್ನು ಹಿಮವಂತನು ಹಿಂದೆ ಕೇಳಿರಲಿಲ್ಲ ! ಅವನಾದರೋ ವಾಕ್ಯ

ವಾಲೀ ನಾಮ ಮಹಾಪ್ರಾಜ್ಞಃ ಶಕ್ರತುಲ್ಯಪರಾಕ್ರಮಃ ।
ಅಧ್ಯಾಸ್ತೇ ವಾನರಃ ಶ್ರೀಮಾನ್ ಕಿಷ್ಕಿಂಧಾಮತುಲಪ್ರಭಾಮ್ ॥ ೨೧

ಸ ಸಮರ್ಥೋ ಮಹಾಪ್ರಾಜ್ಞಸ್ತವ ಯುದ್ಧವಿಶಾರದಃ ।
ದ್ವಂದ್ವಯುದ್ಧಂ ಮಹದ್ದಾತುಂ ನಮುಚೇರಿವ ವಾಸವಃ ॥ ೨೨

ತಂ ಶೀಘ್ರಮಭಿಗಚ್ಛ ತ್ವಂ ಯದಿ ಯುದ್ಧಮಿಹೇಚ್ಛಸಿ ।
ಸ ಹಿ ದುರ್ಧರ್ಷಣೋ ನಿತ್ಯಂ ಶೂರಃ ಸಮರಕರ್ಮಣಿ ॥ ೨೩

ಶ್ರುತ್ವಾ ಹಿಮವತೋ ವಾಕ್ಯಂ ಕ್ರೋಧಾವಿಷ್ಟಃ ಸ ದುಂದುಭಿಃ ।
ಜಗಾಮ ತಾಂ ಪುರೀಂ ತಸ್ಯ ಕಿಷ್ಕಿಂಧಾಂ ವಾಲಿನಸ್ತದಾ ॥ ೨೪

ಧಾರಯನ್ ಮಾಹಿಷಂ ರೂಪಂ ತೀಕ್ಷ್ಣಶೃಂಗೋ ಭಯಾವಹಃ ।
ಪ್ರಾವೃಷೀವ ಮಹಾಮೇಘಸ್ತೋಯಪೂರ್ಣೋ ನಭಸ್ತಲೇ ॥ ೨೫

ತತಸ್ತದ್ದ್ವಾರಮಾಗಮ್ಯ ಕಿಷ್ಕಿಂಧಾಯಾ ಮಹಾಬಲಃ ।
ನನರ್ದ ಕಂಪಯನ್ ಭೂಮಿಂ ದುಂದುಭಿರ್ದುಂದುಭಿರ್ಯಥಾ ॥ ೨೬

ವಿಶಾರದ. ಆ ಧರ್ಮಾತ್ಮನು ಕ್ರುದ್ಧನಾದ ರಾಕ್ಷಸನಿಗೆ 'ಅಸುರೋತ್ತಮ, ವಾಲಿಯೆಂಬ ಮೇಧಾವಿಯಾದ ವಾನರೇಂದ್ರನಿದ್ದಾನೆ. ಅವನ ಪರಾಕ್ರಮವು ದೇವೇಂದ್ರನಿಗೆ ಸಾಟಿಯಾದದ್ದು. ಆತನು ಕಾಂತಿಯಿಂದ ಬೆಳಗುವ ಕಿಷ್ಕಿಂಧೆಯಲ್ಲಿದ್ದಾನೆ (೨೦-೨೧). ಆ ವಾಲಿಯು ಸಮರ್ಥ ; ಯುದ್ಧದಲ್ಲಿ ನಿಸ್ಸೀಮ. ನಮುಚಿಗೆ ದೇವೇಂದ್ರನು ಯುದ್ಧವನ್ನಿತ್ತಂತೆ, ನಿನಗೆ ಭೀಕರವಾದ ದ್ವಂದ್ವಯುದ್ಧವನ್ನೀಯುವವನು ನಿನಗೆ ಯುದ್ಧವು ಬೇಕೆಂದಿದ್ದರೆ ಬೇಗನೆ ಅವನ ಬಳಿಗೆ ಹೋಗು ಅವನು ಬಹಳ ಗಟ್ಟಿಗ ; ಹೊಡೆದಾಡುವುದರಲ್ಲಿ ಮಹಾಶೂರ' ಎಂದು ತಿಳಿಸಿದನು (೨೨-೨೩) ಹಿಮವಂತನ ವಾಕ್ಯವನ್ನು ಕೇಳಿ ಕೋಪಾವಿಷ್ಟನಾದ ದುಂದುಭಿಯು ವಾಲಿಯ ಕಿಷ್ಕಿಂಧಾನಗರಕ್ಕೆ ಹೊರಟನು. ತೀಕ್ಷ್ಣಶೃಂಗಗಳುಳ್ಳ ಮಹಿಷಾಕೃತಿಯನ್ನು ಧರಿಸಿದ್ದ ಭೀಷಣಾಕಾರನಾದ ರಾಕ್ಷಸನು, ಮಳೆಗಾಲದಲ್ಲಿ ನೀರ್ದುಂಬಿ ಭೋರ್ಗರೆಯುವ ಮಹಾಮೇಘದಂತೆ ಆಕಾಶಮಾರ್ಗವಾಗಿ ಬಂದನು (೨೪-೨೫). ಕಿಷ್ಕಿಂಧೆಯ ಮಹಾದ್ವಾರಕ್ಕೆ ಬಂದು ಅತಿಬಲನಾದ ದುಂದುಭಿಯು ದುಂದುಭಿಧ್ವನಿಯಿಂದ

**ಸಮೀಪಸ್ಥಾನ್ ದ್ರುಮಾನ್ ಭಂಜನ್ ವಸುಧಾಂ ದಾರಯನ್ ಖುರೈಃ**
**ವಿಷಾಣೇನೋಲ್ಲಿಖನ್ ದರ್ಪಾತ್ತದ್ದ್ವಾರಂ ದ್ವಿರದೋ ಯಥಾ ॥ ೨೭**

**ಅಂತಃಪುರಗತೋ ವಾಲೀ ಶ್ರುತ್ವಾ ಶಬ್ದಮಮರ್ಷಣಃ ।**
**ನಿಷ್ಪಪಾತ ಸಹ ಸ್ತ್ರೀಭಿಸ್ತಾರಾಭಿರಿವ ಚಂದ್ರಮಾಃ ॥ ೨೮**

**ಮಿತಂ ವ್ಯಕ್ತಾಕ್ಷರಪದಂ ತಮುವಾಚಾಥ ದುಂದುಭಿಮ್ ।**
**ಹರೀಣಾಮೀಶ್ವರೋ ವಾಲೀ ಸರ್ವೇಷಾಂ ವನಚಾರಿಣಾಮ್ ॥ ೨೯**

**ಕಿಮರ್ಥಂ ನಗರದ್ವಾರಮಿದಂ ರುದ್ಧ್ವಾ ವಿನರ್ದಸಿ ।**
**ದುಂದುಭೇ ವಿದಿತೋ ಮೇಽಸಿ ರಕ್ಷ ಪ್ರಾಣಾನ್ ಮಹಾಬಲ ॥ ೩೦**

**ತಸ್ಯ ತದ್ವಚನಂ ಶ್ರುತ್ವಾ ವಾನರೇಂದ್ರಸ್ಯ ಧೀಮತಃ ।**
**ಉವಾಚ ದುಂದುಭಿರ್ವಾಕ್ಯಂ ರೋಷಾತ್ ಸಂರಕ್ತಲೋಚನಃ ॥ ೩೧**

**ನ ತ್ವಂ ಸ್ತ್ರೀಸಂನಿಧೌ ವೀರ ವಚನಂ ವಕ್ತುಮರ್ಹಸಿ ।**
**ಮಮ ಯುದ್ಧಂ ಪ್ರಯಚ್ಛಾದ್ಯ ತತೋ ಜ್ಞಾಸ್ಯಸಿ ತೇ ಬಲಮ್ ॥ ೩೨**

---

ಭೂಮಿಯು ನಡುಗುವಂತೆ ಗರ್ಜಿಸಿದನು. ಅಲ್ಲದೆ ಮದ್ದಾನೆಯಂತೆ ದರ್ಪದಿಂದ ಅಲ್ಲಿದ್ದ ಮರಗಳನ್ನು ಉರುಳಿಸಿ, ಗೊರಸುಗಳಿಂದ ನೆಲವನ್ನು ಸೀಳಿ, ಕೊಂಬುಗಳಿಂದ ದಿಡ್ಡಿಯ ಬಾಗಿಲನ್ನು ತಿವಿದು ಹಾವಳಿಯೆಬ್ಬಿಸಿದನು (೨೬-೨೭). ಅಂತಃಪುರದಲ್ಲಿದ್ದ ವಾಲಿಗೆ ದುಂದುಭಿಯ ಗರ್ಜನೆ ಕೇಳಿಸಿತು. ಸಹನೆ ತಪ್ಪಿತು. ಕೂಡಲೆ ಅಲ್ಲಿಂದ ಹೊರಬಂದನು ಅವನೊಡನೆ ಅಂತಃಪುರದ ಸ್ತ್ರೀಯರೂ ಬಂದರು. ತಾರೆಗಳೊಡಗೂಡಿದ ಚಂದ್ರಮನಂತೆ ಆ ಸ್ತ್ರೀಯರೊಡನೆ ವಾಲಿಯು ದುಂದುಭಿಯಿದ್ದಲ್ಲಿಗೆ ಹೋದನು (೨೮). ಸಕಲಕಪಿಗಳಿಗೂ ಅಧೀಶ್ವರನಾದ ವಾಲಿಯು ಆ ರಾಕ್ಷಸನನ್ನುದ್ದೇಶಿಸಿ ತೂಕಮಾಡಿದ ಮಾತಿನಿಂದ ಸ್ಫುಟವಾಗಿ 'ಎಲೈ ದುಂದುಭಿ, ಈ ನಗರದ್ವಾರವನ್ನು ತಿವಿಯುತ್ತ ಗರ್ಜಿಸುವೆಯೇಕೆ? ನೀನು ಯಾರು, ಏನೆಂಬುದು ನನಗೆ ಗೊತ್ತಿದೆ. ನೀನು ಬಲಾಢ್ಯನೇ ಹೌದು. ಪ್ರಾಣವನ್ನುಳಿಸಿಕೊಂಡು ಹೊರಟು ಹೋಗು!' ಎಂದನು (೨೯-೩೦): ಧೀಮಂತನಾದ ವಾನರೇಂದ್ರನ ವಚನವನ್ನು ಕೇಳಿ, ರೋಷದಿಂದ ದುಂದುಭಿಯ ಕಣ್ಣುಗಳು ಕೆಂಪಾದವು. ಆತನು 'ಎಲೈ ಶೂರನೆ, ಹೆಂಗಸರೆದುರಿಗೆ ಇಂಥ ಮಾತನ್ನಾಡುವುದು ತರವಲ್ಲ!

ಅಥವಾ ಧಾರಯಿಷ್ಯಾಮಿ ಕ್ರೋಧಮದ್ಯ ನಿಶಾಮಿಮಾಮ್ ।
ಗೃಹ್ಯತಾಮುದಯಃ ಸ್ವೈರಂ ಕಾಮಭೋಗೇಷು ವಾನರ ॥ ೩೩

ದೀಯತಾಂ ಸಂಪ್ರದಾನಂ ಚ ಪರಿಷ್ವಜ್ಯ ಚ ವಾನರಾನ್ ।
ಸರ್ವಶಾಖಾಮೃಗೇಂದ್ರಸ್ತ್ವಂ ಸಂಸಾದಯ ಸುಹೃಜ್ಜನಮ್ ॥ ೩೪

ಸುದೃಷ್ಟಾಂ ಕುರು ಕಿಷ್ಕಿಂಧಾಂ ಕುರುಷ್ವಾತ್ಮಸಮಂ ಪುರೇ ।
ಕ್ರೀಡಸ್ವ ಚ ಸಹ ಸ್ತ್ರೀಭಿರಹಂ ತೇ ದರ್ಪನಾಶನಃ ॥ ೩೫

ಯೋ ಹಿ ಮತ್ತಂ ಪ್ರಮತ್ತಂ ವಾ ಸುಪ್ತಂ ವಾ ರಹಿತಂ ಭೃಶಮ್ ।
ಹನ್ಯಾತ್ ಸ ಭ್ರೂಣಹಾ ಲೋಕೇ ತ್ವದ್ವಿಧಂ ಮದಮೋಹಿತಮ್ ॥

ಸ ಪ್ರಹಸ್ಯಾಬ್ರವೀನ್ಮಂದಂ ಕ್ರೋಧಾತ್ತಮಸುರೋತ್ತಮಮ್ ।
ವಿಸೃಜ್ಯ ತಾಃ ಸ್ತ್ರಿಯಃ ಸರ್ವಾಸ್ತಾರಾಪ್ರಭೃತಿಕಾಸ್ತದಾ ॥ ೩೭

---

ನನ್ನೊಡನೆ ಯುದ್ಧಮಾಡಿ ನೋಡು, ಆಗ ನಿನ್ನ ಬಲವೆಷ್ಟೆಂಬುದು ನಿನಗೆ ತಿಳಿದೀತು ! (೩೧-೩೨) ಅಥವಾ ಇದೊಂದು ರಾತ್ರಿಯವರೆಗೆ ನನ್ನ ಕ್ರೋಧೋದ್ರೇಕವನ್ನು ತಡೆಗಟ್ಟಿಕೊಂಡಿರುವೆನು ಸೂರ್ಯೋದಯ ಪರ್ಯಂತ ಅವಧಿಯನ್ನು ತೆಗೆದುಕೊ ಎಲೈ ವಾನರ, ಅಲ್ಲಿಯವರೆಗೆ ಕಾಮ ಭೋಗಗಳಲ್ಲಿ ಸ್ವೇಚ್ಛೆಯಾಗಿ ವಿಹರಿಸು ! (೩೩) ನೀನು ಕಪಿಗಳೆಲ್ಲರಿಗೂ ಒಡೆಯನಾಗಿದ್ದೀಯೆ. ಪ್ರೀತಿಯಿಂದ ಆ ಕಪಿಗಳನ್ನಾಲಿಂಗಿಸಿಕೊಂಡು (ಕೊನೆಗಾಲದಲ್ಲಿ) ಅವರಿಗೆ ಕೊಡಬೇಕಾದ ವಸ್ತುಗಳನ್ನು ಕೊಟ್ಟು ಬಾ ! ನಿನ್ನ ಮಿತ್ರರನ್ನು ಬೀಳ್ಕೊಡು ! (೩೪) ಕಿಷ್ಕಿಂಧೆಯನ್ನು ಯಾರಾದರೂ ಚೆನ್ನಾಗಿ ನೋಡಿಕೊಳ್ಳುವಂತೆ ಏರ್ಪಡಿಸು ! ನಿನಗೆ ಸದೃಶನಾದ ಇನ್ನೊಬ್ಬ ನನ್ನು ರಾಜನನ್ನಾಗಿ ನೇಮಿಸು ! ನಿನ್ನ ಸ್ತ್ರೀಯರೊಡನೆ ಇದೊಂದು ರಾತ್ರಿ ಕಡೆಯದಾಗಿ ಕ್ರೀಡಿಸು ! ನಿನ್ನ ದರ್ಪವನ್ನು ಮುರಿಯುವುದಕ್ಕಾಗಿಯೇ ನಾನು ಬಂದಿದ್ದೇನೆ (೩೫). ಏಕೆಂದರೆ, ಮತ್ತೇರಿದವನು, ತನ್ನ ಕಡೆ ಗಮನ ವಿಲ್ಲದವನು, ನಿದ್ರಿಸುವವನು, ಆಯುಧರಹಿತನು–ಇವರನ್ನೂ ನಿನ್ನಂತಹ ಕಾಮಮದಮೋಹಿತನನ್ನೂ ಕೊಲ್ಲುವುದು ಭ್ರೂಣಹತ್ಯೆಮಾಡಿದಂತೆ' ಎಂದು ಪ್ರತ್ಯುತ್ತರಕೊಟ್ಟನು (೩೬). ಅದನ್ನು ಕೇಳಿ ವಾಲಿಯು ನಕ್ಕನು. ಕೂಡಲೆ ತಾರೆ ಮೊದಲಾದ ಸ್ತ್ರೀಯರನ್ನು ಅಂತಃಪುರಕ್ಕೆ ಕಳಿಸಿ, ವಾಲಿಯು ಮುಂದ

ಮತ್ತೋಽಯಮಿತಿ ಮಾ ಮಂಸ್ಥಾ ಯದ್ಯಭೀತೋಽಸಿ ಸಂಯುಗೇ ।
ಮದೋಽಯಂ ಸಂಪ್ರಹಾರೇಽಸ್ಮಿನ್ ವೀರಪಾಣಂ ಸಮರ್ಥ್ಯತಾಮ್ ॥

ತಮೇವಮುಕ್ತ್ವಾ ಸಂಕ್ರುದ್ಧೋ ಮಾಲಾಮುತ್ಕ್ಷಿಪ್ಯ ಕಾಂಚನೀಮ್
ಪಿತ್ರಾ ದತ್ತಾಂ ಮಹೇಂದ್ರೇಣ ಯುದ್ಧಾಯ ವ್ಯವತಿಷ್ಠತ ॥ ೩೯

ವಿಷಾಣಯೋರ್ಗೃಹೀತ್ವಾ ತಂ ದುಂದುಭಿಂ ಗಿರಿಸಂನಿಭಮ್ ।
ಆವಿಧ್ಯತ ತದಾ ವಾಲೀ ವಿನದನ್ ಕಪಿಕುಂಜರಃ ॥ ೪೦

ವಾಲೀ ವ್ಯಾಪಾತಯಾಂಚಕ್ರೇ ನನರ್ದ ಚ ಮಹಾಸ್ವನಮ್ ।
ಶ್ರೋತ್ರಾಭ್ಯಾಮಥ ರಕ್ತಂ ತು ತಸ್ಯ ಸುಸ್ರಾವ ಪಾತ್ಯತಃ ॥ ೪೧

ತಯೋಸ್ತು ಕ್ರೋಧಸಂರಂಭಾತ್ ಪರಸ್ಪರಜಯೈಷಿಣೋಃ ।
ಯುದ್ಧಂ ಸಮಭವದ್ಘೋರಂ ದುಂದುಭೇರ್ವಾನರಸ್ಯ ಚ ॥ ೪೨

ಅಯುಧ್ಯತ ತದಾ ವಾಲೀ ಶಕ್ರತುಲ್ಯಪರಾಕ್ರಮಃ ।
ಮುಷ್ಟಿಭಿರ್ಜಾನುಭಿಃ ಪದ್ಭಿಃ ಶಿಲಾಭಿಃ ಪಾದಪೈಸ್ತಥಾ ॥ ೪೩

---

ಬುದ್ಧಿಯೂ ಕೋಪಾವಿಷ್ಟನೂ ಆದ ರಾಕ್ಷಸನನ್ನು ಕುರಿತು 'ಎಲೈ ರಾಕ್ಷಸ, ಸಂಗ್ರಾಮಕ್ಕೆ ನೀನು ಅಂಜುವುದಿಲ್ಲವಾದರೆ, ನಾನು ಮದಮೋಹಿತನೆಂದು ಎಂದಿಗೂ ತಿಳಿಯಬೇಡ ಈ ಮದವು ಈ ಹೊಡೆದಾಟಕ್ಕೆ ವೀರಪಾಣ* ವಾಯಿತೆಂದು ಭಾವಿಸು!' ಎಂದು ಉತ್ತರಿಸಿದನು (೩೭-೩೮). ಹಾಗೆ ಉತ್ತರಿಸಿ ಸಂಕ್ರುದ್ಧನಾದ ವಾಲಿಯು ತನ್ನ ತಂದೆಯಾದ ಮಹೇಂದ್ರನು ಕೊಟ್ಟಿದ್ದ ಸುವರ್ಣಮಾಲಿಕೆಯನ್ನು ಕೊರಳಲ್ಲಿ ಧರಿಸಿ ಯುದ್ಧಕ್ಕೆ ಸಜ್ಜಾದನು. ಆ ಕಪಿಕುಂಜರನು ಪರ್ವತಾಕಾರನಾದ ದುಂದುಭಿಯ ಕೊಂಬುಗಳೆರಡನ್ನೂ ಹಿಡಿದು ಹೋರಾಡಿದನು (೩೯-೪೦). ವಾಲಿಯು ಕೇಕೆಹಾಕುತ್ತ ದುಂದುಭಿಯನ್ನು ನೆಲದಮೇಲುರುಳಿಸಿ ಗಟ್ಟಿಯಾಗಿ ಗರ್ಜಿಸಿದನು. ಉರುಳಿಬಿದ್ದ ರಾಕ್ಷಸನ ಕಿವಿಗಳಿಂದ ನೆತ್ತರು ಸುರಿಯಿತು ಪರಸ್ಪರ ಗೆಲ್ಲಬೇಕೆಂದು ರೋಷಾವೇಶದಿಂದ ಹೋರಾಡುತ್ತಿದ್ದ ಕಪೀಂದ್ರನಿಗೂ ರಾಕ್ಷಸನಿಗೂ ಘೋರವಾದ ಸಂಗ್ರಾಮ ತೊಡಗಿತು (೪೧-೪೨). ದೇವೇಂದ್ರಸದೃಶ ಪರಾಕ್ರಮಿಯಾದ

---

* ವೀರಪಾಣ = ವೀರರು ರಣಭೂಮಿಗೆ ತೆರಳುವಾಗ ಯುದ್ಧಾವೇಶವಾಗಲೆಂದು ಮಾಡುವ ಮದ್ಯಪಾನ.

ಪರಸ್ಪರಂ ಘ್ನತೋಸ್ತತ್ರ ವಾನರಾಸುರಯೋಸ್ತದಾ ।
ಆಸೀದ್ಧೀನೋಽಸುರೋ ಯುದ್ಧೇ ಶಕ್ರಸೂನುರ್ವ್ಯವರ್ಧತ ॥ ೪೪

ತಂ ತು ದುಂದುಭಿಮುದ್ಯಮ್ಯ ಧರಣ್ಯಾಮಭ್ಯಪಾತಯತ್ ।
ಯುದ್ಧೇ ಪ್ರಾಣಹರೇ ತಸ್ಮಿನ್ನಿಷ್ಪಿಷ್ಟೋ ದುಂದುಭಿಸ್ತದಾ ॥ ೪೫

ಪಪಾತ ಚ ಮಹಾಕಾಯಃ ಕ್ಷಿತೌ ಪಂಚತ್ವಮಾಗತಃ ।
ತಂ ತೋಲಯಿತ್ವಾ ಬಾಹುಭ್ಯಾಂ ಗತಸತ್ತ್ವಮಚೇತನಮ್ ॥ ೪೬

ಚಿಕ್ಷೇಪ ಬಲವಾನ್ ವಾಲೀ ವೇಗೇನೈಕೇನ ಯೋಜನಮ್ ।
ತಸ್ಯ ವೇಗಪ್ರವಿದ್ಧಸ್ಯ ವಕ್ತ್ರಾತ್ ಕ್ಷತಜಬಿಂದವಃ ॥ ೪೭

ಪ್ರಪೇತುರ್ಮಾರುತೋತ್ಕ್ಷಿಪ್ತಾ ಮತಂಗಸ್ಯಾಶ್ರಮಂ ಪ್ರತಿ ।
ತಾನ್ ದೃಷ್ಟ್ವಾ ಪತಿತಾಂಸ್ತಸ್ಯ ಮುನಿಃ ಶೋಣಿತವಿಪ್ರುಷಃ ॥ ೪೮

ಕ್ರುದ್ಧಸ್ತಸ್ಯ ಮಹಾಭಾಗಾಶ್ಚಿಂತಯಾಮಾಸ ಕೋ ನ್ವಯಮ್ ।
ಯೇನಾಹಂ ಸಹಸಾ ಸ್ಪೃಷ್ಟಃ ಶೋಣಿತೇನ ದುರಾತ್ಮನಾ ॥ ೪೯

---

ವಾಲಿಯು ದುಂದುಭಿಯನ್ನು ಮುಷ್ಟಿಗಳಿಂದ ಗುದ್ದುತ್ತ, ಮೊಳಕಾಲಿನಿಂದ ತಿವಿಯುತ್ತ, ಕಾಲಿನಿಂದ ಒದೆಯುತ್ತ, ಬಂಡೆಗಳಿಂದ ಬಡಿಯುತ್ತ, ಮರಗಳಿಂದ ಅಪ್ಪಳಿಸುತ್ತ ಹೋರಾಡಿದನು (೪೩) ಹೀಗೆ ಒಬ್ಬರನ್ನೊಬ್ಬರು ತದುಕುತ್ತ ಹೋರಾಡುತ್ತಿರಲು ರಾಕ್ಷಸನ ಕೈ ಕುಗ್ಗಿತು; ವಾಲಿಯ ಕೈ ಮೇಲಾಯಿತು. ಪ್ರಾಣಾಂತಿಕವಾದ ಆ ಯುದ್ಧದಲ್ಲಿ ವಾಲಿಯು ದುಂದುಭಿಯನ್ನು ಹಠಾತ್ತನೆ ಮೇಲೆತ್ತಿ ನೆಲದಮೇಲೆ ಕುಕ್ಕಿಬಿಟ್ಟನು. ದುಂದುಭಿಯ ದೇಹವು ನಜ್ಜುಗುಜ್ಜಾಯಿತು (೪೪–೪೫). ಮಹಾಕಾಯನಾದ ರಾಕ್ಷಸನು ನೆಲದಲ್ಲಿ ಸತ್ತುರುಳಿದನು ಗತಪ್ರಾಣನಾಗಿ ಅಲ್ಲಾಡದೆ ಬಿದ್ದಿದ್ದ ದುಂದುಭಿಯನ್ನು ಬಲಾಢ್ಯನಾದ ವಾಲಿಯು ಕೈಗಳಿಂದ ಎತ್ತಿ ತೂಗಿ ಒಂದೇ ಎಸೆತಕ್ಕೆ ಒಂದು ಯೋಜನದಷ್ಟು ದೂರ ಬಿಸಾಡಿದನು. ಬಿಸುಡುವ ವೇಗದಲ್ಲಿ ರಾಕ್ಷಸನ ಬಾಯಿಂದ ರಕ್ತದ ಹನಿಗಳು ಉದುರಿದವು (೪೬–೪೭). ಅವು ಗಾಳಿಗೆ ತೂರಿಹೋಗಿ ಮತಂಗಮುನಿಗಳ ಆಶ್ರಮದಲ್ಲಿ ಬಿದ್ದವು. ಮಹಾತ್ಮರಾದ ಆ ಮತಂಗಮುನಿಗಳು ಅಲ್ಲಿ ಬಿದ್ದ ರಕ್ತದ ಹನಿಗಳನ್ನು ಕಂಡು ಕ್ರುದ್ಧರಾದರು. 'ಆಹಾ! ಯಾರಿವನು? ಇದ್ದಕ್ಕಿದ್ದಂತೆ ನನ್ನ ಮೈಗೆ ರಕ್ತ

**ಕೋಽಯಂ ದುರಾತ್ಮಾ ದುರ್ಬುದ್ಧಿರಕೃತಾತ್ಮಾ ಚ ಬಾಲಿಶಃ ।**
**ಇತ್ಯುಕ್ತ್ವಾಥ ವಿನಿಷ್ಕ್ರಮ್ಯ ದದರ್ಶ ಮುನಿಪುಂಗವಃ ॥ ೫೦**
**ಮಹಿಷಂ ಪರ್ವತಾಕಾರಂ ಗತಾಸುಂ ಪತಿತಂ ಭುವಿ ।**
**ಸ ತು ವಿಜ್ಞಾಯ ತಪಸಾ ವಾನರೇಣ ಕೃತಂ ಹಿ ತತ್ ॥ ೫೧**
**ಉತ್ಸಸರ್ಜ ಮಹಾಶಾಪಂ ಕ್ಷೇಪ್ತಾರಂ ವಾಲಿನಂ ಪ್ರತಿ ।**
**ಇಹ ತೇನಾಪ್ರವೇಷ್ಟವ್ಯಂ ಪ್ರವಿಷ್ಟಸ್ಯ ವಧೋ ಭವೇತ್ ॥ ೫೨**
**ವನಂ ಮತ್ಸಂಶ್ರಯಂ ಯೇನ ದೂಷಿತಂ ರುಧಿರಸ್ರವೈಃ ।**
**ಸಂಭಗ್ನಾಃ ಪಾದಪಾಶ್ಚೇಮೇ ಕ್ಷಿಪತೇಹಾಸುರೀಂ ತನುಮ್ ॥ ೫೩**
**ಸಮಂತಾದ್ಯೋಜನಂ ಪೂರ್ಣಮಾಶ್ರಮಂ ಮಾಮಕಂ ಯದಿ ।**
**ಆಗಮಿಷ್ಯತಿ ದುರ್ಬುದ್ಧಿರ್ವ್ಯಕ್ತಂ ಸ ನ ಭವಿಷ್ಯತಿ ॥ ೫೪**
**ಯೇ ಚಾಪಿ ಸಚಿವಾಸ್ತಸ್ಯ ಸಂಶ್ರಿತಾ ಮಾಮಕಂ ವನಮ್ ।**
**ನ ಚ ತೈರಿಹ ವಸ್ತವ್ಯಂ ಶ್ರುತ್ವಾ ಯಾಂತು ಯಥಾಸುಖಮ್ ॥ ೫೫**

---

ಬಿಂದುಗಳನ್ನು ನೋಕಿಸಿದ ದುರಾತ್ಮನು ಯಾವನು ? (೪೮-೪೯) ದುರ್ಬುದ್ಧಿಯೂ ಸಂಸ್ಕೃತಿಹೀನನೂ ಆದ ಯಾವ ಮೂರ್ಖನಿವನು ?' ಎಂದು ಹೇಳುತ್ತ, ಆ ಮಹರ್ಷಿಗಳು ಹೊರಗೆ ಬಂದು, ಪರ್ವತಾಕಾರನಾಗಿ ನೆಲದಮೇಲೆ ಸತ್ತು ಬಿದ್ದಿದ್ದ ಮಹಿಷರೂಪನಾದ ರಾಕ್ಷಸನನ್ನು ಕಂಡರು. ಅವರು ತಪೋಬಲದಿಂದ ಅದು ವಾಲಿಯ ಕೃತ್ಯವೆಂದು ತಿಳಿದುಕೊಂಡರು (೫೦-೫೧). ದುಂದುಭಿಯನ್ನು ಅಲ್ಲಿಗೆ ಎಸೆದ ವಾಲಿಗೆ ಒಂದು ಮಹಾಶಾಪವನ್ನಿತ್ತರು : 'ಈ ದುಷ್ಕಾರ್ಯವನ್ನೆಸಗಿದ ದುರಾತ್ಮನು ನನ್ನ ಆಶ್ರಮದ ಎಲ್ಲೆಯೊಳಗೆ ಕಾಲಿಡಕೂಡದು. ಕಾಲಿಟ್ಟರೆ ಕೂಡಲೆ ಅವನು ಸತ್ತುಹೋಗಲಿ! (೫೨). ರಕ್ತಕಣಗಳನ್ನು ಚೆಲ್ಲಿ ಅವನು ತಪೋವನವನ್ನು ಕೆಡಿಸಿದ್ದಾನೆ. ರಾಕ್ಷಸ ದೇಹವನ್ನೆಸೆದು ಈ ಮರಗಳನ್ನು ಮುರಿದು ಹಾಳುಮಾಡಿದ್ದಾನೆ. ನನ್ನ ಆಶ್ರಮದ ಸುತ್ತಲೂ ಒಂದು ಯೋಜನದವರೆಗೆ ಆ ದುಷ್ಟನು ಕಾಲಿಟ್ಟರೆ, ಅವನು ಜೀವಸಹಿತ ಉಳಿಯುವುದಿಲ್ಲ ! (೫೩-೫೪). ನನ್ನ ತಪೋವನದಲ್ಲಿ ಅವನ ಕಡೆಯ ಕಪಿನಾಯಕರು ಯಾರೂ ವಾಸಿಸಕೂಡದು ! ನನ್ನ ಆಜ್ಞೆಯನ್ನು ಕೇಳಿ ಅವರೆಲ್ಲರೂ ಸುಖದಿಂದ ಅತ್ತ ತೊಲಗಲಿ ! ಹಾಗಿಲ್ಲದೆ ಅವರು

**ಯದಿ ತೇಽಪೀಹ ತಿಷ್ಠಂತಿ ಶಪಿಷ್ಯೇ ತಾನಪಿ ಧ್ರುವಮ್ ।**
**ವನೇಽಸ್ಮಿನ್ ಮಾಮಕೇಽತ್ಯರ್ಥಂ ಪುತ್ರವತ್ ಪರಿಪಾಲಿತೇ ॥ ೫೬**

**ಪತ್ರಾಂಕುರವಿನಾಶಾಯ ಫಲಮೂಲಾಭವಾಯ ಚ ।**
**ದಿವಸಶ್ಚಾಸ್ಯ ಮರ್ಯಾದಾ ಯಂ ದ್ರಷ್ಟಾ ಶ್ವೋಽಸ್ಮಿವಾನರಮ್ ॥ ೫೭**

**ಬಹುವರ್ಷಸಹಸ್ರಾಣಿ ಸ ವೈ ಶೈಲೋ ಭವಿಷ್ಯತಿ ।**
**ತತಸ್ತೇ ವಾನರಾಃ ಶ್ರುತ್ವಾ ಗಿರಂ ಮುನಿಸಮೀರಿತಾಮ್ ॥ ೫೮**

**ನಿಶ್ಚಕ್ರಮುರ್ವನಾತ್ತಸ್ಮಾತ್ತಾನ್ ದೃಷ್ಟ್ವಾ ವಾಲಿರಬ್ರವೀತ್ ।**
**ಕಿಂ ಭವಂತಃ ಸಮಸ್ತಾಶ್ಚ ಮತಂಗವನವಾಸಿನಃ ॥ ೫೯**

**ಮತ್ಸಮೀಪಮನುಪ್ರಾಪ್ತಾ ಅಪಿ ಸ್ವಸ್ತಿ ವನೌಕಸಾಮ್ ।**
**ತತಸ್ತೇ ಕಾರಣಂ ಸರ್ವಂ ತದಾ ಶಾಪಂ ಚ ವಾಲಿನಃ ॥ ೬೦**

**ಶಶಂಸುರ್ವಾನರಾಃ ಸರ್ವೇ ವಾಲಿನೇ ಹೇಮಮಾಲಿನೇ ।**
**ಏತಚ್ಛ್ರುತ್ವಾ ತದಾ ವಾಲೀ ವಚನಂ ವಾನರೇರಿತಮ್ ॥ ೬೧**

---

ಇಲ್ಲಿಯೇ ಉಳಿದರೆ ಅವರನ್ನೂ ನಾನು ಶಪಿಸುವುದು ನಿಶ್ಚಯ. ನನ್ನ ತಪೋವನವನ್ನು ಮಗನಂತೆ ಪ್ರೀತಿಯಿಂದ ಸಾಕುತ್ತಿದ್ದೇನೆ (೫೫-೫೬). ಈ ಕಪಿಗಳು ಇಲ್ಲಿರುವುದು ಎಲೆಗಳನ್ನೂ ಚಿಗುರುಗಿಡಗಳನ್ನೂ ಹಾಳುಮಾಡಿ ಫಲಮೂಲಗಳನ್ನು ಧ್ವಂಸಪಡಿಸುವುದಕ್ಕೋ? ಅವರು ಹೊರಟುಹೋಗಲು ಒಂದೇ ದಿವಸ ಅವಧಿ! ನಾಳೆ ಯಾವ ಕಪಿಯಾದರೂ ನನ್ನ ಕಣ್ಣಿಗೆ ಬಿದ್ದರೆ, ಸಾವಿರಾರು ವರ್ಷಗಳವರೆಗೆ ಅವನು ಕಲ್ಲಾಗಿಹೋಗುವನು!' ಎಂದು ಶಪಿಸಿದರು ವಾಲಿಪಕ್ಷದ ವಾನರರು ಮತಂಗಮುನಿಗಳ ಶಾಪೋಕ್ತಿಯನ್ನು ಕೇಳಿಸಿಕೊಂಡರು (೫೭-೫೮). ಕೂಡಲೆ ಅವರೆಲ್ಲರೂ ತಪೋವನದಿಂದ ಹೊರಟುಹೋದರು. ವಾಲಿಯು ಅವರನ್ನು ಕಂಡು 'ಎಲೈ ವಾನರರೆ, ಮತಂಗವನದಲ್ಲಿದ್ದ ನೀವೆಲ್ಲರೂ ಒಟ್ಟುಗೂಡಿ ನನ್ನ ಸಮೀಪಕ್ಕೆ ಬಂದುದೇಕೆ? ನಿಮ್ಮೆಲ್ಲರಿಗೂ ಕುಶಲವಷ್ಟೆ?' ಎಂದು ಕೇಳಿದನು (೫೯-೬೦). ಆಗ ವಾನರರೆಲ್ಲರೂ ಸುವರ್ಣಮಾಲೆಯನ್ನು ಧರಿಸಿದ್ದ ವಾಲಿಗೆ ತಾವು ಬಂದ ಕಾರಣವನ್ನೂ ಅವನಿಗೆ ಬಂದ ಶಾಪವೃತ್ತಾಂತವನ್ನೂ ಅರಿಕೆಮಾಡಿದರು. ಆಗ ವಾಲಿಯು ಮತಂಗಮುನಿಗಳ ಸನ್ನಿಧಿಗೆ ಹೋಗಿ ಕೈಮುಗಿದುಕೊಂಡು

ಸ ಮಹರ್ಷಿಂ ತಮಾಸಾದ್ಯ ಯಾಚತೇ ಸ್ಮ ಕೃತಾಂಜಲಿಃ ।
ಮಹರ್ಷಿಸ್ತಮನಾದೃತ್ಯ ಪ್ರವಿವೇಶಾಶ್ರಮಂ ತದಾ ॥ ೬೨

ಶಾಪಧಾರಣಭೀತಸ್ತು ವಾಲೀ ವಿಹ್ವಲತಾಂ ಗತಃ ।
ತತಃ ಶಾಪಭಯಾದ್ಭೀತ ಋಶ್ಯಮೂಕಂ ಮಹಾಗಿರಿಮ್ ॥ ೬೩

ಪ್ರವೇಷ್ಟುಂ ನೇಚ್ಛತಿ ಹರಿರ್ದ್ರಷ್ಟುಂ ವಾಪಿ ನರೇಶ್ವರ ।
ತಸ್ಯಾಪ್ರವೇಶಂ ಜ್ಞಾತ್ವಾಹಮಿದಂ ರಾಮ ಮಹಾವನಮ್ ॥ ೬೪

ವಿಚರಾಮಿ ಸಹಾಮಾತ್ಯೋ ವಿಷಾದೇನ ವಿವರ್ಜಿತಃ ।
ಏಷೋಽಸ್ಥಿನಿಚಯಸ್ತಸ್ಯ ದುಂದುಭೇಃ ಸಂಪ್ರಕಾಶತೇ ॥ ೬೫

ವೀರ್ಯೋತ್ಸೇಕಾನ್ನಿರಸ್ತಸ್ಯ ಗಿರಿಕೂಟೋಪಮೋ ಮಹಾನ್ ।
ಇಮೇ ಚ ವಿಪುಲಾಃ ಸಾಲಾಃ ಸಪ್ತ ಶಾಖಾವಲಂಬಿನಃ ॥ ೬೬

ಯತ್ರೈಕಂ ಘಟತೇ ವಾಲೀ ನಿಷ್ಪತ್ರಯಿತುಮೋಜಸಾ ।
ಏತದಸ್ಯಾಸಮಂ ವೀರ್ಯಂ ಮಯಾ ರಾಮ ಪ್ರಕೀರ್ತಿತಮ್ ॥ ೬೭

---

ಕ್ಷಮಿಸಬೇಕೆಂದು ಪ್ರಾರ್ಥಿಸಿದನು. ಮತಂಗಮುನಿಗಳು ಅವನ ಪ್ರಾರ್ಥನೆಗೆ ಕಿವಿಗೊಡದೆ ತಮ್ಮ ಆಶ್ರಮದೊಳಗೆ ಹೊರಟುಹೋದರು (೬೧-೬೨). ಹೀಗೆ ಶಾಪಬಂದುದರಿಂದ ವಾಲಿಯು ಭೀತನಾಗಿ ಕಳವಳಕ್ಕೀಡಾದನು. ಶ್ರೀರಾಮ, ಅಲ್ಲಿಂದ ಮೊದಲುಗೊಂಡು ವಾಲಿಯು ಋಷ್ಯಮೂಕಪರ್ವತದಲ್ಲಿ ಕಾಲಿಡುವುದಿಲ್ಲ; ಈ ದಿಕ್ಕಿಗೆ ಸಹ ನೋಡುವುದಿಲ್ಲ. ವಾಲಿಯು ಇಲ್ಲಿಗೆ ಬರುವುದಿಲ್ಲವೆಂದರಿತು, ರಾಘವ, ನಾನು ಈ ಮಹಾರಣ್ಯವನ್ನು ಆಶ್ರಯಿಸಿದ್ದೇನೆ (೬೩-೬೪). ಇಲ್ಲಿ ನಿರಾತಂಕವಾಗಿ ಮಂತ್ರಿಗಳೊಡನೆ ಸಂಚರಿಸುತ್ತಿದ್ದೇನೆ. ಅಗೋ, ಅಲ್ಲಿ ದುಂದುಭಿಯ ಅಸ್ಥಿಪಂಜರವು ಕಾಣುತ್ತಿದೆ, ನೋಡು. ಅದನ್ನು ವಾಲಿಯು ತನ್ನ ಬಲದರ್ಪದಿಂದ ಎಸೆದಿದ್ದಾನೆ. ಅಸ್ಥಿಪಂಜರವು ದೊಡ್ಡದಾದ ಗಿರಿಶೃಂಗದಂತೆ ಗೋಚರಿಸುತ್ತದೆ ಅಲ್ಲದೆ, ಶ್ರೀರಾಮ, ಇತ್ತ ವಿಶಾಲವಾದ ಏಳು ಸಾಲವೃಕ್ಷಗಳಿವೆಯಷ್ಟೆ (೬೫-೬೬). ಶಾಖೋಪಶಾಖೆಗಳಿಂದ ಕೂಡಿದ ಈ ಮಹಾವೃಕ್ಷಗಳಲ್ಲಿ ಒಂದೊಂದನ್ನು

ಕಥಂ ತಂ ವಾಲಿನಂ ಹಂತುಂ ಸಮರೇ ಶಕ್ಷ್ಯಸೇ ನೃಪ ।
ತಥಾ ಬ್ರುವಾಣಂ ಸುಗ್ರೀವಂ ಪ್ರಹಸನ್ ಲಕ್ಷ್ಮಣೋಽಬ್ರವೀತ್ ॥ ೬೮
ಕಸ್ಮಿನ್ ಕರ್ಮಣಿ ನಿರ್ವೃತ್ತೇ ಶ್ರದ್ದಧ್ಯಾ ವಾಲಿನೋ ವಧಮ್ ।
ತಮುವಾಚಾಥ ಸುಗ್ರೀವಃ ಸಪ್ತ ಸಾಲಾನಿಮಾನ್ ಪುರಾ ॥ ೬೯
ಏವಮೇಕೈಕಶೋ ವಾಲೀ ವಿವ್ಯಾಧಾಥ ಸ ಚಾಸಕೃತ್ ।
ರಾಮೋ ವಿದಾರಯೇದೇಷಾಂ ಬಾಣೇನೈಕೇನ ಚೇದ್ದ್ರುಮಮ್ ॥
ವಾಲಿನಂ ನಿಹತಂ ಮನ್ಯೇ ದೃಷ್ಟ್ವಾ ರಾಮಸ್ಯ ವಿಕ್ರಮಮ್ ।
ಹತಸ್ಯ ಮಹಿಷಸ್ಯಾಸ್ಥಿ ಪಾದೇನೈಕೇನ ಲಕ್ಷ್ಮಣ ॥ ೭೧
ಉದ್ಯಮ್ಯಾಥ ಪ್ರಕ್ಷಿಪೇಚ್ಚೇತ್ತರಸಾ ದ್ವೇ ಧನುಃಶತೇ ।
ಏವಮುಕ್ತ್ವಾ ತು ಸುಗ್ರೀವೋ ರಾಮಂ ರಕ್ತಾಂತಲೋಚನಮ್ ॥

---

ವಾಲಿಯು ಬಾಣದಿಂದ ಹೊಡೆದು, ಬಾಣವು ಆಚೆಗೆ ತೂರಿಹೋಗುವಂತೆ* ಮಾಡಲು ಸಮರ್ಥನು ಈಗ ನಾನು ವಾಲಿಗಿರುವ ಅಸಾಧಾರಣವಾದ ಶೌರ್ಯವನ್ನು ನಿನಗೆ ಹೇಳಿದ್ದೇನೆ (೬೭). ಶ್ರೀರಾಮ, ಆ ವಾಲಿಯನ್ನು ನೀನು ಸಂಗ್ರಾಮದಲ್ಲಿ ಸಂಹರಿಸಬಲ್ಲೆಯಾ ?" ಎಂದು ಕೇಳಿದನು. ಅದನ್ನು ಕೇಳಿ ಲಕ್ಷ್ಮಣನು ನಗುತ್ತ "ಸುಗ್ರೀವ, ಯಾವ ಕಾರ್ಯವನ್ನು ಮಾಡಿ ತೋರಿಸಿದರೆ ಶ್ರೀರಾಮನು ವಾಲಿಯನ್ನು ವಧಿಸಬಲ್ಲನೆಂದು ನಿನಗೆ ನಂಬಿಕೆ ಯಾದೀತು ?" ಎಂದು ಪ್ರಶ್ನಿಸಿದನು (೬೮) ಆಗ ಸುಗ್ರೀವನು "ಹಿಂದೆ ವಾಲಿಯು ಈ ಸಪ್ತ ಸಾಲವೃಕ್ಷಗಳಲ್ಲಿ ಒಂದೊಂದನ್ನೂ ಬಾಣದಿಂದ ಭೇದಿಸಿ ದ್ದಾನೆ ಹೀಗೆ ಅನೇಕಸಲ ಮಾಡಿದ್ದಾನೆ. ಶ್ರೀರಾಮನು ಇವುಗಳಲ್ಲೊಂದನ್ನು ಒಂದೇ ಬಾಣದಿಂದ ಭೇದಿಸುವನಾದರೆ, ಲಕ್ಷ್ಮಣ, ಆಗ ಶ್ರೀರಾಮನ ಪರಾಕ್ರಮವನ್ನು ಕಂಡು, ವಾಲಿಯು ಸತ್ತನೆಂದೇ ತಿಳಿಯುವೆನು (೬೯–೭೦). ಸತ್ತುಬಿದ್ದಿರುವ ಮಹಿಷಾಸುರನ ಅಸ್ಥಿಪಂಜರವನ್ನು ಶ್ರೀರಾಮನು ತನ್ನ ಪಾದದಿಂದ ಹಾರಿಸಿ ಇನ್ನೂರು ಬಿಲ್ಲಿನ† ದೂರಕ್ಕೆ ಒಮ್ಮೆಗೇ ಚಿಮ್ಮಲಿ!" ಎಂದನು. ಆ ಸಮಯದಲ್ಲಿ ಶ್ರೀರಾಮನ ಕಣ್ಣು ಕೆಂಪಾಗಿತ್ತು! (೭೧–೭೨).

---

* ಅನುಬಂಧವನ್ನು ನೋಡಿ.

† ಒಂದು ಬಿಲ್ಲಿನ ದೂರ=ನಾಲ್ಕು ಮೊಳ.

ಧ್ಯಾತ್ವಾ ಮುಹೂರ್ತಂ ಕಾಕುತ್ಸ್ಥಂ ಪುನರೇವ ವಚೋಽಬ್ರವೀತ್ ।
ಶೂರಶ್ಚ ಶೂರಘಾತೀ ಚ ಪ್ರಖ್ಯಾತಬಲಪೌರುಷಃ ॥ ೭೩

ಬಲವಾನ್ ವಾನರೋ ವಾಲೀ ಸಂಯುಗೇಷ್ವಪರಾಜಿತಃ ।
ದೃಶ್ಯಂತೇ ಚಾಸ್ಯ ಕರ್ಮಾಣಿ ದುಷ್ಕರಾಣಿ ಸುರೈರಪಿ ॥ ೭೪

ಯಾನಿ ಸಂಚಿಂತ್ಯ ಭೀತೋಽಹಮೃಶ್ಯಮೂಕಂ ಸಮಾಶ್ರಿತಃ ।
ತಮಜಯ್ಯಮಧೃಷ್ಯಂ ಚ ವಾನರೇಂದ್ರಮಮರ್ಷಣಮ್ ॥ ೭೫

ವಿಚಿಂತಯನ್ನ ಮುಂಚಾಮಿ ಋಶ್ಯಮೂಕಮಹಂ ತ್ವಿಮಮ್ ।
ಉದ್ವಿಗ್ನಃ ಶಂಕಿತಶ್ಚಾಪಿ ವಿಚರಾಮಿ ಮಹಾವನೇ ॥ ೭೬

ಅನುರಕ್ತೈಃ ಸಹಾಮಾತ್ಯೈರ್ಹನುಮತ್ಪ್ರಮುಖೈರ್ವರೈಃ ।
ಉಪಲಬ್ಧಂ ಚ ಮೇ ಶ್ಲಾಘ್ಯಂ ಸನ್ಮಿತ್ರಂ ಮಿತ್ರವತ್ಸಲ ॥ ೭೭

ತ್ವಾಮಹಂ ಪುರುಷವ್ಯಾಘ್ರ ಹಿಮವಂತಮಿವಾಶ್ರಿತಃ ।
ಕಿಂ ತು ತಸ್ಯ ಬಲಜ್ಞೋಽಹಂ ದುರ್ಭ್ರಾತುರ್ಬಲಶಾಲಿನಃ ॥ ೭೮

---

ಅದನ್ನು ನೋಡಿ ಸುಗ್ರೀವನು ಸ್ವಲ್ಪಕಾಲ ಚಿಂತಿಸಿ, ಮತ್ತೆ "ಶ್ರೀರಾಮ, ಶೂರನೂ ಶೂರಘಾತಿಯೂ ಎನಿಸಿದ ವಾಲಿಯ ಬಲಪರಾಕ್ರಮಗಳು ವಿಖ್ಯಾತವಾದವು. ರಣಭೂಮಿಯಲ್ಲಿ ಆ ವಾನರನು ಸೋತ ಸಂದರ್ಭವೇ ಇಲ್ಲ. ಅವನ ಸಾಹಸಕೃತ್ಯಗಳು ದೇವತೆಗಳಿಗೂ ಶಕ್ಯವಲ್ಲವೆಂಬುದು ಕಣ್ಣಿಗೆ ಕಾಣಿಸುತ್ತಿದೆ (೭೩-೭೪). ಅವನ ಸಾಹಸಗಳನ್ನು ಕಂಡು ಅಂಜಿ ನಾನು ಈ ಋಷ್ಯಮೂಕಗಿರಿಗೆ ಓಡಿಬಂದಿದ್ದೇನೆ. ವಾಲಿಯನ್ನು ಕೆಣಕುವುದು ಅಸಾಧ್ಯವೆಂದೂ ಗೆಲ್ಲುವುದು ಅಶಕ್ಯವೆಂದೂ ಆ ವಾನರೇಂದ್ರನು ಅತ್ಯಂತ ಕೋಪಿಷ್ಠನೆಂದೂ ಮನಗಂಡು, ನಾನು ಈ ಋಷ್ಯಮೂಕವನ್ನು ಬಿಟ್ಟು ಕದಲುವುದೇ ಇಲ್ಲ! ಸದಾ ಗಾಬರಿಯಿಂದ ಹೆದಹೆದರುತ್ತಲೇ ಈ ಅರಣ್ಯದಲ್ಲಿ ಸಂಚರಿಸುತ್ತೇನೆ (೭೫-೭೬). ನನ್ನಲ್ಲಿ ಅನುರಕ್ತರಾದ ಹನುಮಂತನೇ ಮೊದಲಾದ ಉತ್ತಮನಾಯಕರು ನನ್ನ ಜೊತೆಗೆ ಇದ್ದೇ ಇರುತ್ತಾರೆ. ಮಿತ್ರ ವತ್ಸಲ, (ನನ್ನ ಭಾಗ್ಯದಿಂದ) ಶ್ರೇಷ್ಠನಾದ ನೀನು ನನಗೆ ಸನ್ಮಿತ್ರನಾಗಿ ದೊರಕಿದೆ. ಪುರುಷೋತ್ತಮ, ಹಿಮವಂತನಂತೆ ಅಕಂಪ್ಯನಾದ ನಿನ್ನನ್ನು ನಾನು ಮರೆಹೊಕ್ಕಿದ್ದೇನೆ. ಆದರೆ ನನಗೆ ದುಷ್ಟಭ್ರಾತನಾದ ಆ ಬಲಶಾಲಿಯ

ಅಪ್ರತ್ಯಕ್ಷಂ ತು ಮೇ ವೀರ್ಯಂ ಸಮರೇ ತವ ರಾಘವ ।
ನ ಖಲ್ವಹಂ ತ್ವಾಂ ತುಲಯೇ ನಾವಮನ್ಯೇ ನ ಭೀಷಯೇ ॥ ೭೯

ಕರ್ಮಭಿಸ್ತಸ್ಯ ಭೀಮೈಸ್ತು ಕಾತರ್ಯಂ ಜನಿತಂ ಮಮ ।
ಕಾಮಂ ರಾಘವ ತೇ ವಾಣೀ ಪ್ರಮಾಣಂ ಧೈರ್ಯಮಾಕೃತಿಃ ॥ ೮೦

ಸೂಚಯಂತಿ ಪರಂ ತೇಜೋ ಭಸ್ಮಚ್ಛನ್ನಮಿವಾನಲಮ್ ।
ತಸ್ಯ ತದ್ವಚನಂ ಶ್ರುತ್ವಾ ಸುಗ್ರೀವಸ್ಯ ಮಹಾತ್ಮನಃ ॥ ೮೧

ಸ್ಮಿತಪೂರ್ವಮಥೋ ರಾಮಃ ಪ್ರತ್ಯುವಾಚ ಹರಿಂ ಪ್ರಭುಃ ।
ಯದಿ ನ ಪ್ರತ್ಯಯೋಽಸ್ಮಾಸು ವಿಕ್ರಮೇ ತವ ವಾನರ ॥ ೮೨

ಪ್ರತ್ಯಯಂ ಸಮರೇ ಶ್ಲಾಘ್ಯಮಹಮುತ್ಪಾದಯಾಮಿ ತೇ ।
ಏವಮುಕ್ತ್ವಾ ತು ಸುಗ್ರೀವಂ ಸಾಂತ್ವಂ ಲಕ್ಷ್ಮಣಪೂರ್ವಜಃ ॥ ೮೩

ರಾಘವೋ ದುಂದುಭೇಃ ಕಾಯಂ ಪಾದಾಂಗುಷ್ಠೇನ ಲೀಲಯಾ ।
ತೋಲಯಿತ್ವಾ ಮಹಾಬಾಹುಶ್ಚಿಕ್ಷೇಪ ದಶಯೋಜನಮ್ ॥ ೮೪

---

ಬಲವನ್ನು ಬಲ್ಲೆ ನಾನು (೭೭-೭೮) ಶ್ರೀರಾಮ, ಸಮರದಲ್ಲಿ ನಿನ್ನ ಪೌರುಷವೇನೆಂಬುದನ್ನು ನಾನು ಕಂಡವನಲ್ಲ ನಾನು ಹೇಳುವುದು ನಿನ್ನನ್ನು ಅಳೆಯುವುದಕ್ಕಲ್ಲ, ಅವಮಾನಪಡಿಸುವುದಕ್ಕಲ್ಲ, ಹೆದರಿಸುವುದಕ್ಕಂತೂ ಅಲ್ಲವೇ ಅಲ್ಲ (೭೯) ವಾಲಿಯ ಭೀಷಣ ಕೃತ್ಯಗಳನ್ನು ಕಂಡು ನನಗೆ ಹೇಡಿತನ ಹುಟ್ಟಿದೆ. ರಘುಕುಲತಿಲಕ, ನಿನ್ನ ವಾಣಿಯೇ ನನಗೆ ಸಾಕಷ್ಟು ವಿಶ್ವಸನೀಯವಾಗಿದೆ ನಿನ್ನ ಧೈರ್ಯ, ನಿನ್ನ ದಿವ್ಯಾಕೃತಿಗಳು ಬೂದಿಮುಚ್ಚಿದ ಕೆಂಡದಂತಿರುವ ಉಗ್ರತೇಜಸ್ಸನ್ನು ಸೂಚಿಸುತ್ತವೆ" ಎಂದು ನುಡಿದನು (೮೦-೮೧). ಸುಗ್ರೀವನ ವಚನವನ್ನಾಲಿಸಿ ಸರ್ವಶಕ್ತನಾದ ಶ್ರೀರಾಮನು ಮುಗುಳ್ನಗೆಯಿಂದ ಸುಗ್ರೀವನಿಗೆ "ವಾನರೇಂದ್ರ, ನಮ್ಮ ಪರಾಕ್ರಮದ ವಿಷಯದಲ್ಲಿ ನಿನಗೆ ವಿಶ್ವಾಸವಿಲ್ಲವಾದರೆ, ನಮ್ಮ ಯುದ್ಧ ಸಾಮರ್ಥ್ಯವೇನೆಂಬುದನ್ನು ನೀನು ಕೊಂಡಾಡುವಂತೆ ವಿಶ್ವಾಸವನ್ನುಂಟು ಮಾಡಿಕೊಡುತ್ತೇನೆ!" ಎಂದು ಸಂತೈಸುತ್ತ ಹೇಳಿದನು (೮೨-೮೩). ಹೀಗೆ ಹೇಳಿ ಆಜಾನುಬಾಹುವಾದ ಲಕ್ಷ್ಮಣಾಗ್ರಜನು ಕಾಲಿನ ಹೆಬ್ಬೆರಳಿನಿಂದ ದುಂದುಭಿಯ ದೇಹವನ್ನು ಆಟವಾಡಿದಂತೆ ಚಿಮ್ಮಿದನು. ಆ ದೇಹವು ಹತ್ತು

ಅಸುರಸ್ಯ ತನುಂ ಶುಷ್ಕಾಂ ಪಾದಾಂಗುಷ್ಠೇನ ವೀರ್ಯವಾನ್ ।
ಕ್ಷಿಪ್ತಂ ದೃಷ್ಟ್ವಾ ತತಃ ಕಾಯಂ ಸುಗ್ರೀವಃ ಪುನರಬ್ರವೀತ್ ॥ ೮೫

ಲಕ್ಷ್ಮಣಸ್ಯಾಗ್ರತೋ ರಾಮಂ ತಪಂತಮಿವ ಭಾಸ್ಕರಮ್ ।
ಹರೀಣಾಮಗ್ರತೋ ವೀರಮಿದಂ ವಚನಮರ್ಥವತ್ ॥ ೮೬

ಆರ್ದ್ರಃ ಸಮಾಂಸಃ ಪ್ರತ್ಯಗ್ರಃ ಕ್ಷಿಪ್ತಃ ಕಾಯಃ ಪುರಾ ಸಖೇ ।
ಲಘುಃ ಸಂಪ್ರತಿ ನಿರ್ಮಾಂಸಸ್ತೃಣಭೂತಶ್ಚ ರಾಘವ ॥ ೮೭

ಪರಿಶ್ರಾಂತೇನ ಮತ್ತೇನ ಭ್ರಾತ್ರಾ ಮೇ ವಾಲಿನಾ ತದಾ ।
ಕ್ಷಿಪ್ತಮೇವಂ ಪ್ರಹರ್ಷೇಣ ಭವತಾ ರಘುನಂದನ ॥ ೮೮

ನಾತ್ರ ಶಕ್ಯಂ ಬಲಂ ಜ್ಞಾತುಂ ತವ ವಾ ತಸ್ಯ ವಾಧಿಕಮ್ ।
ಆರ್ದ್ರಂ ಶುಷ್ಕಮಿತಿ ಹ್ಯೇತತ್ ಸುಮಹದ್ರಾಘವಾಂತರಮ್ ॥ ೮೯

ಸ ಏವ ಸಂಶಯಸ್ತಾತ ತವ ತಸ್ಯ ಚ ಯದ್ಬಲೇ ।
ಸಾಲಮೇಕಂ ತು ನಿರ್ಭಿಂದ್ಯಾ ಭವೇದ್ವ್ಯಕ್ತಿರ್ಬಲಾಬಲೇ ॥ ೯೦

---

ಯೋಜನಗಳಷ್ಟು ದೂರ ಹಾರಿಬಿದ್ದಿತು ! (೮೪) ದೈತ್ಯನ ಶುಷ್ಕದೇಹವನ್ನು ಕಾಲ್ಬೆರಳಿನಿಂದ ಚಿಮ್ಮಿದ್ದನ್ನು ವೀಕ್ಷಿಸಿ ಸುಗ್ರೀವನು ಪುನಃ ಮಾತಾಡಿದನು ವೀರನಾದ ಶ್ರೀರಾಮನು ಭಾಸ್ಕರನಂತೆ ಬೆಳಗುತ್ತ ನಿಂತಿದ್ದನು ಲಕ್ಷ್ಮಣ ಮತ್ತು ಹನುಮಂತನೇ ಮೊದಲಾದ ವಾನರರೆದುರಿಗೆ ಸುಗ್ರೀವನು ಶ್ರೀರಾಮನನ್ನು ನೋಡಿ ಹೀಗೆಂದನು (೮೫-೮೬) : "ವಯಸ್ಯ, ಹಿಂದೆ ವಾಲಿಯು ಈ ದೇಹವನ್ನೆಸೆದಾಗ ಇದು ಹಸಿಯದಾಗಿತ್ತು ; ಮಾಂಸ ತುಂಬಿತ್ತು ರಾಕ್ಷಸನು ಮಡಿದ ಹೊಸದರಲ್ಲಿ ವಾಲಿಯು ಇದನ್ನು ಎಸೆದಿದ್ದಾನೆ. ಈಗ ಇದರಲ್ಲಿ ಮಾಂಸವಿಲ್ಲ, ಹುಲ್ಲಿನಂತೆ ಹಗುರಾಗಿದೆ ! (೮೭) ಅಲ್ಲದೆ ಯುದ್ಧಮಾಡಿ ಬಳಲಿ ಮದ್ಯದ ಅಮಲಿನಲ್ಲಿದ್ದಾಗ ನನ್ನ ಅಣ್ಣನು ಇದನ್ನು ಬಿಸುಟಿದ್ದಾನೆ. ನೀನಾದರೋ ಹೊಸ ಹುರುಪಿನಿಂದ ಚಿಮ್ಮಿದ್ದೀಯೆ ! ಆದ್ದರಿಂದ, ರಘುನಂದನ, ಇದರಲ್ಲಿ ನಿನ್ನ ಬಲ ಅಧಿಕವೋ ವಾಲಿಯದೋ ಎಂದು ನಿಶ್ಚಯಿಸಲಾಗದು. ಹಸಿಯದು-ಒಣಗಿದುದು ಎಂಬುದರಲ್ಲಿ ದೊಡ್ಡ ವ್ಯತ್ಯಾಸವಿದೆಯಲ್ಲವೆ, ರಾಘವ ? (೮೮-೮೯). ಮಿತ್ರ, ನಿಮ್ಮಿಬ್ಬರ ಬಲದಲ್ಲಿ ನನಗೆ ಮೊದಲಿದ್ದ ಸಂಶಯವೇ ಉಳಿಯಿತು ! ಈ ಸಾಲವೃಕ್ಷವನ್ನು ನೀನು

ಕೃತ್ವೇದಂ ಕಾರ್ಮುಕಂ ಸಜ್ಯಂ ಹಸ್ತಿಹಸ್ತಮಿವಾತತಮ್ ।
ಆಕರ್ಣಪೂರ್ಣಮಾಯಮ್ಯ ವಿಸೃಜಸ್ವ ಮಹಾಶರಮ್ ॥ ೯೧

ಇಮಂ ಹಿ ಸಾಲಂ ಪ್ರಹಿತಸ್ತ್ವಯಾ ಶರೋ
ನ ಸಂಶಯೋಽತ್ರಾಸ್ತಿ ವಿದಾರಯಿಷ್ಯತಿ ।
ಅಲಂ ವಿಮರ್ಶೇನ ಮಮ ಪ್ರಿಯಂ ಧ್ರುವಂ
ಕುರುಷ್ವ ರಾಜಾತ್ಮಜ ಶಾಪಿತೋ ಮಯಾ ॥ ೯೨

ಯಥಾ ಹಿ ತೇಜಃಸು ವರಃ ಸದಾ ರವಿ-
ರ್ಯಥಾ ಹಿ ಶೈಲೋ ಹಿಮವಾನ್ ಮಹಾದ್ರಿಷು ।
ಯಥಾ ಚತುಷ್ಪಾತ್ಸು ಚ ಕೇಸರೀ ವರ-
ಸ್ತಥಾ ನರಾಣಾಮಸಿ ವಿಕ್ರಮೇ ವರಃ ॥ ೯೩

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಏಕಾದಶಃ ಸರ್ಗಃ



ಭೇದಿಸುವೆಯಾದರೆ, ಆಗ ಬಲಾಬಲಗಳು ಸ್ಫುಟವಾಗುತ್ತವೆ. ಆದ್ದರಿಂದ ಆನೆಯ ಸೊಂಡಿಲಿನಂತೆ ನೀಳವಾದ ಧನುಸ್ಸಿಗೆ ಹೆದೆಯೇರಿಸಿ ನಿನ್ನ ಮಹಾ ಶರವನ್ನು ಹೂಡಿ, ಆಕರ್ಣಪರ್ಯಂತವಾಗಿ ಎಳೆದು ಬಿಡು (೯೦-೯೧) ನೀನು ಪ್ರಯೋಗಿಸಿದ ಬಾಣವು ಈ ಸಾಲವೃಕ್ಷವನ್ನು ಸೀಳಿ ನುಗ್ಗಿ ಹೋಗು ವುದು ; ಸಂದೇಹವಿಲ್ಲ. ರಾಜಪುತ್ರ, ಬೇರೊಂದೆಣಿಸದೆ ಈ ಕಾರ್ಯವನ್ನು ಮಾಡಿ ನನ್ನನ್ನು ಸಂಪೂರ್ಣವಾಗಿ ತೃಪ್ತಿಗೊಳಿಸು. ಆಣೆಯಿಟ್ಟು ಹೇಳು ತ್ತೇನೆ. (ಅದರಿಂದ ನನಗೆ ಸಮಾಧಾನವಾಗುತ್ತದೆ) (೯೨) ತೇಜೋ ವಂತರಲ್ಲಿ ನೀನು ಸೂರ್ಯನಂತೆ ಶ್ರೇಷ್ಠನಾದವನು. ಮಹಾಪರ್ವತಗಳಲ್ಲಿ ಹಿಮವಂತನಿದ್ದಂತೆ, ಮೃಗಗಳಲ್ಲಿ ಕಂಠೀರವನಿದ್ದಂತೆ, ಪರಾಕ್ರಮಿಗಳಲ್ಲಿ ನೀನು ಸರ್ವಶ್ರೇಷ್ಠನಾಗಿದ್ದೀಯೆ" ಎಂದನು (೯೩).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಹನ್ನೊಂದನೆಯ ಸರ್ಗ



## ದ್ವಾದಶಃ ಸರ್ಗಃ

### ಸುಗ್ರೀವಪ್ರತ್ಯಯದಾನಮ್

ಏತಚ್ಚ ವಚನಂ ಶ್ರುತ್ವಾ ಸುಗ್ರೀವೇಣ ಸುಭಾಷಿತಮ್ ।
ಪ್ರತ್ಯಯಾರ್ಥಂ ಮಹಾತೇಜಾ ರಾಮೋ ಜಗ್ರಾಹ ಕಾರ್ಮುಕಮ್ ॥
ಸ ಗೃಹೀತ್ವಾ ಧನುರ್ಘೋರಂ ಶರಮೇಕಂ ಚ ಮಾನದಃ ।
ಸಾಲಮುದ್ದಿಶ್ಯ ಚಿಕ್ಷೇಪ ಜ್ಯಾಸ್ವನೈಃ ಪೂರಯನ್ ದಿಶಃ ॥ ೨
ಸ ವಿಸೃಷ್ಟೋ ಬಲವತಾ ಬಾಣಃ ಸ್ವರ್ಣಪರಿಷ್ಕೃತಃ ।
ಭಿತ್ತ್ವಾ ಸಾಲಾನ್ ಗಿರಿಪ್ರಸ್ಥೇ ಸಪ್ತ ಭೂಮಿಂ ವಿವೇಶ ಹ ॥ ೩
ಪ್ರವಿಷ್ಟಶ್ಚ ಮುಹೂರ್ತೇನ ಧರಾಂ ಭಿತ್ತ್ವಾ ಮಹಾಜವಃ ।
ನಿಷ್ಪತ್ಯ ಚ ಪುನಸ್ತೂರ್ಣಂ ಸ್ವತೂಣೀಂ ಪುನರಾವಿಶತ್ ॥ ೪

## ಸರ್ಗ ೧೨

### ಶ್ರೀರಾಮನು ಸಪ್ತಸಾಲಗಳನ್ನು ಭೇದಿಸಿ ಸುಗ್ರೀವನಿಗೆ ನಂಬಿಕೆಯನ್ನು ಉಂಟುಮಾಡುವುದು. ವಾಲಿ ಸುಗ್ರೀವರ ಯುದ್ಧ. ಸುಗ್ರೀವನ ಪರಾಜಯ.

ಹೀಗೆ ಸುಗ್ರೀವನಾಡಿದ ಪ್ರಶಂಸಾವಚನವನ್ನು ಕೇಳಿ ಮಹಾತೇಜಸ್ವಿಯಾದ ಶ್ರೀರಾಮನು ಕೋದಂಡವನ್ನು ಎತ್ತಿಕೊಂಡನು. ಆಮೇಲೆ ಘೋರವಾದ ಶರವೊಂದನ್ನು ಹೂಡಿ, ದಶದಿಕ್ಕುಗಳೂ ಝಂಕಾರದಿಂದ ಮೊಳಗುವಂತೆ, ಒಂದು ಸಾಲವೃಕ್ಷಕ್ಕೆ ಗುರಿಯಿಟ್ಟು ಹೊಡೆದನು (೧-೨). ಬಲಶಾಲಿಯಾದ ಶ್ರೀರಾಮನು ಹೊಡೆದೊಡನೆ ಸ್ವರ್ಣಾಲಂಕೃತವಾದ ಆ ಶರವು ಏಳು ಸಾಲವೃಕ್ಷಗಳನ್ನೂ ತೂರಿಕೊಂಡುಹೋಗಿ ಮುಂದೆ ಇದ್ದ ಪರ್ವತಪ್ರದೇಶದ ನೆಲದೊಳಗೆ ನುಗ್ಗಿತು! ಅನಂತರ ಒಂದು ಕ್ಷಣದಲ್ಲಿ ಭೂಮಿಯನ್ನು ಸೀಳಿ ಮಹಾವೇಗದಿಂದ ಮೇಲೆ ಜಿಗಿದು ಪುನಃ ತನ್ನ ಬತ್ತಳಿಕೆಯನ್ನು ಸೇರಿತು! (೩-೪). ಏಕಕಾಲದಲ್ಲಿ ಸಪ್ತಸಾಲವೃಕ್ಷಗಳು ಸೀಳಿಹೋದುದನ್ನೂ ಶ್ರೀರಾಮನ ಶರವೇಗವನ್ನೂ ಕಂಡು ಸುಗ್ರೀವನು ಅಚ್ಚರಿಗೊಂಡನು. ಅವನು ಶ್ರೀರಾಮನಿಗೆ ತಲೆಬಾಗಿ ನೆಲದಮೇಲೆ ಅಡ್ಡ

ತಾನ್ ದೃಷ್ಟ್ವಾ ಸಪ್ತ ನಿರ್ಭಿನ್ನಾನ್ ಸಾಲಾನ್ ವಾನರಪುಂಗವಃ ।
ರಾಮಸ್ಯ ಶರವೇಗೇನ ವಿಸ್ಮಯಂ ಪರಮಂ ಗತಃ ॥ ೫

ಸ ಮೂರ್ಧ್ನಾ ನ್ಯಪತದ್ಭೂಮೌ ಪ್ರಲಂಬೀಕೃತಭೂಷಣಃ ।
ಸುಗ್ರೀವಃ ಪರಮಪ್ರೀತೋ ರಾಘವಾಯ ಕೃತಾಂಜಲಿಃ ॥ ೬

ಇದಂ ಚೋವಾಚ ಧರ್ಮಜ್ಞಂ ಕರ್ಮಣಾ ತೇನ ಹರ್ಷಿತಃ ।
ರಾಮಂ ಸರ್ವಾಸ್ತ್ರವಿದುಷಾಂ ಶ್ರೇಷ್ಠಂ ಶೂರಮವಸ್ಥಿತಮ್ ॥ ೭

ಸೇಂದ್ರಾನಪಿ ಸುರಾನ್ ಸರ್ವಾಂಸ್ತ್ವಂ ಬಾಣೈಃ ಪುರುಷರ್ಷಭ ।
ಸಮರ್ಥಃ ಸಮರೇ ಹಂತುಂ ಕಿಂ ಪುನರ್ವಾಲಿನಂ ಪ್ರಭೋ ॥ ೮

ಯೇನ ಸಪ್ತ ಮಹಾಸಾಲಾ ಗಿರಿರ್ಭೂಮಿಶ್ಚ ದಾರಿತಾಃ ।
ಬಾಣೇನೈಕೇನ ಕಾಕುತ್ಸ್ಥ ಸ್ಥಾತಾ ತೇ ಕೋ ರಣಾಗ್ರತಃ ॥ ೯

ಅದ್ಯ ಮೇ ವಿಗತಃ ಶೋಕಃ ಪ್ರೀತಿರದ್ಯ ಪರಾ ಮಮ ।
ಸುಹೃದಂ ತ್ವಾಂ ಸಮಾಸಾದ್ಯ ಮಹೇಂದ್ರವರುಣೋಪಮಮ್ ॥ ೧೦

ತಮದ್ಯೈವ ಪ್ರಿಯಾರ್ಥಂ ಮೇ ವೈರಿಣಂ ಭ್ರಾತೃರೂಪಿಣಮ್ ।
ವಾಲಿನಂ ಜಹಿ ಕಾಕುತ್ಸ್ಥ ಮಯಾ ಬದ್ಧೋಽಯಮಂಜಲಿಃ ॥ ೧೧

---

ಬಿದ್ದನು. ಕೊರಳಿನ ಹಾರಗಳು ತೂಗಾಡಿದವು. ಆನಂದದಿಂದ ಹಿಗ್ಗುತ್ತ ಸರ್ವಾಸ್ತ್ರವಿಶಾರದನೂ ಲೋಕೈಕವೀರನೂ ಆದ ರಾಘವನಿಗೆ ಕೈಮುಗಿದನು (೫-೭) ಸುಗ್ರೀವನು ಕೈಜೋಡಿಸಿ "ಪುರುಷೋತ್ತಮ—ನನ್ನ ಪ್ರಭುವೆ, ಸಂಗ್ರಾಮಕ್ಕೆ ಬಂದರೆ ಇಂದ್ರಾದಿದೇವತೆಗಳನ್ನೂ ಸಹ ಈ ಬಾಣಗಳಿಂದ ನೀನು ಧ್ವಂಸಪಡಿಸಬಲ್ಲೆ. ಇನ್ನು ವಾಲಿಯ ಗತಿಯನ್ನೇನು ಹೇಳಲಿ! ಏಕಕಾಲದಲ್ಲಿ ಒಂದೇ ಬಾಣದಿಂದ ಏಳು ಮಹಾಸಾಲವೃಕ್ಷಗಳನ್ನು ಭೇದಿಸಿ ಬೆಟ್ಟವನ್ನು ಕೊರೆದು ಭೂಮಿಯನ್ನು ಸೀಳಿಬಿಟ್ಟೆಯಲ್ಲ! ನಿನ್ನೆದುರಿಗೆ ರಣಭೂಮಿಯಲ್ಲಿ ನಿಲ್ಲುವ ಗಂಡಸು ಯಾರು? (೮-೯) ಇಂದಿಗೆ ನನ್ನ ಶೋಕವು ಮುಗಿಯಿತು! ಸಂತೋಷ ಉಕ್ಕಿತು. ದೇವೇಂದ್ರನಿಗೂ ವರುಣನಿಗೂ ಎಣೆಯಾದ ನಿನ್ನಂಥ ಮಿತ್ರನು ದೊರಕಿದಮೇಲೆ ನನಗೆ ಕೊರತೆ ಏನು? ಕಾಕುತ್ಸ್ಥ, ನನಗೆ ಅಣ್ಣನೆನಿಸಿಕೊಂಡ ಆ ವೈರಿಯನ್ನು ಈ ದಿನವೇ

**ತತೋ ರಾಮಃ ಪರಿಷ್ವಜ್ಯ ಸುಗ್ರೀವಂ ಪ್ರಿಯದರ್ಶನಮ್ ।
ಪ್ರತ್ಯುವಾಚ ಮಹಾಪ್ರಾಜ್ಞೋ ಲಕ್ಷ್ಮಣಾನುಮತಂ ವಚಃ ॥ ೧೨
ಅಸ್ಮಾದ್ಗಚ್ಛೇಮ ಕಿಷ್ಕಿಂಧಾಂ ಕ್ಷಿಪ್ರಂ ಗಚ್ಛ ತ್ವಮಗ್ರತಃ ।
ಗತ್ವಾ ಚಾಹ್ವಯ ಸುಗ್ರೀವ ವಾಲಿನಂ ಭ್ರಾತೃಗಂಧಿನಮ್ ॥ ೧೩
ಸರ್ವೇ ತೇ ತ್ವರಿತಂ ಗತ್ವಾ ಕಿಷ್ಕಿಂಧಾಂ ವಾಲಿನಃ ಪುರೀಮ್ ।
ವೃಕ್ಷೈರಾತ್ಮಾನಮಾವೃತ್ಯ ವ್ಯತಿಷ್ಠನ್ ಗಹನೇ ವನೇ ॥ ೧೪
ಸುಗ್ರೀವೋ ವ್ಯನದದ್ಘೋರಂ ವಾಲಿನೋ ಹ್ವಾನಕಾರಣಾತ್ ।
ಗಾಢಂ ಪರಿಹಿತೋ ವೇಗಾನ್ನಾದೈರ್ಭಿಂದನ್ನಿವಾಂಬರಮ್ ॥ ೧೫
ತಂ ಶ್ರುತ್ವಾ ನಿನದಂ ಭ್ರಾತುಃ ಕ್ರುದ್ಧೋ ವಾಲೀ ಮಹಾಬಲಃ ।
ನಿಷ್ಪಪಾತ ಸುಸಂರಬ್ಧೋ ಭಾಸ್ಕರೋಽಸ್ತತಟಾದಿವ ॥ ೧೬
ತತಃ ಸುತುಮುಲಂ ಯುದ್ಧಂ ವಾಲಿಸುಗ್ರೀವಯೋರಭೂತ್ ।
ಗಗನೇ ಗ್ರಹಯೋರ್ಘೋರಂ ಬುಧಾಂಗಾರಕಯೋರಿವ ॥ ೧೭**

---

ಸಂಹರಿಸು. ಆದರಿಂದ ನನಗೆ ತೃಪ್ತಿಯಾಗುವುದು. ಇದೋ, ನಿನಗೆ ಕೈಮುಗಿಯುತ್ತೇನೆ" ಎಂದು ಹೇಳಿದನು (೧೦-೧೧) ಆಗ ಶ್ರೀರಾಮನು ಪ್ರಿಯನಾದ ಸುಗ್ರೀವನನ್ನಪ್ಪಿಕೊಂಡು, (ಲಕ್ಷ್ಮಣನ ಇಂಗಿತವನ್ನರಿತು) ಅವನಿಗೆ ಸಮ್ಮತವಾಗುವಂತೆ "ಸುಗ್ರೀವ, ಹೀಗೆಯೇ ನೇರವಾಗಿ ಕಿಷ್ಕಿಂಧೆಗೆ ಹೋಗೋಣ. ನೀನು ಮುಂದೆ ಹೊರಡು. ಕಿಷ್ಕಿಂಧೆಗೆ ಹೋಗಿ ಸೋದರನೆನಿಸಿ ಕೊಂಡಿರುವ ಆ ವಾಲಿಯನ್ನು ಯುದ್ಧಕ್ಕೆ ಕರೆ" ಎಂದನು (೧೨-೧೩). ಅನಂತರ ಅವರೆಲ್ಲರೂ ವಾಲಿಯ ರಾಜಧಾನಿಯಾದ ಕಿಷ್ಕಿಂಧೆಯ ಬಳಿಗೆ ಹೋಗಿ, ಸಮೀಪದಲ್ಲಿದ್ದ ದಟ್ಟವಾದ ಅರಣ್ಯದಲ್ಲಿ ಮರಗಳ ಮರೆಯಲ್ಲಿ ನಿಂತರು. ಸುಗ್ರೀವನು ನಡುವನ್ನು ವಸ್ತ್ರದಿಂದ ಬಿಗಿದು ಕಟ್ಟಿ, ವಾಲಿಯನ್ನು ಕರೆಯುವುದಕ್ಕಾಗಿ ಭೀಕರಸ್ವರದಿಂದ ಗರ್ಜಿಸಿದನು. ಗಗನವು ಸಿಡಿಯು ವಂತೆ ಅಬ್ಬರಿಸಿದನು (೧೪-೧೫). ತಮ್ಮನ ಅಬ್ಬರವು ವಾಲಿಗೆ ಕೇಳಿಸಿತು. ಅವನು ಸಿಟ್ಟಿನಿಂದ ಸಿಡಿದೆದ್ದು, ಅಸ್ತಾಚಲವನ್ನು ತ್ಯಜಿಸಿ ಸೂರ್ಯನು ಪುನಃ ಉದಯಿಸಿ ಬರುವಂತೆ, ಕಿಷ್ಕಿಂಧೆಯಿಂದ ಹೊರಬಂದನು. ವಾಲಿ ಸುಗ್ರೀವರಿಗೆ ಹಣಾಹಣಿಯಾದ ಹೋರಾಟವಾರಂಭಿಸಿತು ಗಗನತಳದಲ್ಲಿ ಬುಧ, ಅಂಗಾರಕ ಎಂಬ ಗ್ರಹಗಳ ನಡುವೆ ನಡೆವಂತೆ, ಹೊಡೆದಾಟವು ಕಡು

**ತಲೈರಶನಿಕಲ್ಪೈಶ್ಚ ವಜ್ರಕಲ್ಪೈಶ್ಚ ಮುಷ್ಟಿಭಿಃ ।**
**ಜಘ್ನತುಃ ಸಮರೇಽನ್ಯೋನ್ಯಂ ಭ್ರಾತರೌ ಕ್ರೋಧಮೂರ್ಛಿತೌ ॥ ೧೮**

**ತತೋ ರಾಮೋ ಧನುಷ್ಪಾಣಿಸ್ತಾವುಭೌ ಸಮುದೀಕ್ಷ್ಯ ತು ।**
**ಅನ್ಯೋನ್ಯಸದೃಶೌ ವೀರಾವುಭೌ ದೇವಾವಿವಾಶ್ವಿನೌ ॥ ೧೯**

**ಯನ್ನಾವಗಚ್ಛತ್ ಸುಗ್ರೀವಂ ವಾಲಿನಂ ವಾಪಿ ರಾಘವಃ ।**
**ತತೋ ನ ಕೃತವಾನ್ ಬುದ್ಧಿಂ ಮೋಕ್ತುಮಂತಕರಂ ಶರಮ್ ॥ ೨೦**

**ಏತಸ್ಮಿನ್ನಂತರೇ ಭಗ್ನಃ ಸುಗ್ರೀವಸ್ತೇನ ವಾಲಿನಾ ।**
**ಅಪಶ್ಯನ್ ರಾಘವಂ ನಾಥಮೃಶ್ಯಮೂಕಂ ಪ್ರದುದ್ರುವೇ ॥ ೨೧**

**ಕ್ಲಾಂತೋ ರುಧಿರಸಿಕ್ತಾಂಗಃ ಪ್ರಹಾರೈರ್ಜರ್ಜರೀಕೃತಃ ।**
**ವಾಲಿನಾಭಿದ್ರುತಃ ಕ್ರೋಧಾತ್ ಪ್ರವಿವೇಶ ಮಹಾವನಮ್ ॥ ೨೨**

**ತಂ ಪ್ರವಿಷ್ಟಂ ವನಂ ದೃಷ್ಟ್ವಾ ವಾಲೀ ಶಾಪಭಯಾರ್ದಿತಃ ।**
**ಮುಕ್ತೋ ಹ್ಯಸಿ ತ್ವಮಿತ್ಯುಕ್ತ್ವಾ ಸಂನಿವೃತ್ತೋ ಮಹಾದ್ಯುತಿಃ ॥ ೨೩**

---

ಭಯಂಕರವಾಯಿತು (೧೬-೧೭) ಕ್ರೋಧೋದ್ದೀಪಿತರಾದ ಆ ಸೋದರರು ಸಿಡಿಲೆರಗುವಂತೆ ಕರತಳಗಳಿಂದ ಅಪ್ಪಳಿಸುತ್ತ ವಜ್ರಮುಷ್ಟಿಗಳಿಂದ ಗುದ್ದುತ್ತ ಒಬ್ಬರನ್ನೊಬ್ಬರು ಜಡಿದರು (೧೮). ಆ ಸಮಯದಲ್ಲಿ ಕೋದಂಡಪಾಣಿಯಾದ ರಾಘವನು ಅವರಿಬ್ಬರನ್ನೂ ಗಮನಿಸಿ ನೋಡಿದನು. ಅಶ್ವಿನೀ ದೇವತೆಗಳಂತೆ ಅಚ್ಚಳಿಯದೆ ಒಬ್ಬರನ್ನೊಬ್ಬರು ಹೋಲುತ್ತಿದ್ದ ಆ ವೀರರಲ್ಲಿ, 'ಸುಗ್ರೀವನಾರು ? ವಾಲಿ ಯಾರು ?' ಎಂದು ರಾಘವನು ಕಂಡುಹಿಡಿಯಲಾರದೆ ಹೋದನು ಆದ್ದರಿಂದ ಪ್ರಾಣಾಂತಕವಾದ ಬಾಣವನ್ನು ಪ್ರಯೋಗಿಸಲು ಅವನು ಮನಸ್ಸುಮಾಡಲಿಲ್ಲ (೧೯-೨೦) ಅಷ್ಟರಲ್ಲಿ ಸುಗ್ರೀವನಿಗೆ ವಾಲಿಯಿಂದ ಪೆಟ್ಟುತಿಂದು ಸೋಲುವ ಪರಿಸ್ಥಿತಿಯುಂಟಾಯಿತು. ಶ್ರೀರಾಮನು ನಾಥನಾಗಿ ತನ್ನ ರಕ್ಷಣೆಗೆ ಬರದಿರುವುದನ್ನು ಕಂಡು, ಸುಗ್ರೀವನು ಋಷ್ಯಮೂಕಗಿರಿಗೆ ಓಡಿಹೋದನು ! (೨೧). ಅವನು ಬಳಲಿಹೋಗಿದ್ದನು. ಮೈಯೆಲ್ಲವೂ ರಕ್ತದಿಂದ ನೆನೆದಿತ್ತು ವಾಲಿಯ ಹೊಡೆತಗಳಿಂದ ಅಂಗಾಂಗಳು ಜರ್ಜರಿತವಾಗಿದ್ದವು. ವಾಲಿಯು ಸಿಟ್ಟಿನಿಂದ ಬೆನ್ನಟ್ಟಿಹೋದನು. ಸುಗ್ರೀವನು ಹೇಗೋ ಋಷ್ಯಮೂಕವನವನ್ನು ಸೇರಿಕೊಂಡನು (೨೨). ಅವನು

**ರಾಘವೋಽಪಿ ಸಹ ಭ್ರಾತ್ರಾ ಸಹ ಚೈವ ಹನೂಮತಾ ।**
**ತದೇವ ವನಮಾಗಚ್ಛತ್ ಸುಗ್ರೀವೋ ಯತ್ರ ವಾನರಃ ॥ ೨೪**

**ತಂ ಸಮೀಕ್ಷ್ಯಾಗತಂ ರಾಮಂ ಸುಗ್ರೀವಃ ಸಹಲಕ್ಷ್ಮಣಮ್ ।**
**ಹ್ರೀಮಾನ್ ದೀನಮುವಾಚೇದಂ ವಸುಧಾಮವಲೋಕಯನ್ ॥ ೨೫**

**ಆಹ್ವಯಸ್ವೇತಿ ಮಾಮುಕ್ತ್ವಾ ದರ್ಶಯಿತ್ವಾ ಚ ವಿಕ್ರಮಮ್ ।**
**ವೈರಿಣಾ ಘಾತಯಿತ್ವಾ ಚ ಕಿಮಿದಾನೀಂ ತ್ವಯಾ ಕೃತಮ್ ॥ ೨೬**

**ತಾಮೇವ ವೇಲಾಂ ವಕ್ತವ್ಯಂ ತ್ವಯಾ ರಾಘವ ತತ್ತ್ವತಃ ।**
**ವಾಲಿನಂ ನ ನಿಹನ್ಮೀತಿ ತತೋ ನಾಹಮಿತೋ ವ್ರಜೇ ॥ ೨೭**

**ತಸ್ಯ ಚೈವಂ ಬ್ರುವಾಣಸ್ಯ ಸುಗ್ರೀವಸ್ಯ ಮಹಾತ್ಮನಃ ।**
**ಕರುಣಂ ದೀನಯಾ ವಾಚಾ ರಾಘವಃ ಪುನರಬ್ರವೀತ್ ॥ ೨೮**

**ಸುಗ್ರೀವ ಶ್ರೂಯತಾಂ ತಾತ ಕ್ರೋಧಶ್ಚ ವ್ಯಪನೀಯತಾಮ್ ।**
**ಕಾರಣಂ ಯೇನ ಬಾಣೋಽಯಂ ನ ಮಯಾ ಸ ವಿಸರ್ಜಿತಃ ॥ ೨೯**

---

ವನದೊಳಗೆ ಹೋದೊಡನೆ ವಾಲಿಯು ಮತಂಗಮುನಿಗಳ ಶಾಪಕ್ಕೆ ಅಳುಕಿ "ಎಲೇ ಸುಗ್ರೀವ, ತಪ್ಪಿಸಿಕೊಂಡು ಬದುಕಿದೆ, ಇರಲಿ !" ಎಂದು ಕೂಗಿಹೇಳಿ ಕಿಷ್ಕಿಂಧೆಗೆ ಹಿಂದಿರುಗಿದನು ಆಮೇಲೆ ಶ್ರೀರಾಮನು ಲಕ್ಷ್ಮಣ ಹನುಮಂತರೊಂದಿಗೆ ಸುಗ್ರೀವನಿದ್ದ ವನಕ್ಕೆ ಬಂದನು (೨೩–೨೪) ಲಕ್ಷ್ಮಣಸಮೇತನಾಗಿ ಶ್ರೀರಾಮನು ಬಂದುದನ್ನು ನೋಡಿ, ಸುಗ್ರೀವನು ಲಜ್ಜೆಯಿಂದ ನೆಲವನ್ನು ನೋಡುತ್ತ ದೈನ್ಯದಿಂದ "ರಾಘವ, ನಿನ್ನ ಶೌರ್ಯವನ್ನು ತೋರಿಸಿ ವಾಲಿಯನ್ನು ಕರೆಯೆಂದು ನನಗೆ ಹೇಳಿದ ವೈರಿಯಿಂದ ನನ್ನನ್ನು ಹೊಡೆಸಿದೆ. ಈಗ ನೀನು ಮಾಡಿದುದೇನು ? (೨೫-೨೬). 'ವಾಲಿಯನ್ನು ಕೊಲ್ಲುವುದಿಲ್ಲ' ಎಂದು ಆಗಲೇ ನೀನು ಸತ್ಯವನ್ನು ನುಡಿಯಬಹುದಾಗಿತ್ತು ಆ ಸಂದರ್ಭದಲ್ಲಿ ನಾನು ಇಲ್ಲಿಂದ ಹೊರಡುತ್ತಲೇ ಇರಲಿಲ್ಲ" ಎಂದನು (೨೭). ಹಾಗೆ ಸುಗ್ರೀವನು ಮರುಕಹುಟ್ಟುವಂತೆ ದೀನವಾಣಿಯಿಂದ ನುಡಿಯುತ್ತಿರಲು ಶ್ರೀರಾಮನು ಹೀಗೆಂದನು : "ಅಪ್ಪಾ–ಸುಗ್ರೀವ, ನಾನು ಹೇಳುವುದನ್ನು ಕೇಳು ; ಸಿಟ್ಟಾಗಬೇಡ. ಈ ಬಾಣವನ್ನು ನಾನು ಪ್ರಯೋಗಿಸದಿರುವುದಕ್ಕೆ ಕಾರಣವೇನೆಂಬುದನ್ನು ಕೇಳು (೨೮–೨೯) : ನೀನೂ ವಾಲಿಯೂ

ಅಲಂಕಾರೇಣ ವೇಷೇಣ ಪ್ರಮಾಣೇನ ಗತೇನ ಚ ।
ತ್ವಂ ಚ ಸುಗ್ರೀವ ವಾಲೀ ಚ ಸದೃಶೌ ಸ್ಥಃ ಪರಸ್ಪರಮ್ ॥ ೩೦
ಸ್ವರೇಣ ವರ್ಚಸಾ ಚೈವ ಪ್ರೇಕ್ಷಿತೇನ ಚ ವಾನರ ।
ವಿಕ್ರಮೇಣ ಚ ವಾಕ್ಯೈಶ್ಚ ವ್ಯಕ್ತಿಂ ವಾಂ ನೋಪಲಕ್ಷಯೇ ॥ ೩೧
ತತೋಽಹಂ ರೂಪಸಾದೃಶ್ಯಾನ್ಮೋಹಿತೋ ವಾನರೋತ್ತಮ ।
ನೋತ್ಸೃಜಾಮಿ ಮಹಾವೇಗಂ ಶರಂ ಶತ್ರುನಿಬರ್ಹಣಮ್ ॥ ೩೨
ಜೀವಿತಾಂತಕರಂ ಘೋರಂ ಸಾದೃಶ್ಯಾತ್ತು ವಿಶಂಕಿತಃ ।
ಮೂಲಘಾತೋ ನ ನೌ ಸ್ಯಾದ್ಧಿ ದ್ವಯೋರಪಿ ಕೃತೋ ಮಯಾ ॥
ತ್ವಯಿ ವೀರೇ ವಿಪನ್ನೇ ಹಿ ಅಜ್ಞಾನಾಲ್ಲಾಘವಾನ್ಮಯಾ ।
ಮೌಢ್ಯಂ ಚ ಮಮ ಬಾಲ್ಯಂ ಚ ಖ್ಯಾಪಿತಂ ಸ್ಯಾದ್ಧರೀಶ್ವರ ॥ ೩೪
ದತ್ತಾಭಯವಧೋ ನಾಮ ಪಾತಕಂ ಮಹದುಚ್ಯತೇ ।
ಅಹಂ ಚ ಲಕ್ಷ್ಮಣಶ್ಚೈವ ಸೀತಾ ಚ ವರವರ್ಣಿನೀ ॥ ೩೫

ಒಂದೇ ರೀತಿ ಕಾಣುತ್ತೀರಿ ಅಲಂಕಾರ, ಆಕೃತಿ, ನಿಲುವು, ನಡಿಗೆ—ಇವುಗಳಲ್ಲಿ ನೀವಿಬ್ಬರೂ ಒಂದೇ ಬಗೆಯಲ್ಲಿದ್ದೀರಿ. ಕಂಠಧ್ವನಿ, ಮೈಬಣ್ಣ, ನೋಟ, ಹೆಜ್ಜೆಯಿಡುವ ರೀತಿ—ಇವುಗಳೆಲ್ಲವೂ ಒಂದೇ ವಿಧ. ಸುಗ್ರೀವ, ನೀವಾಡುವ ಮಾತುಗಳಿಂದಲೂ ಸಹ ನಿಮ್ಮಿಬ್ಬರಲ್ಲಿ ವ್ಯತ್ಯಾಸವು ನನಗೆ ಕಾಣಲಿಲ್ಲ (೩೦-೩೧) ವಾನರೇಂದ್ರ, ನಿಮ್ಮೀರ್ವರ ರೂಪಸಾದೃಶ್ಯದಿಂದ ನನಗೆ ದಿಗ್ಭ್ರಮೆಯಾಯಿತು ಆದ್ದರಿಂದ ಶತ್ರುಧ್ವಂಸಕರವಾದ ಈ ಘೋರಾಸ್ತ್ರವನ್ನು ನಾನು ಪ್ರಯೋಗಿಸಲಿಲ್ಲ. ಪರಸ್ಪರವಾದ ನಿಮ್ಮ ಹೋಲಿಕೆಯಿಂದ ಏನಾದರೂ ವಿಪರೀತವಾದೀತೆಂದು ನನಗೆ ಶಂಕೆಯಾಯಿತು. ಆದುದರಿಂದ ಪ್ರಾಣಾಂತಕವಾದ ಈ ಬಾಣವನ್ನು ಬಿಡಲಿಲ್ಲ. ನಮ್ಮೀರ್ವರ ಹಿತದ ಬುಡಕ್ಕೇ ನಾನು ಸಂಚಕಾರವನ್ನು ತರಬಾರದಲ್ಲವೆ? (೩೨-೩೩). ವಾನರೇಶ್ವರ, ವೀರನಾದ ನೀನು ನನ್ನ ಅಜ್ಞಾನದಿಂದಲೋ ಬುದ್ಧಿಲಾಘವದಿಂದಲೋ ವಿಪತ್ತಿಗೀಡಾದರೆ, ನನ್ನ ದಡ್ಡತನವೂ ಅವಿವೇಕವೂ ಲೋಕವಿಖ್ಯಾತವಾದಾವು (೩೪). ಯಾರಿಗೆ ಅಭಯವನ್ನಿತ್ತಿರುವೆವೋ ಅವನನ್ನೇ ವಧಿಸುವುದು ಮಹಾಪಾಪಕಾರ್ಯ. ನಾನು, ಲಕ್ಷ್ಮಣ, ಸೀತೆ—ಈ ಮೂವರಿಗೂ ನೀನು

**ತ್ವದಧೀನಾ ವಯಂ ಸರ್ವೇ ವನೇಽಸ್ಮಿನ್ ಶರಣಂ ಭವಾನ್ ।**
**ತಸ್ಮಾದ್ಯುಧ್ಯಸ್ವ ಭೂಯಸ್ತ್ವಂ ಮಾ ಮಾ ಶಂಕೀಶ್ಚ ವಾನರ ॥ ೩೬**

**ಅಸ್ಮಿನ್ ಮುಹೂರ್ತೇ ಸುಗ್ರೀವ ಪಶ್ಯ ವಾಲಿನಮಾಹವೇ ।**
**ನಿರಸ್ತಮಿಷುಣೈಕೇನ ವೇಷ್ಟಮಾನಂ ಮಹೀತಲೇ ॥ ೩೭**

**ಅಭಿಜ್ಞಾನಂ ಕುರುಷ್ವ ತ್ವಮಾತ್ಮನೋ ವಾನರೇಶ್ವರ ।**
**ಯೇನ ತ್ವಾಮಭಿಜಾನೀಯಾಂ ದ್ವಂದ್ವಯುದ್ಧಮುಪಾಗತಮ್ ॥ ೩೮**

**ಗಜಪುಷ್ಪೀಮಿಮಾಂ ಫುಲ್ಲಾಮುತ್ಪಾಟ್ಯ ಶುಭಲಕ್ಷಣಾಮ್ ।**
**ಕುರು ಲಕ್ಷ್ಮಣ ಕಂಠೇಽಸ್ಯ ಸುಗ್ರೀವಸ್ಯ ಮಹಾತ್ಮನಃ ॥ ೩೯**

**ತತೋ ಗಿರಿತಟೇ ಜಾತಾಮುತ್ಪಾಟ್ಯ ಕುಸುಮಾಕುಲಾಮ್ ।**
**ಲಕ್ಷ್ಮಣೋ ಗಜಪುಷ್ಪೀಂ ತಾಂ ತಸ್ಯ ಕಂಠೇ ನ್ಯಸರ್ಜಯತ್ ॥ ೪೦**

**ಸ ತಯಾ ಶುಶುಭೇ ಶ್ರೀಮಾನ್ ಲತಯಾ ಕಂಠಸಕ್ತಯಾ ।**
**ಮಾಲಯೇವ ಬಲಾಕಾನಾಂ ಸಸಂಧ್ಯ ಇವ ತೋಯದಃ ॥ ೪೧**

---

ದಿಕ್ಕಾಗಿರುವೆ ಈ ಅಡವಿಯಲ್ಲಿ ನೀನು ನಮಗೆ ಆಶ್ರಯದಾತನಾಗಿರುವೆ. ಆದ್ದರಿಂದ, ಸುಗ್ರೀವ, ಇನ್ನೊಮ್ಮೆ ಯುದ್ಧಮಾಡು; ಸಂದೇಹವೆಂದಿಗೂ ಬೇಡ (೩೫-೩೬) ಈ ಮುಹೂರ್ತದಲ್ಲಿಯೇ ರಣಭೂಮಿಯಲ್ಲಿ ವಾಲಿಯು ನನ್ನ ಒಂದೇ ಬಾಣದಿಂದ ಸಂಭಿನ್ನಗಾತ್ರನಾಗಿ ನೆಲದಮೇಲೆ ಉರುಳಾಡುವುದನ್ನು ನೋಡು ! ಆದರೆ ದ್ವಂದ್ವಯುದ್ಧದಲ್ಲಿರುವಾಗ ನಿನ್ನನ್ನು ನಾನು ಗುರುತಿಸು ವಂತೆ ಒಂದು ಚಿಹ್ನೆಯನ್ನು ಮಾಡಿಕೊಳ್ಳಬೇಕು (೩೭-೩೮) ಲಕ್ಷ್ಮಣ, ಮಂಗಳಕರವಾದ ಈ ನಾಗಪುಷ್ಪೀಲತೆಯು ಚೆನ್ನಾಗಿ ಅರಳಿದೆ. ಮಹಾತ್ಮನಾದ ಸುಗ್ರೀವನ ಕೊರಳಿಗೆ ಇದನ್ನು ಹಾಕು" ಎಂದು ಹೇಳಿದನು. ಆಗ ಲಕ್ಷ್ಮಣನು ಗಿರಿತಟದಲ್ಲಿ ಅರಳಿನಿಂತಿದ್ದ ನಾಗಪುಷ್ಪೀಲತೆಯನ್ನು ತಂದು ಸುಗ್ರೀವನ ಕೊರಳಿಗೆ ಹಾಕಿದನು (೩೯-೪೦). ತೇಜಸ್ವಿಯಾಗಿ (ಹೇಮ ಪಿಂಗಳವರ್ಣನಾಗಿದ್ದ) ಸುಗ್ರೀವನು ಕಂಠದಲ್ಲಿದ್ದ ನಾಗಪುಷ್ಪೀಮಾಲೆಯಿಂದ ವಿರಾಜಿಸಿದನು ; ಸಾಯಂಕಾಲದಲ್ಲಿ ಬಲಾಕೆಗಳೊಡಗೂಡಿದ ಹೊಂಬಣ್ಣದ ಮೇಘದಂತೆ ಕಾಣಿಸಿದನು (೪೧) ಶ್ರೀರಾಮನ ಮಾತಿನಿಂದ ಸುಗ್ರೀವನಿಗೆ

**ವಿಭ್ರಾಜಮಾನೋ ವಪುಷಾ ರಾಮವಾಕ್ಯಸಮಾಹಿತಃ ।**
**ಜಗಾಮ ಸಹ ರಾಮೇಣ ಕಿಷ್ಕಿಂಧಾಂ ವಾಲಿಪಾಲಿತಾಮ್ ॥ ೪೨**

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ದ್ವಾದಶಃ ಸರ್ಗಃ



## ತ್ರಯೋದಶಃ ಸರ್ಗಃ

ಸಪ್ತಜನಾಶ್ರಮಪ್ರಣಾಮಃ

**ಋಶ್ಯಮೂಕಾತ್ ಸ ಧರ್ಮಾತ್ಮಾ ಕಿಷ್ಕಿಂಧಾಂ ಲಕ್ಷ್ಮಣಾಗ್ರಜಃ ।**
**ಜಗಾಮ ಸಹಸುಗ್ರೀವೋ ವಾಲಿವಿಕ್ರಮಪಾಲಿತಾಮ್ ॥ ೧**

**ಸಮುದ್ಯಮ್ಯ ಮಹಚ್ಚಾಪಂ ರಾಮಃ ಕಾಂಚನಭೂಷಿತಮ್ ।**
**ಶರಾಂಶ್ಚಾದಿತ್ಯಸಂಕಾಶಾನ್ ಗೃಹೀತ್ವಾ ರಣಸಾಧಕಾನ್ ॥ ೨**

---

ಸಮಾಧಾನವಾಯಿತು ದೇಹದಲ್ಲಿ ಉತ್ಸಾಹ ಹೊಮ್ಮಿತು ಅವನು ಶ್ರೀರಾಮನೊಡನೆ ವಾಲಿಪಾಲಿತವಾದ ಕಿಷ್ಕಿಂಧೆಗೆ ಹೊರಟನು (೪೨).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಹನ್ನೆರಡನೆಯ ಸರ್ಗ



## ಸರ್ಗ ೧೩

ಶ್ರೀರಾಮನು ಲಕ್ಷ್ಮಣ ಸುಗ್ರೀವಾದಿಗಳೊಡನೆ ಪುನಃ ಕಿಷ್ಕಿಂಧೆಗೆ ಹೋಗುವುದು. ದಾರಿಯಲ್ಲಿ ಸಪ್ತಜನರೆಂಬ ಋಷಿಗಳ ಆಶ್ರಮವನ್ನು ಕಂಡು ವಂದಿಸುವುದು.

ಹೀಗೆ ಧರ್ಮಾತ್ಮನಾದ ಶ್ರೀರಾಮನು ಋಷ್ಯಮೂಕದಿಂದ ಸುಗ್ರೀವನೊಡನೆ ಹೊರಟು, ವಾಲಿವಿಕ್ರಮದಿಂದ ರಕ್ಷಿತವಾದ ಕಿಷ್ಕಿಂಧೆಯ ಕಡೆಗೆ ಹೋಗುತ್ತಿದ್ದನು. ಅವನು ಸುವರ್ಣಭೂಷಿತವಾದ ತನ್ನ ಮಹಾಧನುಸ್ಸನ್ನು ಎತ್ತಿಹಿಡಿದು, ಸೂರ್ಯನಂತೆ ಮಿರುಗುತ್ತಿದ್ದ ಯುದ್ಧಸಾಧನಗಳಾದ ಶರ

ಅಗ್ರತಸ್ತು ಯಯೌ ತಸ್ಯ ರಾಘವಸ್ಯ ಮಹಾತ್ಮನಃ ।
ಸುಗ್ರೀವಃ ಸಂಹತಗ್ರೀವೋ ಲಕ್ಷ್ಮಣಶ್ಚ ಮಹಾಬಲಃ ॥ ೩
ಪೃಷ್ಠತೋ ಹನುಮಾನ್ ವೀರೋ ನಲೋ ನೀಲಶ್ಚ ವಾನರಃ ।
ತಾರಶ್ಚೈವ ಮಹಾತೇಜಾ ಹರಿಯೂಥಪಯೂಥಪಃ ॥ ೪
ತೇ ವೀಕ್ಷಮಾಣಾ ವೃಕ್ಷಾಂಶ್ಚ ಪುಷ್ಪಭಾರಾವಲಂಬಿನಃ ।
ಪ್ರಸನ್ನಾಂಬುವಹಾಶ್ಚೈವ ಸರಿತಃ ಸಾಗರಂಗಮಾಃ ॥ ೫
ಕಂದರಾಣಿ ಚ ಶೈಲಾಂಶ್ಚ ನಿರ್ದರಾಣಿ ಗುಹಾಸ್ತಥಾ ।
ಶಿಖರಾಣಿ ಚ ಮುಖ್ಯಾನಿ ದರೀಶ್ಚ ಪ್ರಿಯದರ್ಶನಾಃ ॥ ೬
ವೈದೂರ್ಯವಿಮಲೈಸ್ತೋಯೈಃ ಪದ್ಮೈಶ್ಚಾಕೋಶಕುಡ್ಮಲೈಃ ।
ಶೋಭಿತಾನ್ ಸಜಲಾನ್ ಮಾರ್ಗೇ ತಟಾಕಾಂಶ್ಚ ವ್ಯಲೋಕಯನ್ ॥
ಕಾರಂಡೈಃ ಸಾರಸೈರ್ಹಂಸೈರ್ವಂಜುಲೈರ್ಜಲಕುಕ್ಕುಟೈಃ ।
ಚಕ್ರವಾಕೈಸ್ತಥಾ ಚಾನ್ಯೈಃ ಶಕುನೈರುಪನಾದಿತಾನ್ ॥ ೮
ಮೃದುಶಷ್ಪಾಂಕುರಾಹಾರಾನ್ನಿರ್ಭಯಾನ್ ವನಗೋಚರಾನ್ ।
ಚರತಃ ಸರ್ವತೋಽಪಶ್ಯನ್ ಸ್ಥಲೀಷು ಹರಿಣಾನ್ ಸ್ಥಿತಾನ್ ॥ ೯

ಗಳನ್ನು ಹಿಡಿದಿದ್ದನು (೧-೨) ಶ್ರೀರಾಮನೆದುರಿಗೆ ಸುಗ್ರೀವನು ನಾಗಪುಷ್ಪೀ ಲತೆಯನ್ನು ಕೊರಳಿಗೆ ಬಿಗಿದುಕಟ್ಟಿಕೊಂಡು ಹೋಗುತ್ತಿದ್ದನು. ಅವನ ಬಳಿ ಬಲಾಢ್ಯನಾದ ಲಕ್ಷ್ಮಣನಿದ್ದನು. ಶ್ರೀರಾಮನ ಹಿಂದುಗಡೆ ವೀರರಾದ ಹನುಮಂತ, ನಳ, ನೀಲರೆಂಬ ವಾನರರೂ ವಾನರಸೇನಾಪತಿಯಾದ ತಾರನೂ ಬರುತ್ತಿದ್ದರು (೩-೪). ಅವರೆಲ್ಲರೂ ಮಾರ್ಗದಲ್ಲಿ ಹೂಗಳ ಹೊರೆಯಿಂದ ಬಳುಕುತ್ತಿದ್ದ ಮರಗಳನ್ನೂ, ಸಮುದ್ರಗಾಮಿಗಳಾದ ತಿಳಿನೀರಿನ ಹೊಳೆಗಳನ್ನೂ, ಕೃತ್ರಿಮ ಗುಹೆ, ಬೆಟ್ಟ, ಬಿರುಕಲು, ಗವಿ, ಗಿರಿಶೃಂಗ, ಆಳವಾದ ಗುಡ್ಡದ ಸಂದು ಮುಂತಾದವನ್ನೂ ನೋಡುತ್ತ ನಾಗಿದರು (೫-೬). ವೈಡೂರ್ಯದಂತೆ ಸ್ವಚ್ಛವಾದ ನೀರಿನಿಂದಲೂ ಅರೆಬಿರಿದ ತಾವರೆಗಳಿಂದಲೂ ರಮ್ಯವಾದ ಕೆರೆಗಳನ್ನು ದಾರಿಯಲ್ಲಿ ವೀಕ್ಷಿಸಿದರು. ಅವು ಕಾರಂಡವ, ನಾರಸ, ಹಂಸ, ವಂಜುಲ, ನೀರುಕೋಳಿ, ಚಕ್ರವಾಕ ಮೊದಲಾದ ಪಕ್ಷಿಗಳ ಕೂಗಾಟದಿಂದ ಮನೋಹರವಾಗಿದ್ದವು (೭-೮). ವನಮಧ್ಯದಲ್ಲಿದ್ದ

ತಥಾಕನ್ಯೈರಿಣಶ್ಚಾಪಿ ಶುಕ್ಲದಂತವಿಭೂಷಿತಾನ್ ।
ಘೋರಾನೇಕಚರಾನ್ ವನ್ಯಾನ್ ದ್ವಿರದಾನ್ ಕೂಲಘಾತಿನಃ ॥ ೧೦
ಮತ್ತಾನ್ ಗಿರಿತಟೋತ್ಕೃಷ್ಟಾನ್ ಜಂಗಮಾನಿವ ಪರ್ವತಾನ್ ।
ವಾರಣಾನ್ ವಾರಿದಪ್ರಖ್ಯಾನ್ ಮಹೀರೇಣುಸಮುಕ್ಷಿತಾನ್ ॥ ೧೧
ವನೇ ವನಚರಾಂಶ್ಚಾನ್ಯಾನ್ ಖೇಚರಾಂಶ್ಚ ವಿಹಂಗಮಾನ್ ।
ಪಶ್ಯಂತಸ್ತ್ವರಿತಾ ಜಗ್ಮುಃ ಸುಗ್ರೀವವಶವರ್ತಿನಃ ॥ ೧೨
ತೇಷಾಂ ತು ಗಚ್ಛತಾಂ ತತ್ರ ತ್ವರಿತಂ ರಘುನಂದನಃ ।
ದ್ರುಮಷಂಡಂ ವನಂ ದೃಷ್ಟ್ವಾ ರಾಮಃ ಸುಗ್ರೀವಮಬ್ರವೀತ್ ॥ ೧೩
ಏಷ ಮೇಘ ಇವಾಕಾಶೇ ವೃಕ್ಷಷಂಡಃ ಪ್ರಕಾಶತೇ ।
ಮೇಘಸಂಘಾತವಿಪುಲಃ ಪರ್ಯಂತಕದಲೀವೃತಃ ॥ ೧೪
ಕಿಮೇತತ್ ಜ್ಞಾತುಮಿಚ್ಛಾಮಿ ಸಖೇ ಕೌತೂಹಲಂ ಹಿ ಮೇ ।
ಕೌತೂಹಲಾಪನಯನಂ ಕರ್ತುಮಿಚ್ಛಾಮ್ಯಹಂ ತ್ವಯಾ ॥ ೧೫

---

ಹುಲ್ಲುಗಾವಲಿನಲ್ಲಿ ಎಳಗರಿಕೆಯನ್ನು ಮೇಯುತ್ತ ಅಂಜಿಕೆಯಿಲ್ಲದೆ ಅಲೆಯುತ್ತಿದ್ದ ಹುಲ್ಲೆಗಳನ್ನು ಕಂಡರು (೯) ಅಲ್ಲದೆ ಕೊಳಗಳ ಕೂಲಗಳನ್ನುರುಳಿಸಿ ಕೊಳದ ವೈರಿಗಳೆನಿಸಿದ ಘೋರವಾದ ಕಾಡಾನೆಗಳನ್ನು ಶ್ರೀರಾಮಾದಿಗಳು ಅವಲೋಕಿಸಿದರು ಹೊಳೆವ ಬಿಳಿದಂತಗಳಿಂದ ಭೂಷಿತವಾದ ಆ ದಂತಿಗಳು ಒಂಟಿಯಾಗಿ ಸಂಚರಿಸುತ್ತಿದ್ದವು (೧೦) ಕರಿಯ ಮೋಡಗಳಂತಿದ್ದ ಆ ಮದ್ದಾನೆಗಳು ಗಿರಿತಟಗಳನ್ನು ತಿವಿಯುತ್ತ ಧೂಳನ್ನು ಎರಚಿಕೊಳ್ಳುತ್ತ ಅಲೆದಾಡುವ ಬೆಟ್ಟಗಳಂತೆ ತೋರುತ್ತಿದ್ದವು ಅವರೆಲ್ಲರೂ ವನದಲ್ಲಿ ವಿವಿಧ ವನಚರಗಳನ್ನೂ ಗಗನದಲ್ಲಿ ಬಗೆಬಗೆಯ ಹಕ್ಕಿಗಳನ್ನೂ ನೋಡುತ್ತ, ಸುಗ್ರೀವನನ್ನನುಸರಿಸಿ ಬೇಗ ಬೇಗನೆ ಹೋದರು (೧೧-೧೨). ಅವರು ಹೀಗೆ ಹೋಗುತ್ತಿರುವಾಗ ಮರಗಳಿಂದ ಕಿಕ್ಕಿರಿದ ವನವೊಂದು ಕಾಣಿಸಿತು. ಅದನ್ನು ನೋಡಿ ರಘುನಂದನನು "ಸುಗ್ರೀವ, ಆಕಾಶದಲ್ಲಿ ರಾಜಿಸುವ ಮೇಘರಾಜಿಯಂತೆ ಮರಗಳ ಗುಂಪೊಂದು ಗೋಚರಿಸುವುದಷ್ಟೆ. ಮೇಘರಾಶಿಯಂತೆ ವಿಪುಲವಾದ ವನವು ಬಾಳೆಯಮರಗಳ ಹೊರವಲಯದಿಂದ ವಿರಾಜಿಸುತ್ತಿದೆ (೧೩-೧೪). ಇದೇನೆಂದು ತಿಳಿಯಲು ನನ್ನ ಮನವೆಳಸುತ್ತಿದೆ. ಮಿತ್ರ,

ತಸ್ಯ ತದ್ವಚನಂ ಶ್ರುತ್ವಾ ರಾಘವಸ್ಯ ಮಹಾತ್ಮನಃ ।
ಗಚ್ಛನ್ನೇವಾಚಚಕ್ಷೇಽಥ ಸುಗ್ರೀವಸ್ತನ್ಮಹದ್ವನಮ್ ॥ ೧೬

ಏತದ್ರಾಘವ ವಿಸ್ತೀರ್ಣಮಾಶ್ರಮಂ ಶ್ರಮನಾಶನಮ್ ।
ಉದ್ಯಾನವನಸಂಪನ್ನಂ ಸ್ವಾದುಮೂಲಫಲೋದಕಮ್ ॥ ೧೭

ಅತ್ರ ಸಪ್ತಜನಾ ನಾಮ ಮುನಯಃ ಸಂಶಿತವ್ರತಾಃ ।
ಸಪ್ತೈವಾಸನ್ನಧಃಶೀರ್ಷಾ ನಿಯತಂ ಜಲಶಾಯಿನಃ ॥ ೧೮

ಸಪ್ತರಾತ್ರಕೃತಾಹಾರಾ ವಾಯುನಾ ವನವಾಸಿನಃ ।
ದಿವಂ ವರ್ಷಶತೈರ್ಯಾತಾಃ ಸಪ್ತಭಿಃ ಸಕಲೇವರಾಃ ॥ ೧೯

ತೇಷಾಮೇವಂಪ್ರಭಾವೇಣ ದ್ರುಮಪ್ರಾಕಾರಸಂವೃತಮ್ ।
ಆಶ್ರಮಂ ಸುದುರಾಧರ್ಷಮಪಿ ಸೇಂದ್ರೈಃ ಸುರಾಸುರೈಃ ॥ ೨೦

ಪಕ್ಷಿಣೋ ವರ್ಜಯಂತ್ಯೇತತ್ತಥಾನ್ಯೇ ವನಚಾರಿಣಃ ।
ವಿಶಂತಿ ಮೋಹಾದ್ಯೇಽಪ್ಯತ್ರ ನಿವರ್ತಂತೇ ನ ತೇ ಪುನಃ ॥ ೨೧

---

ನನಗೆ ಕುತೂಹಲವಾಗಿದೆ ನನ್ನ ಕುತೂಹಲವನ್ನು ಕಳೆಯುವೆಯಾ ?" ಎಂದು ಕೇಳಿದನು (೧೫). ಮಹಾತ್ಮನಾದ ರಾಘವನ ವಚನವನ್ನಾಲಿಸಿ ಸುಗ್ರೀವನು ಮುಂದೆ ನಡೆಯುತ್ತಲೇ ನುಡಿದನು: "ರಾಘವ, ಇದೊಂದು ವಿಶಾಲವಾದ ಋಷ್ಯಾಶ್ರಮ. ಹೂದೋಟಗಳಿಂದಲೂ ಸಿಹಿಯಾದ ಫಲ ಮೂಲಜಲಗಳಿಂದಲೂ ಯುಕ್ತವಾಗಿ ಶ್ರಮವನ್ನು ನೀಗಿಸುತ್ತಿದೆ ಇಲ್ಲಿ ಸಪ್ತಜನರೆಂಬ ಮುನಿಗಳಿದ್ದರು ಅವರ ಸಂಖ್ಯೆಯೇ ಸಪ್ತ. ಅವರು ತೀಕ್ಷ್ಣವಾದ ವ್ರತವನ್ನು ಹಿಡಿದು ಸರ್ವದಾ ನೀರಿನಲ್ಲಿ ತಲೆಕೆಳಗಾಗಿ ತಪಸ್ಸು ಮಾಡುತ್ತಿದ್ದರು (೧೬-೧೮) ಏಳು ರಾತ್ರಿಗಳಿಗೊಂದುಸಲ ವಾಯು ಸೇವನೆಯೇ ಅವರಿಗೆ ಆಹಾರವಾಗಿತ್ತು. ಹೀಗೆ ಏಳು ವರ್ಷಗಳವರೆಗೆ ತಪಸ್ಸನ್ನಾಚರಿಸಿ ಅವರು ಸಶರೀರವಾಗಿ ಸ್ವರ್ಗವನ್ನು ಪಡೆದರು (೧೯). ಮರಗಳೇ ಪ್ರಾಕಾರವಾಗಿರುವ ಈ ಆಶ್ರಮವನ್ನು ದೇವಾಸುರರು ಇಂದ್ರ ನೊಡಗೂಡಿ ಬಂದರೂ ಪ್ರವೇಶಿಸಲಾರರು! ಆ ಋಷಿಗಳ ಪ್ರಭಾವ ಅಂತಹದು ಪಕ್ಷಿಗಳೂ ವನಜಂತುಗಳೂ ಆಶ್ರಮದೊಳಗೆ ಕಾಲಿಡುವುದಿಲ್ಲ. ತಿಳಿಯದೆ ಕಾಲಿಟ್ಟರೆ ಪುನಃ ಅವು ಹಿಂದಿರುಗಿ ಬರುವುದಿಲ್ಲ! (೨೦-೨೧).

ವಿಭೂಷಣರವಾಶ್ಚಾತ್ರ ಶ್ರೂಯಂತೇ ಸಕಲಾಕ್ಷರಾಃ ।
ತೂರ್ಯಗೀತಸ್ವನಾಶ್ಚಾತ್ರ ಗಂಧೋ ದಿವ್ಯಶ್ಚ ರಾಘವ ॥ ೨೨

ತ್ರೇತಾಗ್ನಯೋಽಪಿ ದೀಪ್ಯಂತೇ ಧೂಮೋ ಹ್ಯೇಷ ಪ್ರದೃಶ್ಯತೇ ।
ವೇಷ್ಟಯನ್ನಿವ ವೃಕ್ಷಾಗ್ರಾನ್ ಕಪೋತಾಂಗಾರುಣೋ ಘನಃ ॥ ೨೩

ಏತೇ ವೃಕ್ಷಾಃ ಪ್ರಕಾಶಂತೇ ಧೂಮಸಂಸಕ್ತಮಸ್ತಕಾಃ ।
ಮೇಘಜಾಲಪ್ರತಿಚ್ಛನ್ನಾ ವೈದೂರ್ಯಗಿರಯೋ ಯಥಾ ॥ ೨೪

ಕುರು ಪ್ರಣಾಮಂ ಧರ್ಮಾತ್ಮಂಸ್ತಾನ್ ಸಮುದ್ದಿಶ್ಯ ರಾಘವ ।
ಲಕ್ಷ್ಮಣೇನ ಸಹ ಭ್ರಾತ್ರಾ ಪ್ರಯತಃ ಸಂಯತಾಂಜಲಿಃ ॥ ೨೫

ಪ್ರಣಮಂತಿ ಹಿ ಯೇ ತೇಷಾಂ ಮುನೀನಾಂ ಭಾವಿತಾತ್ಮನಾಮ್ ।
ನ ತೇಷಾಮಶುಭಂ ಕಿಂಚಿಚ್ಛರೀರೇ ರಾಮ ದೃಶ್ಯತೇ ॥ ೨೬

ತತೋ ರಾಮಃ ಸಹ ಭ್ರಾತ್ರಾ ಲಕ್ಷ್ಮಣೇನ ಕೃತಾಂಜಲಿಃ ।
ಸಮುದ್ದಿಶ್ಯ ಮಹಾತ್ಮಾನಸ್ತಾನೃಷೀನಭ್ಯವಾದಯತ್ ॥ ೨೭

---

ಶ್ರೀರಾಮ, ಇಲ್ಲಿ (ಅಪ್ಸರಃಸ್ತ್ರೀಯರ) ಒಡವೆಗಳ ಝಣಝಣಶಬ್ದವೂ ಅವ್ಯಕ್ತಮಧುರವಾದ ವಾದ್ಯಗೀತಧ್ವನಿಯೂ ಕೇಳಿಸುತ್ತವೆ! ದಿವ್ಯಗಂಧವು ಹರಡಿರುತ್ತದೆ (೨೨). ತ್ರೇತಾಗ್ನಿಗಳು ಉರಿಯುತ್ತಲೇ ಇವೆ. ಅದೋ, ಹೊಗೆ ಕಾಣುವುದು, ನೋಡು! ಪಾರಿವಾಳದಂತೆ ಕಂದುಬಣ್ಣದ ಹೊಗೆಯು ದಟ್ಟವಾಗಿ, ಮರದ ತುದಿಗಳನ್ನು ಬಳಸುತ್ತ ಏಳುತ್ತಿದೆ ಹೊಗೆದುಂಬಿದ ತುದಿಯುಳ್ಳ ಮರಗಳು ಮೇಘಜಾಲದಿಂದ ಮುಚ್ಚಿದ ವೈಡೂರ್ಯಗಿರಿಗಳಂತೆ ಕಾಣುತ್ತವೆ (೨೩-೨೪). ಧರ್ಮಾತ್ಮ-ರಾಘವ, ಆ ಸಪ್ತಜನಮುನಿಗಳನ್ನು ಉದ್ದೇಶಿಸಿ ಭಕ್ತಿಯಿಂದ ಕೈಮುಗಿದು ನಮಸ್ಕಾರಮಾಡು. ನಿನ್ನ ತಮ್ಮನಾದ ಲಕ್ಷ್ಮಣನೂ ನಮಸ್ಕರಿಸಲಿ. ಶುದ್ಧಾತ್ಮರಾದ ಆ ಋಷಿಗಳಿಗೆ ಯಾರು ಪ್ರಣಾಮಗಳನ್ನರ್ಪಿಸುವರೋ ಅವರ ದೇಹದಲ್ಲಿ, ಶ್ರೀರಾಮ, ಯಾವ ಅಶುಭವೂ ಉಳಿಯದು" ಎಂದು ಹೇಳಿದನು (೨೫-೨೬). ಆಗ ಶ್ರೀರಾಮನು ತಮ್ಮನಾದ ಲಕ್ಷ್ಮಣನೊಡನೆ ಮಹಾತ್ಮರಾದ ಆ ಋಷಿಗಳಿಗೆ ಕೈಮುಗಿದು ಪ್ರಣಾಮಗಳನ್ನರ್ಪಿಸಿದನು. ಧರ್ಮಾತ್ಮನಾದ ಶ್ರೀರಾಮ, ಲಕ್ಷ್ಮಣ,

ಅಭಿವಾದ್ಯ ತು ಧರ್ಮಾತ್ಮಾ ರಾಮೋ ಭ್ರಾತಾ ಚ ಲಕ್ಷ್ಮಣಃ ।
ಸುಗ್ರೀವೋ ವಾನರಾಶ್ಚೈವ ಜಗ್ಮುಃ ಸಂಹೃಷ್ಟಮಾನಸಾಃ ॥ ೨೮

ತೇ ಗತ್ವಾ ದೂರಮಧ್ವಾನಂ ತಸ್ಮಾತ್ ಸಪ್ತಜನಾಶ್ರಮಾತ್ ।
ದದೃಶುಸ್ತಾಂ ದುರಾಧರ್ಷಾಂ ಕಿಷ್ಕಿಂಧಾಂ ವಾಲಿಪಾಲಿತಾಮ್ ॥ ೨೯

ತತಸ್ತು ರಾಮಾನುಜರಾಮವಾನರಾಃ
ಪ್ರಗೃಹ್ಯ ಶಸ್ತ್ರಾಣ್ಯುದಿತಾರ್ಕತೇಜಸಃ ।
ಪುರೀಂ ಸುರೇಶಾತ್ಮಜವೀರ್ಯಪಾಲಿತಾಂ
ವಧಾಯ ಶತ್ರೋಃ ಪುನರಾಗತಾಃ ಸಹ ॥ ೩೦

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ತ್ರಯೋದಶಃ ಸರ್ಗಃ



ಸುಗ್ರೀವರೂ ಹನುಮಂತನೇ ಮೊದಲಾದ ವಾನರರೂ ಮುನಿಗಳಿಗೆ ವಂದನೆಗಳನ್ನರ್ಪಿಸಿ ಸಂತುಷ್ಟಹೃದಯರಾದರು (೨೭-೨೮) ಅನಂತರ ಅವರೆಲ್ಲರೂ ಸಪ್ತಜನಾಶ್ರಮದಿಂದ ಬಹುದೂರ ನಡೆದುಹೋಗಿ, ವಾಲಿಪಾಲಿತವಾಗಿ ದುರ್ಗಮವಾದ ಕಿಷ್ಕಿಂಧೆಯನ್ನು ಕಂಡರು (೨೯). ಉದಯಿಸಿ ಬಂದ ಸೂರ್ಯನಂತೆ ಮಹಾತೇಜಸ್ವಿಗಳಾದ ಶ್ರೀರಾಮ ಲಕ್ಷ್ಮಣರೂ ಸುಗ್ರೀವನೇ ಮೊದಲಾದ ವಾನರರೂ ಆಯುಧಗಳನ್ನು ಹಿಡಿದಿದ್ದರು. ಅವರು ಇಂದ್ರಪುತ್ರನಾದ ವಾಲಿಯ ವೀರ್ಯದಿಂದ ಸುರಕ್ಷಿತವಾಗಿದ್ದ ಕಿಷ್ಕಿಂಧೆಗೆ ಶತ್ರುವನ್ನು ವಧಿಸುವುದಕ್ಕಾಗಿ ಪುನಃ ಬಂದು ಸೇರಿದರು (೩೦)

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಹದಿಮೂರನೆಯ ಸರ್ಗ



## ಚತುರ್ದಶಃ ಸರ್ಗಃ

### ಸುಗ್ರೀವಗರ್ಜನಮ್

ಸರ್ವೇ ತೇ ತ್ವರಿತಂ ಗತ್ವಾ ಕಿಷ್ಕಿಂಧಾಂ ವಾಲಿಪಾಲಿತಾಮ್ ।
ವೃಕ್ಷೈರಾತ್ಮಾನಮಾವೃತ್ಯ ವ್ಯತಿಷ್ಠನ್ ಗಹನೇ ವನೇ ॥ ೧

ವಿಸಾರ್ಯ ಸರ್ವತೋ ದೃಷ್ಟಿಂ ಕಾನನೇ ಕಾನನಪ್ರಿಯಃ ।
ಸುಗ್ರೀವೋ ವಿಪುಲಗ್ರೀವಃ ಕ್ರೋಧಮಾಹಾರಯದ್ಭೃಶಮ್ ॥ ೨

ತತಃ ಸ ನಿನದಂ ಘೋರಂ ಕೃತ್ವಾ ಯುದ್ಧಾಯ ಚಾಹ್ವಯತ್ ।
ಪರಿವಾರೈಃ ಪರಿವೃತೋ ನಾದೈರ್ಭಿಂದನ್ನಿವಾಂಬರಮ್ ॥ ೩

ಗರ್ಜನ್ನಿವ ಮಹಾಮೇಘೋ ವಾಯುವೇಗಪುರಃಸರಃ ।
ಅಥ ಬಾಲಾರ್ಕಸದೃಶೋ ದೃಪ್ತಸಿಂಹಗತಿಸ್ತದಾ ॥ ೪

ದೃಷ್ಟ್ವಾ ರಾಮಂ ಕ್ರಿಯಾದಕ್ಷಂ ಸುಗ್ರೀವೋ ವಾಕ್ಯಮಬ್ರವೀತ್ ।
ಹರಿವಾಗುರಯಾ ವ್ಯಾಪ್ತಾಂ ತಪ್ತಕಾಂಚನತೋರಣಾಮ್ ॥ ೫

### ಸರ್ಗ ೧೪

ವಾಲಿಯನ್ನು ವಧಿಸಬೇಕೆಂದು ಸುಗ್ರೀವನು ಶ್ರೀರಾಮನನ್ನು ಪ್ರಾರ್ಥಿಸುವುದು
ಶ್ರೀರಾಮನಿಂದ ಅಭಯಪ್ರದಾನ. ವಾಲಿಯನ್ನು
ಕರೆಯುವುದಕ್ಕಾಗಿ ಸುಗ್ರೀವನ ಗರ್ಜನೆ

ಅವರೆಲ್ಲರೂ ಕಿಷ್ಕಿಂಧೆಗೆ ಹೋಗಿ ಸಮೀಪದಲ್ಲಿದ್ದ ನಿಬಿಡಾರಣ್ಯದಲ್ಲಿ ಮರಗಳಿಂದ ಮರೆಯಾಗಿ ನಿಂತರು ವನಪ್ರಿಯನಾದ ಸುಗ್ರೀವನು ವನದ ಸುತ್ತಲೂ ಕಣ್ಣು ಹೊರಳಿಸಿ ನೋಡಿದನು ಕೊಬ್ಬಿದ ಕೊರಳಿನ ಸುಗ್ರೀವನು ಕೋಪಾವಿಷ್ಟನಾದನು (೧–೨) ಅವನು ತನ್ನ ಪರಿವಾರದ ವಾನರರೊಂದಿಗೆ ಘೋರವಾಗಿ ಗರ್ಜಿಸಿ ವಾಲಿಯನ್ನು ಯುದ್ಧಕ್ಕೆ ಆಹ್ವಾನಿಸಿದನು ಬಿರುಗಾಳಿಯೊಡನೆ ಮೆರೆಯುತ್ತ ಬರುವ ಕಾರ್ಮೋಡದಂತೆ ಗುಡುಗಿದನು. ಮುಗಿಲು ಬಿರಿಯುವಂತೆ ಗರ್ಜನೆಯು ಮೊಳಗಿತು (೩–೪). ಬಾಲಸೂರ್ಯನಂತೆ ಬೆಳಗುತ್ತಿದ್ದ ಸುಗ್ರೀವನು ದರ್ಪೋದ್ಧತವಾದ ಸಿಂಹದಂತೆ ಹೆಜ್ಜೆಯಿಡುತ್ತ ಬಂದು ಶ್ರೀರಾಮನನ್ನುದ್ದೇಶಿಸಿ “ಶ್ರೀರಾಮ, ವಾಲಿಯ ನಗರವಾದ

ಪ್ರಾಪ್ತಾಃ ಸ್ಮ ಧ್ವಜಯಂತ್ರಾಢ್ಯಾಂ ಕಿಷ್ಕಿಂಧಾಂ ವಾಲಿನಃ ಪುರೀಮ್ ।
ಪ್ರತಿಜ್ಞಾ ಯಾ ತ್ವಯಾ ವೀರ ಕೃತಾ ವಾಲಿವಧೇ ಪುರಾ ॥ ೬

ಸಫಲಾಂ ತಾಂ ಕುರು ಕ್ಷಿಪ್ರಂ ಲತಾಂ ಕಾಲ ಇವಾಗತಃ ।
ಏವಮುಕ್ತಸ್ತು ಧರ್ಮಾತ್ಮಾ ಸುಗ್ರೀವೇಣ ಸ ರಾಘವಃ ॥ ೭

ತಮಥೋವಾಚ ಸುಗ್ರೀವಂ ವಚನಂ ಶತ್ರುಸೂದನಃ ।
ಕೃತಾಭಿಜ್ಞಾನಚಿಹ್ನಸ್ತ್ವಮನಯಾ ಗಜಸಾಹ್ವಯಾ ॥ ೮

ಲಕ್ಷ್ಮಣೇನ ಸಮುತ್ಪಾಟ್ಯ ಯೈಷಾ ಕಂಠೇ ಕೃತಾ ತವ ।
ಶೋಭಸೇ ಹ್ಯಧಿಕಂ ವೀರ ಲತಯಾ ಕಂಠಸಕ್ತಯಾ ॥ ೯

ವಿಪರೀತ ಇವಾಕಾಶೇ ಸೂರ್ಯೋ ನಕ್ಷತ್ರಮಾಲಯಾ ।
ಅದ್ಯ ವಾಲಿಸಮುತ್ಥಂ ತೇ ಭಯಂ ವೈರಂ ಚ ವಾನರ ॥ ೧೦

ಏಕೇನಾಹಂ ಪ್ರಮೋಕ್ಷ್ಯಾಮಿ ಬಾಣಮೋಕ್ಷೇಣ ಸಂಯುಗೇ ।
ಮಮ ದರ್ಶಯ ಸುಗ್ರೀವ ವೈರಿಣಂ ಭ್ರಾತೃರೂಪಿಣಮ್ ॥ ೧೧

---

ಕಿಷ್ಕಿಂಧೆಗೆ ನಾವು ಬಂದಿದ್ದೇವೆ ಬೀಸಿದ ಬಲೆಯಂತೆ ವಾನರರು ವ್ಯಾಪಿಸಿ ಇದನ್ನು ಕಾಯುತ್ತಿದ್ದಾರೆ. ಪುರದ್ವಾರಗಳು ಸುವರ್ಣಮಯವಾಗಿವೆ (೫) ಇದು ಧ್ವಜಗಳಿಂದ ವ್ಯಾಪ್ತವಾಗಿ ಯುದ್ಧಯಂತ್ರಗಳಿಂದ ಸುರಕ್ಷಿತವಾಗಿದೆ ವೀರಾಗ್ರಣಿ, ವಾಲಿಯನ್ನು ವಧಿಸುವೆನೆಂದು ಪ್ರತಿಜ್ಞೆಮಾಡಿದ್ದೀಯೆ ಫಲ ಕಾಲವು ಲತೆಯನ್ನು ಫಲಯುಕ್ತವಾಗಿ ಮಾಡಿಯೇ ತೀರುವಂತೆ, ನೀನು ನಿನ್ನ ಪ್ರತಿಜ್ಞೆಯನ್ನು ಸಫಲವಾಗಿ ಮಾಡಬೇಕು" ಎಂದು ನಿವೇದಿಸಿದನು (೬-೭) ಆಗ ಧರ್ಮಾತ್ಮನೂ ಶತ್ರುಸೂದನನೂ ಆದ ರಾಘವನು "ಸುಗ್ರೀವ, ನಿನ್ನನ್ನು ಗುರುತಿಸಲು ಅನುಕೂಲಿಸುವಂತೆ ಲಕ್ಷ್ಮಣನು ನಾಗಪುಷ್ಪೀಲತೆಯನ್ನು ಕಿತ್ತು ನಿನ್ನ ಕೊರಳಿಗೆ ಹಾಕಿದ್ದಾನೆ. ಸೂರ್ಯನು ನಕ್ಷತ್ರಮಾಲೆಯಿಂದ ಪರಿವೃತನಾದಂತೆ,* ನೀನು ಈ ಮಾಲೆಯಿಂದ ಅಧಿಕವಾಗಿ ಶೋಭಿಸುತ್ತಿದ್ದೀಯೆ (೮-೧೦) ವಾನರೇಂದ್ರ, ಒಂದೇ ಒಂದು ಬಾಣವನ್ನು ಪ್ರಯೋಗಿಸಿ, ವಾಲಿಯಿಂದ ನಿನಗೆ ಸಂಭವಿಸಿರುವ ಭಯ ವೈರಗಳೆರಡನ್ನೂ

---

* ಅನುಬಂಧವನ್ನು ನೋಡಿ.

**ಅದ್ಯ ವಾಲೀ ವಿನಿಹತೋ ವನಪಾಂಸುಷು ವೇಷ್ಟತೇ ।**
**ಯದಿ ದೃಷ್ಟಿಪಥಂ ಪ್ರಾಪ್ತೋ ಜೀವನ್ ಸ ವಿನಿವರ್ತತೇ ॥ ೧೨**

**ತತೋ ದೋಷೇಣ ಮಾ ಗಚ್ಛೇತ್ ಸದ್ಯೋ ಗರ್ಹೇಚ್ಚ ಮಾಂ ಭವಾನ್**
**ಪ್ರತ್ಯಕ್ಷಂ ಸಪ್ತ ತೇ ಸಾಲಾ ಮಯಾ ಬಾಣೇನ ದಾರಿತಾಃ ॥ ೧೩**

**ತೇನಾವೇಹಿ ಬಲೇನಾದ್ಯ ವಾಲಿನಂ ನಿಹತಂ ಮಯಾ ।**
**ಅನೃತಂ ನೋಕ್ತಪೂರ್ವಂ ಮೇ ವೀರ ಕೃಚ್ಛ್ರೇಽಪಿ ತಿಷ್ಠತಾ ॥ ೧೪**

**ಧರ್ಮಲೋಭಪರೀತೇನ ನ ಚ ವಕ್ಷ್ಯೇ ಕಥಂಚನ ।**
**ಸಫಲಾಂ ಚ ಕರಿಷ್ಯಾಮಿ ಪ್ರತಿಜ್ಞಾಂ ಜಹಿ ಸಂಭ್ರಮಮ್ ॥ ೧೫**

**ಪ್ರಸೂತಂ ಕಲಮಂ ಕ್ಷೇತ್ರೇ ವರ್ಷೇಣೇವ ಶತಕ್ರತುಃ ।**
**ತದಾಹ್ವಾನನಿಮಿತ್ತಂ ತ್ವಂ ವಾಲಿನೋ ಹೇಮಮಾಲಿನಃ ॥ ೧೬**

**ಸುಗ್ರೀವ ಕುರು ತಂ ಶಬ್ದಂ ನಿಷ್ಪತೇದ್ಯೇನ ವಾನರಃ ।**
**ಜಿತಕಾಶೀ ಬಲಶ್ಲಾಘೀ ತ್ವಯಾ ಚಾಧರ್ಷಿತಃ ಪುರಾ ॥ ೧೭**

---

ಇಂದೇ ತೊಡೆಯುವೆನು ! ಅಣ್ಣನೆಂದುಕೊಳ್ಳುವ ನಿನ್ನ ವೈರಿಯನ್ನು ನನಗೆ ತೋರಿಸಿದರೆ ಸಾಕು (೧೧). ಈಗಲೇ ವಾಲಿಯು ಹತನಾಗಿ ಈ ಕಾಡಿನ ಧೂಳಿಯಲ್ಲಿ ಉರುಳಾಡುವನು ! ನನ್ನ ಕಣ್ಣಿಗೆ ಬಿದ್ದಮೇಲೆ ಅವನು ಬದುಕಿ ಹಿಂದಿರುಗಿದರೆ, ಸುಗ್ರೀವ, ಆಗ ನನ್ನಮೇಲೆ ತಪ್ಪನ್ನು ಆರೋಪಿಸು ; ನನ್ನನ್ನು ನಿಂದಿಸು ನಿನ್ನ ಕಣ್ಣೆದುರಿಗೆ ಏಳು ಸಾಲವೃಕ್ಷಗಳನ್ನು ಒಂದು ಬಾಣದಿಂದ ಭೇದಿಸಿದ್ದೇನೆ (೧೨-೧೩). ಆ ಬಲದಿಂದಲೇ ಈಗ ವಾಲಿಯು ಸತ್ತನೆಂದು ತಿಳಿ. ಎಲೈ ವೀರನೆ, ಧರ್ಮವನ್ನೇ ರಕ್ಷಿಸಬೇಕೆಂಬ ದೃಢನಿಷ್ಠೆಯುಳ್ಳ ನಾನು, ಎಂತಹ ಸಂಕಟಕಾಲದಲ್ಲಿಯೂ ಸುಳ್ಳನ್ನು ಹಿಂದೆ ಹೇಳಲಿಲ್ಲ, ಮುಂದೆ ಹೇಳಲಿಕ್ಕಿಲ್ಲ. ನನ್ನ ಪ್ರತಿಜ್ಞೆಯು ಫಲಿಸುವಂತೆ ಮಾಡುವೆನು , ಹೆದರ ಬೇಡ (೧೪-೧೫). ಗದ್ದೆಯಲ್ಲಿ ಬೆಳೆದ ಬತ್ತದ ಸಸಿಗೆ ಇಂದ್ರನು ಮಳೆ ಸುರಿಸಿ ಫಲ ಬರಿಸುವಂತೆ, ನನ್ನ ಪ್ರತಿಜ್ಞೆಯು ಫಲಯುಕ್ತವಾಗುವಂತೆ ನೋಡಿ ಕೊಳ್ಳುವೆನು. ಹೇಮಮಾಲೆಯನ್ನು ಧರಿಸಿದ ವಾಲಿಯು ಹೊರಬರುವಂತೆ ಗರ್ಜಿಸು. ಜಯಶಾಲಿಯೂ ಆತ್ಮಬಲಶ್ಲಾಘಿಯೂ ಆದ ಆತನು ಮೊದಲು

ನಿಷ್ಕೃತಿಷ್ಯತ್ಯಸಂಗೇನ ವಾಲೀ ಸ ಪ್ರಿಯಸಂಯುಗಃ ।
ರಿಪೂಣಾಂ ಧರ್ಷಣಂ ಶೂರಾ ಮರ್ಷಯಂತಿ ನ ಸಂಯುಗೇ ॥ ೧೮

ಜಾನಂತಸ್ತು ಸ್ವಕಂ ವೀರ್ಯಂ ಸ್ತ್ರೀಸಮಕ್ಷಂ ವಿಶೇಷತಃ ।
ಸ ತು ರಾಮವಚಃ ಶ್ರುತ್ವಾ ಸುಗ್ರೀವೋ ಹೇಮಪಿಂಗಲಃ ॥ ೧೯

ನನರ್ದ ಕ್ರೂರನಾದೇನ ವಿನಿರ್ಭಿಂದನ್ನಿವಾಂಬರಮ್ ।
ತಸ್ಯ ಶಬ್ದೇನ ವಿತ್ರಸ್ತಾ ಗಾವೋ ಯಾಂತಿ ಹತಪ್ರಭಾಃ ॥ ೨೦

ರಾಜದೋಷಪರಾಮೃಷ್ಟಾಃ ಕುಲಸ್ತ್ರಿಯ ಇವಾಕುಲಾಃ ।
ದ್ರವಂತಿ ಚ ಮೃಗಾಃ ಶೀಘ್ರಂ ಭಗ್ನಾ ಇವ ರಣೇ ಹಯಾಃ ॥ ೨೧

ಪತಂತಿ ಚ ಖಗಾ ಭೂಮೌ ಕ್ಷೀಣಪುಣ್ಯಾ ಇವ ಗ್ರಹಾಃ ॥

ತತಃ ಸ ಜೀಮೂತಗಣಪ್ರಣಾದೋ
ನಾದಂ ಹ್ಯಮುಂಚತ್ತ್ವರಯಾ ಪ್ರತೀತಃ ।

---

ನಿನ್ನಿಂದಲೂ ಹೊಡೆತಗಳನ್ನು ತಿಂದಿದ್ದಾನೆ (೧೬-೧೭). ಆದ್ದರಿಂದ ಅವನು ಕೂಡಲೇ ಹೊರಗೆ ಬಂದೇ ಬರುತ್ತಾನೆ. ಅವನಿಗೆ ಹೋರಾಟವೆಂದರೆ ಸುಗ್ಗಿಯಲ್ಲವೆ ? ತಮ್ಮ ಶೌರ್ಯದ ಮಟ್ಟವನ್ನರಿತ ಶೂರರು ಶತ್ರುಗಳ ಆಕ್ರಮಣವನ್ನು ಎಂದಿಗೂ ಸಹಿಸರು. ಅದರಲ್ಲಿಯೂ ಹೆಂಗಸರೆದುರಿಗೆ ಶತ್ರುವಿನಿಂದಾದ ಅವಮಾನವನ್ನು ಸಹಿಸಲೇ ಆರರು" ಎಂದು ನುಡಿದನು (೧೮-೧೯). ಶ್ರೀರಾಮನ ನುಡಿಯನ್ನು ಕೇಳಿ ಹೊಂಬಣ್ಣದಿಂದ ರಂಜಿಸುತ್ತಿದ್ದ ಸುಗ್ರೀವನು ಅಂಬರವು ಇಂಬುಗೆಡುವಂತೆ ಕ್ರೂರಧ್ವನಿಯಿಂದ ಕೂಗಿದನು. ಕೂಗಿನಿಂದ ಕಂಗೆಟ್ಟು ಕಳೆಗುಂದಿದ ಹಸುಗಳು, ಅರಾಜಕರಾಜ್ಯದಲ್ಲಿ ಪರಪುರುಷರ ಪೀಡೆಗೊಳಗಾದ ಕುಲಸ್ತ್ರೀಯರಂತೆ ದಿಕ್ಕುದಿಕ್ಕಿಗೆ ಓಡಿದವು. ಕಾಡುಮೃಗಗಳು, ರಣದಲ್ಲಿ ಗಾಯಗೊಂಡು ಮುರಿದೋಡುವ ಕುದುರೆಗಳಂತೆ ಪಲಾಯನಮಾಡಿದವು. ಮಾಡಿದ ಪುಣ್ಯವು ತೀರಿದಮೇಲೆ, ದೇವಪುರುಷರು ಧರೆಗುರುಳುವಂತೆ ಹಕ್ಕಿಗಳು ನೆಲಕ್ಕೆ ಬಿದ್ದವು (೨೦-೨೧). ಶ್ರೀರಾಮನನ್ನು ನಂಬಿದ ಸೂರ್ಯಾತ್ಮಜನಾದ ಸುಗ್ರೀವನು ಮೇಘರಾಜಿಯಂತೆ

ಸೂರ್ಯಾತ್ಮಜಃ ಶೌರ್ಯವಿವೃದ್ಧತೇಜಾಃ
ಸರಿತ್ಪತಿರ್ವಾನಿಲಚಂಚಲೋರ್ಮಿಃ ॥ ೨೨

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಚತುರ್ದಶಃ ಸರ್ಗಃ

---

## ಪಂಚದಶಃ ಸರ್ಗಃ

ತಾರಾಹಿತೋಕ್ತಿಃ

ಅಥ ತಸ್ಯ ನಿನಾದಂ ತಂ ಸುಗ್ರೀವಸ್ಯ ಮಹಾತ್ಮನಃ ।
ಶುಶ್ರಾವಾಂತಃಪುರಗತೋ ವಾಲೀ ಭ್ರಾತುರಮರ್ಷಣಃ ॥ ೧

ಶ್ರುತ್ವಾ ತು ತಸ್ಯ ನಿನದಂ ಸರ್ವಭೂತಪ್ರಕಂಪನಮ್ ।
ಮದಶ್ಚೈಕಪದೇ ನಷ್ಟಃ ಕ್ರೋಧಶ್ಚಾಪತಿತೋ ಮಹಾನ್ ॥ ೨

---

ಮೊರೆಯುತ್ತಿದ್ದನು ಶೌರ್ಯದಿಂದ ಉಬ್ಬಿದ ತೇಜೋನಿಧಿಯಾದ ಸುಗ್ರೀವನು ಬಿರುಗಾಳಿಯಿಂದುಬ್ಬಿದ ಅಲೆಗಳಿಂದ ಬೀಗುವ ಅಂಭೋನಿಧಿಯಂತೆ ಅಬ್ಬರಿಸುತ್ತಿದ್ದನು (೨೨).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಹದಿನಾಲ್ಕನೆಯ ಸರ್ಗ

---

## ಸರ್ಗ ೧೫

ಸುಗ್ರೀವನ ಗರ್ಜನೆಯನ್ನು ಕೇಳಿ ವಾಲಿಯು ರೋಷದಿಂದ ಯುದ್ಧಕ್ಕೆ ಹೊರಡುವುದು. ತಾರೆಯ ಹಿತೋಪದೇಶ.

ಅಂತಃಪುರದಲ್ಲಿದ್ದ ವಾಲಿಗೆ ತಮ್ಮನಾದ ಸುಗ್ರೀವನ ಗರ್ಜನೆಯು ಕೇಳಿಸಿತು. ಸಮಸ್ತ ಭೂತಗಳನ್ನು ನಡುಗಿಸುವ ಆ ಸಿಂಹನಾದವನ್ನು ಕೇಳಿ ವಾಲಿಗೆ ಸಹನೆದಪ್ಪಿತು. (ವಿಲಾಸದ) ಹರ್ಷವಡಗಿತು. ರೋಷ

ಸ ತು ರೋಷಪರೀತಾಂಗೋ ವಾಲೀ ಸಂಧ್ಯಾತಪಪ್ರಭಃ ।
ಉಪರಕ್ತ ಇವಾದಿತ್ಯಃ ಸದ್ಯೋ ನಿಷ್ಪ್ರಭತಾಂ ಗತಃ ॥ ३

ವಾಲೀ ದಂಷ್ಟ್ರಾಕರಾಲಸ್ತು ಕ್ರೋಧಾದ್ದೀಪ್ತಾಗ್ನಿಲೋಚನಃ ।
ಭಾತ್ಯುತ್ಪತಿತಪದ್ಮಾಭಃ ಸಮೃಣಾಲ ಇವ ಹ್ರದಃ ॥ ೪

ಶಬ್ದಂ ದುರ್ಮರ್ಷಣಂ ಶ್ರುತ್ವಾ ನಿಷ್ಪಪಾತ ತತೋ ಹರಿಃ ।
ವೇಗೇನ ಚರಣನ್ಯಾಸೈರ್ದಾರಯನ್ನಿವ ಮೇದಿನೀಮ್ ॥ ೫

ತಂ ತು ತಾರಾ ಪರಿಷ್ವಜ್ಯ ಸ್ನೇಹಾದ್ದರ್ಶಿತಸೌಹೃದಾ ।
ತ್ರಸ್ತಾ ಪ್ರೋವಾಚ ಸಂಭ್ರಾಂತಾ ಹಿತೋದರ್ಕಮಿದಂ ವಚಃ ॥ ೬

ಸಾಧು ಕ್ರೋಧಮಿಮಂ ವೀರ ನದೀವೇಗಮಿವಾಗತಮ್ ।
ಶಯನಾದುತ್ಥಿತಃ ಕಲ್ಯಂ ತ್ಯಜ ಭುಕ್ತಾಮಿವ ಸ್ರಜಮ್ ॥ ೭

ಕಲ್ಯಮೇತೇನ ಸಂಗ್ರಾಮಂ ಕರಿಷ್ಯಸಿ ಹರೀಶ್ವರ ।
ವೀರ ತೇ ಶತ್ರುಬಾಹುಲ್ಯಂ ಫಲ್ಗುತಾ ವಾ ನ ವಿದ್ಯತೇ ॥ ೮

---

ಉಕ್ತಿತು (೧-೨). ಸುವರ್ಣವರ್ಣನಾದ ವಾಲಿಯು ರೋಷಾವಿಷ್ಟನಾದ್ದರಿಂದ (ಮುಖವು ವಿಕೃತವಾಗಲು) ಕಾಂತಿಗುಂದಿ, ಗ್ರಹಣ ಹಿಡಿದ ಸೂರ್ಯನಂತಾದನು. ದಂಷ್ಟ್ರಾಕರಾಲನಾದ ವಾಲಿಯ ಕಣ್ಣುಗಳು ಕೋಪದಿಂದ ಕೆಂಡವಾದವು. ತಾವರೆಯ ದಂಟು ಸಹಿತವಾಗಿ ಕೆಂದಾವರೆಗಳಿಂದೊಪ್ಪುವ ಕೊಳದಂತೆ ವಾಲಿಯು ಹೊಳೆದನು* (೩-೪). ದುಸ್ಸಹವಾದ ಗರ್ಜನೆಯನ್ನು ಕೇಳಿ ಆ ವಾನರೇಂದ್ರನು ಥಟ್ಟನೆ ಹೊರಹೊರಟನು. ಅವನು ಕಾಲಿಡುವ ರಭಸಕ್ಕೆ ಪೊಡವಿಯು ಒಡೆಯುವುದೋ ಎಂಬಂತೆ ತೋರಿತು. ಆಗ ವಾಲಿಯ ಭಾರ್ಯೆಯಾದ ತಾರೆಯು ಭಯಪಡುತ್ತ ಸರ್ರನೆ ಬಂದು, ಅವನನ್ನಪ್ಪಿಕೊಂಡು ಸೌಹಾರ್ದದಿಂದ ಹಿತವಚನವನ್ನಾಡಿದಳು (೫-೬): "ವೀರಾಗ್ರಣಿ, ಇಷ್ಟು ಕೋಪ ಬೇಡ ನದೀವೇಗದಂತೆ ಉಕ್ಕಿಬಂದ ಈ ಕೋಪವನ್ನು ಬಿಡುವುದೊಳ್ಳೆಯದು. ಹಾಕಿಕೊಂಡ ಹೂಮಾಲೆಯನ್ನು ಹಾಸಿಗೆಯಿಂದೆದ್ದಾಗ ಬೆಳಗಿನಲ್ಲಿ ಕಳೆಯುವಂತೆ ಸಿಟ್ಟನ್ನು ಬಿಟ್ಟುಬಿಡು (೭). ವಾನರೇಶ್ವರ, ಬೆಳಗಾದಮೇಲೆ ಅವನೊಡನೆ ಯುದ್ಧಮಾಡಬಹುದು.

---

* ವಾಲಿಯ ಕೋರೆದಾಡೆಗಳು ತಾವರೆಯ ದಂಟಿನಂತೆಯೂ ಕಣ್ಣುಗಳು ಕೆಂದಾವರೆಯಂತೆಯೂ ಕಂಡವೆಂದು ಅಭಿಪ್ರಾಯ.

*

**ಸಹಸಾ ತವ ನಿಷ್ಕ್ರಾಮೋ ಮಮ ತಾವನ್ನ ರೋಚತೇ ।**
**ಶ್ರೂಯತಾಂ ಚಾಭಿಧಾಸ್ಯಾಮಿ ಯನ್ನಿಮಿತ್ತಂ ನಿವಾರ್ಯಸೇ ॥ ೯**

**ಪೂರ್ವಮಾಪತಿತಃ ಕ್ರೋಧಾತ್ ಸ ತ್ವಾಮಾಹ್ವಯತೇ ಯುಧಿ ।**
**ನಿಷ್ಪತ್ಯ ಚ ನಿರಸ್ತಸ್ತೇ ಹನ್ಯಮಾನೋ ದಿಶೋ ಗತಃ ॥ ೧೦**

**ತ್ವಯಾ ತಸ್ಯ ನಿರಸ್ತಸ್ಯ ಪೀಡಿತಸ್ಯ ವಿಶೇಷತಃ ।**
**ಇಹೈತ್ಯ ಪುನರಾಹ್ವಾನಂ ಶಂಕಾಂ ಜನಯತೀವ ಮೇ ॥ ೧೧**

**ದರ್ಪಶ್ಚ ವ್ಯವಸಾಯಶ್ಚ ಯಾದೃಶಸ್ತಸ್ಯ ನರ್ದತಃ ।**
**ನಿನಾದಸ್ಯ ಚ ಸಂರಂಭೋ ನೈತದಲ್ಪಂ ಹಿ ಕಾರಣಮ್ ॥ ೧೨**

**ನಾಸಹಾಯಮಹಂ ಮನ್ಯೇ ಸುಗ್ರೀವಂ ತಮಿಹಾಗತಮ್ ।**
**ಅವಷ್ಟಬ್ಧಸಹಾಯಶ್ಚ ಯಮಾಶ್ರಿತ್ಯೈಷ ಗರ್ಜತಿ ॥ ೧೩**

**ಪ್ರಕೃತ್ಯಾ ನಿಪುಣಶ್ಚೈವ ಬುದ್ಧಿಮಾಂಶ್ಚೈವ ವಾನರಃ ।**
**ಅಪರೀಕ್ಷಿತವೀರ್ಯೇಣ ಸುಗ್ರೀವಃ ಸಹ ನೈಷ್ಯತಿ ॥ ೧೪**

---

ಪರಾಕ್ರಮಿ, ನಿನ್ನ ಶತ್ರುಸಂಖ್ಯೆಯೂ ದೊಡ್ಡದಲ್ಲ. ನಿನ್ನ ಪರಾಕ್ರಮವೂ ಕಡಮೆಯದಲ್ಲ. ಹೀಗಿರುವಾಗ ಥಟ್ಟನೆ ಈಗಲೇ ಯುದ್ಧಕ್ಕೆ ಹೊರಡುವುದು ನನಗೆ ಸರಿಯೆನಿಸುವುದಿಲ್ಲ. ಈಗ ಬೇಡವೆನ್ನುವುದಕ್ಕೆ ಕಾರಣವೇನೆಂದು ಹೇಳುತ್ತೇನೆ, ಕೇಳು (೮-೯) : ಸುಗ್ರೀವನು ಮೊದಲು ಬಂದು ಕೋಪದಿಂದ ನಿನ್ನನ್ನು ಯುದ್ಧಕ್ಕೆ ಕರೆದನಷ್ಟೆ. ಆಗ ನೀನು ನುಗ್ಗಿಹೋಗಿ ಅವನನ್ನು ಬಡಿದಟ್ಟಲು, ಅವನು ದಿಕ್ಕುಗೆಟ್ಟು ಓಡಿಹೋದನು. ನಿನ್ನಿಂದ ಹೊಡೆತಗಳನ್ನು ತಿಂದು ಬಹಳ ನೊಂದ ಆತನೇ ಪುನಃ ಬಂದು ಯುದ್ಧಕ್ಕೆ ಕರೆಯುತ್ತಾನೆಂದರೆ, ನನಗೇಕೋ ಸಂದೇಹವಾಗುತ್ತದೆ (೧೦-೧೧). ಅವನ ಗರ್ವ, ಅವನ ಯುದ್ಧೋದ್ಯಮ, ಅವನ ಸಿಂಹನಾದದ ವೈಖರಿ—ಇವುಗಳ ಕಾರಣ ಅಲ್ಪವಾಗಿರದು. ಆ ಸುಗ್ರೀವನು ಸಹಾಯಕನಿಲ್ಲದೆ ಒಂಟಿಯಾಗಿ ಬಂದಿದ್ದಾನೆಂದು ನನಗೆ ತೋರುವುದಿಲ್ಲ. ಅವನಿಗೆ ಯಾರದೋ ದೊಡ್ಡ ಸಹಾಯವಿದೆ. ಅದನ್ನು ನಂಬಿಯೇ ಹೀಗೆ ಗರ್ಜಿಸುತ್ತಿದ್ದಾನೆ (೧೨-೧೩). ಆ ವಾನರನು ಸಹಜವಾಗಿಯೇ ಚತುರ; ಬುದ್ಧಿಶಾಲಿ. ಇನ್ನೊಬ್ಬನ

ಪೂರ್ವಮೇವ ಮಯಾ ವೀರ ಶ್ರುತಂ ಕಥಯತೋ ವಚಃ ।
ಅಂಗದಸ್ಯ ಕುಮಾರಸ್ಯ ವಕ್ಷ್ಯಾಮ್ಯದ್ಯ ಹಿತಂ ವಚಃ ॥ ೧೫

ಅಂಗದಸ್ತು ಕುಮಾರೋಽಯಂ ವನಾಂತಮುಪನಿರ್ಗತಃ ।
ಪ್ರವೃತ್ತಿಸ್ತೇನ ಕಥಿತಾ ಚಾರೈರಾಪ್ತೈರ್ನಿವೇದಿತಾ ॥ ೧೬

ಅಯೋಧ್ಯಾಧಿಪತೇಃ ಪುತ್ರೌ ಶೂರೌ ಸಮರದುರ್ಜಯೌ ।
ಇಕ್ಷ್ವಾಕೂಣಾಂ ಕುಲೇ ಜಾತೌ ಪ್ರಥಿತೌ ರಾಮಲಕ್ಷ್ಮಣೌ ॥ ೧೭

ಸುಗ್ರೀವಪ್ರಿಯಕಾಮಾರ್ಥಂ ಪ್ರಾಪ್ತೌ ತತ್ರ ದುರಾಸದೌ ।
ತವ ಭ್ರಾತುರ್ಹಿ ವಿಖ್ಯಾತಃ ಸಹಾಯೋ ರಣಕರ್ಕಶಃ ॥ ೧೮

ರಾಮಃ ಪರಬಲಾಮರ್ದೀ ಯುಗಾಂತಾಗ್ನಿರಿವೋತ್ಥಿತಃ ।
ನಿವಾಸವೃಕ್ಷಃ ಸಾಧೂನಾಮಾಪನ್ನಾನಾಂ ಪರಾ ಗತಿಃ ॥ ೧೯

ಆರ್ತಾನಾಂ ಸಂಶ್ರಯಶ್ಚೈವ ಯಶಸಶ್ಚೈಕಭಾಜನಮ್ ।
ಜ್ಞಾನವಿಜ್ಞಾನಸಂಪನ್ನೋ ನಿದೇಶೇ ನಿರತಃ ಪಿತುಃ ॥ ೨೦

---

ಪರಾಕ್ರಮವನ್ನು ಚೆನ್ನಾಗಿ ಪರೀಕ್ಷಿಸದೆ, ಅವನನ್ನು ನಂಬಿ ಎಂದಿಗೂ ಸ್ನೇಹವನ್ನು ಬೆಳೆಸುವುದಿಲ್ಲ. ನಮ್ಮ ಕುಮಾರನಾದ ಅಂಗದನು ಒಂದು ವಿಷಯವನ್ನು ಹೇಳಿದ್ದಾನೆ. ಹಿತಕರವಾದ ಆ ಮಾತನ್ನು ಕೇಳು (೧೪–೧೫) : ಅಂಗದಕುಮಾರನು ಕಾಡಿನಲ್ಲಿ ತಿರುಗಾಡುತ್ತಿದ್ದಾಗ ಆಪ್ತರಾದ ಗೂಢ ಚಾರರು ಅವನಿಗೆ ಒಂದು ಸುದ್ದಿಯನ್ನು ಮುಟ್ಟಿಸಿದರಂತೆ. ಅದನ್ನು ನನಗೆ ಹೇಳಿದ್ದಾನೆ. ಏನೆಂದರೆ, ಅಯೋಧ್ಯಾಪತಿಯಾದ ದಶರಥನ ಶೂರರಾದ ಇಬ್ಬರು ಮಕ್ಕಳು ಬಂದಿದ್ದಾರಂತೆ. ಯುದ್ಧದಲ್ಲಿ ಅಜೇಯರಂತೆ. ಇಕ್ಷ್ವಾಕು ವಂಶದಲ್ಲಿ ಜನಿಸಿ ವಿಖ್ಯಾತರಾದ ಅವರ ಹೆಸರು ರಾಮ ಮತ್ತು ಲಕ್ಷ್ಮಣ (೧೬–೧೭). ದುರ್ಧರ್ಷರಾದ ಅವರಿಬ್ಬರು ಸುಗ್ರೀವನಿಗೆ ಪ್ರಿಯವನ್ನೆಸಗ ಬೇಕೆಂದು ಬಂದಿದ್ದಾರೆ. ನಿನ್ನ ತಮ್ಮನಿಗೆ ಸಹಾಯಕನಾಗಿರುವ ರಾಮನು ರಣಪಂಡಿತನೆಂದು ಪ್ರಖ್ಯಾತನಾಗಿದ್ದಾನೆ. ಅವನು ಪ್ರಜ್ವಲಿಸುವ ಪ್ರಳಯ ಕಾಲಾಗ್ನಿಯಂತೆ ಶತ್ರುಸೈನ್ಯವನ್ನು ಧ್ವಂಸಪಡಿಸುವನಂತೆ. ರಾಮನು ಸಜ್ಜನ ರಿಗೆ ಆಶ್ರಯವೃಕ್ಷದಂತಿದ್ದು ಆಪತ್ತಿನಲ್ಲಿರುವವರಿಗೆ ಪರಮಗತಿಯಾಗಿದ್ದಾನೆ (೧೮–೧೯) ದುಃಖಿತರಿಗೆ ಶರಣ್ಯನಾಗಿ ಸತ್ಕೀರ್ತಿಗೆ ಆಕರನಾಗಿದ್ದಾನೆ. ಅವನು ತತ್ತ್ವಜ್ಞಾನಸಂಪನ್ನನೂ ಲೋಕಜ್ಞಾನನಿಪುಣನೂ ಆಗಿದ್ದಾನೆ.

ಧಾತೂನಾಮಿವ ಶೈಲೇಂದ್ರೋ ಗುಣಾನಾಮಾಕರೋ ಮಹಾನ್ ।
ತತ್ ಕ್ಷಮೋ ನ ವಿರೋಧಸ್ತೇ ಸಹ ತೇನ ಮಹಾತ್ಮನಾ ॥ ೨೧

ದುರ್ಜಯೇನಾಪ್ರಮೇಯೇಣ ರಾಮೇಣ ರಣಕರ್ಮಸು ।
ಶೂರ ವಕ್ಷ್ಯಾಮಿ ತೇ ಕಿಂಚಿನ್ನ ಚೇಚ್ಛಾಮ್ಯಭ್ಯಸೂಯಿತುಮ್ ॥ ೨೨

ಶ್ರೂಯತಾಂ ಕ್ರಿಯತಾಂ ಚೈವ ತವ ವಕ್ಷ್ಯಾಮಿ ಯದ್ಧಿತಮ್ ।
ಯೌವರಾಜ್ಯೇನ ಸುಗ್ರೀವಂ ತೂರ್ಣಂ ಸಾಧ್ವಭಿಷೇಚಯ ॥ ೨೩

ವಿಗ್ರಹಂ ಮಾ ಕೃಥಾ ವೀರ ಭ್ರಾತ್ರಾ ರಾಜನ್ ಯವೀಯಸಾ ।
ಅಹಂ ಹಿ ತೇ ಕ್ಷಮಂ ಮನ್ಯೇ ತೇನ ರಾಮೇಣ ಸೌಹೃದಮ್ ॥ ೨೪

ಸುಗ್ರೀವೇಣ ಚ ಸಂಪ್ರೀತಿಂ ವೈರಮುತ್ಸೃಜ್ಯ ದೂರತಃ ।
ಲಾಲನೀಯೋ ಹಿ ತೇ ಭ್ರಾತಾ ಯವೀಯಾನೇಷ ವಾನರಃ ॥ ೨೫

ತತ್ರ ವಾ ಸನ್ನಿಹಸ್ಥೋ ವಾ ಸರ್ವಥಾ ಬಂಧುರೇವ ತೇ ।
ನ ಹಿ ತೇನ ಸಮಂ ಬಂಧುಂ ಭುವಿ ಪಶ್ಯಾಮಿ ಕಂಚನ ॥ ೨೬

---

ತಂದೆಯ ಆಜ್ಞೆಯನ್ನು ಪಾಲಿಸುವುದರಲ್ಲಿ ನಿರತನಾದ ಸದಾಚಾರನಿಷ್ಠ (೨೦) ಗೈರಿಕಧಾತುಗಳಿಗೆ ಮಹಾಪರ್ವತವಿರುವಂತೆ ಸದ್ಗುಣಗಳಿಗೆ ರಾಮನು ದೊಡ್ಡ ಗಣಿಯಾಗಿರುವನಂತೆ. ಆದ್ದರಿಂದ ಆ ಮಹಾಪುರುಷನೊಡನೆ ನೀನು ವಿರೋಧವನ್ನು ಕಟ್ಟಿಕೊಳ್ಳುವುದು ಯೋಗ್ಯವಲ್ಲ (೨೧). ರಣರಂಗದಲ್ಲಿ ಅಜೇಯನೂ ಅಜ್ಞೇಯಮಹಿಮನೂ ಆದ ರಾಮನೊಡನೆ ವೈರವು ಸರಿಯಲ್ಲ. ಶೂರಾಗ್ರೇಸರ, ನಿನಗೆ ಒಂದು ವಿಷಯವನ್ನು ಹೇಳುವೆನು. ತಪ್ಪನ್ನು ತೋರಿಸುವುದು ನನ್ನ ಉದ್ದೇಶವಲ್ಲ. ನಿನಗೆ ಶ್ರೇಯಸ್ಕರವಾದ ನನ್ನ ಮಾತನ್ನು ಆಲಿಸು; ಅದನ್ನು ಪಾಲಿಸು. ಸುಗ್ರೀವನಿಗೆ ಯುವರಾಜಪದವಿಯನ್ನಿತ್ತು ತಡಮಾಡದೆ ಅಭಿಷೇಕಮಾಡುವುದೊಳ್ಳೆಯದು (೨೨-೨೩). ಮಹಾರಾಜ, ಶೂರಾಗ್ರೇಸರ, ತಮ್ಮನೊಡನೆ ಜಗಳವು ಬೇಡ. ನಿನಗೆ ರಾಮನೊಡನೆ ಸೌಹಾರ್ದವೇ ಯುಕ್ತವೆಂದು ನಾನು ಭಾವಿಸುತ್ತೇನೆ. ಸುಗ್ರೀವನೊಡನೆ ವೈರವನ್ನು ಪೂರ್ಣವಾಗಿ ತೊರೆದು ಪ್ರೀತಿಯಿಂದಿರು. ಅವನನ್ನು ಲಾಲಿಸು. ಸುಗ್ರೀವನು ನಿನಗೆ ಸೋದರನಲ್ಲವೆ? ತಮ್ಮನಲ್ಲವೆ? (೨೪-೨೫). ಅವನು ಅಲ್ಲಿರಲಿ-ಇಲ್ಲಿರಲಿ, ಎಲ್ಲಿದ್ದರೂ ನಿನಗೆ ಬಂಧುವೇ. ಒಡಹುಟ್ಟಿದ ಸುಗ್ರೀವನಿಗೆ

ದಾನಮಾನಾದಿಸತ್ಕಾರೈಃ ಕುರುಷ್ವ ಪ್ರತ್ಯನಂತರಮ್ ।
ವೈರಮೇತತ್ ಸಮುತ್ಸೃಜ್ಯ ತವ ಪಾರ್ಶ್ವೇ ಸ ತಿಷ್ಠತು ॥ ೨೭

ಸುಗ್ರೀವೋ ವಿಪುಲಗ್ರೀವಸ್ತವ ಬಂಧುಃ ಸದಾ ಮತಃ ।
ಭ್ರಾತುಃ ಸೌಹೃದಮಾಲಂಬ್ಯ ನಾನ್ಯಾ ಗತಿರಿಹಾಸ್ತಿ ತೇ ॥ ೨೮

ಯದಿ ತೇ ಮತ್ಪ್ರಿಯಂ ಕಾರ್ಯಂ ಯದಿ ಚಾವೈಷಿ ಮಾಂ ಹಿತಾಮ್ ।
ಯಾಚ್ಯಮಾನಃ ಪ್ರಯತ್ನೇನ ಸಾಧು ವಾಕ್ಯಂ ಕುರುಷ್ವ ಮೇ ॥ ೨೯

ಪ್ರಸೀದ ಪಥ್ಯಂ ಶೃಣು ಜಲ್ಪಿತಂ ಹಿ ಮೇ
　ನ ರೋಷಮೇವಾನುವಿಧಾತುಮರ್ಹಸಿ ।
ಕ್ಷಮೋ ಹಿ ತೇ ಕೋಸಲರಾಜಸೂನುನಾ
　ನ ವಿಗ್ರಹಃ ಶಕ್ರಸಮಾನತೇಜಸಾ ॥ ೩೦

ತದಾ ಹಿ ತಾರಾ ಹಿತಮೇವ ವಾಕ್ಯಂ
　ತಂ ವಾಲಿನಂ ಪಥ್ಯಮಿದಂ ಬಭಾಷೇ ।

---

ಸಮಾನನಾದ ಇನ್ನೊಬ್ಬ ಬಂಧುವು ಈ ಜಗತ್ತಿನಲ್ಲಿ ನಿನಗೆ ಯಾರಿದ್ದಾರೆ? ನಾಥ, ಕೂಡಲೆ ಅವನನ್ನು ಕರೆಸಿ ದಾನಮಾನಾದಿಗಳಿಂದ ಸತ್ಕರಿಸು. ಈ ವೈರ ಬುದ್ಧಿಯನ್ನು ತೊರೆದುಬಿಡು. ಅವನು ನಿನ್ನ ಬಳಿಯಲ್ಲಿರಲಿ (೨೬-೨೭). ವಿಶಾಲಕಂಠನಾದ ಸುಗ್ರೀವನು ಸರ್ವದಾ ನಿನಗೆ ಬಂಧುವಾಗಿ ನಡೆದು ಕೊಳ್ಳುವನು. ಭ್ರಾತೃವಾತ್ಸಲ್ಯವನ್ನು ಸಂಪಾದಿಸಿಕೊಂಡಿರುವುದೇ ನಿನಗೆ ಯೋಗ್ಯವಲ್ಲದೆ ಬೇರೆ ದಾರಿಯಿಲ್ಲ (೨೮). ಪ್ರಿಯ, ನನಗೆ ಪ್ರಿಯವಾದು ದನ್ನು ನಡೆಸಬೇಕೆಂದು ನಿನಗೆ ಮನಸ್ಸಿದ್ದರೆ—ನಾನು ನಿನ್ನ ಹಿತೈಷಿಣಿಯೆಂದು ನೀನು ತಿಳಿಯುವುದಾದರೆ, ನನ್ನ ಪ್ರಾರ್ಥನೆಯನ್ನು ನಡೆಸು. ಕೈಮುಗಿದು ಬೇಡಿಕೊಳ್ಳುತ್ತೇನೆ (೨೯). ಪ್ರಸನ್ನನಾಗು. ಪಥ್ಯವಾದ ನನ್ನ ಮಾತನ್ನು ಕೇಳು. ಕೋಪದ ಮಾರ್ಗವನ್ನೇ ಅನುಸರಿಸಬೇಡ. ಕೋಸಲರಾಜಪುತ್ರ ನೊಡನೆ ವಿರೋಧವು ನಿನಗೆ ಬೇಡ. ದೇವೇಂದ್ರ ಸಮಾನತೇಜನಾದ ರಾಮ ನೊಡನೆ ವೈರವು ನಿನಗೆ ತಕ್ಕುದಲ್ಲ" ಎಂದು ತಾರೆಯು ಬೇಡಿಕೊಂಡಳು (೩೦). ಹೀಗೆ ತಾರೆಯು ವಾಲಿಗೆ ಶ್ರೇಯಸ್ಕರವೂ ಪಥ್ಯವೂ ಆದ

ನ ರೋಚತೇ ತದ್ವಚನಂ ಹಿ ತಸ್ಯ
ಕಾಲಾಭಿಪನ್ನಸ್ಯ ವಿನಾಶಕಾಲೇ ॥ ೩೧

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಪಂಚದಶಃ ಸರ್ಗಃ

---

## ಷೋಡಶಃ ಸರ್ಗಃ

### ವಾಲಿಸಂಹಾರಃ

ತಾಮೇವಂ ಬ್ರುವತೀಂ ತಾರಾಂ ತಾರಾಧಿಪನಿಭಾನನಾಮ್ ।
ವಾಲೀ ನಿರ್ಭರ್ತ್ಸಯಾಮಾಸ ವಚನಂ ಚೇದಮಬ್ರವೀತ್ ॥ ೧

ಗರ್ಜತೋಽಸ್ಯ ಸಸಂರಂಭಂ ಭ್ರಾತುಃ ಶತ್ರೋರ್ವಿಶೇಷತಃ ।
ಮರ್ಷಯಿಷ್ಯಾಮ್ಯಹಂ ಕೇನ ಕಾರಣೇನ ವರಾನನೇ ॥ ೨

ಅಧರ್ಷಿತಾನಾಂ ಶೂರಾಣಾಂ ಸಮರೇಷ್ವನಿವರ್ತಿನಾಮ್ ।
ಧರ್ಷಣಾಮರ್ಷಣಂ ಭೀರು ಮರಣಾದತಿರಿಚ್ಯತೇ ॥ ೩

---

ವಚನವನ್ನೇ ಹೇಳಿದಳು. ವಾಲಿಗೆ ಅದು ಹಿಡಿಸಲಿಲ್ಲ. ಕಾಲವಶನಾದ ವಾಲಿಗೆ ವಿನಾಶಕಾಲವು ಒದಗಿಬಂದುದರಿಂದ ಹಿತವಚನವು ರುಚಿಸಲಿಲ್ಲ (೩೧).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಹದಿನೈದನೆಯ ಸರ್ಗ

---

## ಸರ್ಗ ೧೬

ವಾಲಿಯು ತಾರೆಯನ್ನು ಸಂತೈಸಿ ಅರಮನೆಗೆ ಕಳಿಸುವುದು. ವಾಲಿಸುಗ್ರೀವರ ಯುದ್ಧ. ಶ್ರೀರಾಮನಿಂದ ಬಾಣಪ್ರಯೋಗ.

ಈ ರೀತಿಯಲ್ಲಿ ಚಂದ್ರಮುಖಿಯಾದ ತಾರೆಯು ಹಿತವಾದವನ್ನು ಹೇಳುತ್ತಿರಲು, ವಾಲಿಯು ಅವಳನ್ನು ಗದರಿಸಿ ಹೀಗೆಂದನು: "ಸುಂದರಿ, ನನಗೆ ಸೋದರನಾದ ಸುಗ್ರೀವನು ಇಷ್ಟು ಉದ್ರೇಕದಿಂದ ಹೀಗೆ ಗರ್ಜಿಸುತ್ತಿರುವನಲ್ಲ! ಅದರಲ್ಲಿಯೂ ನನಗೆ ಶತ್ರುವಾಗಿರುವ ಈತನು ಕಾಲು ಕೆರೆದು ಬಂದಾಗ ನಾನು ಏಕೆ ಸಹಿಸಿಕೊಂಡಿರಬೇಕು? (೧-೨). ಯುದ್ಧದಲ್ಲಿ ಹಿಮ್ಮೆಟ್ಟುವುದನ್ನೇ ಅರಿಯದ ಅಪರಾಜಿತರಾದ ಶೂರರಿಗೆ ಈ ಬಗೆಯ

ಸೋಢುಂ ನ ಚ ಸಮರ್ಥೋಽಹಂ ಯುದ್ಧಕಾಮಸ್ಯ ಸಂಯುಗೇ ।
ಸುಗ್ರೀವಸ್ಯ ಚ ಸಂರಂಭಂ ಹೀನಗ್ರೀವಸ್ಯ ಗರ್ಜತಃ ॥ ೪

ನ ಚ ಕಾರ್ಯೋ ವಿಷಾದಸ್ತೇ ರಾಘವಂ ಪ್ರತಿ ಮತ್ಕೃತೇ ।
ಧರ್ಮಜ್ಞಶ್ಚ ಕೃತಜ್ಞಶ್ಚ ಕಥಂ ಪಾಪಂ ಕರಿಷ್ಯತಿ ॥ ೫

ನಿವರ್ತಸ್ವ ಸಹ ಸ್ತ್ರೀಭಿಃ ಕಥಂ ಭೂಯೋಽನುಗಚ್ಛಸಿ ।
ಸೌಹೃದಂ ದರ್ಶಿತಂ ತಾರೇ ಮಯಿ ಭಕ್ತಿಃ ಕೃತಾ ತ್ವಯಾ ॥ ೬

ಪ್ರತಿಯೋತ್ಸ್ಯಾಮ್ಯಹಂ ಗತ್ವಾ ಸುಗ್ರೀವಂ ಜಹಿ ಸಂಭ್ರಮಮ್ ।
ದರ್ಪಮಸ್ಯ ವಿನೇಷ್ಯಾಮಿ ನ ಚ ಪ್ರಾಣೈರ್ವಿಯೋಕ್ಷ್ಯತೇ ॥ ೭

ಅಹಂ ಹ್ಯಾಜಿಸ್ಥಿತಸ್ಯಾಸ್ಯ ಕರಿಷ್ಯಾಮಿ ಯಥೇಪ್ಸಿತಮ್ ।
ವೃಕ್ಷೈರ್ಮುಷ್ಟಿಪ್ರಹಾರೈಶ್ಚ ಪೀಡಿತಃ ಪ್ರತಿಯಾಸ್ಯತಿ ॥ ೮

ನ ಮೇ ಗರ್ವಿತಮಾಯಸ್ತಂ ಸಹಿಷ್ಯತಿ ದುರಾತ್ಮವಾನ್ ।
ಕೃತಂ ತಾರೇ ಸಹಾಯತ್ವಂ ಸೌಹೃದಂ ದರ್ಶಿತಂ ಮಯಿ ॥ ೯

---

ಅವಮಾನವನ್ನು ಸಹಿಸಿಕೊಳ್ಳುವುದೆಂದರೆ, ಎಲೆ ಭೀರು, ಅದು ಸಾಯು ವುದಕ್ಕಿಂತಲೂ ಕಡೆ. ಹೊಡೆದಾಟಕ್ಕಾಗಿ ಕಾಲು ಕೆರೆದು ಬಂದಿರುವ ಈ ಸುಗ್ರೀವನ ಅಬ್ಬರವನ್ನು ನಾನು ಸಹಿಸಲಾರೆ ಕುತ್ತಿಗೆಯನ್ನು ಮುರಿಸಿ ಕೊಳ್ಳುವುದಕ್ಕಾಗಿ ಹೀಗೆ ಕಿರಿಚುತ್ತಿದ್ದಾನೆ! ಈತನ ಉದ್ರೇಕವನ್ನು ತಡೆದು ಕೊಳ್ಳಲಾರೆ (೩-೪). ರಾಘವನಿಂದ ನನಗೆ ಕೇಡಾದೀತೆಂದು ನೀನು ವಿಷಾದಿಸಬೇಡ. ಧರ್ಮಜ್ಞನೂ ಕೃತಜ್ಞನೂ ಆದ ರಾಘವನು ನನ್ನ ವಿಷಯ ದಲ್ಲಿ ಪಾಪಕಾರ್ಯವನ್ನು ಹೇಗೆ ಮಾಡಿಯಾನು? ಈ ಸ್ತ್ರೀಯರೊಂದಿಗೆ ನೀನು ಹಿಂದಿರುಗಿ ಹೋಗು. ಇದೇನು ಮತ್ತೆ ನನ್ನ ಹಿಂದೆಯೇ ಬರು ತ್ತಿದ್ದೀಯೆ? ತಾರೆ, ನನ್ನಲ್ಲಿ ನಿನಗಿರುವ ಪ್ರೇಮವನ್ನು ತೋರಿಸಿದೆ. ನಿನ್ನ ಭಕ್ತಿಯು ವ್ಯಕ್ತವಾಯಿತು (೫-೬). ನಾನು ಹೋಗಿ ಸುಗ್ರೀವನೊಡನೆ ಯುದ್ಧಮಾಡುವೆನು. ಹೆದರಬೇಡ. ಅವನ ಸೊಕ್ಕನ್ನು ಅಡಗಿಸುವೆನೇ ಹೊರತು ಅವನನ್ನು ಕೊಲ್ಲುವುದಿಲ್ಲ. ಯುದ್ಧಕ್ಕೆ ನಿಂತಿರುವ ಆತನಿಗೆ ಬೇಕಾದಷ್ಟು ಹೊಡೆತಗಳನ್ನು ಹಾಕುವೆನು. ಮರಗಳ ಬಡಿತವನ್ನೂ ಗುದ್ದು ಗಳನ್ನೂ ತಿಂದು ಸಾಕಾಗಿ ಹಿಂದಿರುಗಿಹೋಗುವನು (೭-೮). ನನ್ನ ದರ್ಪೋದ್ಧತವಾದ ಪ್ರಹಾರವನ್ನು ಆ ದುರಾತ್ಮನು ಎಂದಿಗೂ ತಡೆದು

ಶಾಪಿತಾಸಿ ಮಮ ಪ್ರಾಣೈರ್ನಿವರ್ತಸ್ವ ಜನೇನ ಚ ।
ಅಲಂ ಜಿತ್ವಾ ನಿವರ್ತಿಷ್ಯೇ ತಮಹಂ ಭ್ರಾತರಂ ರಣೇ ॥ ೧೦

ತಂ ತು ತಾರಾ ಪರಿಷ್ವಜ್ಯ ವಾಲಿನಂ ಪ್ರಿಯವಾದಿನೀ ।
ಚಕಾರ ರುದತೀ ಮಂದಂ ದಕ್ಷಿಣಾ ಸಾ ಪ್ರದಕ್ಷಿಣಮ್ ॥ ೧೧

ತತಃ ಸ್ವಸ್ತ್ಯಯನಂ ಕೃತ್ವಾ ಮಂತ್ರವಿದ್ವಿಜಯೈಷಿಣೀ ।
ಅಂತಃಪುರಂ ಸಹ ಸ್ತ್ರೀಭಿಃ ಪ್ರವಿಷ್ಟಾ ಶೋಕಮೋಹಿತಾ ॥ ೧೨

ಪ್ರವಿಷ್ಟಾಯಾಂ ತು ತಾರಾಯಾಂ ಸಹ ಸ್ತ್ರೀಭಿಃ ಸ್ವಮಾಲಯಮ್ ।
ನಗರಾನ್ನಿರ್ಯಯೌ ಕ್ರುದ್ಧೋ ಮಹಾಸರ್ಪ ಇವ ಶ್ವಸನ್ ॥ ೧೩

ಸ ನಿಷ್ಪತ್ಯ ಮಹಾತೇಜಾ ವಾಲೀ ಪರಮರೋಷಣಃ ।
ಸರ್ವತಶ್ಚಾರಯನ್ ದೃಷ್ಟಿಂ ಶತ್ರುದರ್ಶನಕಾಂಕ್ಷಯಾ ॥ ೧೪

---

ಕೊಳ್ಳಲಾರ. ತಾರೆ, (ಒಳ್ಳೆಯ ಮಾತನ್ನಾಡಿ) ಗೆಳತಿಯಾಗಿ ಸಹಾಯ ಮಾಡಿದೆ. ನನ್ನಲ್ಲಿ ಅನುರಾಗವನ್ನು ವ್ಯಕ್ತಪಡಿಸಿದೆ (೯). ಇನ್ನು ನೀನು ಹೊರಡು. ನನ್ನ ಪ್ರಾಣದಮೇಲೆ ಆಣೆಯಿಟ್ಟು ಹೇಳುತ್ತಿದ್ದೇನೆ. ಈ ಸ್ತ್ರೀಯರೊಂದಿಗೆ ನೀನು ಹಿಂದಿರುಗು. ತಮ್ಮನೆಂದುಕೊಳ್ಳುವ ಆ ಸುಗ್ರೀವನನ್ನು ಕಾಳಗದಲ್ಲಿ ಸೋಲಿಸಿ ಬರುತ್ತೇನೆ' ಎಂದು ಹೇಳಿದನು (೧೦). ಆಗ ದಾಕ್ಷಿಣ್ಯ ಸ್ವಭಾವದ ತಾರೆಯು ಒಳ್ಳೆಯದಾಗಲೆಂದು ನುಡಿಯುತ್ತ ವಾಲಿಯನ್ನು ಅಪ್ಪಿಕೊಂಡಳು ಮೆಲ್ಲಗೆ ಅಳುತ್ತ ಅವನಿಗೆ ಪ್ರದಕ್ಷಿಣೆಮಾಡಿ ವಂದಿಸಿದಳು. ಗಂಡನಿಗೆ ವಿಜಯವಾಗಲೆಂದು ಹಾರೈಸಿ ಮಂತ್ರಜ್ಞಳಾದ ತಾರೆಯು ಮಂಗಳಾನುವಾಕವನ್ನು ಪಠಿಸಿದಳು. ಅನಂತರ ದುಃಖದಿಂದ ದಿಙ್ಮೂಢಳಾಗಿ ಇತರ ಸ್ತ್ರೀಯರೊಂದಿಗೆ ಅಂತಃಪುರಕ್ಕೆ ಹಿಂದಿರುಗಿದಳು (೧೧-೧೨). ಹೀಗೆ ತಾರೆಯು ಆ ಸ್ತ್ರೀಯರೊಂದಿಗೆ ತನ್ನ ಅರಮನೆಗೆ ಹೋಗಲು, ವಾಲಿಯು ಮಹಾಸರ್ಪದಂತೆ ಸಿಟ್ಟಿನಿಂದ ಭೋರ್ಗರೆಯುತ್ತ ನಗರದಿಂದ ಹೊರಬಂದನು. ಆ ಮಹಾತೇಜಸ್ವಿಯು ರೋಷದಿಂದ ಸಿಡಿದೆದ್ದು, ಶತ್ರುವಾದ ಸುಗ್ರೀವನು ಎಲ್ಲಿರುವನೆಂದು ಸುತ್ತಲೂ ಕಣ್ಣುಹೊರಳಿಸಿ ನೋಡಿದನು (೧೩-೧೪).

ಸ ದದರ್ಶ ತತಃ ಶ್ರೀಮಾನ್ ಸುಗ್ರೀವಂ ಹೇಮಪಿಂಗಲಮ್ ।
ಸುಸಂವೀತಮವಷ್ಟಬ್ಧಂ ದೀಪ್ಯಮಾನಮಿವಾನಲಮ್ ॥ ೧೫

ಸ ತಂ ದೃಷ್ಟ್ವಾ ಮಹಾವೀರ್ಯಂ ಸುಗ್ರೀವಂ ಪರ್ಯವಸ್ಥಿತಮ್ ।
ಗಾಢಂ ಪರಿದಧೇ ವಾಸೋ ವಾಲೀ ಪರಮರೋಷಣಃ ॥

ಸ ವಾಲೀ ಗಾಢಸಂವೀತೋ ಮುಷ್ಟಿಮುದ್ಯಮ್ಯ ವೀರ್ಯವಾನ್ ।
ಸುಗ್ರೀವಮೇವಾಭಿಮುಖೋ ಯಯೌ ಯೋದ್ಧುಂ ಕೃತಕ್ಷಣಃ ॥ ೧೭

ಶ್ಲಿಷ್ಟಮುಷ್ಟಿಂ ಸಮುದ್ಯಮ್ಯ ಸಂರಬ್ಧತರಮಾಗತಃ ।
ಸುಗ್ರೀವೋಽಪಿ ತಮುದ್ದಿಶ್ಯ ವಾಲಿನಂ ಹೇಮಮಾಲಿನಮ್ ॥ ೧೮

ತಂ ವಾಲೀ ಕ್ರೋಧತಾಮ್ರಾಕ್ಷಃ ಸುಗ್ರೀವಂ ರಣಪಂಡಿತಮ್ ।
ಆಪತಂತಂ ಮಹಾವೇಗಮಿದಂ ವಚನಮಬ್ರವೀತ್ ॥ ೧೯

ಏಷ ಮುಷ್ಟಿರ್ಮಯಾ ಬದ್ಧೋ ಗಾಢಃ ಸಂನಿಹಿತಾಂಗುಲಿಃ ।
ಮಯಾ ವೇಗವಿಮುಕ್ತಸ್ತೇ ಪ್ರಾಣಾನಾದಾಯ ಯಾಸ್ಯತಿ ॥ ೨೦

ಏವಮುಕ್ತಸ್ತು ಸುಗ್ರೀವಃ ಕ್ರುದ್ಧೋ ವಾಲಿನಮಬ್ರವೀತ್ ।
ತವ ಚೈವ ಹರನ್ ಪ್ರಾಣಾನ್ ಮುಷ್ಟಿಃ ಪತತು ಮೂರ್ಧನಿ ॥ ೨೧

---

ಬಂಗಾರದಂತೆ ಪಿಂಗಳವರ್ಣನಾದ ಸುಗ್ರೀವನು ದಟ್ಟಿಯನ್ನು ಬಿಗಿದು ಹೋರಾಡಲು ಸಜ್ಜಾಗಿ, ಬೆಂಕಿಯಂತೆ ಬೆಳಗುತ್ತ ನಿಂತಿರುವುದು ವಾಲಿಗೆ ಗೋಚರಿಸಿತು (೧೫). ವೀರನಾದ ಸುಗ್ರೀವನು ಯುದ್ಧಸನ್ನದ್ಧನಾಗಿರುವುದನ್ನು ಕಂಡು ವಾಲಿಯು ಕೋಪದಿಂದ ಉರಿದೆದ್ದನು. ಆ ವೀರನು ದಟ್ಟಿಯನ್ನು ಬಲವಾಗಿ ಬಿಗಿದುಕಟ್ಟಿ ಮುಷ್ಟಿಯನ್ನೆತ್ತಿಕೊಂಡು, ಸುಗ್ರೀವನಿಗೆ ಎದುರಾಗಿ ಉತ್ಸಾಹದಿಂದ ನುಗ್ಗಿ ಬಂದನು (೧೬-೧೭). ಆಗ ಸುಗ್ರೀವನೂ ಸಹ ಬಿಗಿಮುಷ್ಟಿಯನ್ನೆತ್ತಿ ಹಿಡಿದು, ಸುವರ್ಣಮಾಲಿಕೆಯನ್ನು ಧರಿಸಿದ್ದ ವಾಲಿಯ ಕಡೆಗೆ ರೋಷಾವೇಶದಿಂದ ಧಾವಿಸಿದನು. ಕೋಪದಿಂದ ಕೆಂಗಣ್ಣನಾದ ವಾಲಿಯು, ರಭಸದಿಂದ ಏರಿಬರುತ್ತಿದ್ದ ರಣಪಂಡಿತನಾದ ಸುಗ್ರೀವನನ್ನು ನೋಡಿ "ಎಲೈ, ಇಲ್ಲಿ ನೋಡು! ಬೆರಳನ್ನು ಒತ್ತರಿಸಿ ಹಿಡಿದ ಈ ಬಿಗಿಮುಷ್ಟಿಯು ವೇಗದಿಂದ ಬಡಿದು ನಿನ್ನ ಪ್ರಾಣವನ್ನು ಸೆಳೆದೊಯ್ಯುವುದು" ಎಂದನು (೧೮-೨೦). ಸಿಟ್ಟಿನಿಂದ ಸಿಡಿದೆದ್ದ ಸುಗ್ರೀವನು "ಎಲೈ, ನಿನ್ನ

ತಾಡಿತಸ್ತೇನ ಸಂಕ್ರುದ್ಧಸ್ತಮಭಿಕ್ರಮ್ಯ ವೇಗತಃ ।
ಅಭವಚ್ಛೋಣಿತೋದ್ಗಾರೀ ಸೋತ್ಪೀಡ ಇವ ಪರ್ವತಃ ॥ ೨೨

ಸುಗ್ರೀವೇಣ ತು ನಿಃಶಂಕಂ ಸಾಲಮುತ್ಪಾಟ್ಯ ತೇಜಸಾ ।
ಗಾತ್ರೇಷ್ವಭಿಹತೋ ವಾಲೀ ವಜ್ರೇಣೇವ ಮಹಾಗಿರಿಃ ॥ ೨೩

ಸ ತು ವಾಲೀ ಪ್ರಚಲಿತಃ ಸಾಲತಾಡನವಿಹ್ವಲಃ ।
ಗುರುಭಾರಸಮಾಕ್ರಾಂತಾ ನೌಃ ಸಸಾರ್ಥೇವ ಸಾಗರೇ ॥ ೨೪

ತೌ ಭೀಮಬಲವಿಕ್ರಾಂತೌ ಸುಪರ್ಣಸಮವೇಗಿನೌ ।
ಪ್ರವೃದ್ಧೌ ಘೋರವಪುಷೌ ಚಂದ್ರಸೂರ್ಯಾವಿವಾಂಬರೇ ॥ ೨೫

ಪರಸ್ಪರಮಮಿತ್ರಘ್ನೌ ಛಿದ್ರಾನ್ವೇಷಣತತ್ಪರೌ ।
ತತೋಽವರ್ಧತ ವಾಲೀ ತು ಬಲವೀರ್ಯಸಮನ್ವಿತಃ ॥ ೨೬

---

ಪ್ರಾಣವನ್ನೇ ನೆಳೆದೊಯ್ಯುವ ಈ ಮುಷ್ಟಿಯು ನಿನ್ನ ತಲೆಯಮೇಲೆರಗಲಿ!" ಎನ್ನುವಷ್ಟರಲ್ಲಿ, ವಾಲಿಯು ವೇಗದಿಂದ ಸುಗ್ರೀವನನ್ನು ಬಲವಾಗಿ ಅಪ್ಪಳಿಸಿದನು. (ಜರ್ಝರಿತನಾದ) ಸುಗ್ರೀವನ ಮೈಯಿಂದ ಝಲ್ಲೆಂದು ರಕ್ತವು ಚಿಮ್ಮಿತು ಚಿಮ್ಮುವ ಚಿಲುಮೆಗಳಿಂದೊಪ್ಪುವ ಬೆಟ್ಟದಂತೆ ಸುಗ್ರೀವನು ಕಂಗೊಳಿಸಿದನು (೨೧-೨೨). ಅವನು ಹಿಂದುಮುಂದೆ ನೋಡದೆ ಸಾಲವೃಕ್ಷ ಒಂದನ್ನು ಕಿತ್ತು, ಸಿಡಿಲು ಮಹಾಪರ್ವತವನ್ನಪ್ಪಳಿಸುವಂತೆ, ಆ ವೃಕ್ಷದಿಂದ ವಾಲಿಯನ್ನು ಬಡಿದನು. ಆ ಹೊಡೆತಕ್ಕೆ ವಾಲಿಯು ತತ್ತರಿಸಿದನು, ಹೊರಲಾರದ ಹೊರೆಯನ್ನು ಹೊತ್ತ ಹಡಗು ಕಡಲಿನಲ್ಲಿ ಹೊಯ್ದಾಡುವಂತೆ ಅತ್ತಿತ್ತ ತೂಗಾಡಿದನು (೨೩-೨೪). ವಾಲಿಸುಗ್ರೀವರಿಬ್ಬರೂ ಭೀಮಬಲಸಂಪನ್ನರು. ಗರುಡನಿಗೆ ಸಮಾನವಾದ ವೇಗವುಳ್ಳ ಪರಾಕ್ರಮಿಗಳು. ಘೋರಶರೀರಧಾರಿಗಳಾಗಿ ಒಬ್ಬರಿಗೊಬ್ಬರು ಹೊಡೆಯುತ್ತ ವೀರಾವೇಶದಿಂದ ಉಬ್ಬತೊಡಗಿದರು. ಗಗನತಳದಲ್ಲಿ ಹೋರಾಡುವ ಸೂರ್ಯಚಂದ್ರರೋ ಎಂಬಂತೆ ಕಂಗೊಳಿಸಿದರು (೨೫). ತಮ್ಮ ಶತ್ರುವನ್ನು ಹೊಡೆದುರುಳಿಸಬೇಕೆಂದು ಹೊಂಚುಹಾಕುತ್ತ ಹೋರಾಡಿದರು. ಆ ದ್ವಂದ್ವಯುದ್ಧದಲ್ಲಿ ಮಹಾಪರಾಕ್ರಮಿಯಾದ ವಾಲಿಯ ಕೈ ಮೇಲಾಗತೊಡಗಿತು. ಸೂರ್ಯ-

ಸೂರ್ಯಪುತ್ರೋ ಮಹಾವೀರ್ಯಃ ಸುಗ್ರೀವಃ ಪರಿಹೀಯತೇ ।
ವಾಲಿನಾ ಭಗ್ನದರ್ಪಸ್ತು ಸುಗ್ರೀವೋ ಮಂದವಿಕ್ರಮಃ ॥ ೨೭

ವಾಲಿನಂ ಪ್ರತಿ ಸಾಮರ್ಷೋ ದರ್ಶಯಾಮಾಸ ಲಾಘವಮ್ ।
ವೃಕ್ಷೈಃ ಸಶಾಖೈಃ ಸಶಿಖೈರ್ವಜ್ರಕೋಟಿನಿಭೈರ್ನಖೈಃ ॥ ೨೮

ಮುಷ್ಟಿಭಿರ್ಜಾನುಭಿಃ ಪದ್ಭಿರ್ಬಾಹುಭಿಶ್ಚ ಪುನಃ ಪುನಃ ।
ತಯೋರ್ಯುದ್ಧಮಭೂದ್ಘೋರಂ ವೃತ್ರವಾಸವಯೋರಿವ ॥ ೨೯

ತೌ ಶೋಣಿತಾಕ್ತೌ ಯುಧ್ಯೇತಾಂ ವಾನರೌ ವನಚಾರಿಣೌ ।
ಮೇಘಾವಿವ ಮಹಾಶಬ್ದೈಸ್ತರ್ಜಯಾನೌ ಪರಸ್ಪರಮ್ ॥ ೩೦

ಹೀಯಮಾನಮಥಾಪಶ್ಯತ್ ಸುಗ್ರೀವಂ ವಾನರೇಶ್ವರಮ್ ।
ಪ್ರೇಕ್ಷಮಾಣಂ ದಿಶಶ್ಚೈವ ರಾಘವಂ ಚ ಮುಹುರ್ಮುಹುಃ ॥ ೩೧

---

ಪುತ್ರನಾದ ಸುಗ್ರೀವನು ಮಹಾವೀರನಾದರೂ ಅವನ ಬಲವು ಕುಗ್ಗ ತೊಡಗಿತು. ವಾಲಿಯಿಂದ ಅವನ ದರ್ಪವು ಭಗ್ನವಾಯಿತು. ಪರಾಕ್ರಮವು ತಗ್ಗಿತು (೨೬-೨೭). ಆದರೂ ವಾಲಿಯಮೇಲಿದ್ದ ಕೋಪದಿಂದ ಅವನು ತನ್ನ ಕೈಚಳಕವನ್ನು ತೋರಿಸುತ್ತಿದ್ದನು. ಅವರಿಬ್ಬರೂ ಮರಗಳಿಂದ ಒಬ್ಬರನ್ನೊಬ್ಬರು ಬಡಿಯುತ್ತ, ಕೊಂಬೆಗಳಿಂದ ಹೊಡೆಯುತ್ತ, ಅವುಗಳ ತುದಿಗಳಿಂದ ತಿವಿಯುತ್ತ, ವಜ್ರಾಯುಧದ ಅಲಗಿನಂತಿದ್ದ ಉಗುರುಗಳಿಂದ ಪರಚುತ್ತ, ಮುಷ್ಟಿಗಳಿಂದ ಗುದ್ದುತ್ತ, ಮೊಳಕಾಲುಗಳಿಂದ ತೊಡರುಗಾಲಿಕ್ಕುತ್ತ, ಕಾಲುಗಳಿಂದ ಒದೆಯುತ್ತ, ಭುಜಗಳಿಂದ ಅಮುಕುತ್ತ ಹೋರಾಡಿದರು. ವೃತ್ರಾಸುರನಿಗೂ ದೇವೇಂದ್ರನಿಗೂ ನಡೆದ ಯುದ್ಧದಂತೆ ಅವರ ದ್ವಂದ್ವಯುದ್ಧವು ಘೋರವಾಗಿತ್ತು (೨೮-೨೯). ವನಚಾರಿಗಳಾದ ಆ ವಾನರೇಂದ್ರರ ಮೈಯೆಲ್ಲವೂ ರಕ್ತಸಿಕ್ತವಾಯಿತು. ಗುಡುಗುವ ಮಹಾಮೇಘಗಳಂತೆ ಅಬ್ಬರಿಸಿ ಹೆದರಿಸುತ್ತ ಒಬ್ಬರನ್ನೊಬ್ಬರು ಹೊಯ್ದಾಡಿದರು. ವಾನರೇಶ್ವರನಾದ ಸುಗ್ರೀವನು ಕ್ರಮವಾಗಿ ಶಕ್ತಿಗುಂದುತ್ತಿದ್ದನು ಅವನು ಸುತ್ತಲೂ ದಿಕ್ಕುಗಳನ್ನು ನೋಡುತ್ತ, (ಮರೆಯಲ್ಲಿದ್ದ) ರಾಘವನ ಕಡೆಗೆ

ತತೋ ರಾಮೋ ಮಹಾತೇಜಾ ಆರ್ತಂ ದೃಷ್ಟ್ವಾ ಹರೀಶ್ವರಮ್ ।
ಶರಂ ಚ ವೀಕ್ಷತೇ ವೀರೋ ವಾಲಿನೋ ವಧಕಾರಣಾತ್ ॥ ೩೨

ತತೋ ಧನುಷಿ ಸಂಧಾಯ ಶರಮಾಶೀವಿಷೋಪಮಮ್ ।
ಪೂರಯಾಮಾಸ ತಚ್ಚಾಪಂ ಕಾಲಚಕ್ರಮಿವಾಂತಕಃ ॥ ೩೩

ತಸ್ಯ ಜ್ಯಾತಲಘೋಷೇಣ ತ್ರಸ್ತಾಃ ಪತ್ರರಥೇಶ್ವರಾಃ ।
ಪ್ರದುದ್ರುವುರ್ಮೃಗಾಶ್ಚೈವ ಯುಗಾಂತ ಇವ ಮೋಹಿತಾಃ ॥ ೩೪

ಮುಕ್ತಸ್ತು ವಜ್ರನಿರ್ಘೋಷಃ ಪ್ರದೀಪ್ತಾಶನಿಸಂನಿಭಃ ।
ರಾಘವೇಣ ಮಹಾಬಾಣೋ ವಾಲಿವಕ್ಷಸಿ ಪಾತಿತಃ ॥ ೩೫

ತತಸ್ತೇನ ಮಹಾತೇಜಾ ವೀರ್ಯೋತ್ಸಿಕ್ತಃ ಕಪೀಶ್ವರಃ ।
ವೇಗೇನಾಭಿಹತೋ ವಾಲೀ ನಿಪಪಾತ ಮಹೀತಲೇ ॥ ೩೬

---

ಮತ್ತೆ ಮತ್ತೆ ನೋಡಲಾರಂಭಿಸಿದನು. ಇದೆಲ್ಲವನ್ನೂ ಶ್ರೀರಾಮನು ಗಮನಿಸಿದನು (೩೦-೩೧). ಸುಗ್ರೀವನು ಕಂಗೆಟ್ಟಿರುವುದನ್ನು ಶ್ರೀರಾಮನು ಕಂಡನು. ಇನ್ನು ವಾಲಿಯನ್ನು ವಧಿಸಬೇಕೆಂದು ನಿಶ್ಚಯಿಸಿ, ಮಹಾ ತೇಜಸ್ವಿಯಾದ ಆ ವೀರನು ತನ್ನ ದಿವ್ಯಾಸ್ತ್ರವನ್ನೊಮ್ಮೆ ವೀಕ್ಷಿಸಿದನು. ಸರ್ಪದಂತೆ ಘೋರವಾದ ಆ ಬಾಣವನ್ನು ಕೂಡಲೆ ಧನುಸ್ಸಿಗೆ ಹೂಡಿ, ಯಮನು ಕಾಲಚಕ್ರವನ್ನೆಳೆಯುವಂತೆ, ಆ ಧನುಸ್ಸನ್ನು (ಆಕರ್ಣಾಂತವಾಗಿ) ಎಳೆದನು (೩೨-೩೩). ಮರುಕ್ಷಣದಲ್ಲಿ ಹೆದೆಯಿಂದ ಝಂಯ್ ಎಂದು ಝಂಕಾರವು ಮೊಳಗಿತು. ಅದನ್ನು ಕೇಳಿ ಪ್ರಳಯಕಾಲದಲ್ಲಿ ದಿಕ್ಕುಗೆಟ್ಟಂತೆ ಹಕ್ಕಿಗಳು ಹಾರಾಡಿದವು. ಕಾಡುಮೃಗಗಳು ಚೆಲ್ಲಾಪಿಲ್ಲಿಯಾಗಿ ಓಡಿದವು (೩೪). ಶ್ರೀರಾಮನು ಹೊಡೆದ ಆ ಮಹಾಶರವು ಸಿಡಿಲಿನಂತೆ ಮೊರೆಯುತ್ತ, ಮಿಂಚಿನಂತೆ* ಮಿಂಚುತ್ತ, ವಾಲಿಯ ಎದೆಯಲ್ಲಿ ನುಗ್ಗಿತು. ಕಪೀಶ್ವರನಾದ ವಾಲಿಯು ಮಹಾತೇಜಸ್ವಿಯೂ ವೀರ್ಯೋದ್ಧತನೂ ಆಗಿದ್ದರೂ ವೇಗದಿಂದ ಬಂದ ಬಾಣದ ಆಘಾತಕ್ಕೆ ನೆಲದಮೇಲುರುಳಿದನು (೩೫-೩೬).

---

* ಅಶನಿ=ವಜ್ರಾಯುಧ; ಮಿಂಚು. 'ಅಶನಿಸ್ತು ದ್ವಯೋರ್ವಜ್ರೇ ಸೌದಾಮಿನ್ಯಾಂ' ಇತಿ ದರ್ಪಣಃ.

ಇಂದ್ರಧ್ವಜ ಇವೋದ್ಧೂತಃ ಪೌರ್ಣಮಾಸ್ಯಾಂ ಮಹೀತಲೇ ।
ಆಶ್ವಯುಕ್ಸಮಯೇ ಮಾಸಿ ಗತಶ್ರೀಕೋ ವಿಚೇತನಃ ॥ ೩೭

ನರೋತ್ತಮಃ ಕಾಲಯುಗಾಂತಕೋಪಮಂ
ಶರೋತ್ತಮಂ ಕಾಂಚನರೂಪ್ಯಭೂಷಿತಮ್ ।
ಸಸರ್ಜ ದೀಪ್ತಂ ತಮಮಿತ್ರಮರ್ದನಂ
ಸಧೂಮಮಗ್ನಿಂ ಮುಖತೋ ಯಥಾ ಹರಃ ॥ ೩೮

ಅಥೋಕ್ಷಿತಃ ಶೋಣಿತತೋಯವಿಸ್ರವೈಃ
ಸುಪುಷ್ಪಿತಾಶೋಕ ಇವಾನಿಲೋದ್ಧತಃ ।
ವಿಚೇತನೋ ವಾಸವಸೂನುರಾಹವೇ
ವಿಭ್ರಂಶಿತೇಂದ್ರಧ್ವಜವತ್ ಕ್ಷಿತಿಂ ಗತಃ ॥ ೩೯

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಷೋಡಶಃ ಸರ್ಗಃ



ಆಶ್ವಯುಜಮಾಸದ ಹುಣ್ಣಿಮೆಯಲ್ಲಿ ಸ್ಥಾಪಿತವಾದ ಇಂದ್ರಧ್ವಜವು (ಉತ್ಸವಾಂತದಲ್ಲಿ) ಉರುಳಿಸಲ್ಪಡುವಂತೆ, ವಾಲಿಯು ತೇಜೋಹೀನನಾಗಿ ದೊಪ್ಪನೆ ಎಚ್ಚರದಪ್ಪಿ ಬಿದ್ದನು (೩೭). ಹೀಗೆ ಪುರುಷೋತ್ತಮನಾದ ಶ್ರೀರಾಮನು ಪ್ರಳಯಕಾಲದ ಮೃತ್ಯುವಿನಂತಿದ್ದ ಘೋರಾಸ್ತ್ರವನ್ನು ವಾಲಿಯ ಮೇಲೆ ಪ್ರಯೋಗಿಸಿದನು. ಸುವರ್ಣರಜತಭೂಷಿತವೂ ಶತ್ರುಘಾತಿಯೂ ಆದ ಆ ಮಹಾಸ್ತ್ರವು ಪ್ರಜ್ವಲಿಸುತ್ತ ಸಿಡಿದಾಗ, ಪ್ರಳಯಕಾಲದ ರುದ್ರನ ಮುಖದಿಂದ ಹೊಗೆಯುಗುಳುತ್ತ ಹೊರಹೊಮ್ಮುವ ಕಾಲಾಗ್ನಿಯಂತೆ ಗೋಚರಿಸಿತು (೩೮). ಇಂದ್ರಪುತ್ರನಾದ ವಾಲಿಯು ನೆತ್ತರಿನ ಪ್ರವಾಹದಿಂದ ಒದ್ದೆಯಾಗಿ ನೆಲದಮೇಲೆ ಉರುಳಿದನು. ಅವನು ಬಿರುಗಾಳಿಯಿಂದ ಬಿದ್ದ ರಕ್ತಪುಷ್ಪಮಯವಾದ ಅಶೋಕವೃಕ್ಷದಂತೆಯೂ (ಉತ್ಸವಾಂತದಲ್ಲಿ) ಬೀಳಿಸಿದ ಇಂದ್ರಧ್ವಜದಂತೆಯೂ ಕಂಗೊಳಿಸಿದನು (೩೯).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಹದಿನಾರನೆಯ ಸರ್ಗ



## ಸಪ್ತದಶಃ ಸರ್ಗಃ

ರಾಮಾಧಿಕ್ಷೇಪಃ

ತತಃ ಶರೇಣಾಭಿಹತೋ ರಾಮೇಣ ರಣಕರ್ಕಶಃ ।
ಪಪಾತ ಸಹಸಾ ವಾಲೀ ನಿಕೃತ್ತ ಇವ ಪಾದಪಃ ॥ ೧

ಸ ಭೂಮೌ ನ್ಯಸ್ತಸರ್ವಾಂಗಸ್ತಪ್ತಕಾಂಚನಭೂಷಣಃ ।
ಅಪತದ್ದೇವರಾಜಸ್ಯ ಮುಕ್ತರಶ್ಮಿರಿವ ಧ್ವಜಃ ॥ ೨

ತಸ್ಮಿನ್ನಿಪತಿತೇ ಭೂಮೌ ವಾನರಾಣಾಂ ಗಣೇಶ್ವರೇ ।
ನಷ್ಟಚಂದ್ರಮಿವ ವ್ಯೋಮ ನ ವ್ಯರಾಜತ ಮೇದಿನೀ ॥ ೩

ಭೂಮೌ ನಿಪತಿತಸ್ಯಾಪಿ ತಸ್ಯ ದೇಹಂ ಮಹಾತ್ಮನಃ ।
ನ ಶ್ರೀರ್ಜಹಾತಿ ನ ಪ್ರಾಣಾ ನ ತೇಜೋ ನ ಪರಾಕ್ರಮಃ ॥ ೪

ಶಕ್ರದತ್ತಾ ವರಾ ಮಾಲಾ ಕಾಂಚನೀ ವಜ್ರಭೂಷಿತಾ ।
ದಧಾರ ಹರಿಮುಖ್ಯಸ್ಯ ಪ್ರಾಣಾಂಸ್ತೇಜಃ ಶ್ರಿಯಂ ಚ ಸಾ ॥ ೫

## ಸರ್ಗ ೧೭

ವಾಲಿಯು ಶ್ರೀರಾಮನನ್ನು ನಿಂದಿಸುವುದು.

ರಣಧೀರನಾದ ವಾಲಿಯು ಶ್ರೀರಾಮನ ಬಾಣದಿಂದ ಅಭಿಹತನಾಗಿ, ಬುಡಕಡಿದ ಮರದಂತೆ ದೊಪ್ಪನೆ ನೆಲದಮೇಲೆ ಬಿದ್ದನು. ಕನಕಾಭರಣ ಭೂಷಿತನಾದ ವಾಲಿಯು, ಹಗ್ಗವನ್ನು ಸಡಿಲಿಸಿದ ಇಂದ್ರಧ್ವಜದಂತೆ, ಭೂಮಿಯಲ್ಲಿ ಕೈಕಾಲುಗಳನ್ನು ಚಾಚಿಕೊಂಡು ಬಿದ್ದನು (೧-೨) ಆ ವಾನರೇಂದ್ರನು ಭೂಮಿಯಲ್ಲುರುಳಲು, ಚಂದ್ರನಿಲ್ಲದ ಆಕಾಶದಂತೆ, ಆ ವನಪ್ರದೇಶವು ಕಾಂತಿಹೀನವಾಯಿತು. ಆ ಮಹಾತ್ಮನು ಭೂಮಿಯಲ್ಲಿ ಬಿದ್ದಿದ್ದರೂ ಅವನ ದೇಹದ ಕಾಂತಿಯು ಕಂದಲಿಲ್ಲ, ಪ್ರಾಣವು ಹೋಗಲಿಲ್ಲ, ತೇಜಸ್ಸು ತಗ್ಗಲಿಲ್ಲ, ಪರಾಕ್ರಮವು ಕುಂದಲಿಲ್ಲ (೩-೪) ಇಂದ್ರನು ಕೊಟ್ಟಿದ್ದ ವಜ್ರಾಲಂಕೃತವಾದ ಸುವರ್ಣಮಾಲೆಯು ಆ ಕಪೀಶ್ವರನ ಪ್ರಾಣವನ್ನೂ ತೇಜಸ್ಸನ್ನೂ ಕಾಂತಿಯನ್ನೂ ದೇಹದಲ್ಲಿ ಉಳಿಸಿತ್ತು. ಆ ಸುವರ್ಣಮಾಲೆಯಿಂದ ಭೂಷಿತನಾದ ವಾಲಿಯು, ಸಂಧ್ಯಾರಾಗದಿಂದ ಸುತ್ತಲೂ ಶೋಭಿತವಾದ ಮೇಘದಂತೆ

**ಸ ತಯಾ ಮಾಲಯಾ ವೀರೋ ಹೈಮಯಾ ಹರಿಯೂಥಪಃ ।**
**ಸಂಧ್ಯಾನುಗತಪರ್ಯಂತಃ ಪಯೋಧರ ಇವಾಭವತ್ ॥ ೬**

**ತಸ್ಯ ಮಾಲಾ ಚ ದೇಹಶ್ಚ ಮರ್ಮಘಾತೀ ಚ ಯಃ ಶರಃ ।**
**ತ್ರಿಧೇವ ರಚಿತಾ ಲಕ್ಷ್ಮೀಃ ಪತಿತಸ್ಯಾಪಿ ಶೋಭತೇ ॥ ೭**

**ತದಸ್ತ್ರಂ ತಸ್ಯ ವೀರಸ್ಯ ಸ್ವರ್ಗಮಾರ್ಗಪ್ರಭಾವನಮ್ ।**
**ರಾಮಬಾಣಾಸನೋತ್ಕ್ಷಿಪ್ತಮಾವಹತ್ ಪರಮಾಂ ಗತಿಮ್ ॥ ೮**

**ತಂ ತಥಾ ಪತಿತಂ ಸಂಖ್ಯೇ ಗತಾರ್ಚಿಷಮಿವಾನಲಮ್ ।**
**ಬಹುಮಾನ್ಯ ಚ ತಂ ವೀರಂ ವೀಕ್ಷಮಾಣಂ ಶನೈರಿವ ॥ ೯**

**ಯಯಾತಿಮಿವ ಪುಣ್ಯಾಂತೇ ದೇವಲೋಕಾತ್ ಪರಿಚ್ಯುತಮ್ ।**
**ಆದಿತ್ಯಮಿವ ಕಾಲೇನ ಯುಗಾಂತೇ ಭುವಿ ಪಾತಿತಮ್ ॥ ೧೦**

**ಮಹೇಂದ್ರಮಿವ ದುರ್ಧರ್ಷಂ ಮಹೇಂದ್ರಮಿವ ದುಃಸಹಮ್ ।**
**ಮಹೇಂದ್ರಪುತ್ರಂ ಪತಿತಂ ವಾಲಿನಂ ಹೇಮಮಾಲಿನಮ್ ॥ ೧೧**

---

ಕಂಗೊಳಿಸುತ್ತಿದ್ದನು (೫-೬). ಅಭಿಹತನಾಗಿ ಬಿದ್ದಿದ್ದರೂ ವಾಲಿಯ ತೇಜಸ್ಸು—ಅವನ ದೇಹ, ಸುವರ್ಣಮಾಲೆ, ಮರ್ಮಘಾತಿಯಾದ ರಾಮಾಸ್ತ್ರ—ಹೀಗೆ ಮೂರು ಪ್ರಕಾರವಾಗಿ ಮುಪ್ಪುರಿಗೊಂಡಂತೆ ಕಾಣಿಸುತ್ತಿತ್ತು (೭). ಶ್ರೀರಾಮನ ಕೋದಂಡದಿಂದ ಚಿಮ್ಮಿಹೋದ ಅಸ್ತ್ರವು ವೀರನಾದ ವಾಲಿಗೆ ಸ್ವರ್ಗಮಾರ್ಗವನ್ನು ತೋರಿಸಿ ಉತ್ಕೃಷ್ಟವಾದ ಸದ್ಗತಿಯನ್ನುಂಟುಮಾಡಿತು. ಜ್ವಾಲೆಯಡಗಿದ ಅಗ್ನಿಯಂತೆ ರಣರಂಗದಲ್ಲಿ ಬಿದ್ದ ವಾಲಿಯು ಮೆಲ್ಲಗೆ ಕಣ್ಣು ಬಿಟ್ಟು ಸುತ್ತಲೂ ನೋಡತೊಡಗಿದನು. ಶ್ರೀರಾಮನಿಗೆ ಆ ವೀರನ ವಿಷಯದಲ್ಲಿ ಆದರ ಉಂಟಾಯಿತು (೮-೯). ಆ ವಾಲಿಯಾದರೋ ಪುಣ್ಯಫಲವು ತೀರಿದಮೇಲೆ ದೇವಲೋಕದಿಂದ ಧರೆಗುರುಳಿದ ಯಯಾತಿಯಂತೆಯೂ ಪ್ರಳಯಕಾಲದಲ್ಲಿ ಕಾಲವಶದಿಂದ ನೆಲಕ್ಕೆ ಬಿದ್ದ ಸೂರ್ಯನಂತೆಯೂ ವಿರಾಜಿಸುತ್ತಿದ್ದನು (೧೦). ಹೇಮಮಾಲಿಯಾದ ವಾಲಿಯು ಮಹೇಂದ್ರನ ತನಯ. ಮಹೇಂದ್ರನಂತೆ ಪರಾಕ್ರಮಿ. ಮಹೇಂದ್ರಪರ್ವತದಂತೆ ದುರ್ಧರ್ಷ. ವಿಸ್ತಾರವಾದ ಎದೆಕಟ್ಟುಳ್ಳವನು. ದೀರ್ಘಬಾಹು. ತೇಜಸ್ವಿಯಾದ ಮುಖ

ವ್ಯೂಢೋರಸ್ಕಂ ಮಹಾಬಾಹುಂ ದೀಪ್ತಾಸ್ಯಂ ಹರಿಲೋಚನಮ್ ।
ಲಕ್ಷ್ಮಣಾನುಗತೋ ರಾಮೋ ದದರ್ಶೋಪಸಸರ್ಪ ಚ ॥ ೧೨

ತಂ ದೃಷ್ಟ್ವಾ ರಾಘವಂ ವಾಲೀ ಲಕ್ಷ್ಮಣಂ ಚ ಮಹಾಬಲಮ್ ।
ಅಬ್ರವೀತ್ ಪ್ರಶ್ರಿತಂ ವಾಕ್ಯಂ ಪರುಷಂ ಧರ್ಮಸಂಹಿತಮ್ ॥ ೧೩

ತ್ವಂ ನರಾಧಿಪತೇಃ ಪುತ್ರಃ ಪ್ರಥಿತಃ ಪ್ರಿಯದರ್ಶನಃ ।
ಕುಲೀನಃ ಸತ್ತ್ವಸಂಪನ್ನಸ್ತೇಜಸ್ವೀ ಚರಿತವ್ರತಃ ॥ ೧೪

ಪರಾಙ್ಮುಖವಧಂ ಕೃತ್ವಾ ಕೋ ನು ಪ್ರಾಪ್ತಸ್ತ್ವಯಾ ಗುಣಃ ।
ಯದಹಂ ಯುದ್ಧಸಂರಬ್ಧಃ ಶರೇಣೋರಸಿ ತಾಡಿತಃ ॥ ೧೫

ರಾಮಃ ಕರುಣವೇದೀ ಚ ಪ್ರಜಾನಾಂ ಚ ಹಿತೇ ರತಃ ।
ಸಾನುಕ್ರೋಶೋ ಮಹೋತ್ಸಾಹಃ ಸಮಯಜ್ಞೋ ದೃಢವ್ರತಃ ॥

ಇತಿ ತೇ ಸರ್ವಭೂತಾನಿ ಕಥಯಂತಿ ಯಶೋ ಭುವಿ ।
ದಮಃ ಶಮಃ ಕ್ಷಮಾ ಧರ್ಮೋ ಧೃತಿಃ ಸತ್ಯಂ ಪರಾಕ್ರಮಃ ॥ ೧೭

---

ವುಳ್ಳವನು. ಪಿಂಗಳಾಕ್ಷ ಶ್ರೀರಾಮನು ವಾಲಿಯನ್ನು ನೋಡಿ ಲಕ್ಷ್ಮಣನೊಡನೆ ಆದರಪೂರ್ವಕವಾಗಿ ಸಮೀಪಕ್ಕೆ ಬಂದನು (೧೧-೧೨). ವಾಲಿಗೆ ಬಲಾಢ್ಯರಾದ ಶ್ರೀರಾಮಲಕ್ಷ್ಮಣರು ಗೋಚರಿಸಿದರು. ಅವನು ವಿನಯದಿಂದಲೇ ಧರ್ಮವನ್ನು ಮುಂದಿಟ್ಟು ಚುಚ್ಚುಮಾತುಗಳನ್ನಾಡತೊಡಗಿದನು : “ಎಲೈ ರಾಮ, ನೀನು ರಾಜಕುಮಾರನಾಗಿ ಜನಿಸಿ ಕೀರ್ತಿಶಾಲಿಯಾಗಿದ್ದೀಯೆ. ರೂಪಸಂಪನ್ನನಾಗಿದ್ದೀಯೆ. ಉತ್ತಮ ಕುಲದಲ್ಲಿ ಹುಟ್ಟಿ ಸತ್ತ್ವಶಾಲಿಯೆನಿಸಿದ್ದೀಯೆ. ತೇಜಸ್ವಿಯಾಗಿದ್ದೀಯೆ. ನಾನಾವ್ರತಗಳನಾಚರಿಸಿದ್ದೀಯೆ (೧೩-೧೪). ಇಂಥ ನೀನು, ನಿನ್ನೊಡನೆ ಯುದ್ಧಕ್ಕೆ ಬಾರದವನನ್ನು ವಧಿಸಿದೆಯಲ್ಲ, ನಿನಗೆ ಬಂದ ಭಾಗ್ಯವೇನು ? ಬೇರೊಬ್ಬನೊಡನೆ ನಾನು ಯುದ್ಧದಲ್ಲಿ ತಲ್ಲೀನನಾಗಿರುವಾಗ ನನ್ನ ಎದೆಗೆ ಬಾಣವನ್ನು ಪ್ರಯೋಗಿಸಿದೆಯಲ್ಲವೆ ! (೧೫). ‘ರಾಮನೆಂದರೆ ಕಾರುಣ್ಯಮೂರ್ತಿ, ಪ್ರಜಾಹಿತನಿರತ, ಕನಿಕರವುಳ್ಳವನು, ಉತ್ಸಾಹಶಾಲಿ, ಆಚಾರಶೀಲ, ವ್ರತನಿಷ್ಠ’–ಎಂದು ಸಕಲರೂ ಜಗತ್ತಿನಲ್ಲಿ ನಿನ್ನ ಕೀರ್ತಿಯನ್ನು ಹಾಡಿ ಹೊಗಳುತ್ತಿದ್ದಾರೆ ! (೧೬). ರಾಜಪುತ್ರ, ಪೃಥಿವಿಯನ್ನಾಳುವ ರಾಜರಲ್ಲಿ ಇರಬೇಕಾದ ಗುಣಗಳಿವು : ಶಮ, ದಮ,

ಪಾರ್ಥಿವಾನಾಂ ಗುಣಾ ರಾಜನ್ ದಂಡಶ್ಚಾಪ್ಯಪರಾಧಿಷು ।
ತಾನ್ ಗುಣಾನ್ ಸಂಪ್ರಧಾರ್ಯಾಹಮಗ್ರ್ಯಂ ಚಾಭಿಜನಂ ತವ ॥ ೧೮

ತಾರಯಾ ಪ್ರತಿಷಿದ್ಧೋಽಪಿ ಸುಗ್ರೀವೇಣ ಸಮಾಗತಃ ।
ನ ಮಾಮನ್ಯೇನ ಸಂರಬ್ಧಂ ಪ್ರಮತ್ತಂ ಯೋದ್ಧುಮರ್ಹತಿ ॥ ೧೯

ಇತಿ ಮೇ ಬುದ್ಧಿರುತ್ಪನ್ನಾ ಬಭೂವಾದರ್ಶನೇ ತವ ।
ನ ತ್ವಾಂ ವಿನಿಹತಾತ್ಮಾನಂ ಧರ್ಮಧ್ವಜಮಧಾರ್ಮಿಕಮ್ ॥ ೨೦

ಜಾನೇ ಪಾಪಸಮಾಚಾರಂ ತೃಣೈಃ ಕೂಪಮಿವಾವೃತಮ್ ।
ಸತಾಂ ವೇಷಧರಂ ಪಾಪಂ ಪ್ರಚ್ಛನ್ನಮಿವ ಪಾವಕಮ್ ॥ ೨೧

ನಾಹಂ ತ್ವಾಮಭಿಜಾನಾಮಿ ಧರ್ಮಚ್ಛದ್ಮಾಭಿಸಂವೃತಮ್ ।
ವಿಷಯೇ ವಾ ಪುರೇ ವಾ ತೇ ಯದಾ ನಾಪಕರೋಮ್ಯಹಮ್ ॥ ೨೨

---

ಕ್ಷಮೆ, ಧರ್ಮ, ಧೈರ್ಯ, ಪರಾಕ್ರಮ ಮತ್ತು ಅಪರಾಧಿಗಳಿಗೆ ತಕ್ಕ ದಂಡ ವಿಧಾನ. ಈ ಗುಣಗಳೆಲ್ಲವೂ ನಿನ್ನಲ್ಲಿವೆಯೆಂದು ನಾನು ನಂಬಿದ್ದೆ. ನಿನ್ನ ವಂಶೋನ್ನತಿಯನ್ನು ಪರ್ಯಾಲೋಚಿಸಿದ್ದೆನು (೧೭-೧೮). ಆದ್ದರಿಂದಲೇ ತಾರೆಯು ಬೇಡಬೇಡವೆಂದರೂ ಸುಗ್ರೀವನೊಡನೆ ಯುದ್ಧಕ್ಕೆ ಬಂದೆನು. ನಾನು ಇನ್ನೊಬ್ಬನೊಡನೆ ಯುದ್ಧದಲ್ಲಿ ಮುಳುಗಿ ಮೈಮರೆತಿರುವಾಗ, ಗುಣಶಾಲಿಯಾದ ರಾಮನು ನನ್ನಮೇಲೆ ಬಾಣಪ್ರಯೋಗವನ್ನು ಮಾಡುವುದಿಲ್ಲವೆಂದೇ ನನ್ನ ತಿಳಿವಳಿಕೆಯಾಗಿತ್ತು. ಇದೆಲ್ಲವೂ ಪ್ರತ್ಯಕ್ಷವಾಗಿ ನಿನ್ನನ್ನು ನೋಡದೆ ಮಾಡಿಕೊಂಡಿದ್ದ ಕಲ್ಪನೆ. ನೀನು ಇಂಥ ಕೀಳುಮಟ್ಟದವನೆಂದೂ ಧರ್ಮದ ಹೆಸರಿನಲ್ಲಿ ಡೊಂಬರಾಟವಾಡುವ ಅಧಾರ್ಮಿಕನೆಂದೂ ನನಗೆ ಗೊತ್ತಿರಲಿಲ್ಲ! (೧೯-೨೦). ಹುಲ್ಲು ಹೊದಿಸಿದ ಹಾಳುಬಾವಿಯಂತಿರುವ ಪಾಪಿ ನೀನು! ಬೂದಿ ಮುಚ್ಚಿದ ಕೆಂಡದಂತೆ ಸಾಧುವೇಷವನ್ನು ಧರಿಸಿದ ದುಷ್ಟ ನೀನು! ಧರ್ಮದ ನೆವದಿಂದ ಕುಟಿಲಬುದ್ಧಿಯನ್ನು ಮರೆಸಿಕೊಂಡಿರುವೆಯೆಂಬುದು ನನಗೆ ತಿಳಿಯದೆ ಹೋಯಿತು! ಎಲೈ ರಾಮ, ನಿನ್ನ ಪಟ್ಟಣಕ್ಕೆ, ನಿನ್ನ ದೇಶಕ್ಕೆ ಬಂದು ನಾನು ಯಾವ ಅಪರಾಧವನ್ನೂ

*

ನ ಚ ತ್ವಾಮವಜಾನೇಽಹಂ ಕಸ್ಮಾನ್ಮಾಂ ಹಂಸ್ಯಕಿಲ್ಬಿಷಮ್ ।
ಫಲಮೂಲಾಶನಂ ನಿತ್ಯಂ ವಾನರಂ ವನಗೋಚರಮ್ ॥ ೨೩

ಮಾಮಿಹಾಪ್ರತಿಯುಧ್ಯಂತಮನ್ಯೇನ ಚ ಸಮಾಗತಮ್ ।
ತ್ವಂ ನರಾಧಿಪತೇಃ ಪುತ್ರಃ ಪ್ರತೀತಃ ಪ್ರಿಯದರ್ಶನಃ ॥ ೨೪

ಲಿಂಗಮಪ್ಯಸ್ತಿ ತೇ ರಾಜನ್ ದೃಶ್ಯತೇ ಧರ್ಮಸಂಹಿತಮ್ ।
ಕಃ ಕ್ಷತ್ರಿಯಕುಲೇ ಜಾತಃ ಶ್ರುತವಾನ್ನಷ್ಟಸಂಶಯಃ ॥ ೨೫

ಧರ್ಮಲಿಂಗಪ್ರತಿಚ್ಛನ್ನಃ ಕ್ರೂರಂ ಕರ್ಮ ಸಮಾಚರೇತ್ ।
ರಾಮ ರಾಜಕುಲೇ ಜಾತೋ ಧರ್ಮವಾನಿತಿ ವಿಶ್ರುತಃ ॥ ೨೬

ಅಭವ್ಯೋ ಭವ್ಯರೂಪೇಣ ಕಿಮರ್ಥಂ ಪರಿಧಾವಸಿ ।
ಸಾಮ ದಾನಂ ಕ್ಷಮಾ ಧರ್ಮಃ ಸತ್ಯಂ ಧೃತಿಪರಾಕ್ರಮೌ ॥ ೨೭

---

ಮಾಡಿಲ್ಲ (೨೧-೨೨). ನಿನ್ನನ್ನು ಅವಮಾನಪಡಿಸಿಲ್ಲ ಯಾವ ತಪ್ಪನ್ನೂ ಮಾಡದ ನನ್ನನ್ನು ಕೊಲ್ಲಲು ನಿನಗೆ ಕಾರಣವಾದರೂ ಏನಿತ್ತು? ಫಲಮೂಲಗಳನ್ನು ತಿಂದುಕೊಂಡು ನನ್ನ ಪಾಡಿಗೆ ವನದಲ್ಲಿ ವಾಸಿಸುವ ಒಬ್ಬ ವಾನರ ನಾನು (೨೩). ನಿನ್ನೊಡನೆ ಯುದ್ಧಕ್ಕೆ ನಿಂತವನೂ ಅಲ್ಲ. ಇನ್ನೊಬ್ಬನೊಡನೆ ಹೊಡೆದಾಡುತ್ತಿರುವಾಗ (ಮರೆಯಲ್ಲಿ ನಿಂತು) ನನ್ನನ್ನು ಹೊಡೆಯಲು ನಿಮಿತ್ತವಾದರೂ ಏನು ? ನೀನಾದರೋ ಮನುಷ್ಯೇಶ್ವರನ ಪುತ್ರ ; ವಿಖ್ಯಾತನಾದವನು. ನಿನ್ನ ರೂಪವು ನೋಡಲು ಭವ್ಯವಾಗಿದೆ (೨೪). ಅಲ್ಲದೆ ನೀನು ಧರ್ಮನಿಷ್ಠನೆಂದು ಸಾರುವುದಕ್ಕೆ ಈ ಜಟಾವಲ್ಕಲಗಳ ವೇಷ ಬೇರೆ! ಕ್ಷತ್ರಿಯವಂಶದಲ್ಲಿ ಜನಿಸಿ ವಿದ್ಯಾವಂತನಾಗಿ ಧರ್ಮಾಧರ್ಮಗಳಲ್ಲಿ ನಿಶ್ಚಯಜ್ಞಾನವಿರುವ ಯಾವನು ತಾನೇ ನಿನ್ನಹಾಗೆ ಧಾರ್ಮಿಕವೇಷವನ್ನು ಧರಿಸಿಕೊಂಡು ಇಂಥ ಕ್ರೂರಕರ್ಮವನ್ನು ಆಚರಿಸಿಯಾನು ? ರಾಮ, ರಾಜಕುಲದಲ್ಲಿ ಜನಿಸಿದ್ದೀಯೆ. ಧರ್ಮರಕ್ಷಕನೆಂದು ನಿನ್ನ ಪ್ರಖ್ಯಾತಿ ಹರಡಿದೆ (೨೫-೨೬). ಆದರೆ ನೀನು ಕ್ರೂರಾತ್ಮ! ಈ ಸೌಮ್ಯವೇಷವನ್ನು ಧರಿಸಿ ಏತಕ್ಕಾಗಿ ಅಲೆಯುತ್ತಿದ್ದೀಯೆ ? ಎಲೈ ರಾಜನೆ! ಸಾಮ, ದಾನ, ತಾಳ್ಮೆ,

ಪಾರ್ಥಿವಾನಾಂ ಗುಣಾ ರಾಜನ್ ದಂಡಶ್ಚಾಪ್ಯಪರಾಧಿಷು ।
ವಯಂ ವನಚರಾ ರಾಮ ಮೃಗಾ ಮೂಲಫಲಾಶನಾಃ ॥ ೨೮

ಏಷಾ ಪ್ರಕೃತಿರಸ್ಮಾಕಂ ಪುರುಷಸ್ತ್ವಂ ನರೇಶ್ವರಃ ।
ಭೂಮಿರ್ಹಿರಣ್ಯಂ ರೂಪಂ ಚ ವಿಗ್ರಹೇ ಕಾರಣಾನಿ ಚ ॥ ೨೯

ಅತ್ರ ಕಸ್ತೇ ವನೇ ಲೋಭೋ ಮದೀಯೇಷು ಫಲೇಷು ವಾ ।
ನಯಶ್ಚ ವಿನಯಶ್ಚೋಭೌ ನಿಗ್ರಹಾನುಗ್ರಹಾವಪಿ ॥ ೩೦

ರಾಜವೃತ್ತಿರಸಂಕೀರ್ಣಾ ನ ನೃಪಾಃ ಕಾಮವೃತ್ತಯಃ ।
ತ್ವಂ ತು ಕಾಮಪ್ರಧಾನಶ್ಚ ಕೋಪನಶ್ಚಾನವಸ್ಥಿತಃ ॥ ೩೧

ರಾಜವೃತ್ತೈಸ್ತು ಸಂಕೀರ್ಣಃ ಶರಾಸನಪರಾಯಣಃ ।
ನ ತೇಽಸ್ತ್ಯಪಚಿತಿರ್ಧರ್ಮೇ ನಾರ್ಥೇ ಬುದ್ಧಿರವಸ್ಥಿತಾ ॥ ೩೨

---

ಧರ್ಮ, ಸತ್ಯ, ಧೈರ್ಯ, ಪರಾಕ್ರಮ—ಇವು ರಾಜಗುಣಗಳು. ಅಪರಾಧಿಗಳನ್ನು ದಂಡಿಸುವುದೂ ರಾಜಧರ್ಮ. ಆದರೆ, ರಾಮ, ನಾವು ವನಚಾರಿಗಳು. ಮೃಗಜಾತಿಗೆ ಸೇರಿದವರು. ಫಲಮೂಲಗಳನ್ನು ತಿನ್ನತಕ್ಕವರು (೨೭-೨೮). ಇದು ನಮ್ಮ ಸ್ವಭಾವ. ನೀನಾದರೋ ಮನುಷ್ಯ; ಮನುಷ್ಯೇಶ್ವರ. ಕಲಹಕ್ಕೆ ಕಾರಣಗಳು ಮುಖ್ಯವಾಗಿ ಮೂರು: ಹೆಣ್ಣು, ಹೊನ್ನು, ಮಣ್ಣು.* ನನ್ನ ಗೊಂಡಾರಣ್ಯದಲ್ಲಿ ನಿನಗೆ ಆಸೆಯಾಯಿತೊ ಅಥವಾ ಹಣ್ಣು ಹಂಪಲುಗಳಲ್ಲಿಯೊ ?† ನಯವಿನಯಗಳೂ ನಿಗ್ರಹಾನುಗ್ರಹಗಳೂ ರಾಜಧರ್ಮಗಳು (೨೯-೩೦). ಇವನ್ನು ಇಷ್ಟಬಂದಂತೆ ವಿಪರೀತವಾಗಿ ಪ್ರಯೋಗಿಸತಕ್ಕದ್ದಲ್ಲ. ರಾಜರು ಮನಸ್ಸಿಗೆ ತೋರಿದಂತೆ ನಡೆಯಕೂಡದು. ನೀನಾದರೋ ಕಾಮಕ್ರೋಧಗಳಿಂದ ತುಂಬಿದವನು. ನಿನಗೆ ಚಿತ್ತಸ್ಥೈರ್ಯವಿಲ್ಲ (೩೧). ರಾಜಧರ್ಮವು ನಿನ್ನಲ್ಲಿ ಹಿಂದುಮುಂದಾಗಿ ಸಂಕರವಾಗಿದೆ. ಬಿಲ್ಲೆಳೆದು ಬಾಣ

---

* ಮೂಲದಲ್ಲಿ 'ಭೂಮಿರ್ಹಿರಣ್ಯಂ ರೂಪಂ ಚ' ಎಂದು ಪಾಠವಿದೆ. ರೂಪವೆಂದರೆ ಹೆಣ್ಣಿನ ಸೌಂದರ್ಯವೆಂದು ಇಲ್ಲಿ ಅರ್ಥಮಾಡಿದೆ. ವ್ಯಾಖ್ಯಾನಕಾರರು ರೂಪ=ಬೆಳ್ಳಿ ಎಂದು ಅರ್ಥ ಹೇಳಿದ್ದಾರೆ. 'ರೂಪ್ಯ' ಎಂದು ಪಾಠಾಂತರವನ್ನೂ ತೋರಿಸಿದ್ದಾರೆ.

† ಕಪಿಸ್ತ್ರೀಯರನ್ನು ಶ್ರೀರಾಮನು ಬಯಸುವ ಸಂಭವವೇ ಇಲ್ಲವೆಂದು ವಾಲಿಯು ಆ ಅಂಶವನ್ನು ಎತ್ತಿ ಆಕ್ಷೇಪಿಸಲಿಲ್ಲ.

ಇಂದ್ರಿಯೈಃ ಕಾಮವೃತ್ತಃ ಸನ್ ಕೃಷ್ಯಸೇ ಮನುಜೇಶ್ವರ ।
ಹತ್ವಾ ಬಾಣೇನ ಕಾಕುತ್ಸ್ಥ ಮಾಮಿಹಾನಪರಾಧಿನಮ್ ॥ ೩೩

ಕಿಂ ವಕ್ಷ್ಯಸಿ ಸತಾಂ ಮಧ್ಯೇ ಕೃತ್ವಾ ಕರ್ಮ ಜುಗುಪ್ಸಿತಮ್ ।
ರಾಜಹಾ ಬ್ರಹ್ಮಹಾ ಗೋಘ್ನಶ್ಚೋರಃ ಪ್ರಾಣಿವಧೇ ರತಃ ॥ ೩೪

ನಾಸ್ತಿಕಃ ಪರಿವೇತ್ತಾ ಚ ಸರ್ವೇ ನಿರಯಗಾಮಿನಃ ।
ಸೂಚಕಶ್ಚ ಕದರ್ಯಶ್ಚ ಮಿತ್ರಘ್ನೋ ಗುರುತಲ್ಪಗಃ ॥ ೩೫

ಲೋಕಂ ಪಾಪಾತ್ಮನಾಮೇತೇ ಗಚ್ಛಂತ್ಯತ್ರ ನ ಸಂಶಯಃ ।
ಅಧಾರ್ಯಂ ಚರ್ಮ ಮೇ ಸದ್ಭಿಃ ರೋಮಾಣ್ಯಸ್ಥಿ ಚ ವರ್ಜಿತಮ್ ॥

ಅಭಕ್ಷ್ಯಾಣಿ ಚ ಮಾಂಸಾನಿ ತ್ವದ್ವಿಧೈರ್ಧರ್ಮಚಾರಿಭಿಃ ।
ಪಂಚ ಪಂಚನಖಾ ಭಕ್ಷ್ಯಾ ಬ್ರಹ್ಮ ಕ್ಷತ್ರೇಣ ರಾಘವ ॥ ೩೭

---

ಹೊಡೆಯುವುದರಲ್ಲಿಯೇ ನಿನಗೆ ಆಸಕ್ತಿ. ನಿನಗೆ ಧರ್ಮದಲ್ಲಿ ಶ್ರದ್ಧೆ ಇಲ್ಲ. ಅರ್ಥದಲ್ಲಿ ಯುಕ್ತಾಯುಕ್ತವನ್ನು ವಿವೇಚಿಸುವ ಬುದ್ಧಿ ಇಲ್ಲ. ಕಾಮತಂತ್ರ ಪರಾಯಣ ನೀನು! ಇಂದ್ರಿಯಗಳು ಎಳೆದತ್ತ ಸರಿಯುವೆ. ಎಲೈ ಮನುಜೇಶ್ವರ—ಕಾಕುತ್ಸ್ಥ, ನಿರಪರಾಧಿಯಾದ ನನ್ನನ್ನು ಬಾಣದಿಂದ ಘಾತಿಸಿದೆಯಲ್ಲ (೩೨-೩೩). ಈ ತುಚ್ಛವಾದ ಕಾರ್ಯವನ್ನು ಮಾಡಿ (ನಾಳೆ) ಸಜ್ಜನರೆದುರಿಗೆ ಯಾವ ಸಮಾಧಾನವನ್ನು ನುಡಿಯಬಲ್ಲೆ? ರಾಜಹತ್ಯೆ ಬ್ರಹ್ಮಹತ್ಯೆ ಗೋಹತ್ಯೆಗಳನ್ನು ಮಾಡಿದವರು, ಕಳ್ಳ, ಪ್ರಾಣಿಹಿಂಸಾನಿರತ, ನಾಸ್ತಿಕ ಮತ್ತು ಅಣ್ಣನಿಗಿಂತಲೂ ಮೊದಲು ಮದುವೆಮಾಡಿಕೊಳ್ಳುವವನು—ಇವರೆಲ್ಲರಿಗೂ ನರಕವೇ ಗತಿ (೩೪). ಚಾಡಿಖೋರ, ಜಿಪುಣ, ನಂಬಿದ ಮಿತ್ರನನ್ನು ಹಾಳುಮಾಡತಕ್ಕವನು, ಗುರುತಲ್ಪಗಾಮಿ—ಇವರೆಲ್ಲರೂ ಪಾಪಿಗಳು ಸೇರುವ ನರಕಲೋಕವನ್ನೇ ಸೇರುವರು, ಸಂದೇಹವಿಲ್ಲ. ಎಲೈ ರಾಮ, ನನ್ನ ಚರ್ಮವು ಸಜ್ಜನರಿಗೆ ಧಾರಣಯೋಗ್ಯವಲ್ಲ. ರೋಮಗಳೂ ಅಸ್ಥಿಯೂ ನಿಷಿದ್ಧ (೩೫-೩೬). ನಿನ್ನಂಥ ಧರ್ಮಶೀಲರಿಗೆ ನನ್ನ ಮಾಂಸವೂ ತಿನ್ನಲು ಅರ್ಹವಲ್ಲ. ಐದು ನಖಗಳುಳ್ಳ ಪ್ರಾಣಿಗಳಲ್ಲಿ

**ಶಲ್ಯಕಃ ಶ್ವಾವಿಧೋ ಗೋಧಾ ಶಶಃ ಕೂರ್ಮಶ್ಚ ಪಂಚಮಃ ।**
**ಚರ್ಮ ಚಾಸ್ಥಿ ಚ ಮೇ ರಾಜನ್ನ ಸ್ಪೃಶಂತಿ ಮನೀಷಿಣಃ ॥** ೩೮

**ಅಭಕ್ಷ್ಯಾಣಿ ಚ ಮಾಂಸಾನಿ ಸೋಽಹಂ ಪಂಚನಖೋ ಹತಃ ।**
**ತಾರಯಾ ವಾಕ್ಯಮುಕ್ತೋಽಹಂ ಸತ್ಯಂ ಸರ್ವಜ್ಞಯಾ ಹಿತಮ್ ॥** ೩೯

**ತದತಿಕ್ರಮ್ಯ ಮೋಹೇನ ಕಾಲಸ್ಯ ವಶಮಾಗತಃ ।**
**ತ್ವಯಾ ನಾಥೇನ ಕಾಕುತ್ಸ್ಥ ನ ಸನಾಥಾ ವಸುಂಧರಾ ॥** ೪೦

**ಪ್ರಮದಾ ಶೀಲಸಂಪನ್ನಾ ಧೂರ್ತೇನ ಪತಿನಾ ಯಥಾ ।**
**ಶಠೋ ನೈಕೃತಿಕಃ ಕ್ಷುದ್ರೋ ಮಿಥ್ಯಾಪ್ರಶ್ರಿತಮಾನಸಃ ॥** ೪೧

**ಕಥಂ ದಶರಥೇನ ತ್ವಂ ಜಾತಃ ಪಾಪೋ ಮಹಾತ್ಮನಾ ।**
**ಛಿನ್ನಚಾರಿತ್ರಕಕ್ಷ್ಯೇಣ ಸತಾಂ ಧರ್ಮಾತಿವರ್ತಿನಾ ॥** ೪೨

---

ಬ್ರಾಹ್ಮಣ ಕ್ಷತ್ರಿಯರು ಭಕ್ಷಿಸಬಹುದಾದ ಪ್ರಾಣಿಗಳು ಐದು ಮಾತ್ರವೇ : ಮುಳ್ಳುಹಂದಿ, ಕಾಡುಹಂದಿ, ಉಡು, ಮೊಲ ; ಐದನೆಯದು ಆಮೆ. ನನ್ನ ಚರ್ಮವನ್ನಾಗಲಿ ಮೂಳೆಯನ್ನಾಗಲಿ ವಿದ್ವಾಂಸರು ಕೈಯಿಂದಲೂ ಮುಟ್ಟುವುದಿಲ್ಲ (೩೭-೩೮). ನನ್ನ ಮಾಂಸವು ಭಕ್ಷಣಾರ್ಹವಲ್ಲ. ಅಭಕ್ಷ್ಯವರ್ಗಕ್ಕೆ ಸೇರಿದ ಐದು ನಖಗಳಿರುವ ನನ್ನನ್ನು ಕೊಂದೆಯಲ್ಲ ! ಸರ್ವವನ್ನೂ ತಿಳಿದಿದ್ದ ತಾರೆಯು ನನಗೆ ಹಿತೋಪದೇಶಮಾಡಿದಳು. ಅವಳ ನುಡಿ ಸತ್ಯವಾಯಿತು (೩೯). ಅವಳ ಮಾತನ್ನು ನಾನು ಅವಿವೇಕದಿಂದ ಮೀರಿ ನಡೆದು ಹೀಗೆ ಕಾಲವಶನಾದೆನು ಕಾಕುತ್ಸ್ಥ, ಈ ಭೂದೇವಿಗೆ ನೀನು ನಾಥನೆನಿಸಿರುವುದು ಹೆಸರಿಗೆ ಮಾತ್ರ. ನಾಥನಾಗಲು ನೀನು ಯೋಗ್ಯನಲ್ಲ ! ಭೂಮಿಯು ನಿನ್ನಿಂದ ಸನಾಥವಾಗಲಿಲ್ಲ (೪೦). ಶೀಲಸಂಪನ್ನೆಯಾದ ಸಾಧ್ವಿಗೆ ಧೂರ್ತನಾದ ಗಂಡನು ದೊರಕುವಂತೆ, ನೀನು ಭೂಮಿಗೆ ಪತಿಯಾಗಿ ದೊರಕಿದ್ದೀಯೆ ! ನೀನು ಧೂರ್ತ, ಅಪಕಾರಿ, ಅಲ್ಪ ಮನುಷ್ಯ. ನೀನು ಶಾಂತಚಿತ್ತನೆಂಬುದು ಸುಳ್ಳು (೪೧). ಎಲೈ ರಾಮ, ಪಾಪಿಯಾದ ನೀನು ಮಹಾತ್ಮನಾದ ದಶರಥನಿಗೆ ಹೇಗೆತಾನೇ ಮಗನಾಗಿ ಹುಟ್ಟಿದೆ ? ಅಯ್ಯೊ,

ತ್ಯಕ್ತಧರ್ಮಾಂಕುಶೇನಾಹಂ ನಿಹತೋ ರಾಮಹಸ್ತಿನಾ ।
ಅಶುಭಂ ಚಾಪ್ಯಯುಕ್ತಂ ಚ ಸತಾಂ ಚೈವ ವಿಗರ್ಹಿತಮ್ ॥ ೪೩

ವಕ್ಷ್ಯಸೇ ಚೇದೃಶಂ ಕೃತ್ವಾ ಸದ್ಭಿಃ ಸಹ ಸಮಾಗತಃ ।
ಉದಾಸೀನೇಷು ಯೋಽಸ್ಮಾಸು ವಿಕ್ರಮಸ್ತೇ ಪ್ರಕಾಶಿತಃ ॥ ೪೪

ಅಪಕಾರಿಷು ತಂ ರಾಜನ್ನ ಹಿ ಪಶ್ಯಾಮಿ ವಿಕ್ರಮಮ್ ।
ದೃಶ್ಯಮಾನಸ್ತು ಯುಧ್ಯೇಥಾ ಮಯಾ ಯದಿ ನೃಪಾತ್ಮಜ ॥ ೪೫

ಅದ್ಯ ವೈವಸ್ವತಂ ದೇವಂ ಪಶ್ಯೇಸ್ತ್ವಂ ನಿಹತೋ ಮಯಾ ।
ತ್ವಯಾದೃಶ್ಯೇನ ತು ರಣೇ ನಿಹತೋಽಹಂ ದುರಾಸದಃ ॥ ೪೬

ಪ್ರಸುಪ್ತಃ ಪನ್ನಗೇನೇವ ನರಃ ಪಾನವಶಂ ಗತಃ ।
ಮಾಮೇವ ಯದಿ ಪೂರ್ವಂ ತ್ವಮೇತದರ್ಥಮಚೋದಯಃ ॥ ೪೭

---

ರಾಮನೆಂಬ ಮದ್ದಾನೆ ನನ್ನನ್ನು ಸಾಯಿಸಿತು! ಈ ಆನೆಯು ಸಚ್ಚಾರಿತ್ರವೆಂಬ ಸರಪಳಿಯನ್ನು ಹರಿದೊಗೆದು ಸನ್ಮಾರ್ಗವನ್ನು ಉಲ್ಲಂಘಿಸಿ ಧರ್ಮವೆಂಬ ಅಂಕುಶಕ್ಕೆ ಬಗ್ಗದೆ ನುಗ್ಗಿ ಬಂದು ನನ್ನನ್ನು ತುಳಿಯಿತು! ಅಶುಭವೂ ಅಯೋಗ್ಯವೂ ಸಜ್ಜನರಿಗೆ ನಿಂದ್ಯವೂ ಆದ ಕೆಲಸವನ್ನು ಮಾಡಿದ್ದೀಯೆ (೪೨-೪೩). ಇಂಥ ತುಚ್ಛಕಾರ್ಯವನ್ನು ಮಾಡಿ ಸತ್ಪುರುಷರೆದುರಿಗೆ ಏನು ಹೇಳುವೆ? ತಟಸ್ಥರಾಗಿ ನಿರಪರಾಧಿಗಳಾದ ನಮ್ಮಲ್ಲಿ ಈ ಪರಾಕ್ರಮವನ್ನು ಮೆರೆಸಿದೆಯಲ್ಲ; ಅಪಕಾರಿಗಳಾದ ರಾವಣಾದಿಗಳಲ್ಲಿ, ಎಲೈ ರಾಜ, ಈ ಪರಾಕ್ರಮವನ್ನು ಏಕೆ ಮೆರೆಸಲಿಲ್ಲ? ನಿನ್ನಲ್ಲಿ ಅಂತಹ ಶೌರ್ಯವೇನೂ ನನಗೆ ಕಾಣಿಸಲಿಲ್ಲವಲ್ಲ! (೪೪-೪೫). ಎಲೈ ರಾಮ, ನನ್ನ ಕಣ್ಣೆದುರಿಗೆ ನೀನು ಯುದ್ಧಮಾಡಿದ್ದ ಪಕ್ಷದಲ್ಲಿ, ಇಷ್ಟುಹೊತ್ತಿಗೆ ನಿನಗೆ ಯಮದೇವನ ದರ್ಶನವನ್ನು ಮಾಡಿಸುತ್ತಿದ್ದೆ! ರಣರಂಗದಲ್ಲಿ ನಾನು ದುರ್ಧರ್ಷನಾದ್ದರಿಂದ ಮರೆಯಲ್ಲಿ ನಿಂತು ನನ್ನನ್ನು ಹೊಡೆದೆಯಲ್ಲವೆ? (೪೬). ಮದ್ಯಪನ್ನು ಕುಡಿದು ಮತ್ತೇರಿ ಮಲಗಿದವನನ್ನು ಹಾವು ಕಚ್ಚುವಂತೆ ನನ್ನನ್ನು ಕಡಿದೆಯಲ್ಲವೆ? ವಿಷಯವೇನೆಂಬುದನ್ನು ಮೊದಲೇ ನನಗೆ ತಿಳಿಸಿದ್ದರೆ, ನಿನ್ನ

ಮೈಥಿಲೀಮಹಮೇಕಾಹ್ನಾ ತವ ಚಾನೀತವಾನ್ ಭವೇಃ ।
ಸುಗ್ರೀವಪ್ರಿಯಕಾಮೇನ ಯತ್ಕೃತೇಽಸ್ಮಿ ಹತಸ್ತ್ವಯಾ ॥ ೪೮
ಕಂಠೇ ಬದ್ಧ್ವಾ ಪ್ರದದ್ಯಾಂ ತೇಽನಿಹತಂ ರಾವಣಂ ರಣೇ ।
ನ್ಯಸ್ತಾಂ ಸಾಗರತೋಯೇ ವಾ ಪಾತಾಲೇ ವಾಪಿ ಮೈಥಿಲೀಮ್ ॥
ಆನಯೇಯಂ ತವಾದೇಶಾಚ್ಛ್ವೇತಾಮಶ್ವತರೀಮಿವ ।
ಯುಕ್ತಂ ಯತ್ ಪ್ರಾಪ್ನುಯಾದ್ರಾಜ್ಯಂ ಸುಗ್ರೀವಃ ಸ್ವರ್ಗತೇ ಮಯಿ ॥
ಅಯುಕ್ತಂ ಯದಧರ್ಮೇಣ ತ್ವಯಾಹಂ ನಿಹತೋ ರಣೇ ।
ಕಾಮಮೇವಂವಿಧೋ ಲೋಕಃ ಕಾಲೇನ ವಿನಿಯುಜ್ಯತೇ ॥ ೫೦
ಕ್ಷಮಂ ಚೇದ್ಭವತಾ ಪ್ರಾಪ್ತಮುತ್ತರಂ ಸಾಧು ಚಿಂತ್ಯತಾಮ್ ॥

---

ಮೈಥಿಲಿಯನ್ನು ಒಂದೇ ದಿನದಲ್ಲಿ ತಂದು ನಿನಗೆ ಒಪ್ಪಿಸಿಬಿಡುತ್ತಿದ್ದೆನಲ್ಲ!* ಸುಗ್ರೀವನಿಗೆ ಸಂತೋಷವಾಗಲೆಂದು ರಾವಣನ ಉದ್ದೇಶವನ್ನಿಟ್ಟುಕೊಂಡು ನನ್ನನ್ನು ಘಾತಿಸಿದೆಯಲ್ಲವೆ? (೪೭-೪೮). ಆ ರಾವಣನ ಕತ್ತಿಗೆ ಹಗ್ಗವನ್ನು ಬಿಗಿದು, ಅವನು ಬದುಕಿರುವಂತೆಯೇ ದರದರನೆ ಎಳೆತಂದು ನಿನಗೆ ಒಪ್ಪಿಸುತ್ತಿದ್ದೆನಲ್ಲ! ಆತನು ಜಾನಕಿಯನ್ನು ಸಮುದ್ರತಳದಲ್ಲಿಟ್ಟಿರಲಿ, ಪಾತಾಳದಲ್ಲಿಯೇ ಅಡಗಿಸಿರಲಿ, ನಿನ್ನ ಆದೇಶದಂತೆ ಅವಳನ್ನು ಅನ್ವೇಷಿಸಿ ತರುತ್ತಿದ್ದೆ. (ಮಧುಕೈಟಭರು ಅಡಗಿಸಿಟ್ಟ) ಶ್ವೇತಾಶ್ವತರಿಯೆಂಬ ಶ್ರುತಿಯನ್ನು ಹಯಗ್ರೀವನು ತಂದಂತೆ ತರುತ್ತಿದ್ದೆ. ನಾನು ಸ್ವರ್ಗಸ್ಥನಾದಮೇಲೆ ಸುಗ್ರೀವನಿಗೆ ಕಿಷ್ಕಿಂಧಾರಾಜ್ಯವು ದೊರೆಯಬೇಕೆಂಬುದು ಯುಕ್ತವೇ ಸರಿ. (ರಾಜ್ಯಕ್ಕಾಗಿ ಅವನು ನನ್ನನ್ನು ಸಂಹರಿಸುವುದು ಯುಕ್ತವಾದೀತು) (೪೯-೫೦). ಆದರೆ ನೀನು ಅಧರ್ಮದಿಂದ ನನ್ನನ್ನು ಸಂಹರಿಸಿದ್ದು ಮಾತ್ರ ಅಯುಕ್ತ. ಕಾಲವಶರಾಗಿ ಜನರು ಸಾಯುವುದು ಸಹಜವೇ. 'ಜಾತಸ್ಯ ಮರಣಂ ಧ್ರುವಮ್.' ನಿನಗೆ ಬಂದಿರುವ ಈ ಸವಾಲಿಗೆ ನಿನ್ನ ಉತ್ತರವೇನು?

---

* ಮೂಲದಲ್ಲಿ '...ಆನೀತವಾನ್ ಭವೇಃ' ಎಂದು ಪಾಠವಿದೆ. ಉತ್ತಮಪುರುಷಕ್ಕೆ ಬದಲಾಗಿ ವ್ಯತ್ಯಯದಿಂದ ಮಧ್ಯಮಪುರುಷ ಬಂದಿದೆ. 'ಭವೇಯಮ್' ಎಂದು ಅರ್ಥ. '..ಆನೀತವಾನ್ ಭವೇತ್' ಎಂಬ ಪಾಠದಲ್ಲಿಯೂ ಪುರುಷವ್ಯತ್ಯಯವನ್ನು ಹೇಳಬೇಕಾಗುತ್ತದೆ. ಆದರೆ ಈ ಪಾಠದಲ್ಲಿ 'ನಾನು ತರುತ್ತಿದ್ದೆನೆಂಬುದು ಭವೇತ್ = ಆಗುತ್ತಿತ್ತು' ಎಂದು ಅರ್ಥ ಹೇಳಲು ಸಾಧ್ಯ.

**ಇತ್ಯೇವಮುಕ್ತ್ವಾ ಪರಿಶುಷ್ಕವಕ್ತ್ರಃ**
**ಶರಾಭಿಘಾತಾದ್ವ್ಯಥಿತೋ ಮಹಾತ್ಮಾ ।**
**ಸಮೀಕ್ಷ್ಯ ರಾಮಂ ರವಿಸಂನಿಕಾಶಂ**
**ತೂಷ್ಣೀಂ ಬಭೂವಾಮರರಾಜಸೂನುಃ ॥** ೫೨

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಸಪ್ತದಶಃ ಸರ್ಗಃ

---

## ಅಷ್ಟಾದಶಃ ಸರ್ಗಃ

ವಾಲಿವಧಸಮರ್ಥನಮ್

**ಇತ್ಯುಕ್ತಃ ಪ್ರಶ್ರಿತಂ ವಾಕ್ಯಂ ಧರ್ಮಾರ್ಥಸಹಿತಂ ಹಿತಮ್ ।**
**ಪರುಷಂ ವಾಲಿನಾ ರಾಮೋ ನಿಹತೇನ ವಿಚೇತಸಾ ॥** ೧

---

ಸರಿಯಾಗಿ ಆಲೋಚಿಸಿ ನೋಡು" ಎಂದನು (೫೧). ಇಷ್ಟು ಹೇಳುವುದರಲ್ಲಿ ಶರಘಾತದಿಂದ ತತ್ತರಿಸುತ್ತಿದ್ದ ವಾಲಿಯ ಬಾಯಿ ಒಣಗಿತು. ದೇವೇಂದ್ರ ತನಯನಾದ ಆ ಮಹಾತ್ಮನು, ಸಮೀಪದಲ್ಲಿ ಸೂರ್ಯನಂತೆ ಬೆಳಗುತ್ತ ನಿಂತಿದ್ದ ಶ್ರೀರಾಮನನ್ನು ದಿಟ್ಟಿಸಿ ನೋಡಿ ಸುಮ್ಮನಾದನು (೫೨).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಹದಿನೇಳನೆಯ ಸರ್ಗ

---

## ಸರ್ಗ ೧೮

ಶ್ರೀರಾಮನು ವಾಲಿವಧೆಯನ್ನು ಸಮರ್ಥಿಸುವುದು. ವಾಲಿಯ ಕ್ಷಮಾಯಾಚನೆ. ಶ್ರೀರಾಮನಿಂದ ಅಭಯಪ್ರದಾನ.

ಶರಘಾತದಿಂದ ವ್ಯಾಕುಲಚಿತ್ತನಾದ ವಾಲಿಯು ಈ ರೀತಿಯಲ್ಲಿ ಚುಚ್ಚುಮಾತುಗಳನ್ನಾಡಿ ಶ್ರೀರಾಮನನ್ನು ಆಕ್ಷೇಪಿಸಿದನು. ವಾಲಿಯ ವಾಕ್ಯ ದಲ್ಲಿ ನಮ್ರತೆ ಇತ್ತು. ಧರ್ಮಾರ್ಥಗಳ ಪ್ರಸ್ತಾವವಿತ್ತು. ಉಭಯರ ಹಿತಚಿಂತನೆ ಇತ್ತು. ಹಾಗೆಯೇ ಮಾತು ಮರ್ಮಭೇದಕವಾಗಿಯೂ ಇತ್ತು (೧).

ತಂ ನಿಷ್ಪ್ರಭಮಿವಾದಿತ್ಯಂ ಮುಕ್ತತೋಯಮಿವಾಂಬುದಮ್ ।
ಉಕ್ತವಾಕ್ಯಂ ಹರಿಶ್ರೇಷ್ಠಮುಪಶಾಂತಮಿವಾನಲಮ್ ॥ ೨
ಧರ್ಮಾರ್ಥಗುಣಸಂಪನ್ನಂ ಹರೀಶ್ವರಮನುತ್ತಮಮ್ ।
ಅಧಿಕ್ಷಿಪ್ತಸ್ತದಾ ರಾಮಃ ಪಶ್ಚಾದ್ವಾಲಿನಮಬ್ರವೀತ್ ॥ ೩
ಧರ್ಮಮರ್ಥಂ ಚ ಕಾಮಂ ಚ ಸಮಯಂ ಚಾಪಿ ಲೌಕಿಕಮ್ ।
ಅವಿಜ್ಞಾಯ ಕಥಂ ಬಾಲ್ಯಾನ್ಮಾಮಿಹಾದ್ಯ ವಿಗರ್ಹಸೇ ॥ ೪
ಅಪೃಷ್ಟ್ವಾ ಬುದ್ಧಿಸಂಪನ್ನಾನ್ ವೃದ್ಧಾನಾಚಾರ್ಯಸಮ್ಮತಾನ್ ।
ಸೌಮ್ಯ ವಾನರಚಾಪಲ್ಯಾತ್ತ್ವಂ ಮಾಂ ವಕ್ತುಮಿಹೇಚ್ಛಸಿ ॥ ೫
ಇಕ್ಷ್ವಾಕೂಣಾಮಿಯಂ ಭೂಮಿಃ ಸಶೈಲವನಕಾನನಾ ।
ಮೃಗಪಕ್ಷಿಮನುಷ್ಯಾಣಾಂ ನಿಗ್ರಹಪ್ರಗ್ರಹಾವಪಿ ॥ ೬
ತಾಂ ಪಾಲಯತಿ ಧರ್ಮಾತ್ಮಾ ಭರತಃ ಸತ್ಯವಾನೃಜುಃ ।
ಧರ್ಮಕಾಮಾರ್ಥತತ್ತ್ವಜ್ಞೋ ನಿಗ್ರಹಾನುಗ್ರಹೇ ರತಃ ॥ ೭

---

ವಾಲಿಯ ವರ್ಚಸ್ಸು ಕುಗ್ಗುತ್ತ ಹೋಗಿ, ಅವನು ಪ್ರಭಾಹೀನನಾದ ರವಿಯಂತಾದನು. ಮಾತನ್ನಾಡಿ ಮುಗಿಸಿ, ಮಳೆಸುರಿದು ಶಾಂತವಾದ ಮೋಡದಂತಾದನು. ಜ್ವಾಲೆಯಡಗಿದ ಬೆಂಕಿಯಂತಾದನು. ವಾಲಿಯ ನಿಂದೆಗೆ ಗುರಿಯಾದ ಶ್ರೀರಾಮನು (ಅವನ ನುಡಿ ನಿಲ್ಲುವವರೆಗೆ ಸುಮ್ಮನಿದ್ದು) ಅನಂತರ ಉತ್ತರ ಕೊಡಲಾರಂಭಿಸಿದನು. ಧರ್ಮಾರ್ಥಗುಣಸಂಪನ್ನವಾದ ಮಾತಿನಿಂದ ಕಪಿಶ್ರೇಷ್ಠನಾದ ವಾಲಿಯನ್ನುದ್ದೇಶಿಸಿ ಹೀಗೆಂದನು (೨-೩): "ಸೌಮ್ಯ-ಕಪೀಶ್ವರ, ನೀನು ಧರ್ಮಾರ್ಥಕಾಮಗಳ ಸ್ವರೂಪವನ್ನೂ ಶಿಷ್ಟಾಚಾರವನ್ನೂ ಅರಿಯದೆ ಅಜ್ಞಾನದಿಂದ ನನ್ನನ್ನು ನಿಂದಿಸಬಹುದೆ? ಜ್ಞಾನಿಗಳೂ ಆಚಾರ್ಯರೆಂದು ಗೌರವಾನ್ವಿತರೂ ಆದ ಹಿರಿಯರನ್ನು ಕೇಳಿ ಧರ್ಮಾದಿಗಳ ತತ್ತ್ವವನ್ನು ನೀನು ತಿಳಿದಿಲ್ಲ. ತಿಳಿಯದೆ ಕೇವಲ ಕಪಿಚಾಪಲ್ಯದಿಂದ ನನಗೆ ಇಂಥ ಮಾತನ್ನಾಡಲು ಉದ್ದೇಶಿಸಿದೆ (೪-೫). ಈ ದೇಶವೆಲ್ಲವೂ ಇಕ್ಷ್ವಾಕುವಂಶದ ರಾಜರಿಗೆ ಸೇರಿದ್ದು. ಪರ್ವತ ಮಹಾರಣ್ಯ ವನಗಳೆಲ್ಲವೂ ಅವರಿಗೆ ಅಧೀನವಾದದ್ದು. ಮೃಗ ಪಕ್ಷಿ ಮನುಷ್ಯರ ನಿಗ್ರಹಾನುಗ್ರಹಗಳು ಅವರ ಅಧಿಕಾರಕ್ಕೆ ಒಳಪಟ್ಟದ್ದು (೬). ಈ ಭೂಪ್ರದೇಶವನ್ನು

ನಯಶ್ಚ ವಿನಯಶ್ಚೋಭೌ ಯಸ್ಮಿನ್ ಸತ್ಯಂ ಚ ಸುಸ್ಥಿತಮ್ ।
ವಿಕ್ರಮಶ್ಚ ಯಥಾದೃಷ್ಟಃ ಸ ರಾಜಾ ದೇಶಕಾಲವಿತ್ ॥ ೮

ತಸ್ಯ ಧರ್ಮಕೃತಾದೇಶಾ ವಯಮನ್ಯೇ ಚ ಪಾರ್ಥಿವಾಃ ।
ಚರಾಮೋ ವಸುಧಾಂ ಕೃತ್ಸ್ನಾಂ ಧರ್ಮಸಂತಾನಮಿಚ್ಛವಃ ॥ ೯

ತಸ್ಮಿನ್ನೃಪತಿಶಾರ್ದೂಲೇ ಭರತೇ ಧರ್ಮವತ್ಸಲೇ ।
ಪಾಲಯತ್ಯಖಿಲಾಂ ಭೂಮಿಂ ಕಶ್ಚರೇದ್ಧರ್ಮನಿಗ್ರಹಮ್ ॥ ೧೦

ತೇ ವಯಂ ಧರ್ಮವಿಭ್ರಷ್ಟಂ ಸ್ವಧರ್ಮೇ ಪರಮೇ ಸ್ಥಿತಾಃ ।
ಭರತಾಜ್ಞಾಂ ಪುರಸ್ಕೃತ್ಯ ನಿಗೃಹ್ಣೀಮೋ ಯಥಾವಿಧಿ ॥ ೧೧

---

ಧರ್ಮಾತ್ಮನೂ ಸತ್ಯಸಂಧನೂ ಋಜುಬುದ್ಧಿಯೂ ಆದ ಭರತನು ಪಾಲಿಸುತ್ತಿದ್ದಾನೆ. ಅವನು ಧರ್ಮಾರ್ಥಕಾಮಗಳ ತತ್ತ್ವವನ್ನರಿತವನಾಗಿ ದುಷ್ಟರನ್ನು ನಿಗ್ರಹಿಸಿ ಶಿಷ್ಟರನ್ನು ಅನುಗ್ರಹಿಸುವುದರಲ್ಲಿ ತತ್ಪರನಾಗಿದ್ದಾನೆ (೭). ನಯವಿನಯಗಳೂ ಸತ್ಯವೂ ಯಾರಲ್ಲಿ ಸ್ಥಿರವಾಗಿ ನೆಲೆಸಿವೆಯೋ, ಯಾರಲ್ಲಿ ಶೌರ್ಯವು ಪ್ರತ್ಯಕ್ಷವೋ, ಯಾರು ದೇಶಕಾಲಗಳ ಪರಿಸ್ಥಿತಿಯನ್ನು ಬಲ್ಲನೋ ಅವನೇ ಭೂಮಂಡಲಕ್ಕೆ ಅಧಿಪತಿಯೆನಿಸಿಕೊಳ್ಳುತ್ತಾನೆ. ಅಂತಹ ರಾಜನೇ ಭರತ (೮). ಅವನ ಧರ್ಮಪುರಸ್ಸರವಾದ ಆಜ್ಞೆಯನ್ನು ಮನ್ನಿಸಿ ಧರ್ಮರಕ್ಷಣೆಗಾಗಿ ನಾವು ಭೂಮಂಡಲವನ್ನು ಸುತ್ತುತ್ತಿದ್ದೇವೆ. ಧರ್ಮಾಭಿವೃದ್ಧಿಯಾಗಲೆಂದು ನಾವು ನಮ್ಮಂತೆಯೇ ಅನೇಕ ಭೂಪಾಲರೂ ಸಂಚರಿಸುತ್ತಿದ್ದೇವೆ. ರಾಜಸಿಂಹನೆನಿಸಿದ ಧರ್ಮವತ್ಸಲನಾದ ಭರತನು ಸಕಲ ಪೃಥ್ವಿಯನ್ನೂ ಪಾಲಿಸುತ್ತಿರುವಾಗ ಯಾವನು ಧರ್ಮವನ್ನತಿಕ್ರಮಿಸಿ ನಡೆದಾನು ? (೯-೧೦). ಸ್ವಧರ್ಮದಲ್ಲಿ ನಿರತರಾದ ನಾವು ಭರತಾಜ್ಞೆಯನ್ನು* ಮನ್ನಿಸಿ, ಧರ್ಮಭ್ರಷ್ಟನನ್ನು ನಿಯಮಾನುಸಾರವಾಗಿ ದಂಡಿಸುತ್ತಿದ್ದೇವೆ. ನೀನು

---

* ಭರತನು ತಾನಾಗಿ ಆಜ್ಞೆಮಾಡದಿದ್ದರೂ ಮೂಲಭೂತವಾದ ರಾಜಧರ್ಮದ ನಿರ್ವಹಣೆಯ ಹೊಣೆ ಶ್ರೀರಾಮನಮೇಲೂ ಇದೆ. ಭರತನು ಶ್ರೀರಾಮನ ಪ್ರತಿನಿಧಿಯಾಗಿ ಆ ಸಮಯದಲ್ಲಿ ರಾಜನೇ ಆಗಿದ್ದಾನೆ. ಭರತನು ರಾಜನೆಂದೂ ಅವನ ಆಜ್ಞೆಯನ್ನು ಪಾಲಿಸುತ್ತಿದ್ದೇನೆಂದೂ ಹೇಳುವುದು ಶ್ರೀರಾಮನ ವಿನಯಸಂಪತ್ತನ್ನು ಸೂಚಿಸುತ್ತದೆ.

ತ್ವಂ ತು ಸಂಕ್ಲಿಷ್ಟಧರ್ಮಾ ಚ ಕರ್ಮಣಾ ಚ ವಿಗರ್ಹಿತಃ ।
ಕಾಮತಂತ್ರಪ್ರಧಾನಶ್ಚ ನ ಸ್ಥಿತೋ ರಾಜವರ್ತ್ಮನಿ ॥ ೧೨

ಜ್ಯೇಷ್ಠೋ ಭ್ರಾತಾ ಪಿತಾ ಚೈವ ಯಶ್ಚ ವಿದ್ಯಾಂ ಪ್ರಯಚ್ಛತಿ ।
ತ್ರಯಸ್ತೇ ಪಿತರೋ ಜ್ಞೇಯಾ ಧರ್ಮೇ ವರ್ತ್ಮನಿ ವರ್ತಿನಃ ॥ ೧೩

ಯವೀಯಾನಾತ್ಮನಃ ಪುತ್ರಃ ಶಿಷ್ಯಶ್ಚಾಪಿ ಗುಣೋದಿತಃ ।
ಪುತ್ರವತ್ತೇ ತ್ರಯಶ್ಚಿಂತ್ಯಾ ಧರ್ಮಶ್ಚೇದತ್ರ ಕಾರಣಮ್ ॥ ೧೪

ಸೂಕ್ಷ್ಮಃ ಪರಮದುರ್ಜ್ಞೇಯಃ ಸತಾಂ ಧರ್ಮಃ ಪ್ಲವಂಗಮ ।
ಹೃದಿಸ್ಥಃ ಸರ್ವಭೂತಾನಾಮಾತ್ಮಾ ವೇದ ಶುಭಾಶುಭೇ ॥ ೧೫

ಚಪಲಶ್ಚಪಲೈಃ ಸಾರ್ಧಂ ವಾನರೈರಕೃತಾತ್ಮಭಿಃ ।
ಜಾತ್ಯಂಧ ಇವ ಜಾತ್ಯಂಧೈರ್ಮಂತ್ರಯನ್ ದ್ರಕ್ಷ್ಯಸೇ ನು ಕಿಮ್ ॥

---

ಧರ್ಮಕ್ಕೆ ಹಾನಿಯನ್ನುಂಟುಮಾಡಿದ್ದೀಯೆ. ನಿನ್ನ ಕೃತಿಯಿಂದ ಲೋಕ ನಿಂದಿತನಾಗಿದ್ದೀಯೆ. ಕಾಮಲೋಲುಪನಾಗಿ ರಾಜಮಾರ್ಗದಿಂದ ಜಾರಿದ್ದೀಯೆ (೧೧-೧೨). ಎಲೈ ವಾಲಿ, ಧರ್ಮಮಾರ್ಗದಲ್ಲಿರತಕ್ಕವನು ತನ್ನ ತಂದೆ, ಅಣ್ಣ, ವಿದ್ಯೆಯನ್ನು ಕಲಿಸಿದ ಗುರು—ಈ ಮೂವರನ್ನು ತಂದೆಯೆಂದು ಭಕ್ತಿಯಿಂದ ಗೌರವಿಸಬೇಕು. ಹಾಗೆಯೇ ತನ್ನ ಮಗ, ತಮ್ಮ, ಗುಣಶಾಲಿಯಾದ ಶಿಷ್ಯ—ಈ ಮೂವರನ್ನು ಮಕ್ಕಳೆಂದು ತಿಳಿದು ವಾತ್ಸಲ್ಯದಿಂದ ನೋಡಿಕೊಳ್ಳಬೇಕು. ಧರ್ಮಮಾರ್ಗವೇ ಯುಕ್ತವೆಂದು ನಂಬುವುದಾದರೆ, ಹೀಗೆ ನಡೆದುಕೊಳ್ಳಬೇಕು (೧೩-೧೪). ಎಲೈ ವಾನರ, ಸಜ್ಜನರ ಧರ್ಮಮಾರ್ಗವು ಅತಿಸೂಕ್ಷ್ಮವಾದುದು. ಅದರ ತತ್ತ್ವವನ್ನು ತಿಳಿಯುವುದು ಬಹು ಕಷ್ಟ. ಸಕಲ ಜಂತುಗಳ ಹೃದಯದಲ್ಲಿ ನೆಲೆಸಿದ ಅಂತರ್ಯಾಮಿಯಾದ ಆತ್ಮನೊಬ್ಬನಿಗೆ ಇದು ಸರಿ—ಇದು ತಪ್ಪು ಎಂದು ಧರ್ಮಾಧರ್ಮಗಳ ವಿವೇಕ ಜ್ಞಾನವಿರುತ್ತದೆ (೧೫). ನೀನು ಮೊದಲೇ ಚಪಲಸ್ವಭಾವದ ವಾನರ. ಅವಿವೇಕಿಗಳೂ ಚಪಲಚಿತ್ತರೂ ಆದ ಕಪಿಗಳೊಡನೆ ಸಮಾಲೋಚಿಸುವ ನಿನಗೆ ಏನು ಗೊತ್ತಿದೆ? ಹುರುಡನನ್ನು ಹುಟ್ಟುಕುರುಡರು ಕರೆದೊಯ್ಯುವಂತೆ

ಅಹಂ ತು ವ್ಯಕ್ತತಾಮಸ್ಯ ವಚನಸ್ಯ ಬ್ರವೀಮಿ ತೇ ।
ನ ಹಿ ಮಾಂ ಕೇವಲಂ ರೋಷಾತ್ತ್ವಂ ವಿಗರ್ಹಿತುಮರ್ಹಸಿ ॥ ೧೭

ತದೇತತ್ ಕಾರಣಂ ಪಶ್ಯ ಯದರ್ಥಂ ತ್ವಂ ಮಯಾ ಹತಃ ।
ಭ್ರಾತುರ್ವರ್ತಸಿ ಭಾರ್ಯಾಯಾಂ ತ್ಯಕ್ತ್ವಾ ಧರ್ಮಂ ಸನಾತನಮ್ ॥

ಅಸ್ಯ ತ್ವಂ ಧರಮಾಣಸ್ಯ ಸುಗ್ರೀವಸ್ಯ ಮಹಾತ್ಮನಃ ।
ರುಮಾಯಾಂ ವರ್ತಸೇ ಕಾಮಾತ್ ಸ್ನುಷಾಯಾಂ ಪಾಪಕರ್ಮಕೃತ್

ತದ್ವ್ಯತೀತಸ್ಯ ತೇ ಧರ್ಮಾತ್ ಕಾಮವೃತ್ತಸ್ಯ ವಾನರ ।
ಭ್ರಾತೃಭಾರ್ಯಾವಮರ್ಶೇಽಸ್ಮಿನ್ ದಂಡೋಽಯಂ ಪ್ರತಿಪಾದಿತಃ ॥

ನ ಹಿ ಧರ್ಮವಿರುದ್ಧಸ್ಯ ಲೋಕವೃತ್ತಾದಪೇಯುಷಃ ।
ದಂಡಾದನ್ಯತ್ರ ಪಶ್ಯಾಮಿ ನಿಗ್ರಹಂ ಹರಿಯೂಥಪ ॥ ೨೧

ನ ಹಿ ತೇ ಮರ್ಷಯೇ ಪಾಪಂ ಕ್ಷತ್ರಿಯೋಽಹಂ ಕುಲೋದ್ಭವಃ ।
ಔರಸೀಂ ಭಗಿನೀಂ ವಾಪಿ ಭಾರ್ಯಾಂ ವಾಪ್ಯನುಜಸ್ಯ ಯಃ ॥ ೨೨

---

ನಿನ್ನ ಪರಿಸ್ಥಿತಿಯಾಗಿದೆ (೧೬). ನನ್ನ ಮಾತಿನ ಅಭಿಪ್ರಾಯವನ್ನು ವಿವರಿಸಿ ಹೇಳುವೆನು, ಕೇಳು. ಬರಿಯ ರೋಷಾವೇಶದಿಂದ ನನ್ನನ್ನು ನಿಂದಿಸಬೇಡ. ನಿನ್ನನ್ನು ನಾನು ಸಂಹರಿಸಲು ಇದು ಕಾರಣವೆಂದು ತಿಳಿ. ಏನೆಂದರೆ, ನೀನು ಸನಾತನಧರ್ಮವನ್ನುಲ್ಲಂಘಿಸಿ ನಿನ್ನ ತಮ್ಮನ ಭಾರ್ಯೆಯೊಡನೆ ರಮಿಸುತ್ತಿದ್ದೀಯೆ (೧೭–೧೮). ಮಹಾತ್ಮನಾದ ಸುಗ್ರೀವನು ಜೀವಿಸಿರುವಾಗಲೇ ಅವನ ಭಾರ್ಯೆಯಾದ ರುಮೆಯೊಡನೆ ನೀನು ಕಾಮಲೋಲುವನಾಗಿ ವರ್ತಿಸುತ್ತಿದ್ದೀಯೆ. ಅವಳು ನಿನಗೆ ಸೊಸೆಯಾಗಲಿಲ್ಲವೆ? ಈ ಪಾಪಕರ್ಮವನ್ನು ಎಸಗಿದ್ದೀಯೆ. ಧರ್ಮವನ್ನುಲ್ಲಂಘಿಸಿ ಕಾಮಪರಾಯಣನಾಗಿ ತಮ್ಮನ ಹೆಂಡತಿಯನ್ನು ಮುಟ್ಟಿದುದಕ್ಕೋಸ್ಕರ ನಿನಗೆ ಈ ಶಿಕ್ಷೆಯನ್ನು ವಿಧಿಸಿದ್ದೇನೆ (೧೯–೨೦). ವಾನರೇಶ್ವರ, ಧರ್ಮವಿರುದ್ಧವಾಗಿ ವರ್ತಿಸುತ್ತ ಶಿಷ್ಟಾಚಾರವನ್ನು ಅತಿಕ್ರಮಿಸುವವನಿಗೆ ಮರಣದಂಡನೆಯಲ್ಲದೆ ಅವನನ್ನು ನಿಗ್ರಹಿಸುವ ಇನ್ನೊಂದು ಮಾರ್ಗವು ನನಗೆ ತೋರದು (೨೧). ನಾನು ಸತ್ಕುಲಪ್ರಸೂತನಾದ ಕ್ಷತ್ರಿಯನಾಗಿ ನಿನ್ನ ಪಾಪಕರ್ಮವನ್ನು ಸಹಿಸಲಾರೆ. ಮಗಳು ಒಡಹುಟ್ಟಿದವಳು, ತಮ್ಮನ ಮಡದಿ–ಇವರಲ್ಲಿ ಯಾವನು ಕಾಮಾತಿರೇಕ

ಪ್ರಚರೇತ ನರಃ ಕಾಮಾತ್ತಸ್ಯ ದಂಡೋ ವಧಃ ಸ್ಮೃತಃ ।
ಭರತಸ್ತು ಮಹೀಪಾಲೋ ವಯಂ ಚಾದೇಶವರ್ತಿನಃ ॥ ೨೩

ತ್ವಂ ತು ಧರ್ಮಾದತಿಕ್ರಾಂತಃ ಕಥಂ ಶಕ್ಯಮುಪೇಕ್ಷಿತುಮ್ ।
ಗುರುರ್ಧರ್ಮವ್ಯತಿಕ್ರಾಂತಂ ಪ್ರಾಜ್ಞೋ ಧರ್ಮೇಣ ಪಾಲಯನ್ ॥

ಭರತಃ ಕಾಮವೃತ್ತಾನಾಂ ನಿಗ್ರಹೇ ಪರ್ಯವಸ್ಥಿತಃ ।
ವಯಂ ತು ಭರತಾದೇಶಂ ವಿಧಿಂ ಕೃತ್ವಾ ಹರೀಶ್ವರ ॥ ೨೫

ತ್ವದ್ವಿಧಾನ್ ಭಿನ್ನಮರ್ಯಾದಾನ್ನಿಯಂತುಂ ಪರ್ಯವಸ್ಥಿತಾಃ ।
ಸುಗ್ರೀವೇಣ ಚ ಮೇ ಸಖ್ಯಂ ಲಕ್ಷ್ಮಣೇನ ಯಥಾ ತಥಾ ॥ ೨೬

ದಾರರಾಜ್ಯನಿಮಿತ್ತಂ ಚ ನಿಃಶ್ರೇಯಸಿ ರತಃ ಸ ಮೇ ।
ಪ್ರತಿಜ್ಞಾ ಚ ಮಯಾ ದತ್ತಾ ತದಾ ಪಾವಕಸಂನಿಧೌ ॥ ೨೭

ಪ್ರತಿಜ್ಞಾಯ ಕಥಂ ಶಕ್ಯಂ ಮದ್ವಿಧೇನಾನವೇಕ್ಷಿತುಮ್ ।
ತದೇಭಿಃ ಕಾರಣೈಃ ಸರ್ವೈರ್ಮಹದ್ಭಿರ್ಧರ್ಮಸಂಹಿತೈಃ ॥ ೨೮

---

ದಿಂದ ಪ್ರವರ್ತಿಸುವನೋ ಅವನಿಗೆ ವಧೆಯೇ ಶಿಕ್ಷೆಯೆಂದು ಶಾಸ್ತ್ರವಿಹಿತವಾಗಿದೆ. ಭರತನು ಈ ಭೂಮಿಗೆ ಅಧಿಪತಿ ನಾವು ಅವನ ಆದೇಶದಂತೆ ನಡೆಯತಕ್ಕವರು (೨೨-೨೩). ನೀನು ಧರ್ಮವನ್ನುಲ್ಲಂಘಿಸಿದ್ದೀಯೆ. ನಿನ್ನನ್ನು ನೋಡುತ್ತ ಉಪೇಕ್ಷೆಯಿಂದಿರಲು ಹೇಗೆ ಸಾಧ್ಯ ? ಸಮ್ರಾಟನೂ ಪ್ರಾಜ್ಞನೂ ಆದ ಭರತನು ಧರ್ಮಾತಿಕ್ರಮಣವಾಗದಂತೆ ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದಾನೆ. ಸ್ವೇಚ್ಛೆಯಾಗಿ ನಡೆಯತಕ್ಕವರನ್ನು ದಂಡಿಸುವುದರಲ್ಲಿ ಉದ್ಯುಕ್ತನಾಗಿದ್ದಾನೆ. ನಾವು ಭರತನ ಆಜ್ಞೆಯೇ ಪ್ರಮಾಣವೆಂದು ಮನ್ನಿಸುತ್ತೇವೆ (೨೪-೨೫). ಆದ್ದರಿಂದ, ಎಲೈ ಕಪೀಶ್ವರ, ಮರ್ಯಾದೆಯನ್ನತಿಕ್ರಮಿಸುವ ನಿನ್ನಂಥವರನ್ನು ಶಿಕ್ಷಿಸುವ ಕಾರ್ಯದಲ್ಲಿ ತೊಡಗಿದ್ದೇವೆ. ನನಗೆ ಸುಗ್ರೀವನೊಡನಾದ ಮೈತ್ರಿಯು ಲಕ್ಷ್ಮಣನ ಸ್ನೇಹದಂತೆ ಅತಿದೃಢವಾದುದು. ಅವನ ಮಡದಿಯನ್ನೂ ರಾಜ್ಯವನ್ನೂ ಕೊಡಿಸುವುದಕ್ಕಾಗಿ ಈ ಮೈತ್ರಿ ಏರ್ಪಟ್ಟಿತು. ಆತನೂ ನನ್ನ ಹಿತಸಾಧನೆಯಲ್ಲಿ ನಿರತನಾಗಿದ್ದಾನೆ. ನಿನ್ನನ್ನು ಕೊಲ್ಲುವುದಾಗಿ ಅಗ್ನಿಸನ್ನಿಧಾನದಲ್ಲಿ ಪ್ರತಿಜ್ಞೆ ಮಾಡಿ ಅವನಿಗೆ ಮಾತುಕೊಟ್ಟಿದ್ದೇನೆ (೨೬-೨೭). ನನ್ನಂಥವನು ಪ್ರತಿಜ್ಞೆ

ಶಾಸನಂ ತವ ಯದ್ಯುಕ್ತಂ ತದ್ಭವಾನನುಮನ್ಯತಾಮ್ ।
ಸರ್ವಥಾ ಧರ್ಮ ಇತ್ಯೇವ ದ್ರಷ್ಟವ್ಯಸ್ತವ ನಿಗ್ರಹಃ ॥ ೨೯

ವಯಸ್ಯಸ್ಯೋಪಕರ್ತವ್ಯಂ ಧರ್ಮಮೇವಾನುಪಶ್ಯತಃ ।
ಶಕ್ಯಂ ತ್ವಯಾಪಿ ತತ್ ಕಾರ್ಯಂ ಧರ್ಮಮೇವಾನುವರ್ತತಾ ॥ ೩೦

ಶ್ರೂಯತೇ ಮನುನಾ ಗೀತೌ ಶ್ಲೋಕೌ ಚಾರಿತ್ರವತ್ಸಲೌ ।
ಗೃಹೀತೌ ಧರ್ಮಕುಶಲೈಸ್ತತ್ತಥಾ ಚರಿತಂ ಮಯಾ ॥ ೩೧

*ರಾಜಭಿರ್ಧೃತದಂಡಾಸ್ತು ಕೃತ್ವಾ ಪಾಪಾನಿ ಮಾನವಾಃ ।
ನಿರ್ಮಲಾಃ ಸ್ವರ್ಗಮಾಯಾಂತಿ ಸಂತಃ ಸುಕೃತಿನೋ ಯಥಾ ॥ ೩೨

*ಶಾಸನಾದ್ವಾ ವಿಮೋಕ್ಷಾದ್ವಾ ಸ್ತೇನಃ ಸ್ತೇಯಾದ್ವಿಮುಚ್ಯತೇ ।
ರಾಜಾ ತ್ವಶಾಸನ್ ಪಾಪಸ್ಯ ತದವಾಪ್ನೋತಿ ಕಿಲ್ಬಿಷಮ್ ॥ ೩೩

---

ಮಾಡಿ ಅದನ್ನು ಉಪೇಕ್ಷಿಸಲು ಹೇಗೆ ಶಕ್ಯವಾದೀತು ? ಧರ್ಮಸಮ್ಮತವಾದ ಈ ಮಹತ್ತರ ಕಾರಣಗಳೆಲ್ಲವೂ ನೇರಿದುದರಿಂದ ನಿನ್ನನ್ನು ದಂಡಿಸುವುದು ಆವಶ್ಯಕವಾಯಿತು. ಈ ದಂಡನೆಯು ನಿನಗೆ ಯುಕ್ತವಾದುದೆಂದು ನೀನು ಒಪ್ಪಿಕೊಳ್ಳಬೇಕು. ನಿನ್ನನ್ನು ಶಿಕ್ಷಿಸಿರುವುದು ಸರ್ವವಿಧದಲ್ಲಿಯೂ ಧರ್ಮ ವೆಂದೇ ತಿಳಿಯಬೇಕು (೨೮-೨೯). ಧರ್ಮದಲ್ಲಿಯೇ ದೃಷ್ಟಿಯುಳ್ಳವನು ಮಿತ್ರನಿಗೆ ಉಪಕಾರಮಾಡಲೇಬೇಕು. ಎಲೈ ವಾಲಿ, ಧರ್ಮವನ್ನೇ ಅನುಸರಿಸತಕ್ಕವನಾಗಿದ್ದರೆ ನೀನೂ ಕೂಡ ಇಂತಹ ಕಾರ್ಯವನ್ನು ಮಾಡುತ್ತಿದ್ದೆ. ಸದಾಚಾರವನ್ನು ಕುರಿತು ಮನುವು ಎರಡು ಶ್ಲೋಕಗಳನ್ನು ಹೇಳಿದ್ದಾನೆ. ಧರ್ಮನಿಷ್ಠರೆಲ್ಲರೂ ಅವನ್ನು ಪರಿಗ್ರಹಿಸಿದ್ದಾರೆ. ಅದರಂತೆ ನಾನು ನಡೆದುಕೊಂಡಿದ್ದೇನೆ (೩೦-೩೧). ಆ ಶ್ಲೋಕಗಳ ಅರ್ಥವೇನೆಂದರೆ, 'ಜನರು ಪಾಪಕರ್ಮಗಳನ್ನಾಚರಿಸಿದರೂ ರಾಜರಿಂದ ತಕ್ಕ ಶಿಕ್ಷೆಯನ್ನು ಪಡೆದಲ್ಲಿ, ಅವರ ಪಾಪಗಳೆಲ್ಲವೂ ನೀಗುತ್ತವೆ. ಪುಣ್ಯವಂತರಾದ ಸಜ್ಜನರಂತೆ ಅವರು ಸದ್ಗತಿಯನ್ನು ಪಡೆಯುತ್ತಾರೆ (೩೨). ಕಳ್ಳನನ್ನು ರಾಜನು ದಂಡಿಸಲಿ ಅಥವಾ ದಂಡಿಸದೆ ಬಿಡುಗಡೆಮಾಡಲಿ, ಕಳ್ಳತನದ ಪಾಪವು ಅವನಿಗೆ ನೀಗುವುದು. ಆದರೆ ಪಾಪಿಯನ್ನು ದಂಡಿಸದ ರಾಜನು ಅವನ ಪಾಪಕ್ಕೆ

---

* ಮನುಸ್ಮೃತಿ—೮-೩೧೮, ೩೧೬ (ಪಾಠಭೇದ ಉಂಟು).

**ಆರ್ಯೇಣ ಮಮ ಮಾಂಧಾತ್ರಾ ವ್ಯಸನಂ ಘೋರಮೀಪ್ಸಿತಮ್ ।**
**ಶ್ರಮಣೇನ ಕೃತೇ ಪಾಪೇ ಯಥಾ ಪಾಪಂ ತ್ವಯಾ ಕೃತಮ್ ॥** ೩೪

**ಅನ್ಯೈರಪಿ ಕೃತಂ ಪಾಪಂ ಪ್ರಮತ್ತೈರ್ವಸುಧಾಧಿಪೈಃ ।**
**ಪ್ರಾಯಶ್ಚಿತ್ತಂ ಚ ಕುರ್ವಂತಿ ತೇನ ತಚ್ಛಾಮ್ಯತೇ ರಜಃ ॥** ೩೫

**ತದಲಂ ಪರಿತಾಪೇನ ಧರ್ಮತಃ ಪರಿಕಲ್ಪಿತಃ ।**
**ವಧೋ ವಾನರಶಾರ್ದೂಲ ನ ವಯಂ ಸ್ವವಶೇ ಸ್ಥಿತಾಃ ॥** ೩೬

**ಶೃಣು ಚಾಪ್ಯಪರಂ ಭೂಯಃ ಕಾರಣಂ ಹರಿಪುಂಗವ ।**
**ಯಚ್ಛ್ರುತ್ವಾ ಹೇತುಮದ್ವೀರ ನ ಮನ್ಯುಂ ಕರ್ತುಮರ್ಹಸಿ ॥** ೩೭

**ನ ಮೇ ತತ್ರ ಮನಸ್ತಾಪೋ ನ ಮನ್ಯುರ್ಹರಿಯೂಥಪ ।**
**ವಾಗುರಾಭಿಶ್ಚ ಪಾಶೈಶ್ಚ ಕೂಟೈಶ್ಚ ವಿವಿಧೈರ್ನರಾಃ ॥** ೩೮

**ಪ್ರತಿಚ್ಛನ್ನಾಶ್ಚ ದೃಶ್ಯಾಶ್ಚ ಗೃಹ್ಣಂತಿ ಸುಬಹೂನ್ ಮೃಗಾನ್ ।**
**ಪ್ರಧಾವಿತಾನ್ ವಾ ವಿತ್ರಸ್ತಾನ್ ವಿಸ್ರಬ್ಧಾಂಶ್ಚಾಪಿ ನಿಷ್ಠಿತಾನ್ ॥** ೩೯

---

ಭಾಗಿಯಾಗುತ್ತಾನೆ’ (೩೩). ವಾಲಿ, ನಿನ್ನಂತೆಯೇ ಒಬ್ಬ ಶ್ರಮಣನು ಹಿಂದೆ ಒಂದು ಪಾಪಕೃತ್ಯವನ್ನು ಮಾಡಿದ್ದನು ಆಗ ನನ್ನ ವಂಶದಲ್ಲಿ ಪೂಜ್ಯನಾದ ಮಾಂಧಾತನು ಆ ಶ್ರಮಣನಿಗೆ ಘೋರವಾದ ತಕ್ಕ ಶಿಕ್ಷೆಯನ್ನು ವಿಧಿಸಿದನು ನಿನ್ನಂತೆಯೇ ಅನೇಕ ಭೂಪಾಲರು ಪ್ರಮಾದದಿಂದ ದುಷ್ಕೃತ್ಯಗಳನ್ನು ನಡೆಸಿ, ಅನಂತರ ಪ್ರಾಯಶ್ಚಿತ್ತವನ್ನು ಮಾಡಿಕೊಂಡಿದ್ದಾರೆ. ಪ್ರಾಯಶ್ಚಿತ್ತದಿಂದ ಪಾಪವು ಪರಿಹೃತವಾಗುತ್ತದೆ (೩೪-೩೫). ಆದ್ದರಿಂದ ವ್ಯಥೆಪಡಬೇಡ. ನಿನ್ನ ವಧೆಯು ಧರ್ಮವಿಹಿತವಾಗಿ ನಡೆದಿದೆ ವಾನರೇಶ್ವರ, ನಾವು ಈ ವಿಷಯದಲ್ಲಿ ಸ್ವತಂತ್ರರಲ್ಲ. ಅಲ್ಲದೆ ಮತ್ತೊಂದು ಕಾರಣವನ್ನು ಕೇಳು. ಮುಖ್ಯವಾದ ಆ ಕಾರಣವನ್ನು ಕೇಳಿದರೆ, ನನ್ನ ವಿಷಯದಲ್ಲಿ ನೀನು ಕೋಪಿಸಲಾರೆ (೩೬-೩೭) ವಾನರೇಶ್ವರ, ನೀನು ನಿಂದಿಸಿದ್ದರಿಂದ ನನಗೆ ವ್ಯಥೆಯೂ ಇಲ್ಲ, ಕೋಪವೂ ಇಲ್ಲ. ಮನುಷ್ಯರು ಕಾಡುಮೃಗಗಳನ್ನು ಬಲೆಗಳಿಂದಲೂ ಹಗ್ಗಗಳಿಂದಲೂ ಇತರ ಕಪಟೋಪಾಯಗಳಿಂದಲೂ ಹಿಡಿಯುತ್ತಾರೆ. ಎದುರಿಗೆ ನಿಂತಾಗಲಿ, ಮರೆಯಲ್ಲಿ ನಿಂತಾಗಲಿ—ಸೆರೆಹಿಡಿಯುತ್ತಾರೆ ಮೃಗಗಳು ಹೆದರಿ ಓಡುತ್ತಿರಲಿ, ನಂಬಿಕೆಯಿಂದ ನಿಂತಿರಲಿ—ಅವನ್ನು ಕೊಲ್ಲುತ್ತಾರೆ (೩೮-೩೯).

ಪ್ರಮತ್ತಾನಪ್ರಮತ್ತಾನ್ ವಾ ನರಾ ಮಾಂಸಾರ್ಥಿನೋ ಭೃಶಮ್ ।
ವಿಧ್ಯಂತಿ ವಿಮುಖಾಂಶ್ಚಾಪಿ ನ ಚ ದೋಷೋಽತ್ರ ವಿದ್ಯತೇ ॥ ೪೦
ಯಾಂತಿ ರಾಜರ್ಷಯಶ್ಚಾತ್ರ ಮೃಗಯಾಂ ಧರ್ಮಕೋವಿದಾಃ ।
ತಸ್ಮಾತ್ತ್ವಂ ನಿಹತೋ ಯುದ್ಧೇ ಮಯಾ ಬಾಣೇನ ವಾನರ ॥ ೪೧
ಅಯುಧ್ಯನ್ ಪ್ರತಿಯುಧ್ಯನ್ ವಾ ಯಸ್ಮಾಚ್ಛಾಖಾಮೃಗೋ ಹ್ಯಸಿ ।
ದುರ್ಲಭಸ್ಯ ಚ ಧರ್ಮಸ್ಯ ಜೀವಿತಸ್ಯ ಶುಭಸ್ಯ ಚ ॥ ೪೨
ರಾಜಾನೋ ವಾನರಶ್ರೇಷ್ಠ ಪ್ರದಾತಾರೋ ನ ಸಂಶಯಃ ।
ತಾನ್ನ ಹಿಂಸ್ಯಾನ್ನ ಚಾಕ್ರೋಶೇನ್ನಾಕ್ಷಿಪೇನ್ನಾಪ್ರಿಯಂ ವದೇತ್ ॥ ೪೩
ದೇವಾ ಮನುಷ್ಯರೂಪೇಣ ಚರಂತ್ಯೇತೇ ಮಹೀತಲೇ ।
ತ್ವಂ ತು ಧರ್ಮಮವಿಜ್ಞಾಯ ಕೇವಲಂ ರೋಷಮಾಸ್ಥಿತಃ ॥ ೪೪
ಪ್ರದೂಷಯಸಿ ಮಾಂ ಧರ್ಮೇ ಪಿತೃಪೈತಾಮಹೇ ಸ್ಥಿತಮ್ ।
ಏವಮುಕ್ತಸ್ತು ರಾಮೇಣ ವಾಲೀ ಪ್ರವ್ಯಥಿತೋ ಭೃಶಮ್ ॥ ೪೫

---

ಅವು ಪ್ರಮಾದವಶದಿಂದ ಸಿಕ್ಕಲಿ, ಎಚ್ಚರಿಕೆಯಿಂದಿರಲಿ, ಅನ್ಯಾಭಿಮುಖವಾಗಿಯೇ ಇರಲಿ–ಆ ಮೃಗಗಳನ್ನು ಮಾಂಸಾರ್ಥಿಗಳಾದ ಜನರು ಕೊಲ್ಲುತ್ತಾರೆ. ಇದರಲ್ಲಿ ದೋಷವಿಲ್ಲ ಧರ್ಮಕೋವಿದರಾದ ರಾಜರ್ಷಿಗಳೂ ಈ ಮಾರ್ಗವನ್ನನುಸರಿಸಿ ಬೇಟೆಯಾಡುತ್ತಾರೆ. ಆದ್ದರಿಂದ, ವಾನರ, ನಿನ್ನನ್ನು ಬಾಣದಿಂದ ಘಾತಿಸಿದ್ದೇನೆ (೪೦–೪೧). ನನ್ನೊಡನೆ ಯುದ್ಧ ಸನ್ನದ್ಧನಾಗಿ ಬಂದಿರು-ಬಾರದಿರು, ನಿನ್ನನ್ನು ವಧಿಸಿದ್ದೇನೆ. ನೀನೊಂದು ಶಾಖಾಮೃಗ. ದುರ್ಲಭವಾದ ಧರ್ಮ, ಜೀವನ, ಅಭ್ಯುದಯಗಳನ್ನು ರಾಜರೇ ಪ್ರಜೆಗಳಿಗೆ ಸಂಪಾದಿಸಿಕೊಡುತ್ತಾರೆ ಇದರಲ್ಲಿ ಸಂದೇಹವಿಲ್ಲ. ಆದ್ದರಿಂದ ರಾಜರನ್ನು ಹಿಂಸಿಸುವುದಾಗಲಿ ನಿಂದಿಸುವುದಾಗಲಿ ಆಕ್ಷೇಪಿಸುವುದಾಗಲಿ ಕೂಡದು. ಅವರಿಗೆ ಅಪ್ರಿಯವಾದ ಮಾತನ್ನಾಡಬಾರದು(೪೨–೪೩). ರಾಜರೆಂದರೆ ಮಹೀತಳದಲ್ಲಿ ಮನುಷ್ಯರೂಪದಿಂದ ಸಂಚರಿಸುವ ದೇವತೆಗಳು ನೀನು ಧರ್ಮಸೂಕ್ಷ್ಮವನ್ನರಿಯದೆ ಬರಿಯ ರೋಷಾವೇಶದಿಂದ ನನ್ನನ್ನು ದೂಷಿಸಿದ್ದೀಯೆ. ಪಿತೃಪಿತಾಮಹಪರಂಪರೆಯಿಂದ ಬಂದ ಧರ್ಮಮಾರ್ಗದಲ್ಲಿ ನಾನು ಸ್ಥಿರವಾಗಿ ನಿಂತಿದ್ದೇನೆ” ಎಂದು ಹೇಳಿದನು. ಶ್ರೀರಾಮನ ನುಡಿ

**ನ ದೋಷಂ ರಾಘವೇ ದಧ್ಯೌ ಧರ್ಮೇಽಧಿಗತನಿಶ್ಚಯಃ ।**
**ಪ್ರತ್ಯುವಾಚ ತತೋ ರಾಮಂ ಪ್ರಾಂಜಲಿರ್ವಾನರೇಶ್ವರಃ ॥** ೪೬

**ಯತ್ತ್ವಮಾತ್ಥ ನರಶ್ರೇಷ್ಠ ತದೇವಂ ನಾತ್ರ ಸಂಶಯಃ ।**
**ಪ್ರತಿವಕ್ತುಂ ಪ್ರಕೃಷ್ಟೇ ಹಿ ನಾಪಕೃಷ್ಟಸ್ತು ಶಕ್ನುಯಾಮ್ ॥** ೪೭

**ಯದಯುಕ್ತಂ ಮಯಾ ಪೂರ್ವಂ ಪ್ರಮಾದಾದುಕ್ತಮಪ್ರಿಯಮ್ ।**
**ತತ್ರಾಪಿ ಖಲು ಮೇ ದೋಷಂ ಕರ್ತುಂ ನಾರ್ಹಸಿ ರಾಘವ ॥** ೪೮

**ತ್ವಂ ಹಿ ದೃಷ್ಟಾರ್ಥತತ್ತ್ವಜ್ಞಃ ಪ್ರಜಾನಾಂ ಚ ಹಿತೇ ರತಃ ।**
**ಕಾರ್ಯಕಾರಣಸಿದ್ಧೌ ತೇ ಪ್ರಸನ್ನಾ ಬುದ್ಧಿರವ್ಯಯಾ ॥** ೪೯

**ಮಾಮಪ್ಯಗತಧರ್ಮಾಣಂ ವ್ಯತಿಕ್ರಾಂತಪುರಸ್ಕೃತಮ್ ।**
**ಧರ್ಮಸಂಹಿತಯಾ ವಾಚಾ ಧರ್ಮಜ್ಞ ಪರಿಪಾಲಯ ॥** ೫೦

**ನ ತ್ವಾತ್ಮಾನಮಹಂ ಶೋಚೇ ನ ತಾರಾಂ ನ ಚ ಬಾಂಧವಾನ್ ।**
**ಯಥಾ ಪುತ್ರಂ ಗುಣಶ್ರೇಷ್ಠಮಂಗದಂ ಕನಕಾಂಗದಮ್ ॥** ೫೧

---

ಯನ್ನಾಲಿಸಿ ವಾಲಿಗೆ ಬಹಳ ಪಶ್ಚಾತ್ತಾಪವಾಯಿತು (೪೪-೪೫) ಧರ್ಮದ ವಿಷಯದಲ್ಲಿ ಸರಿಯಾದ ಅರಿವಾಯಿತು ರಾಘವನಲ್ಲಿ ದೋಷವಿಲ್ಲವೆಂದು ಮನಸ್ಸಿಗೆ ಅನ್ನಿಸಿತು. ಆ ವಾನರೇಂದ್ರನು ಕೈಮುಗಿದುಕೊಂಡು ವಿಜ್ಞಾಪಿಸಿದನು : “ ಪುರುಷೋತ್ತಮ, ನೀನು ಹೇಳುವುದು ವಾಸ್ತವ. ಸಂಶಯವಿಲ್ಲ. ಅಲ್ಪನಾದವನು ಮಹಾಪುರುಷನಿಗೆ ಪ್ರತಿಯಾಗಿ ಹೇಳುವುದು ಶಕ್ಯವಲ್ಲ. ಮೊದಲು ನಿನಗೆ ಅಯುಕ್ತವೂ ಅಪ್ರಿಯವೂ ಆದ ಮಾತನ್ನಾಡಿಬಿಟ್ಟೆನು. ರಾಘವ, ನನ್ನ ತಪ್ಪನ್ನು ಮನಸ್ಸಿಗೆ ತಂದುಕೊಳ್ಳಬೇಡ (೪೬-೪೮) ನೀನು ಸಕಲವಸ್ತುಗಳ ತತ್ತ್ವವನ್ನು ಬಲ್ಲವನು. ಪ್ರಜೆಗಳ ಹಿತದಲ್ಲಿ ನಿರತನಾದವನು. ಕಾರ್ಯಕಾರಣಗಳನ್ನು ನಿರ್ಣಯಿಸುವುದರಲ್ಲಿ ನಿನ್ನ ಬುದ್ಧಿಯು ಪಕ್ಷಪಾತರಹಿತವಾಗಿ ನಿರ್ಮಲವಾಗಿದೆ ; ಸ್ಥಿರವಾಗಿದೆ (೪೯) ನಾನು ಧರ್ಮಜ್ಞಾನವಿಲ್ಲದವನು. ಧರ್ಮಬಾಹಿರರಲ್ಲಿ ಅಗ್ರಗಣ್ಯ. ಹೇ ಧರ್ಮಜ್ಞ, ಧರ್ಮಸಂಹಿತವಾದ ಮಾತಿನಿಂದ ಅಭಯವನ್ನು ನೀಡಿ ನನ್ನನ್ನು ಪರಿಪಾಲಿಸು. ಈಗ ನಾನು ನನಗಾಗಲಿ, ತಾರೆಗಾಗಲಿ, ನನ್ನ ಬಂಧುಗಳಿಗಾಗಲಿ—ಅಷ್ಟಾಗಿ ಶೋಕಿಸುವುದಿಲ್ಲ. ಆದರೆ ಗುಣಶ್ರೇಷ್ಠನೂ ಕನಕಾಂಗದ ಭೂಷಿತನೂ ಆದ

ಸ ಮಮಾದರ್ಶನಾದ್ದೀನೋ ಬಾಲ್ಯಾತ್ ಪ್ರಭೃತಿ ಲಾಲಿತಃ ।
ತಟಾಕ ಇವ ಪೀತಾಂಬುರುಪಶೋಷಂ ಗಮಿಷ್ಯತಿ ॥ ೫೨

ಬಾಲಶ್ಚಾಕೃತಬುದ್ಧಿಶ್ಚ ಏಕಪುತ್ರಶ್ಚ ಮೇ ಪ್ರಿಯಃ ।
ತಾರೇಯೋ ರಾಮ ಭವತಾ ರಕ್ಷಣೀಯೋ ಮಹಾಬಲಃ ॥ ೫೩

ಸುಗ್ರೀವೇ ಚಾಂಗದೇ ಚೈವ ವಿಧತ್ಸ್ವ ಮತಿಮುತ್ತಮಾಮ್ ।
ತ್ವಂ ಹಿ ಶಾಸ್ತಾ ಚ ಗೋಪ್ತಾ ಚ ಕಾರ್ಯಾಕಾರ್ಯವಿಧೌ ಸ್ಥಿತಃ ॥

ಯಾ ತೇ ನರಪತೇ ವೃತ್ತಿರ್ಭರತೇ ಲಕ್ಷ್ಮಣೇ ಚ ಯಾ ।
ಸುಗ್ರೀವೇ ಚಾಂಗದೇ ರಾಜಂಸ್ತಾಂ ತ್ವಮಾಧಾತುಮರ್ಹಸಿ ॥ ೫೫

ಮದ್ದೋಷಕೃತದೋಷಾಂ ತಾಂ ಯಥಾ ತಾರಾಂ ತಪಸ್ವಿನೀಮ್ ।
ಸುಗ್ರೀವೋ ನಾವಮನ್ಯೇತ ತಥಾವಸ್ಥಾತುಮರ್ಹಸಿ ॥ ೫೬

---

ನನ್ನ ಮಗ ಅಂಗದನನ್ನು ನೆನೆಸಿಕೊಂಡರೆ ದುಃಖ ಉಮ್ಮಳಿಸುವುದು (೫೦-೫೧). ಬಾಲ್ಯದಿಂದಲೂ ಅವನನ್ನು ಪ್ರೀತಿಯಿಂದ ಲಾಲಿಸುತ್ತಿದ್ದೇನೆ. ಇನ್ನುಮೇಲೆ ನನ್ನನ್ನು ಕಾಣದೆ ಅವನು ದೀನನಾಗುವನು. ನೀರನ್ನು ಬಳಸಿ ಬತ್ತಿಹೋಗುವ ಕೊಳದಂತೆ, ನನ್ನ ಮಗನು ದಿನದಿನವೂ ಕೃಶವಾಗುತ್ತಹೋಗುವನು (೫೨). ಅವನು ಇನ್ನೂ ಹುಡುಗ ಬುದ್ಧಿ ಬೆಳೆದಿಲ್ಲ. ನನ್ನ ಒಬ್ಬನೇ ಮುದ್ದುಮಗ ತಾರೆಯ ಗರ್ಭದಲ್ಲಿ ಜನಿಸಿದ್ದಾನೆ. ಶ್ರೀರಾಮ, ನೀನು ಅಂಗದನನ್ನು ಕಾಪಾಡಿಕೊಂಡು ಬರಬೇಕು. ಅವನು ಬಾಲಕನಾದರೂ ಮಹಾಶೂರ (೫೩). ಸುಗ್ರೀವನಲ್ಲಿಯೂ ಅಂಗದನಲ್ಲಿಯೂ ಒಂದೇ ವಿಧವಾಗಿ ವಾತ್ಸಲ್ಯಬುದ್ಧಿಯನ್ನಿಡು. ಸರಿಯಾಗಿ ನಡೆದರೆ ಪಾಲಿಸತಕ್ಕವನೂ ತಪ್ಪಿದರೆ ದಂಡಿಸತಕ್ಕವನೂ ನೀನೇ. ಹೇ ನರೇಶ್ವರ, ನಿನ್ನ ತಮ್ಮಂದಿರಾದ ಭರತನನ್ನೂ ಲಕ್ಷ್ಮಣನನ್ನೂ ಹೇಗೆ ಪ್ರೀತಿಯಿಂದ ನೋಡಿಕೊಳ್ಳುವೆಯೊ ಹಾಗೆಯೇ ಸುಗ್ರೀವನನ್ನೂ ಅಂಗದನನ್ನೂ ನೋಡಿಕೊ (೫೪-೫೫). ತಾರೆ ಏನನ್ನೂ ಅರಿಯಳು. ಅವಳಲ್ಲಿ ಅಪರಾಧವಿಲ್ಲ. ನನ್ನ ತಪ್ಪಿಗಾಗಿ ಅವಳನ್ನು ಅಪರಾಧಿನಿಯೆಂದು ಸುಗ್ರೀವನು ಎಣಿಸಿಯಾನು. ಸುಗ್ರೀವನು ಅವಳನ್ನು ಅವಮಾನಪಡಿಸದಂತೆ ನೀನು ಎಚ್ಚರಿಕೆ ವಹಿಸಬೇಕು

ತ್ವಯಾ ಹ್ಯನುಗೃಹೀತೇನ ರಾಜ್ಯಂ ಶಕ್ಯಮುಪಾಸಿತುಮ್ ।
ತ್ವದ್ವಶೇ ವರ್ತಮಾನೇನ ತವ ಚಿತ್ತಾನುವರ್ತಿನಾ ॥ ೫೭

ಶಕ್ಯಂ ದಿವಂ ಚಾರ್ಜಯಿತುಂ ವಸುಧಾಂ ಚಾಪಿ ಶಾಸಿತುಮ್ ।
ತ್ವತ್ತೋಽಹಂ ವಧಮಾಕಾಂಕ್ಷನ್ ವಾರ್ಯಮಾಣೋಽಪಿ ತಾರಯಾ॥

ಸುಗ್ರೀವೇಣ ಸಹ ಭ್ರಾತ್ರಾ ದ್ವಂದ್ವಯುದ್ಧಮುಪಾಗತಃ ।
ಇತ್ಯುಕ್ತ್ವಾ ಸಂನತೋ ರಾಮಂ ವಿರರಾಮ ಹರೀಶ್ವರಃ ॥ ೫೯

ಸ ತಮಾಶ್ವಾಸಯದ್ರಾಮೋ ವಾಲಿನಂ ವ್ಯಕ್ತದರ್ಶನಮ್ ।
ಸಾಮಸಂಪನ್ನಯಾ ವಾಚಾ ಧರ್ಮತತ್ತ್ವಾರ್ಥಯುಕ್ತಯಾ ॥ ೬೦

ನ ಸಂತಾಪಸ್ತ್ವಯಾ ಕಾರ್ಯ ಏತದರ್ಥಂ ಪ್ಲವಂಗಮ ।
ನ ವಯಂ ಭವತಾ ಚಿಂತ್ಯಾ ನಾಪ್ಯಾತ್ಮಾ ಹರಿಸತ್ತಮ ॥ ೬೧

ವಯಂ ಭವದ್ವಿಶೇಷೇಣ ಧರ್ಮತಃ ಕೃತನಿಶ್ಚಯಾಃ ।
ದಂಡ್ಯೇ ಯಃ ಪಾತಯೇದ್ದಂಡಂ ದಂಡ್ಯೋ ಯಶ್ಚಾಪಿ ದಂಡ್ಯತೇ ॥

---

(೫೬). ಶ್ರೀರಾಮ, ನಿನ್ನ ಅನುಗ್ರಹಕ್ಕೆ ಪಾತ್ರನಾಗಿ ನಿನ್ನ ಅಧೀನದಲ್ಲಿದ್ದು ನಿನ್ನ ಇಷ್ಟದಂತೆ ನಡೆದಲ್ಲಿ ಮಾತ್ರ ಸುಗ್ರೀವನು ರಾಜ್ಯವನ್ನಾಳಲು ಸಾಧ್ಯ. ಹಾಗಿದ್ದರೆ ಸ್ವರ್ಗವನ್ನೂ ಪಡೆಯಬಹುದು ; ಭೂಮಿಯನ್ನೂ ಆಳಬಹುದು. ತಾರೆಯು ಬೇಡ ಬೇಡವೆಂದರೂ ಕೇಳದೆ ನಾನು ನಿನ್ನಿಂದ ವಧೆಯನ್ನು ಬಯಸಿದೆನೋ ಎಂಬಂತೆ ಬಂದೆನು (೫೭-೫೮). ಸೋದರನಾದ ಸುಗ್ರೀವ ನೊಡನೆ ದ್ವಂದ್ವಯುದ್ಧಕ್ಕೆ ನಿಂತೆನು." ಹೀಗೆ ಹೇಳಿ ಆ ಕಪೀಶ್ವರನು ಶ್ರೀರಾಮನಿಗೆ ಕೈಮುಗಿದು ಸುಮ್ಮನಾದನು ಆಗ ಅವನಿಗೆ ವಿವೇಕೋದಯ ವಾಗಿತ್ತು. ಶ್ರೀರಾಮನು ಧರ್ಮತತ್ತ್ವವನ್ನೊಳಗೊಂಡ ವಾಕ್ಯದಿಂದ ವಾಲಿ ಯನ್ನು ಸಂತೈಸುತ್ತ ಹೇಳಿದನು (೫೯-೬೦) : "ವಾನರೋತ್ತಮ, ಇದಕ್ಕಾಗಿ ನೀನು ಚಿಂತಿಸಬೇಡ. (ನಿನ್ನನ್ನು ಕೊಂದುದಕ್ಕಾಗಿ) ನಮ್ಮ ವಿಷಯ ದಲ್ಲಾಗಲಿ ನಿನ್ನ ವಿಷಯದಲ್ಲಾಗಲಿ ಚಿಂತಿಸಬೇಕಾದ್ದಿಲ್ಲ ನಿನಗಿಂತಲೂ ಅಧಿಕವಾಗಿ ನಮಗೆ ಧರ್ಮದಲ್ಲಿ ನಿಶ್ಚಯಜ್ಞಾನವುಂಟು. ಶಿಕ್ಷಾರ್ಹನಿಗೆ ಶಿಕ್ಷೆ ಯನ್ನು ವಿಧಿಸುವವನು, ಶಿಕ್ಷೆಗೆ ಒಳಗಾಗತಕ್ಕವನು–ಇವರಿಬ್ಬರಿಗೆ ಯಾವ ಹಾನಿಯೂ ಒದಗುವುದಿಲ್ಲ. ಕಾರಣವಾದ ದಂಡವಿಧಾನ, ಕಾರ್ಯವಾದ

ಕಾರ್ಯಕಾರಣಸಿದ್ಧಾರ್ಥಾವುಭೌ ತೌ ನಾವಸೀದತಃ ।
ತದ್ಭವಾನ್ ದಂಡಸಂಯೋಗಾದಸ್ಮಾದ್ವಿಗತಕಿಲ್ಬಿಷಃ ॥ ೬೩

ಗತಃ ಸ್ವಾಂ ಪ್ರಕೃತಿಂ ಧರ್ಮ್ಯಾಂ ಧರ್ಮದೃಷ್ಟೇನ ವರ್ತ್ಮನಾ ।
ತ್ಯಜ ಶೋಕಂ ಚ ಮೋಹಂ ಚ ಭಯಂ ಚ ಹೃದಯೇ ಸ್ಥಿತಮ್ ॥

ತ್ವಯಾ ವಿಧಾನಂ ಹರ್ಯಗ್ರ್ಯ ನ ಶಕ್ಯಮತಿವರ್ತಿತುಮ್ ।
ಯಥಾ ತ್ವಯ್ಯಂಗದೋ ನಿತ್ಯಂ ವರ್ತತೇ ವಾನರೇಶ್ವರ ॥ ೬೫

ತಥಾ ವರ್ತೇತ ಸುಗ್ರೀವೇ ಮಯಿ ಚಾಪಿ ನ ಸಂಶಯಃ ॥

ಸ ತಸ್ಯ ವಾಕ್ಯಂ ಮಧುರಂ ಮಹಾತ್ಮನಃ
ಸಮಾಹಿತಂ ಧರ್ಮಪಥಾನುವರ್ತಿನಃ ।
ನಿಶಮ್ಯ ರಾಮಸ್ಯ ರಣಾವಮರ್ದಿನೋ
ವಚಃ ಸುಯುಕ್ತಂ ನಿಜಗಾದ ವಾನರಃ ॥ ೬೬

ಶರಾಭಿತಪ್ತೇನ ವಿಚೇತಸಾ ಮಯಾ
ಪ್ರದೂಷಿತಸ್ತ್ವಂ ಯದಜಾನತಾ ಪ್ರಭೋ ।

---

ದಂಡಾನುಭವ—ಇವುಗಳಿಂದ ಉದ್ದೇಶವು ಫಲಿಸಿ ಅವರು ಕೃತಕೃತ್ಯರಾಗುತ್ತಾರೆ. ನೀನು ಶಿಕ್ಷೆಯನ್ನು ಪಡೆದದ್ದರಿಂದ ನಿನ್ನ ಪಾಪವು ನೀಗಿತು (೬೧-೬೩). ಧರ್ಮಶಾಸ್ತ್ರೋಕ್ತವಾದ ಮಾರ್ಗದಿಂದಲೇ ನೀನು ಧರ್ಮಯುಕ್ತವೂ ಸಹಜವೂ ಆದ ಶುದ್ಧಸ್ವಭಾವವನ್ನು ಪಡೆದಿದ್ದೀಯೆ. ನಿನ್ನ ಅಂತರಂಗದಲ್ಲಿರುವ ಶೋಕಮೋಹಗಳನ್ನೂ ಭಯವನ್ನೂ ಪರಿತ್ಯಜಿಸು(೬೪). ವಾನರೇಶ್ವರ, ನಿನ್ನ ಕರ್ಮಫಲವನ್ನು ಮೀರಲು ನಿನ್ನಿಂದಾಗದು ಅಂಗದನು ನಿನ್ನಲ್ಲಿ ಹೇಗಿದ್ದನೋ ಹಾಗೆಯೇ ಸುಗ್ರೀವನಲ್ಲಿಯೂ ನನ್ನಲ್ಲಿಯೂ ವರ್ತಿಸುವನು. (ಅವನನ್ನು ಪುತ್ರವಾತ್ಸಲ್ಯದಿಂದ ನೋಡಿಕೊಳ್ಳುವೆವು)" ಎಂದು ಹೇಳಿದನು (೬೫). ಮಹಾತ್ಮನೂ ಧರ್ಮನಿಷ್ಠನೂ ರಣಶೂರನೂ ಆದ ಶ್ರೀರಾಮನ ಈ ಮಧುರವಾಕ್ಯವನ್ನು ಕೇಳಿ ವಾಲಿಯು "ಪ್ರಭು, ನೀನು ದೇವೇಂದ್ರನಿಗೆ ಸಮಾನನು ನಿನ್ನ ಪರಾಕ್ರಮ ಅದ್ಭುತವಾದುದು. ಶರಾಘಾತದಿಂದ ನಾನು ಬುದ್ಧಿಗೆಟ್ಟು ನಿನ್ನ ಮಹಿಮೆಯನ್ನರಿಯದೆ

ಇದಂ ಮಹೇಂದ್ರೋಪಮ ಭೀಮವಿಕ್ರಮ
ಪ್ರಸಾದಿತಸ್ತ್ವಂ ಕ್ಷಮ ಮೇ ನರೇಶ್ವರ ॥ ೬೭

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಅಷ್ಟಾದಶಃ ಸರ್ಗಃ

---

## ಏಕೋನವಿಂಶಃ ಸರ್ಗಃ

### ತಾರಾಗಮನಮ್

ಸ ವಾನರಮಹಾರಾಜಃ ಶಯಾನಃ ಶರವಿಕ್ಷತಃ ।
ಪ್ರತ್ಯುಕ್ತೋ ಹೇತುಮದ್ವಾಕ್ಯೈರ್ನೋತ್ತರಂ ಪ್ರತ್ಯಪದ್ಯತ ॥ ೧
ಅಶ್ಮಭಿಃ ಪರಿಭಿನ್ನಾಂಗಃ ಪಾದಪೈರಾಹತೋ ಭೃಶಮ್ ।
ರಾಮಬಾಣೇನ ಚ ಕ್ರಾಂತೋ ಜೀವಿತಾಂತೇ ಮುಮೋಹ ಸಃ ॥ ೨
ತಂ ಭಾರ್ಯಾ ಬಾಣಮೋಕ್ಷೇಣ ರಾಮದತ್ತೇನ ಸಂಯುಗೇ ।
ಹತಂ ಪ್ಲವಗಶಾರ್ದೂಲಂ ತಾರಾ ಶುಶ್ರಾವ ವಾಲಿನಮ್ ॥ ೩

---

ನಿನ್ನನ್ನು ನಿಂದಿಸಿದೆನು. ಸ್ವಾಮಿ, ಪ್ರಸನ್ನನಾಗು. ನನ್ನನ್ನು ಕ್ಷಮಿಸು" ಎಂದು ನುಡಿದನು (೬೬-೬೭)

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಹದಿನೆಂಟನೆಯ ಸರ್ಗ

---

## ಸರ್ಗ ೧೯

ತಾರೆಯು ಬಂದು ರಣಶಯ್ಯೆಯಲ್ಲಿ ಮಲಗಿದ್ದ ವಾಲಿಯನ್ನು ನೋಡುವುದು.

ಶ್ರೀರಾಮನು ಯುಕ್ತಿಯುಕ್ತವಾಗಿ ಪ್ರತ್ಯುತ್ತರವನ್ನು ಹೇಳಲು, ಶರಾಘಾತದಿಂದ ವಿಕ್ಷತನಾದ ವಾನರೇಶ್ವರನು ಪುನಃ ಉತ್ತರವನ್ನು ಹೇಳಲಾರದೆ ಸುಮ್ಮನಾದನು. ಸುಗ್ರೀವನು ಬೀಸಿದ ಬಂಡೆಗಳಿಂದಲೂ ಮರಗಳ ಹೊಡೆತಗಳಿಂದಲೂ ಅವನ ದೇಹವು ಜರ್ಝರಿತವಾಗಿತ್ತು. ಅದರಮೇಲೆ ರಾಮಬಾಣವು ಎದೆಗೆ ಹೊಕ್ಕುದರಿಂದ ವಾಲಿಯು ಬಸವಳಿದನು. ಮರಣಕಾಲವು ಸನ್ನಿಹಿತವಾಗಲು ಅವನಿಗೆ ಎಚ್ಚರದಪ್ಪಿತು (೧-೨). ಶ್ರೀರಾಮನ ಬಾಣದಿಂದ ವಾಲಿಯು ಹತನಾಗಿ ಬಿದ್ದನೆಂದು ಅವನ ಭಾರ್ಯೆಯಾದ

ಸಾ ಸಪುತ್ರಾಪ್ರಿಯಂ ಶ್ರುತ್ವಾ ವಧಂ ಭರ್ತುಃ ಸುದಾರುಣಮ್ ।
ನಿಷ್ಪಪಾತ ಭೃಶಂ ತ್ರಸ್ತಾ ಮೃಗೀವ ಗಿರಿಗಹ್ವರಾತ್ ॥ ೪

ಯೇ ತ್ವಂಗದಪರೀವಾರಾ ವಾನರಾ ಭೀಮವಿಕ್ರಮಾಃ ।
ತೇ ಸಕಾರ್ಮುಕಮಾಲೋಕ್ಯ ರಾಮಂ ತ್ರಸ್ತಾಃ ಪ್ರದುದ್ರುವುಃ ॥ ೫

ಸಾ ದದರ್ಶ ತತಸ್ತ್ರಸ್ತಾನ್ ಹರೀನಾಪತತೋ ದ್ರುತಮ್ ।
ಯೂಥಾದಿವ ಪರಿಭ್ರಷ್ಟಾನ್ ಮೃಗಾನ್ನಿಹತಯೂಥಪಾನ್ ॥ ೬

ತಾನುವಾಚ ಸಮಾಸಾದ್ಯ ದುಃಖಿತಾನ್ ದುಃಖಿತಾ ಸತೀ ।
ರಾಮವಿತ್ರಾಸಿತಾನ್ ಸರ್ವಾನನುಬದ್ಧಾನಿವೇಷುಭಿಃ ॥ ೭

ವಾನರಾ ರಾಜಸಿಂಹಸ್ಯ ಯಸ್ಯ ಯೂಯಂ ಪುರಃಸರಾಃ ।
ತಂ ವಿಹಾಯ ಸುಸಂತ್ರಸ್ತಾಃ ಕಸ್ಮಾದ್ದ್ರವಥ ದುರ್ಗತಾಃ ॥ ೮

ರಾಜ್ಯಹೇತೋಃ ಸ ಚೇದ್ಭ್ರಾತಾ ಭ್ರಾತ್ರಾ ರೌದ್ರೇಣ ಪಾತಿತಃ ।
ರಾಮೇಣ ಪ್ರಹಿತೈ ರೌದ್ರೈರ್ಮಾರ್ಗಣೈರ್ದೂರಪಾತಿಭಿಃ ॥ ೯

---

ತಾರೆಗೆ ಸುದ್ದಿ ಮುಟ್ಟಿತು ಪತಿಯು ಹತನಾದನೆಂಬ ಭೀಕರವಾದ ವಾರ್ತೆಯನ್ನು ಕೇಳಿ ತಾರೆಯು ಹೆಣ್ಣು ಜಿಂಕೆಯಂತೆ ಹೆದರಿ ಕಂಗಾಲಾದಳು. ಅವಳು ಪುತ್ರನಾದ ಅಂಗದನೊಡನೆ ಕಿಷ್ಕಿಂಧಾಗುಹೆಯಿಂದ ಹೊರಬಂದಳು (೩-೪). ಅಷ್ಟರಲ್ಲಿ ಅಂಗದನ ಮೈಗಾವಲಿನವರೂ ಭೀಮವಿಕ್ರಮರೂ ಆದ ಕೆಲವು ವಾನರರು ಮುಂದೆ ಹೋಗಿ, ಧನುರ್ಧಾರಿಯಾದ ಶ್ರೀರಾಮನನ್ನು ನೋಡಿದರು. ನೋಡಿದೊಡನೆ ಹೆದರಿ ತತ್ತರಿಸಿ ಹಿಂದಿರುಗಿ ಓಡಿಬರುತ್ತಿದ್ದರು (೫). ಸಲಗವು ಘಾತಿಸಲ್ಪಟ್ಟಾಗ ಇತರ ಮೃಗಗಳು ಚದರಿ ಓಡುವಂತೆ, ಹೆದರಿ ಓಡಿಬರುತ್ತಿದ್ದ ಆ ಕಪಿಗಳನ್ನು ತಾರೆಯು ನೋಡಿದಳು. ಅವರೆಲ್ಲರೂ ದುಃಖಿತರಾಗಿದ್ದರು ಶ್ರೀರಾಮನನ್ನು ಕಂಡು ಭೀತರಾಗಿದ್ದರು. ಬಾಣಗಳನ್ನು ಹೊಡೆಯುತ್ತ ಹಿಂದುಗಡೆಯಿಂದ ಯಾರೋ ಅಟ್ಟಿಸಿಕೊಂಡು ಬರುತ್ತಿದ್ದಾರೋ ಎಂಬಂತೆ ಕಾಣುತ್ತಿದ್ದರು (೬-೭). ತಾರೆಯು ಅವರನ್ನು ಕುರಿತು "ಎಲೈ ವಾನರರೆ, ರಾಜಕಂಠೀರವನಾದ ವಾಲಿಯ ಪಕ್ಷದಲ್ಲಿ ಅಗ್ರಗಣ್ಯರಾದ ವೀರರು ನೀವು ಅವನೊಬ್ಬನನ್ನೇ ಬಿಟ್ಟು, ಇಷ್ಟು ಭಯಪಡುತ್ತ ದುರವಸ್ಥೆಗೊಳಗಾಗಿ ಓಡಿಹೋಗುವುದಾದರೂ ಏಕೆ? (೮). ರಾಜ್ಯಲೋಭದಿಂದ ಆ ತಮ್ಮನು ತನ್ನ ಅಣ್ಣನನ್ನೇ ಕೊಲ್ಲಿಸಿರಬಹುದು. ದೂರಗಾಮಿ

**ಕಪಿಪತ್ನ್ಯಾ ವಚಃ ಶ್ರುತ್ವಾ ಕಪಯಃ ಕಾಮರೂಪಿಣಃ ।**
**ಪ್ರಾಪ್ತಕಾಲಮವಿಕ್ಲಿಷ್ಟಮೂಚುರ್ವಚನಮಂಗನಾಮ್ ॥ ೧೦**

**ಜೀವಪುತ್ರೇ ನಿವರ್ತಸ್ವ ಪುತ್ರಂ ರಕ್ಷಸ್ವ ಚಾಂಗದಮ್ ।**
**ಅಂತಕೋ ರಾಮರೂಪೇಣ ಹತ್ವಾ ನಯತಿ ವಾಲಿನಮ್ ॥ ೧೧**

**ಕ್ಷಿಪ್ತಾನ್ ವೃಕ್ಷಾನ್ ಸಮಾವಿಧ್ಯ ವಿಪುಲಾಶ್ಚ ಶಿಲಾಸ್ತಥಾ ।**
**ವಾಲೀ ವಜ್ರಸಮೈರ್ಬಾಣೈ ರಾಮೇಣ ವಿನಿಪಾತಿತಃ ॥ ೧೨**

**ಅಭಿದ್ರುತಮಿದಂ ಸರ್ವಂ ವಿದ್ರುತಂ ಪ್ರಸೃತಂ ಬಲಮ್ ।**
**ತಸ್ಮಿನ್ ಪ್ಲವಗಶಾರ್ದೂಲೇ ಹತೇ ಶಕ್ರಸಮಪ್ರಭೇ ॥ ೧೩**

**ರಕ್ಷ್ಯತಾಂ ನಗರದ್ವಾರಮಂಗದಶ್ಚಾಭಿಷಿಚ್ಯತಾಮ್ ।**
**ಪದಸ್ಥಂ ವಾಲಿನಃ ಪುತ್ರಂ ಭಜಿಷ್ಯಂತಿ ಪ್ಲವಂಗಮಾಃ ॥ ೧೪**

---

ಗಳಾದ ರೌದ್ರಾಸ್ತ್ರಗಳನ್ನು ಪ್ರಯೋಗಿಸಿ ರಾಮನು ಕೊಂದಿರಬಹುದು. (ಆದರೆ ನೀವು ಓಡುವುದಾದರೂ ಏಕೆ?)" ಎಂದು ಕೇಳಿದಳು (೯). ತಾರೆಯ ಮಾತನ್ನು ಕೇಳಿ ಕಾಮರೂಪಿಗಳಾದ ಆ ವಾನರರು ಕಾಲೋಚಿತವಾಗಿ ಸ್ಪಷ್ಟ ವಾಕ್ಯಗಳಿಂದ ಹೀಗೆಂದರು: "ದೇವಿ, ನಿನ್ನ ಪುತ್ರನು ಬದುಕಿರುವನಾದ್ದರಿಂದ ಕೂಡಲೆ ಹಿಂದಿರುಗು. ಪುತ್ರನಾದ ಅಂಗದನನ್ನು ಉಳಿಸಿಕೊ. ಯಮನೇ ರಾಮರೂಪದಿಂದ ಬಂದು ವಾಲಿಯನ್ನು ಯಮಲೋಕಕ್ಕೆ ನಾಗಿಸುತ್ತಿದ್ದಾನೆ (೧೦-೧೧). ಎಸೆದ ವೃಕ್ಷಗಳನ್ನೂ ವಿಪುಲಶಿಲೆಗಳನ್ನೂ ಧ್ವಂಸ ಮಾಡಿ, ರಾಮನು ವಜ್ರಸಮಾನ ಬಾಣಗಳಿಂದ* ವಾಲಿಯನ್ನು ಹೊಡೆದು ಉರುಳಿಸಿದ್ದಾನೆ. ಕಿಷ್ಕಿಂಧೆಯಿಂದ ಹೊರಟುಬಂದ ಈ ಕಪಿಬಲವೆಲ್ಲವೂ, ಇಂದ್ರಸಮಾನನಾದ ಕಪಿರಾಜನು ಹತನಾದೊಡನೆ, ಚೆಲ್ಲಾಪಿಲ್ಲಿಯಾಗಿ ಹಿಂದಕ್ಕೆ ಓಡಿಬರುತ್ತಿದೆ (೧೨-೧೩). ನೀನು ನಗರದ್ವಾರವನ್ನು ಮುಚ್ಚಿಸು! ಅಂಗದನಿಗೆ ಪಟ್ಟಾಭಿಷೇಕಮಾಡಿಸು. ವಾಲಿಪುತ್ರನು ಅಧಿಕಾರವನ್ನು ವಹಿಸಿಕೊಂಡರೆ, ಕಪಿಗಳೆಲ್ಲರೂ ಅವನಿಗೆ ವಿಧೇಯರಾಗಿ ವರ್ತಿಸುವರು.

---

*** ಇದೆಲ್ಲವನ್ನೂ ಕಪಿಗಳು ಬರಿಯ ಊಹೆಯಿಂದ ಹೇಳಿದ್ದಾರೆ. ಇದು ಸಂಭಾವ್ಯವಾದ.**

ಅಥವಾರುಚಿತಂ ಸ್ಥಾನಮಿಹ ತೇ ರುಚಿರಾನನೇ ।
ಆವಿಶಂತಿ ಹಿ ದುರ್ಗಾಣಿ ಕ್ಷಿಪ್ರಮದ್ಯೈವ ವಾನರಾಃ ॥ ೧೫

ಅಭಾರ್ಯಾಶ್ಚ ಸಭಾರ್ಯಾಶ್ಚ ಸಂತ್ಯತ್ರ ವನಚಾರಿಣಃ ।
ಲುಬ್ಧೇಭ್ಯೋ ವಿಪ್ರಯುಕ್ತೇಭ್ಯಃ ಸ್ವೇಭ್ಯೋ ನಸ್ತುಮುಲಂ ಭಯಂ

ಅಲ್ಪಾಂತರಗತಾನಾಂ ತು ಶ್ರುತ್ವಾ ವಚನಮಂಗನಾ ।
ಆತ್ಮನಃ ಪ್ರತಿರೂಪಂ ಸಾ ಬಭಾಷೇ ಚಾರುಹಾಸಿನೀ ॥ ೧೭

ಪುತ್ರೇಣ ಮಮ ಕಿಂ ಕಾರ್ಯಂ ಕಿಂ ರಾಜ್ಯೇನ ಕಿಮಾತ್ಮನಾ ।
ಕಪಿಸಿಂಹೇ ಮಹಾಭಾಗೇ ತಸ್ಮಿನ್ ಭರ್ತರಿ ನಶ್ಯತಿ ॥ ೧೮

ಪಾದಮೂಲಂ ಗಮಿಷ್ಯಾಮಿ ತಸ್ಯೈವಾಹಂ ಮಹಾತ್ಮನಃ ।
ಯೋಽಸೌ ರಾಮಪ್ರಯುಕ್ತೇನ ಶರೇಣ ವಿನಿಪಾತಿತಃ ॥ ೧೯

ಏವಮುಕ್ತ್ವಾ ಪ್ರದುದ್ರಾವ ರುದತೀ ಶೋಕಕರ್ಶಿತಾ ।
ಶಿರಶ್ಚೋರಶ್ಚ ಬಾಹುಭ್ಯಾಂ ದುಃಖೇನ ಸಮಭಿಘ್ನತೀ ॥ ೨೦

---

ಅಥವಾ ಸುಂದರಿಯಾದ ನೀನು ಕಿಷ್ಕಿಂಧೆಯಲ್ಲಿರುವುದು ನಮಗೆ ಸರಿದೋರದು ಈಗಲೇ ಶತ್ರುಪಕ್ಷದ ವಾನರರು ಬಂದು ಈ ದುರ್ಗಗಳೆಲ್ಲ ವನ್ನೂ ಆಕ್ರಮಿಸಿಬಿಡುವರು (೧೪-೧೫) ಅವರಲ್ಲಿ ಕೆಲವರಿಗೆ ಮಡದಿಯ ರಿದ್ದಾರೆ. ಕೆಲವರಿಗೆ ಇಲ್ಲ. ಲುಬ್ಧರೂ ಹಿಂದೆ ನಮ್ಮಿಂದ ವಂಚಿತರೂ ಆದ ಈ ನಮ್ಮ ಜನರಿಂದಲೇ ಘೋರವಾದ ಭಯವು ಉಪಸ್ಥಿತವಾಗಿದೆ" ಎಂದು ಹೇಳಿದರು (೧೬) ಆ ಕಪಿಗಳು ಹತ್ತಿರಕ್ಕೆ ಬಂದು ಹೀಗೆ ಪಿಸುಗುಟ್ಟಲು ಅವರ ಅಂಜಿಕೆಯನ್ನು ಕಂಡು ಆ ಸಮಯದಲ್ಲಿಯೂ ತಾರೆಗೆ ನಗು ಬಂದಿತು. ಅವಳು ತನಗೆ ಅನುರೂಪವಾದ ಧೈರ್ಯವನ್ನು ತಳೆದು "ಎಲೈ ಕಪಿಗಳೆ, ಮಹಾತ್ಮನೂ ಕಪಿಸಿಂಹನೂ ಆದ ನನ್ನ ಪತಿಯು ಹತನಾದಮೇಲೆ ನನಗೆ ಮಗನಿಂದ ಆಗಬೇಕಾದ್ದೇನು ? ರಾಜ್ಯದಿಂದೇನು ? ನಾನು ಬದುಕಿದರೂ ಫಲವೇನು ? (೧೭-೧೮). ನನ್ನ ಪತಿಯ ಪಾದಮೂಲವನ್ನು ಸೇರಿಕೊಳ್ಳು ವೆನು. ಆ ಮಹಾತ್ಮನು ರಾಮನ ಬಾಣದಿಂದ ಹತನಾದನಲ್ಲವೆ ?" ಎಂದಳು. ಎನ್ನುತ್ತಲೇ ಶೋಕಪೀಡಿತಳಾಗಿ ಅಳುತ್ತ ಮುಂದಕ್ಕೆ ಧಾವಿಸಿದಳು. ಎರಡು ಕೈಗಳಿಂದಲೂ ತಲೆಯನ್ನು ಚಚ್ಚಿಕೊಳ್ಳುತ್ತ, ಎದೆಯನ್ನು ಬಡಿದುಕೊಳ್ಳುತ್ತ

ಅನ್ವ್ರಜಂತೀ ದದರ್ಶಾಥ ಪತಿಂ ನಿಪತಿತಂ ಭುವಿ ।
ಹಂತಾರಂ ದಾನವೇಂದ್ರಾಣಾಂ ಸಮರೇಷ್ವನಿವರ್ತಿನಾಮ್ ॥ ೨೦
ಕ್ಷೇಪ್ತಾರಂ ಪರ್ವತೇಂದ್ರಾಣಾಂ ವಜ್ರಾಣಾಮಿವ ವಾಸವಮ್ ।
ಮಹಾವಾತಸಮಾವಿಷ್ಟಂ ಮಹಾಮೇಘೌಘನಿಃಸ್ವನಮ್ ॥ ೨೧
ಶಕ್ರತುಲ್ಯಪರಾಕ್ರಾಂತಂ ವೃಷ್ಟ್ವೇವೋಪರತಂ ಘನಮ್ ।
ನರ್ದಂತಂ ನರ್ದತಾಂ ಭೀಮಂ ಶೂರಂ ಶೂರೇಣ ಪಾತಿತಮ್ ॥ ೨೨
ಶಾರ್ದೂಲೇನಾಮಿಷಸ್ಯಾರ್ಥೇ ಮೃಗರಾಜಂ ಯಥಾ ಹತಮ್ ।
ಅರ್ಚಿತಂ ಸರ್ವಲೋಕಸ್ಯ ಸಪತಾಕಂ ಸವೇದಿಕಮ್ ॥ ೨೪
ನಾಗಹೇತೋಃ ಸುಪರ್ಣೇನ ಚೈತ್ಯಮುನ್ಮಥಿತಂ ಯಥಾ ।
ಅವಷ್ಟಭ್ಯ ಚ ತಿಷ್ಠಂತಂ ದದರ್ಶ ಧನುರುತ್ತಮಮ್ ॥ ೨೫
ರಾಮಂ ರಾಮಾನುಜಂ ಚೈವ ಭರ್ತುಶ್ಚೈವಾನುಜಂ ಶುಭಮ್ ।
ತಾನತೀತ್ಯ ಸಮಾಸಾದ್ಯ ಭರ್ತಾರಂ ನಿಹತಂ ರಣೇ ॥ ೨೬

ಓಡಿದಳು (೧೯–೨೦). ಓಡುತ್ತ ಹೋಗಿ, ರಣರಂಗದಲ್ಲಿ ಹತನಾಗಿ ಬಿದ್ದಿದ್ದ ಪತಿಯನ್ನು ಕಂಡಳು ಆ ವಾಲಿಯು ಎಂಥವನು ? ರಣಧೀರರಾದ ಎಷ್ಟೋ ಮಂದಿ ದಾನವೇಂದ್ರರನ್ನು ಸದೆಬಡಿದವನು ಇಂದ್ರನು ವಜ್ರಾಯುಧವನ್ನು ಬೀಸುವಂತೆ, ಲೀಲಾಮಾತ್ರದಿಂದ ಮಹಾಪರ್ವತಗಳನ್ನು ಈಡಾಡಿದವನು. ಝಂಝಾವಾತದಂತೆ ವೇಗೋದ್ಧತನು. ಮಹಾಮೇಘಗಳಂತೆ ಗುಡುಗಿದವನು (೨೧–೨೨). ಅಮರೇಂದ್ರನಂತೆ ಶತ್ರುಗಳನ್ನು ಮೆಟ್ಟಿದವನು. ಈಗ ಮಳೆಸುರಿಸಿದ ಕಾರ್ಮೋಡದಂತೆ ಶಾಂತನಾಗಿರುವನು ! ಗರ್ಜಿಸುವ ವೀರರು ಹೆದರಿ ತತ್ತರಿಸುವಂತೆ ಗರ್ಜಿಸಿದ ವೀರನವನು. ಈಗ ಇನ್ನೊಬ್ಬ ವೀರನಿಂದ ಹತನಾಗಿ ಬಿದ್ದಿರುವನು ! (೨೩). ಮಾಂಸಾರ್ಥಿಯಾದ ಸಿಂಹದಿಂದ * ಘಾತಿಸಲ್ಪಟ್ಟ ಇನ್ನೊಂದು ಸಿಂಹದಂತೆ ವಾಲಿಯು ಕಾಣುತ್ತಿದ್ದನು. ಸರ್ವಲೋಕ ಸಮ್ಮಾನ್ಯವಾಗಿ ಪತಾಕೆಗಳಿಂದಲೂ ವೇದಿಕೆಗಳಿಂದಲೂ ಅಲಂಕೃತವಾದ ಚೈತ್ಯವೃಕ್ಷವು, ಅದರಲ್ಲಡಗಿದ ಸರ್ಪಗಳಿಗೋಸ್ಕರ ಗರುಡನಿಂದ ಉರುಳಿಸಲ್ಪಟ್ಟಂತೆ ತೋರುತ್ತಿದ್ದನು (೨೪–೨೫). ಸಮೀಪದಲ್ಲಿ ಕೋದಂಡವನ್ನೂರಿ

* ಶಾರ್ದೂಲ = ಸಿಂಹ ( ವೈಜಯಂತೀಕೋಶವು ಸಿಂಹಪರ್ಯಾಯದಲ್ಲಿ ಶಾರ್ದೂಲ ಶಬ್ದವನ್ನು ಹೇಳಿದೆ).

ಸಮೀಕ್ಷ್ಯ ವ್ಯಥಿತಾ ಭೂಮೌ ಸಂಭ್ರಾಂತಾ ನಿಪಪಾತ ಹ ।
ಸುಪ್ತ್ವೇವ ಪುನರುತ್ಥಾಯ ಆರ್ಯಪುತ್ರೇತಿ ಶೋಚತೀ ॥ ೨೭

ರುರೋದ ಸಾ ಪತಿಂ ದೃಷ್ಟ್ವಾ ಸಂದಿತಂ ಮೃತ್ಯುದಾಮಭಿಃ ।
ತಾಮವೇಕ್ಷ್ಯ ತು ಸುಗ್ರೀವಃ ಕ್ರೋಶಂತೀಂ ಕುರರೀಮಿವ ॥ ೨೮

ವಿಷಾದಮಗಮತ್ ಕಷ್ಟಂ ದೃಷ್ಟ್ವಾ ಚಾಂಗದಮಾಗತಮ್ ॥

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಏಕೋನವಿಂಶಃ ಸರ್ಗಃ



ನಿಂತಿದ್ದ ಶ್ರೀರಾಮನನ್ನೂ ಲಕ್ಷ್ಮಣನನ್ನೂ ರೋಷವಿಲ್ಲದೆ ಶಾಂತನಾಗಿ ನಿಂತಿದ್ದ ಮೈದುನನನ್ನೂ ತಾರೆಯು ಕಂಡಳು. ಅವರನ್ನು ಲಕ್ಷಿಸದೆ ತಾರೆಯು ಗಂಡನ ಬಳಿಗೆ ಹೋಗಿ ಅವನು ಹತನಾಗಿ ಬಿದ್ದುದನ್ನು ನೋಡಿ, ದುಃಖ ದಿಂದ ದಿಕ್ಕುಗಾಣದೆ ನೆಲದಮೇಲುರುಳಿದಳು. ಅನಂತರ ನಿದ್ರೆಯಿಂದೆದ್ದಂತೆ ತಾನಾಗಿಯೇ ಚೇತರಿಸಿಕೊಂಡೆದ್ದು, 'ಆರ್ಯಪುತ್ರ !' ಎಂದು ಕೂಗುತ್ತ ಅಳತೊಡಗಿದಳು (೨೬-೨೭) ಮೃತ್ಯುಪಾಶದಿಂದ ಬಿಗಿಯಲ್ಪಟ್ಟ ಗಂಡನನ್ನು ವೀಕ್ಷಿಸಿ ಕುರರಪಕ್ಷಿಯಂತೆ ಗೋಳಾಡತೊಡಗಿದಳು. ಅಷ್ಟರಲ್ಲಿ ಅಂಗದನೂ ಬಂದಿದ್ದನು. ಅವರಿಬ್ಬರನ್ನೂ ನೋಡಿ ಸುಗ್ರೀವನಿಗೆ ತಡೆಯಲಾರದಷ್ಟು ದುಃಖ ಉಂಟಾಯಿತು (೨೮).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಹತ್ತೊಂಬತ್ತನೆಯ ಸರ್ಗ



## ವಿಂಶಃ ಸರ್ಗಃ

### ತಾರಾವಿಲಾಪಃ

ರಾಮಚಾಪವಿಸೃಷ್ಟೇನ ಶರೇಣಾಂತಕರೇಣ ತಮ್ ।
ದೃಷ್ಟ್ವಾ ವಿನಿಹತಂ ಭೂಮೌ ತಾರಾ ತಾರಾಧಿಪಾನನಾ ॥ ೧
ಸಾ ಸಮಾಸಾದ್ಯ ಭರ್ತಾರಂ ಪರ್ಯಷ್ವಜತ ಭಾಮಿನೀ ।
ಇಷುಣಾಭಿಹತಂ ದೃಷ್ಟ್ವಾ ವಾಲಿನಂ ಕುಂಜರೋಪಮಮ್ ॥ ೨
ವಾನರೇಂದ್ರಂ ಮಹೇಂದ್ರಾಭಂ ಶೋಕಸಂತಪ್ತಮಾನಸಾ ।
ತಾರಾ ತರುಮಿವೋನ್ಮೂಲಂ ಪರ್ಯದೇವಯದಾತುರಾ ॥ ೩
ರಣೇ ದಾರುಣ ವಿಕ್ರಾಂತ ಪ್ರವೀರ ಪ್ಲವತಾಂ ವರ ।
ಕಿಂ ದೀನಾಂ ಮಾಂ ಪುರೋಭಾಗಾಮದ್ಯ ತ್ವಂ ನಾಭಿಭಾಷಸೇ ॥ ೪
ಉತ್ತಿಷ್ಠ ಹರಿಶಾರ್ದೂಲ ಭಜಸ್ವ ಶಯನೋತ್ತಮಮ್ ।
ನೈವಂವಿಧಾಃ ಶೇರತೇ ಹಿ ಭೂಮೌ ನೃಪತಿಸತ್ತಮಾಃ ॥ ೫

## ಸರ್ಗ ೨೦

### ತಾರೆಯ ವಿಲಾಪ.

ಶ್ರೀರಾಮನ ಧನುಸ್ಸಿನಿಂದ ಚಿಮ್ಮಿದ ಪ್ರಾಣಾಂತಕವಾದ ಬಾಣದಿಂದ ಹತನಾಗಿ ಭೂಮಿಯಲ್ಲಿ ಬಿದ್ದಿದ್ದ ವಾಲಿಯನ್ನು ತಾರೆಯು ಕಂಡಳು. ಆ ಚಂದ್ರಮುಖಿಯು ಹತ್ತಿರ ಹೋಗಿ ಗಂಡನನ್ನಪ್ಪಿಕೊಂಡಳು. ಶರಾಭಿಹತನಾದ ಗಜೇಂದ್ರನಂತಿದ್ದ ದೇವೇಂದ್ರಸದೃಶನಾದ ಆ ವಾನರೇಂದ್ರನನ್ನು ನೋಡಿ ನೋಡಿ, ತಾರೆಯ ಹೃದಯವು ದುಃಖದಿಂದ ಕುದಿಯಿತು (೧-೨). ಬುಡಸಹಿತವಾಗಿ ಉರುಳಿಬಿದ್ದ ಮರದಂತಿರುವ ವಾಲಿಯನ್ನು ನೋಡಿ ಅವಳು ವಿಷಣ್ಣಳಾಗಿ ಗೋಳಾಡತೊಡಗಿದಳು: "ಹಾ ವಾನರೇಂದ್ರ, ರಣಧೀರ, ವೀರಾಧಿವೀರ! ದೀನಳಾದ ನನ್ನೊಡನೆ ಏಕೆ ಮಾತನಾಡೆ? ನಾನೇನಾದರೂ ಅಪರಾಧಮಾಡಿರುವೆನೆಂದೆ? (೩-೪). ವಾನರೋತ್ತಮ, ಮೇಲೇಳು ಉತ್ತಮವಾದ ಹಾಸಿಗೆಯಲ್ಲಿ ಮಲಗಿಕೊ. ನಿನ್ನಂತಹ ರಾಜಶ್ರೇಷ್ಠರು

ಅತೀವ ಖಲು ತೇ ಕಾಂತಾ ವಸುಧಾ ವಸುಧಾಧಿಪ ।
ಗತಾಸುರಪಿ ಯಾಂ ಗಾತ್ರೈರ್ಮಾಂ ವಿಹಾಯ ನಿಷೇವಸೇ ॥ ೬

ವ್ಯಕ್ತಮನ್ಯಾ ತ್ವಯಾ ವೀರ ಧರ್ಮತಃ ಸಂಪ್ರವರ್ತತಾ ।
ಕಿಷ್ಕಿಂಧೇವ ಪುರೀ ರಮ್ಯಾ ಸ್ವರ್ಗಮಾರ್ಗೇ ವಿನಿರ್ಮಿತಾ ॥ ೭

ಯಾನ್ಯಸ್ಮಾಭಿಸ್ತ್ವಯಾ ಸಾರ್ಧಂ ವನೇಷು ಮಧುಗಂಧಿಷು ।
ವಿಹೃತಾನಿ ತ್ವಯಾ ಕಾಲೇ ತೇಷಾಮುಪರಮಃ ಕೃತಃ ॥ ೮

ನಿರಾನಂದಾ ನಿರಾಶಾಹಂ ನಿಮಗ್ನಾ ಶೋಕಸಾಗರೇ ।
ತ್ವಯಿ ಪಂಚತ್ವಮಾಪನ್ನೇ ಮಹಾಯೂಥಪಯೂಥಪೇ ॥ ೯

ಹೃದಯಂ ಸುಸ್ಥಿರಂ ಮನ್ಯೇ ದೃಷ್ಟ್ವಾ ವಿನಿಹತಂ ಪತಿಮ್ ।
ಯನ್ನ ಶೋಕಾಭಿಸಂತಪ್ತಂ ಸ್ಫುಟತೇಽದ್ಯ ಸಹಸ್ರಧಾ ॥ ೧೦

ಸುಗ್ರೀವಸ್ಯ ತ್ವಯಾ ಭಾರ್ಯಾ ಹೃತಾ ಸ ಚ ವಿವಾಸಿತಃ ।
ಯತ್ತು ತಸ್ಯ ತ್ವಯಾ ವ್ಯುಷ್ಟಿಃ ಪ್ರಾಪ್ತೇಯಂ ಪ್ಲವಗಾಧಿಪ ॥ ೧೧

---

ಹೀಗೆ ನೆಲದಮೇಲೆ ಮಲಗುವುದುಂಟೆ? ಹಾ ಭೂಪತಿ, ನಿನಗೆ ಭೂಮಿಯು ಅತ್ಯಂತ ಪ್ರೀತಿಪಾತ್ರಳಾಗಿರಬೇಕು. ನನ್ನನ್ನು ಪರಿತ್ಯಜಿಸಿ, ಪ್ರಾಣ ಹೋದರೂ ಇವಳನ್ನು ಆಲಿಂಗಿಸಿಕೊಂಡಿರುವೆಯಲ್ಲವೆ! (೫–೬). ಹಾ ವೀರಾಗ್ರಣಿ, ಧರ್ಮಮಾರ್ಗದಲ್ಲಿ ನಡೆಯುತ್ತಿದ್ದ ನೀನು ಕಿಷ್ಕಿಂಧೆಯಂತೆ ರಮ್ಯವಾದ ಇನ್ನೊಂದು ನಗರವನ್ನು ಸ್ವರ್ಗಮಾರ್ಗದಲ್ಲಿ ನಿರ್ಮಿಸಿಕೊಂಡಿರಬೇಕು. ನಾವು ನಿನ್ನೊಡನೆ ಮಕರಂದಗಂಧವುಳ್ಳ ಉದ್ಯಾನವನಗಳಲ್ಲಿ ವಿಹರಿಸುತ್ತಿದ್ದೆವಲ್ಲ, ಅದೆಲ್ಲವೂ ಇಂದಿಗೆ ತೀರಿತೆ? (೭–೮). ಕಪಿನಾಯಕರಿಗೆ ನಾಯಕನಾಗಿದ್ದ ನೀನು ದಿವಂಗತನಾದಮೇಲೆ ನನ್ನ ಆನಂದವೆಲ್ಲವೂ ಅಳಿಸಿಹೋಯಿತು. ನಿರಾಶಳಾದ ನಾನು ಶೋಕಸಾಗರದಲ್ಲಿ ಮುಳುಗಿಹೋದೆ. ಅಯ್ಯೋ! ನನ್ನ ಎದೆ ಬಹಳ ಗಟ್ಟಿಯಾಗಿರಬೇಕು. ಪತಿಯು ಹತನಾಗಿ ಬಿದ್ದಿರುವುದನ್ನು ಕಂಡರೂ ಇದು ಸ್ಥಿರವಾಗಿ ಉಳಿದಿದೆಯಲ್ಲ! ಶೋಕದಿಂದ ಬೆಂದು ಸಾವಿರಚೂರಾಗಿ ಒಡೆದುಹೋಗಲಿಲ್ಲ! (೯–೧೦). ನೀನು ಸುಗ್ರೀವನ ಮಡದಿಯನ್ನಪಹರಿಸಿ ಅವನನ್ನು ಹೊರಗಟ್ಟಿದೆ. ಆ ಕರ್ಮದ ಪರಿಪಾಕವು

ನಿಃಶ್ರೇಯಸಪರಾ ಮೋಹಾತ್ತ್ವಯಾ ಚಾಹಂ ವಿಗರ್ಹಿತಾ ।
ಯೈಷಾಬ್ರುವಂ ಹಿತಂ ವಾಕ್ಯಂ ವಾನರೇಂದ್ರ ಹಿತೈಷಿಣೀ ॥ ೧೨

ರೂಪಯೌವನದೃಪ್ತಾನಾಂ ದಕ್ಷಿಣಾನಾಂ ಚ ಮಾನದ ।
ನೂನಮಪ್ಸರಸಾಮಾರ್ಯ ಚಿತ್ತಾನಿ ಪ್ರಮಥಿಷ್ಯಸಿ ॥ ೧೩

ಕಾಲೋ ನಿಃಸಂಶಯೋ ನೂನಂ ಜೀವಿತಾಂತಕರಸ್ತವ ।
ಬಲಾದ್ಯೇನಾವಪನ್ನೋಽಸಿ ಸುಗ್ರೀವಸ್ಯಾವಶೋ ವಶಮ್ ॥ ೧೪

ಅಸ್ಥಾನೇ ವಾಲಿನಂ ಹತ್ವಾ ಯುದ್ಧ್ಯಮಾನಂ ಪರೇಣ ಚ ।
ನ ಸಂತಪ್ಯತಿ ಕಾಕುತ್ಸ್ಥಃ ಕೃತ್ವಾ ಕರ್ಮ ಸುಗರ್ಹಿತಮ್ ॥ ೧೫

ವೈಧವ್ಯಂ ಶೋಕಸಂತಾಪಂ ಕೃಪಣಂ ಕೃಪಣಾ ಸತೀ ।
ಅದುಃಖೋಪಚಿತಾ ಪೂರ್ವಂ ವರ್ತಯಿಷ್ಯಾಮ್ಯನಾಥವತ್ ॥ ೧೬

ಲಾಲಿತಶ್ಚಾಂಗದೋ ವೀರಃ ಸುಕುಮಾರಃ ಸುಖೋಚಿತಃ ।
ವತ್ಸ್ಯತೇ ಕಾಮವಸ್ಥಾಂ ಮೇ ಪಿತೃವ್ಯೇ ಕ್ರೋಧಮೂರ್ಛಿತೇ ॥ ೧೭

---

ಈ ರೀತಿಯಲ್ಲಿ ನಿನಗೆ ತಟ್ಟಿತು. ನಿನ್ನ ಶ್ರೇಯಸ್ಸನ್ನು ಬಯಸಿ ನಾನು ಎಷ್ಟೋ ಹಿತವಾಕ್ಯಗಳನ್ನು ಹೇಳಿದೆನು. ನೀನು ತಿಳಿಯದೆ ನನ್ನನ್ನೇ ಬಯ್ದು ಕಳಿಸಿದೆ (೧೧–೧೨). ಆರ್ಯಪುತ್ರ, ಅಪ್ಸರೆಯರು ರೂಪಯೌವನ ಗರ್ವಿತರು ; ಕಲಾನಿಪುಣರು. ನಿನ್ನ ಸೌಂದರ್ಯವನ್ನು ಕಂಡು ಅವರ ಮನಸ್ಸು ಕದಡಿಹೋಗುವುದು. ಮುಖ್ಯವಾಗಿ ನಿನಗೆ ಮೃತ್ಯುಕಾಲವು ಒದಗಿಬಂದಿತ್ತು. ಆದ್ದರಿಂದಲೇ ನನ್ನ ಮಾತನ್ನು ಉಲ್ಲಂಘಿಸಿ ನೆಟ್ಟನೆ ಬಂದು ಸುಗ್ರೀವನಿಗೆ ವಶನಾದೆ (೧೩–೧೪). ಈ ರಾಮನು ನಿಂದ್ಯವಾದ ಕರ್ಮವನ್ನು ಮಾಡಿ ನಿಶ್ಚಿಂತೆಯಿಂದ ನಿಂತಿರುವನಲ್ಲ ! ಇನ್ನೊಬ್ಬನೊಡನೆ ಯುದ್ಧದಲ್ಲಿ ತೊಡಗಿದ ವಾಲಿಯನ್ನು ಅಯೋಗ್ಯರೀತಿಯಲ್ಲಿ ವಧಿಸಿದನಲ್ಲ ! ದುಃಖವನ್ನೇ ಕಂಡರಿಯದ ನಾನು ಈಗ ದಿಕ್ಕಿಲ್ಲದವಳಾಗಿ ಈ ವೈಧವ್ಯವನ್ನು ಹೇಗೆ ಸಹಿಸಲಿ ? ಈ ಕಠೋರಶೋಕವನ್ನು ದೀನಳಾಗಿ ಹೇಗೆ ಭರಿಸಲಿ ? (೧೫–೧೬). ವೀರನಾದ ಅಂಗದನನ್ನು ಎಷ್ಟು ಪ್ರೇಮದಿಂದ ಲಾಲಿಸಿದೆವು ! ಈ ಸುಕುಮಾರನನ್ನು ಎಷ್ಟು ಸುಖದಲ್ಲಿ ಬೆಳೆಸಿದೆವು ! ಇವನ ಚಿಕ್ಕಪ್ಪನು ಕ್ರೋಧೋದ್ದೀಪಿತನಾಗಿರಲು, ನನ್ನ ಮಗನು ಯಾವ ಅವಸ್ಥೆಯನ್ನು

ಕುರುಷ್ವ ಪಿತರಂ ಪುತ್ರ ಸುದೃಷ್ಟಂ ಧರ್ಮವತ್ಸಲಮ್ ।
ದುರ್ಲಭಂ ದರ್ಶನಂ ವತ್ಸ ತವ ತಸ್ಯ ಭವಿಷ್ಯತಿ ॥ ೧೮

ಸಮಾಶ್ವಾಸಯ ಪುತ್ರಂ ತ್ವಂ ಸಂದೇಶಂ ಸಂದಿಶಸ್ವ ಚ ।
ಮೂರ್ಧ್ನಿ ಚೈನಂ ಸಮಾಘ್ರಾಯ ಪ್ರವಾಸಂ ಪ್ರಸ್ಥಿತೋ ಹ್ಯಸಿ ॥ ೧೯

ರಾಮೇಣ ಹಿ ಮಹತ್ ಕರ್ಮ ಕೃತಂ ತ್ವಾಮಭಿನಿಘ್ನತಾ ।
ಆನೃಣ್ಯಂ ಚ ಗತಂ ತಸ್ಯ ಸುಗ್ರೀವಸ್ಯ ಪ್ರತಿಶ್ರವೇ ॥ ೨೦

ಸಕಾಮೋ ಭವ ಸುಗ್ರೀವ ರುಮಾಂ ತ್ವಂ ಪ್ರತಿಪತ್ಸ್ಯಸೇ ।
ಭುಂಕ್ಷ್ವ ರಾಜ್ಯಮನುದ್ವಿಗ್ನಃ ಶಸ್ತೋ ಭ್ರಾತಾ ರಿಪುಸ್ತವ ॥ ೨೧

ಕಿಂ ಮಾಮೇವಂ ವಿಲಪತೀಂ ಪ್ರೇಮ್ಣಾ ತ್ವಂ ನಾಭಿಭಾಷಸೇ ।
ಇಮಾಃ ಪಶ್ಯ ವರಾ ಬಹ್ವೀರ್ಭಾರ್ಯಾಸ್ತೇ ವಾನರೇಶ್ವರ ॥ ೨೨

ತಸ್ಯಾ ವಿಲಪಿತಂ ಶ್ರುತ್ವಾ ವಾನರ್ಯಃ ಸರ್ವತಶ್ಚ ತಾಃ ।
ಪರಿಗೃಹ್ಯಾಂಗದಂ ದೀನಂ ದುಃಖಾರ್ತಾಃ ಪರಿಚುಕ್ರುಶುಃ ॥ ೨೩

---

ಪಡೆಯುವನೋ! (೧೭). ಮಗನೆ, ಇಲ್ಲಿ ಬಾ. ಧರ್ಮವತ್ಸಲನಾದ ನಿನ್ನ ತಂದೆಯನ್ನು ಚೆನ್ನಾಗಿ ನೋಡು! ಮಗು, ಇನ್ನುಮೇಲೆ ಇವನ ದರ್ಶನವು ನಿನಗೆ ದುರ್ಲಭವಾಗುವುದು. ಆರ್ಯಪುತ್ರ, ನಿನ್ನ ಮಗನು ಬಂದಿದ್ದಾನೆ. ಅವನನ್ನು ಸಂತೈಸು. ಅವನಿಗೆ ಹೇಳಬೇಕಾದ ಬುದ್ಧಿವಾದವನ್ನು ಹೇಳು. ಅಂಗದನ ಶಿರಸ್ಸನ್ನು ಆಘ್ರಾಣಿಸು. ದೀರ್ಘಪ್ರಯಾಣಕ್ಕೆ ಹೊರಟಿದ್ದೀಯಲ್ಲವೆ? (೧೮-೧೯). ರಾಮನು ನಿನ್ನನ್ನು ಕೊಂದು ಮಹಾಕಾರ್ಯವನ್ನೆಸಗಿದನು! ಸುಗ್ರೀವನಿಗೆ ಕೊಟ್ಟ ಮಾತನ್ನು ನಡೆಸಿ ಋಣಮುಕ್ತನಾದನು! ಓ ಸುಗ್ರೀವ, ನಿನ್ನ ಇಷ್ಟ ಕೈಗೂಡಿತು! ರುಮೆಯು ನಿನಗೆ ದೊರೆಯುವಳು! ನಿಶ್ಚಿಂತೆಯಿಂದ ರಾಜ್ಯವನ್ನು ಭೋಗಿಸು. ನಿನ್ನ ಶತ್ರುವಾದ ಅಣ್ಣನನ್ನು ಸಂಹರಿಸಿದ್ದಾಯಿತಲ್ಲವೆ! (೨೦-೨೧) ಹೇ ಪ್ರಿಯತಮ-ವಾಲಿ, ನಾನು ಇಷ್ಟು ಗೋಳಾಡುತ್ತಿದ್ದರೂ ಪ್ರೇಮದಿಂದ ನನ್ನನ್ನು ಏಕೆ ಮಾತನಾಡಿಸದಿದ್ದೀಯೆ? ಇದೋ, ಇತ್ತ ನೋಡು ವಾನರೇಶ್ವರ, ಸುಂದರಿಯರಾದ ನಿನ್ನ ಬಹುಮಂದಿ ಮಡದಿಯರು ಬಂದು ನಿಂತಿದ್ದಾರೆ" ಎಂದು ವಿಲಪಿಸಿದಳು (೨೨) ಆಗ ಸುತ್ತಲೂ ನೆರೆದಿದ್ದ ವಾನರಸ್ತ್ರೀಯರು ದೈನ್ಯದಿಂದ ನಿಂತಿದ್ದ ಅಂಗದನನ್ನು ಹಿಡಿದುಕೊಂಡು ಸಂತೈಸುತ್ತಿದ್ದರು.

ಕಿಮಂಗದಂ ಸಾಂಗದವೀರಬಾಹೋ
　　ವಿಹಾಯ ಯಾಸ್ಯದ್ಯ ಚಿರಪ್ರವಾಸಮ್ ।
ನ ಯುಕ್ತಮೇವಂ ಗುಣಸಂನಿಕೃಷ್ಟಂ
　　ವಿಹಾಯ ಪುತ್ರಂ ಪ್ರಿಯಪುತ್ರ ಗಂತುಮ್ ॥ ೨೪

ಕಿಮಪ್ರಿಯಂ ತೇ ಪ್ರಿಯಚಾರುವೇಷ
　　ಮಯಾ ಕೃತಂ ನಾಥ ಸುತೇನ ವಾ ತೇ ।
ಸಹಾಂಗದಾಂ ಮಾಮುಪಹಾಯ ವೀರ
　　ಯತ್ ಪ್ರಸ್ಥಿತೋ ದೀರ್ಘಮಿತಃ ಪ್ರವಾಸಮ್ ॥ ೨೫

ಯದ್ಯಪ್ರಿಯಂ ಕಿಂಚಿದಸಂಪ್ರಧಾರ್ಯ
　　ಕೃತಂ ಮಯಾ ಸ್ಯಾತ್ತವ ದೀರ್ಘಬಾಹೋ ।
ಕ್ಷಮಸ್ವ ಮೇ ತದ್ಧರಿವಂಶನಾಥ
　　ವ್ರಜಾಮಿ ಮೂರ್ಧ್ನಾ ತವ ವೀರ ಪಾದೌ ॥ ೨೬

ತಥಾ ತು ತಾರಾ ಕರುಣಂ ರುದಂತೀ
　　ಭರ್ತುಃ ಸಮೀಪೇ ಸಹ ವಾನರೀಭಿಃ ।

---

ತಾರೆಯ ವಿಲಾಪವನ್ನು ಕೇಳಿ ಅವರೆಲ್ಲರೂ ಶೋಕಾರ್ತರಾಗಿ ಅಳತೊಡಗಿದರು (೨೩). ತಾರೆಯು ತನ್ನ ಪತಿಯನ್ನು ನೋಡುತ್ತ "ಹಾ ಪ್ರಾಣನಾಥ, ವೀರ್ಯಶಾಲಿಗಳಾದ ನಿನ್ನ ಭುಜಗಳು ಅಂಗದಗಳಿಂದ ಸದಾ ಭೂಷಿತವಾಗಿರುತ್ತಿದ್ದವು. ಈಗ ಈ ಅಂಗದನನ್ನೂ ತ್ಯಜಿಸಿ ದೀರ್ಘಪ್ರವಾಸಕ್ಕೆ ಹೊರಟೆಯಾ? ನಿನ್ನ ಸದ್ಗುಣಗಳೇ ಇವನಲ್ಲಿ ನೆಲೆಸಿವೆಯಲ್ಲವೆ? ಪುತ್ರನಲ್ಲಿ ಅಷ್ಟು ವಾತ್ಸಲ್ಯವನ್ನಿಟ್ಟುಕೊಂಡಿದ್ದ ನೀನು ಪುತ್ರನನ್ನು ಬಿಟ್ಟುಹೋಗುವುದು ಯುಕ್ತವೆ? (೨೪). ಹಾ ನಾಥ, ನಿನಗೆ ಯಾವುದಾದರೂ ಅಪ್ರಿಯವನ್ನು ನಾನು ಮಾಡಿದೆನೆ? ನಿನ್ನ ಮಗನು ಮಾಡಿದನೆ? ಹಾ ಸುಂದರಾಂಗ-ವೀರಾಗ್ರಣಿ, ನನ್ನನ್ನೂ ಅಂಗದನನ್ನೂ ಪರಿತ್ಯಜಿಸಿ ದೀರ್ಘಪ್ರವಾಸಕ್ಕೆ ಹೊರಡಬಹುದೆ? (೨೫). ಹೇ ಆಜಾನುಬಾಹು, ಅಜ್ಞಾನದಿಂದ ಯಾವುದಾದರೂ ಅಪ್ರಿಯವಾದುದನ್ನು ನಾನು ಎಸಗಿದ್ದರೆ, ಅದನ್ನು ಕ್ಷಮಿಸು. ಕಪೀಶ್ವರ, ನಿನ್ನ ಪಾದಗಳಿಗೆ ತಲೆಸೋಕಿಸಿ ನಮಸ್ಕರಿಸುತ್ತಿದ್ದೇನೆ" ಎಂದು ವಿಲಪಿಸಿದಳು (೨೬). ಹೀಗೆ ತಾರೆಯು ತನ್ನ ಗಂಡನ ಸಮೀಪದಲ್ಲಿ ಇತರ

ವ್ಯವಸ್ಯತ ಪ್ರಾಯಮುಪೋಪವೇಷ್ಟು-
ಮನಿಂದ್ಯವರ್ಣಾ ಭುವಿ ಯತ್ರ ವಾಲೀ ॥ ೨೭

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ವಿಂಶಃ ಸರ್ಗಃ

---

## ಏಕವಿಂಶಃ ಸರ್ಗಃ

ಹನುಮದಾಶ್ವಾಸನಮ್

**ತತೋ ನಿಪತಿತಾಂ ತಾರಾಂ ಚ್ಯುತಾಂ ತಾರಾಮಿವಾಂಬರಾತ್ ।**
**ಶನೈರಾಶ್ವಾಸಯಾಮಾಸ ಹನುಮಾನ್ ಹರಿಯೂಥಪಃ ॥ ೧**

**ಗುಣದೋಷಕೃತಂ ಜಂತುಃ ಸ್ವಕರ್ಮ ಫಲಹೇತುಕಮ್ ।**
**ಅವ್ಯಗ್ರಸ್ತದವಾಪ್ನೋತಿ ಸರ್ವಂ ಪ್ರೇತ್ಯ ಶುಭಾಶುಭಮ್ ॥ ೨**

---

ವಾನರಸ್ತ್ರೀಯರೊಡನೆ ಬಿಕ್ಕಿ ಬಿಕ್ಕಿ ಅತ್ತಳು ರೂಪವತಿಯಾದ ಆ ತಾರೆಯು ಕಡೆಯಲ್ಲಿ, ವಾಲಿಯು ಬಿದ್ದ ಸ್ಥಳದಲ್ಲಿ ಪ್ರಾಯೋಪವೇಶಮಾಡಿ ಸಾಯ ಬೇಕೆಂದು ನಿಶ್ಚಯಿಸಿದಳು (೨೭).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಇಪ್ಪತ್ತನೆಯ ಸರ್ಗ

---

## ಸರ್ಗ ೨೧

ಹನುಮಂತನು ತಾರೆಗೆ ಸಮಾಧಾನ ಹೇಳುವುದು. ತಾರೆಯು ತನ್ನ ಪತಿಯ ಪಾದವನ್ನು ಸೇರಿಕೊಳ್ಳುವುದೇ ತನಗೆ ಶ್ರೇಯಸ್ಕರವೆಂದು ತಿಳಿಸುವುದು.

ಅಂಬರದಿಂದ ಉದುರಿದ ತಾರಕೆಯಂತೆ, ತಾರೆಯು ನೆಲದಲ್ಲಿ ಬಿದ್ದು ಅಳುತ್ತಿದ್ದಳು ಆಗ ವಾನರೋತ್ತಮನಾದ ಹನುಮಂತನು ಮುಂದೆ ಬಂದು, ಮೆಲ್ಲಗೆ ತಾರೆಯನ್ನು ಸಮಾಧಾನಪಡಿಸಲು ಯತ್ನಿಸಿದನು (೧): “ಆರ್ಯೆ, ಪ್ರತಿಯೊಬ್ಬನೂ ತನ್ನ ಕರ್ಮಕ್ಕೆ ತಕ್ಕಂತೆ ಶುಭಾಶುಭಗಳನ್ನು ಪಡೆಯುತ್ತಾನೆ. ಸದ್ಬುದ್ಧಿಯಿಂದ ಮಾಡಲಿ-ದುರ್ಬುದ್ಧಿಯಿಂದ ಮಾಡಲಿ, ಫಲಾಪೇಕ್ಷೆ

ಶೋಚ್ಯಾ ಶೋಚಸಿ ಕಂ ಶೋಚ್ಯಂ ದೀನಂ ದೀನಾನುಕಂಪಸೇ ।
ಕಸ್ಯ ಕೋ ವಾ ನು ಶೋಚ್ಯೋಽಸ್ತಿ ದೇಹೇಽಸ್ಮಿನ್ಬುದ್ಬುದೋಪಮೇ ॥

ಅಂಗದಸ್ತು ಕುಮಾರೋಽಯಂ ದ್ರಷ್ಟವ್ಯೋ ಜೀವಪುತ್ರಯಾ ।
ಆಯತ್ಯಾಂ ಚ ವಿಧೇಯಾನಿ ಸಮರ್ಥಾನ್ಯಸ್ಯ ಚಿಂತಯ ॥ ೪

ಜಾನಾಸ್ಯನಿಯತಾಮೇವಂ ಭೂತಾನಾಮಾಗತಿಂ ಗತಿಮ್ ।
ತಸ್ಮಾಚ್ಛುಭಂ ಹಿ ಕರ್ತವ್ಯಂ ಪಂಡಿತೇನೈಹಲೌಕಿಕಮ್ ॥ ೫

ಯಸ್ಮಿನ್ ಹರಿಸಹಸ್ರಾಣಿ ಪ್ರಯುತಾನ್ಯರ್ಬುದಾನಿ ಚ ।
ವರ್ತಯಂತಿ ಕೃತಾಶಾನಿ ಸೋಽಯಂ ದಿಷ್ಟಾಂತಮಾಗತಃ ॥ ೬

ಯದಯಂ ನ್ಯಾಯದೃಷ್ಟಾರ್ಥಃ ಸಾಮದಾನಕ್ಷಮಾಪರಃ ।
ಗತೋ ಧರ್ಮಜಿತಾಂ ಭೂಮಿಂ ನೈನಂ ಶೋಚಿತುಮರ್ಹಸಿ ॥ ೭

---

ಯಿಂದ ಆಚರಿಸಿದ ಕರ್ಮದ ಫಲವನ್ನು ಸತ್ತಮೇಲೆ ಗತ್ಯಂತರವಿಲ್ಲದೆ ಅನುಭವಿಸಲೇಬೇಕು (೨). ನಿನ್ನ ಸ್ಥಿತಿಯೇ ಶೋಚನೀಯವಾಗಿರುವಾಗ, ಇನ್ನು ಯಾರನ್ನು ಶೋಚನೀಯರೆಂದು ತಿಳಿದು ಶೋಕಿಸುತ್ತಿರುವೆ? ದೀನಳಾಗಿರುವ ನೀನು ಯಾರ ದೈನ್ಯವನ್ನು ಕಂಡು ಕನಿಕರಪಡುವೆ? ಎಲ್ಲರ ದೇಹವೂ ನೀರಿನ ಗುಳ್ಳೆಯಂತೆ ಕ್ಷಣಭಂಗುರವಾಗಿರುವಾಗ, ಯಾರಿಗಾಗಿ ಯಾರು ಅಳಬೇಕು? (೩). ನಿನಗೆ ಪುತ್ರನಿದ್ದಾನೆ. ಈ ಅಂಗದಕುಮಾರನ ಯೋಗಕ್ಷೇಮವನ್ನು ನೋಡಿಕೊಂಡಿರು. ಅವನ ಪುರೋಭಿವೃದ್ಧಿಗೆ ಏನು ಮಾಡಬೇಕೆಂಬುದನ್ನು ಚಿಂತಿಸು ಪ್ರಾಣಿಗಳ ಈ ಹುಟ್ಟುಸಾವುಗಳು ನಮ್ಮ ಹೇಳಿಕೆಗೆ ಒಳಪಟ್ಟಿಲ್ಲವೆಂಬುದು ನಿನಗೆ ಗೊತ್ತಿದೆ. ಆದ್ದರಿಂದ ವಿವೇಕಿಯು ಇಹಲೋಕದಲ್ಲಿ ಪುಣ್ಯಕರ್ಮವನ್ನು ಆಚರಿಸುತ್ತಿರಬೇಕು (೪-೫). ನೋಡು, ಈ ವಾನರೇಂದ್ರನನ್ನಾಶ್ರಯಿಸಿಕೊಂಡು ಲಕ್ಷಗಟ್ಟಲೆ ವಾನರರು ಆಸೆಯಿಂದ ಬದುಕುತ್ತಿದ್ದರು. ಅಂಥ ವಾನರೇಶ್ವರನು ಸ್ವರ್ಗಸ್ಥನಾದನು. ನಿನ್ನ ಪತಿಯು ರಾಜನೀತಿಯಿಂದ ರಾಜ್ಯಕಾರ್ಯವನ್ನು ಪರಿಶೀಲಿಸುತ್ತ ಸಾಮ ದಾನ ಕ್ಷಮಾನಿರತನಾಗಿದ್ದನು. ಇವನು ಧರ್ಮಶೀಲರಿಗೆ ದೊರೆಯುವ ಸದ್ಗತಿಯನ್ನು ಪಡೆದಿದ್ದಾನೆ. ಈತನಿಗಾಗಿ ನೀನು ಶೋಕಿಸುವುದು ತರವಲ್ಲ (೬-೭).

ಸರ್ವೇ ಹಿ ಹರಿಶಾರ್ದೂಲಾಃ ಪುತ್ರಶ್ಚಾಯಂ ತವಾಂಗದಃ ।
ಇದಂ ಹರ್ಯೃಕ್ಷರಾಜ್ಯಂ ಚ ತ್ವತ್ಸನಾಥಮನಿಂದಿತೇ ॥ ೮

ತಾವಿಮೌ ಶೋಕಸಂತಾಪೌ ಶನೈಃ ಪ್ರೇರಯ ಭಾಮಿನಿ ।
ತ್ವಯಾ ಪರಿಗೃಹೀತೋಽಯಮಂಗದಃ ಶಾಸ್ತು ಮೇದಿನೀಮ್ ॥ ೯

ಸಂತತಿಶ್ಚ ಯಥಾ ದೃಷ್ಟಾ ಕೃತ್ಯಂ ಯಚ್ಚಾಪಿ ಸಾಂಪ್ರತಮ್ ।
ರಾಜ್ಞಸ್ತತ್ ಕ್ರಿಯತಾಂ ತಾವದೇಷ ಕಾಲಸ್ಯ ನಿಶ್ಚಯಃ ॥ ೧೦

ಸಂಸ್ಕಾರ್ಯೋ ಹರಿರಾಜಶ್ಚ ಅಂಗದಶ್ಚಾಭಿಷಿಚ್ಯತಾಮ್ ।
ಸಿಂಹಾಸನಗತಂ ಪುತ್ರಂ ಪಶ್ಯಂತೀ ಶಾಂತಿಮೇಷ್ಯಸಿ ॥ ೧೧

ಸಾ ತಸ್ಯ ವಚನಂ ಶ್ರುತ್ವಾ ಭರ್ತೃವ್ಯಸನಪೀಡಿತಾ ।
ಅಬ್ರವೀದುತ್ತರಂ ತಾರಾ ಹನುಮಂತಮವಸ್ಥಿತಮ್ ॥ ೧೨

ಅಂಗದಪ್ರತಿರೂಪಾಣಾಂ ಪುತ್ರಾಣಾಮೇಕತಃ ಶತಮ್ ।
ಹತಸ್ಯಾಪ್ಯಸ್ಯ ವೀರಸ್ಯ ಗಾತ್ರಸಂಶ್ಲೇಷಣಂ ವರಮ್ ॥ ೧೩

---

ಆರ್ಯೆ, ಸಮಸ್ತ ಕಪಿನಾಯಕರು–ಪುತ್ರನಾದ ಅಂಗದ–ಕಪಿಭಲ್ಲೂಕಗಳ ಈ ರಾಜ್ಯ–ಎಲ್ಲವೂ ಈಗ ನಿನ್ನಿಂದ ಪೋಷಿಸಲ್ಪಡಬೇಕಾಗಿದೆ. ಆದ್ದರಿಂದ, ದೇವಿ, ಈ ಶೋಕಸಂತಾಪಗಳು ಮೆಲ್ಲಮೆಲ್ಲಗೆ ತಗ್ಗುವಂತೆ ಮಾಡಿಕೊ. ಅಂಗದನು ನಿನ್ನ ವಶದಲ್ಲಿದ್ದು ಈ ರಾಜ್ಯವನ್ನಾಳಲಿ! (೮–೯). ಪುತ್ರ ಸಂತಾನದ ಪ್ರಯೋಜನವೇನೆಂಬುದನ್ನು ಪರಿಶೀಲಿಸು. ಈಗ ರಾಜನಿಗಾಗಿ ನಡೆಸಬೇಕಾದ ಕೃತ್ಯವೇನೆಂಬುದನ್ನು ಆಲೋಚಿಸಿ ಅದರಲ್ಲಿ ಉದ್ಯುಕ್ತಳಾಗು. ಕಾಲವು ಕೊಟ್ಟಿರುವ ತೀರ್ಪು ಇದು (೧೦). ಕಪಿರಾಜನಾದ ವಾಲಿಗೆ ಉತ್ತರಕ್ರಿಯೆನ್ನು ನಡೆಸಬೇಕು. ಅಂಗದನಿಗೆ ಪಟ್ಟಾಭಿಷೇಕಮಾಡಬೇಕು! ಮಗನು ಸಿಂಹಾಸನಾರೂಢನಾಗಿರುವುದನ್ನು ನೋಡುವಾಗ ನಿನ್ನ ಮನಸ್ಸಿಗೆ ಶಾಂತಿ ದೊರಕುವುದು!" ಎಂದು ಸಂತೈಸಿದನು (೧೧) ಪತಿಶೋಕದಿಂದ ಕಂಗೆಟ್ಟ ತಾರೆಯು ಹನುಮಂತನಿಗೆ "ಅಂಗದನಂಥವರು ನೂರು ಮಂದಿ ಮಕ್ಕಳಿರಲಿ, ಹನುಮಂತ, ಅದಕ್ಕಿಂತಲೂ ವೀರಾಗ್ರೇಸರನಾದ ವಾಲಿಯನ್ನು ಆಲಿಂಗಿಸಿಕೊಂಡು ಸಾಯುವುದೇ ನನಗೆ ಹೆಚ್ಚು ಹಿತಕರ (೧೨–೧೩).

ನ ಚಾಹಂ ಹರಿರಾಜ್ಯಸ್ಯ ಪ್ರಭವಾಮ್ಯಂಗದಸ್ಯ ವಾ ।
ಪಿತೃವ್ಯಸ್ತಸ್ಯ ಸುಗ್ರೀವಃ ಸರ್ವಕಾರ್ಯೇಷ್ವನಂತರಃ ॥ ೧೪

ನ ಹ್ಯೇಷಾ ಬುದ್ಧಿರಾಸ್ಥೇಯಾ ಹನುಮನ್ನಂಗದಂ ಪ್ರತಿ ।
ಪಿತಾ ಹಿ ಬಂಧುಃ ಪುತ್ರಸ್ಯ ನ ಮಾತಾ ಹರಿಸತ್ತಮ ॥ ೧೫

ನ ಹಿ ಮಮ ಹರಿರಾಜಸಂಶ್ರಯಾತ್
ಕ್ಷಮತರಮಸ್ತಿ ಪರತ್ರ ಚೇಹ ವಾ ।
ಅಭಿಮುಖಹತವೀರಸೇವಿತಂ
ಶಯನಮಿದಂ ಮಮ ಸೇವಿತುಂ ಕ್ಷಮಮ್ ॥ ೧೬

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಏಕವಿಂಶಃ ಸರ್ಗಃ



ಈ ಕಪಿರಾಜ್ಯದ ವಿಷಯದಲ್ಲಾಗಲಿ–ಅಂಗದನ ವಿಷಯದಲ್ಲಾಗಲಿ, ನಾನೇನುಮಾಡಬಲ್ಲೆ ? ಅವನ ಚಿಕ್ಕಪ್ಪನಾದ ಸುಗ್ರೀವನುಂಟು. ಮುಂದಿನ ಸರ್ವ ಕಾರ್ಯಗಳೂ ಅವನಿಗೆ ಸೇರಿದ್ದು. ಅಂಗದನ ಯೋಗಕ್ಷೇಮಗಳು ನನಗೆ ಸೇರಿದವೆಂದು ತಿಳಿಯಬೇಡ. ವಾನರೋತ್ತಮ, ಪುತ್ರನ ಹಿತವನ್ನು ನೋಡಿ ಕೊಳ್ಳುವ ಬಂಧುವು ತಂದೆ, ತಂದೆಯ ಸೋದರ—ಇವರೇ ಹೊರತು ತಾಯಿ ಯಲ್ಲ (೧೪-೧೫). ನನಗೆ ಕಪಿರಾಜನಾದ ವಾಲಿಯ ಪಾದವನ್ನು ಸೇರಿ ಕೊಳ್ಳುವುದಕ್ಕಿಂತಲೂ ಶ್ರೇಯಸ್ಕರವಾದುದು ಇನ್ನೊಂದಿಲ್ಲ. ಇಹಲೋಕ ದಲ್ಲಾಗಲಿ ಪರಲೋಕದಲ್ಲಾಗಲಿ ಪತಿಯೊಡನೆ ಇರುವುದೇ ನನಗೆ ಹಿತಕರ. ಯುದ್ಧಾಭಿಮುಖನಾಗಿ ರಣರಂಗದಲ್ಲಿ ಹತನಾದ ಈ ವೀರನು ಮಲಗಿದ ಸ್ಥಳವೇ ನನಗೆ ಯೋಗ್ಯವಾದ ಸ್ಥಾನ" ಎಂದು ಹೇಳಿದಳು (೧೬).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಇಪ್ಪತ್ತೊಂದನೆಯ ಸರ್ಗ



## ದ್ವಾವಿಂಶಃ ಸರ್ಗಃ

### ವಾಲ್ಯನುಶಾಸನಮ್

ವೀಕ್ಷಮಾಣಸ್ತು ಮಂದಾಸುಃ ಸರ್ವತೋ ಮಂದಮುಚ್ಛ್ವಸನ್ ।
ಆದಾವೇವ ತು ಸುಗ್ರೀವಂ ದದರ್ಶ ತ್ವಾತ್ಮಜಾಗ್ರತಃ ॥ ೧

ತಂ ಪ್ರಾಪ್ತವಿಜಯಂ ವಾಲೀ ಸುಗ್ರೀವಂ ಪ್ಲವಗೇಶ್ವರಃ ।
ಆಭಾಷ್ಯ ವ್ಯಕ್ತಯಾ ವಾಚಾ ಸಸ್ನೇಹಮಿದಮಬ್ರವೀತ್ ॥ ೨

ಸುಗ್ರೀವ ದೋಷೇಣ ನ ಮಾಂ ಗಂತುಮರ್ಹಸಿ ಕಿಲ್ಬಿಷಾತ್ ।
ಕೃಷ್ಯಮಾಣಂ ಭವಿಷ್ಯೇಣ ಬುದ್ಧಿಮೋಹೇನ ಮಾಂ ಬಲಾತ್ ॥ ೩

ಯುಗಪದ್ವಿಹಿತಂ ತಾತ ನ ಮನ್ಯೇ ಸುಖಮಾವಯೋಃ ।
ಸೌಹಾರ್ದಂ ಭ್ರಾತೃಯುಕ್ತಂ ಹಿ ತದಿದಂ ಜಾತಮನ್ಯಥಾ ॥ ೪

ಪ್ರತಿಪದ್ಯ ತ್ವಮದ್ಯೈವ ರಾಜ್ಯಮೇಷಾಂ ವನೌಕಸಾಮ್ ।
ಮಾಮಪ್ಯದ್ಯೈವ ಗಚ್ಛಂತಂ ವಿದ್ಧಿ ವೈವಸ್ವತಕ್ಷಯಮ್ ॥ ೫

## ಸರ್ಗ ೨೨

ವಾಲಿಯು ಚೇತರಿಸಿಕೊಂಡು ಮುಂದಿನ ಕರ್ತವ್ಯವನ್ನು ತಿಳಿಸುವುದು.
ವಾಲಿಯ ಮರಣ. ವಾನರರ ದುಃಖ.

ಮೃತಪ್ರಾಯನಾಗಿದ್ದ ವಾಲಿಯು ಸ್ವಲ್ಪ ಚೇತರಿಸಿಕೊಂಡು ಮೆಲ್ಲಗೆ ಉಸಿರಾಡಿಸುತ್ತ ಕಣ್ಣುಬಿಟ್ಟನು. ಅವನಿಗೆ ಮಗನಾದ ಅಂಗದನೆದುರಿಗೆ ನಿಂತಿದ್ದ ಸುಗ್ರೀವನನು ಮೊದಲು ಗೋಚರಿಸಿದನು. ವಿಜಯಶಾಲಿಯಾದ ಆ ಸುಗ್ರೀವನನ್ನು ಕರೆದು, ವಾನರೇಂದ್ರನಾದ ವಾಲಿಯು ಸ್ಫುಟವಾದ ಮಾತಿನಿಂದ ಸ್ನೇಹಪೂರ್ವಕವಾಗಿ ಹೀಗೆಂದನು (೧-೨): “ವತ್ಸ-ಸುಗ್ರೀವ, ನಾನು ತಪ್ಪು ಮಾಡಿದೆನೆಂದು ನನ್ನ ವಿಷಯದಲ್ಲಿ ಕಶ್ಮಲವನ್ನು ಮನಸ್ಸಿನಲ್ಲಿಡಬೇಡ. ನನ್ನ ಭವಿಷ್ಯವು ಹೀಗಿದ್ದುದರಿಂದ ನನ್ನ ಬುದ್ಧಿಗೆ ಮಂಕು ಕವಿದಿತ್ತು. ವಿಧಿಯು ನನ್ನನ್ನು ಹಾಗೆ ಎಳೆಯಿತು (೩). ತಮ್ಮ, ನಾವಿಬ್ಬರೂ ಒಟ್ಟಿಗೆ ಸುಖದಲ್ಲಿರಬಾರದೆಂಬುದೇ ದೈವಸಂಕಲ್ಪವೆಂದು ತೋರುತ್ತದೆ! ಆದ್ದರಿಂದ ಅಣ್ಣತಮ್ಮಂದಿರಿಗೆ ಇರಬೇಕಾದ ಸೌಹಾರ್ದವು ಕೆಟ್ಟು ಏನೋ ಆಗಿ ಹೋಯಿತು ನಮ್ಮ ವಾನರರಾಜ್ಯವನ್ನು ನೀನು ಸ್ವೀಕರಿಸಿ ಪಾಲಿಸಿ

ಜೀವಿತಂ ಚ ಹಿ ರಾಜ್ಯಂ ಚ ಶ್ರಿಯಂ ಚ ವಿಪುಲಾಮಿಮಾಮ್ ।
ಪ್ರಜಹಾಮ್ಯೇಷ ವೈ ತೂರ್ಣಂ ಮಹಚ್ಚಾಗರ್ಹಿತಂ ಯಶಃ ॥ ೬

ಅಸ್ಯಾಂ ತ್ವಹಮವಸ್ಥಾಯಾಂ ವೀರ ವಕ್ಷ್ಯಾಮಿ ಯದ್ವಚಃ ।
ಯದ್ಯಪ್ಯಸುಕರಂ ರಾಜನ್ ಕರ್ತುಮೇವ ತದರ್ಹಸಿ ॥ ೭

ಸುಖಾರ್ಹಂ ಸುಖಸಂವೃದ್ಧಂ ಬಾಲಮೇನಮಬಾಲಿಶಮ್ ।
ಬಾಷ್ಪಪೂರ್ಣಮುಖಂ ಪಶ್ಯ ಭೂಮೌ ಪತಿತಮಂಗದಮ್ ॥ ೮

ಮಮ ಪ್ರಾಣೈಃ ಪ್ರಿಯತರಂ ಪುತ್ರಂ ಪುತ್ರಮಿವೌರಸಮ್ ।
ಮಯಾ ಹೀನಮಹೀನಾರ್ಥಂ ಸರ್ವತಃ ಪರಿಪಾಲಯ ॥ ೯

ತ್ವಮೇವಾಸ್ಯ ಹಿ ದಾತಾ ಚ ಪರಿತ್ರಾತಾ ಚ ಸರ್ವತಃ ।
ಭಯೇಷ್ವಭಯದಶ್ಚೈವ ಯಥಾಹಂ ಪ್ಲವಗೇಶ್ವರ ॥ ೧೦

ಏಷ ತಾರಾತ್ಮಜಃ ಶ್ರೀಮಾಂಸ್ತ್ವಯಾ ತುಲ್ಯಪರಾಕ್ರಮಃ ।
ರಕ್ಷಸಾಂ ತು ವಧೇ ತೇಷಾಮಗ್ರತಸ್ತೇ ಭವಿಷ್ಯತಿ ॥ ೧೧

---

ಕೊಂಡಿರು. ನಾನು ಈಗಲೇ ಯಮರಾಜನ ಮನೆಗೆ ಹೊರಟಿದ್ದೇನೆಂದು ತಿಳಿ (೪-೫) ನನ್ನ ಪ್ರಾಣ, ರಾಜ್ಯ, ವಿಪುಲವಾದ ಈ ಸಂಪತ್ತು—ಎಲ್ಲವನ್ನೂ ತೊರೆದು ಹೋಗುತ್ತಿದ್ದೇನೆ ಹಾಗೆಯೇ ನಾನು ಸಂಪಾದಿಸಿದ ಪ್ರಶಂಸನೀಯವಾದ ಪ್ರಖ್ಯಾತಿಯನ್ನೂ ಇಲ್ಲಿ ಬಿಟ್ಟುಹೋಗುತ್ತಿದ್ದೇನೆ! (೬). ಈ ಅವಸ್ಥೆಯಲ್ಲಿ ನಾನು ಒಂದು ಮಾತನ್ನು ನಿನಗೆ ಹೇಳುವೆನು. ಅದು ದುಷ್ಕರವಾಗಿದ್ದರೂ, ವಾನರೇಶ್ವರ, ಅದನ್ನು ನೀನು ನಡೆಸಲೇಬೇಕು. ಸುಗ್ರೀವ, ಕಣ್ಣೀರು ಸುರಿಸುತ್ತ ನೆಲದಮೇಲೆ ಬಿದ್ದಿರುವ ಈ ಅಂಗದನನ್ನು ನೋಡು. ಇವನು ಸುಖೋಚಿತನಾಗಿ ಸುಖದಿಂದ ಬೆಳೆದವನು. ಇನ್ನೂ ಹುಡುಗನಾದರೂ ವಿವೇಕಶಾಲಿ (೭-೮). ಈ ಪುತ್ರನನ್ನು ನನ್ನ ಪ್ರಾಣಕ್ಕಿಂತಲೂ ಹೆಚ್ಚು ಪ್ರೀತಿಯಿಂದ ಲಾಲಿಸಿದ್ದೇನೆ. ನಾನಿಲ್ಲದೆ ಇವನು ತಬ್ಬಲಿಯಾದನು. ಸುಗ್ರೀವ, ಇವನನ್ನು ನಿನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನಂತೆ ಪಾಲಿಸಿಕೊಂಡಿರು. ಸಕಲ ವಿಧದಲ್ಲಿಯೂ ನೀನೇ ಇವನಿಗೆ ದಾತ, ಪರಿತ್ರಾತ. ಕಷ್ಟ ಬಂದಾಗ ನೀನೇ ಅಭಯವನ್ನಿತ್ತು ಅಂಗದನನ್ನು ರಕ್ಷಿಸಬೇಕು. ನಾನು ನೋಡಿಕೊಂಡಂತೆ ನೋಡಿಕೊಳ್ಳಬೇಕು (೯-೧೦). ಸುಗ್ರೀವ, ತಾರಾಗರ್ಭದಲ್ಲಿ ಜನಿಸಿದ ಈ ಬಾಲಕನು ಮಹಾತೇಜಸ್ವಿ. ನಿನಗೆ ಸಮಾನನಾದ

ಅನುರೂಪಾಣಿ ಕರ್ಮಾಣಿ ವಿಕ್ರಮ್ಯ ಬಲವಾನ್ ರಣೇ ।
ಕರಿಷ್ಯತ್ಯೇಷ ತಾರೇಯಸ್ತರಸ್ವೀ ತರುಣೋಽಂಗದಃ ॥ ೧೨

ಸುಷೇಣದುಹಿತಾ ಚೇಯಮರ್ಥಸೂಕ್ಷ್ಮವಿನಿಶ್ಚಯೇ ।
ಔತ್ಪಾತಿಕೇ ಚ ವಿವಿಧೇ ಸರ್ವತಃ ಪರಿನಿಷ್ಠಿತಾ ॥ ೧೩

ಯದೇಷಾ ಸಾಧ್ವಿತಿ ಬ್ರೂಯಾತ್ ಕಾರ್ಯಂ ತನ್ಮುಕ್ತಸಂಶಯಮ್
ನ ಹಿ ತಾರಾಮತಂ ಕಿಂಚಿದನ್ಯಥಾ ಪರಿವರ್ತತೇ ॥ ೧೪

ರಾಘವಸ್ಯ ಚ ತೇ ಕಾರ್ಯಂ ಕರ್ತವ್ಯಮವಿಶಂಕಯಾ ।
ಸ್ಯಾದಧರ್ಮೋ ಹ್ಯಕರಣೇ ತ್ವಾಂ ಚ ಹಿಂಸ್ಯಾದ್ವಿಮಾನಿತಃ ॥ ೧೫

ಇಮಾಂ ಚ ಮಾಲಾಮಾಧತ್ಸ್ವ ದಿವ್ಯಾಂ ಸುಗ್ರೀವ ಕಾಂಚನೀಮ್ ।
ಉದಾರಾ ಶ್ರೀಃ ಸ್ಥಿತಾ ಹ್ಯಸ್ಯಾಂ ಸಂಪ್ರಜಹ್ಯಾನ್ಮೃತೇ ಮಯಿ ॥

---

ಪರಾಕ್ರಮಿ. ಮುಂದೆ ಆ ರಾಕ್ಷಸರನ್ನು ವಧಿಸುವ ಕಾರ್ಯದಲ್ಲಿ ನಿನಗೆ ಮುಖ್ಯ ಸಹಾಯಕನಾಗುವನು ರಣರಂಗದಲ್ಲಿ ಈ ವೀರನು ತನಗೆ ಅನುರೂಪವಾದ ಸಾಹಸಕಾರ್ಯಗಳನ್ನು ನಡೆಸಬಲ್ಲ ತಾರಾಪುತ್ರನಾದ ಅಂಗದನು ಇನ್ನೂ ತರುಣನಾದರೂ ಮಹಾವೇಗಶಾಲಿ; ಬಲಾಢ್ಯ (೧೧-೧೨). ಸುಗ್ರೀವ, (ಇತ್ತ ನೋಡು) ಸುಷೇಣಪುತ್ರಿಯಾದ ಈ ತಾರೆ ಸೂಕ್ಷ್ಮಾರ್ಥವನ್ನು ನಿರ್ಣಯಿಸುವುದರಲ್ಲಿ ಗಟ್ಟಿಗಳು. ಮುಂದೆ ಬರಬಹುದಾದ ಕಷ್ಟನಿಷ್ಠುರಗಳನ್ನು ಗ್ರಹಿಸುವುದರಲ್ಲಿ ನಿಪುಣೆ. ಇವಳು 'ಇದು ಸರಿ' ಎಂದು ಹೇಳಿದರೆ, ನಿಸ್ಸಂಶಯವಾಗಿ ಆ ಕಾರ್ಯವನ್ನು ನಡೆಸಬಹುದು. ತಾರೆಯ ಅಭಿಪ್ರಾಯವು ಎಂದಿಗೂ ಅನ್ಯಥಾ ಆಗುವುದೇ ಇಲ್ಲ! (೧೩-೧೪). ಅಲ್ಲದೆ ಶ್ರೀರಾಮನ ಕಾರ್ಯವನ್ನು ಹಿಂದು ಮುಂದೆ ನೋಡದೆ ನೀನು ಸಾಧಿಸಿ ಕೊಡಬೇಕು. ಇಲ್ಲದಿದ್ದರೆ ನಿನಗೆ ಅಧರ್ಮವು ಸಂಘಟಿಸುವುದು. ಉಪೇಕ್ಷಿಸಿದರೆ ಅವನು ನಿನ್ನನ್ನೂ ಸಂಹರಿಸಬಹುದು (೧೫). ತಮ್ಮ, ದಿವ್ಯವಾದ ಈ ಕಾಂಚನಮಾಲೆಯನ್ನು ಕೊರಳಿಗೆ ಹಾಕಿಕೊ. ಇದರಲ್ಲಿ ಸರ್ವೋತ್ತಮವಾದ ದಿವ್ಯತೇಜಸ್ಸಿದೆ. (ಇದು ನನ್ನ ಕೊರಳಲ್ಲೇ ಇದ್ದರೆ) ನಾನು ಸತ್ತೊಡನೆ

ಇತ್ಯೇವಮುಕ್ತಃ ಸುಗ್ರೀವೋ ವಾಲಿನಾ ಭ್ರಾತೃಸೌಹೃದಾತ್ ।
ಹರ್ಷಂ ತ್ಯಕ್ತ್ವಾ ಪುನರ್ದೀನೋ ಗ್ರಹಗ್ರಸ್ತ ಇವೋಡುರಾಟ್ ॥ ೧೭

ತದ್ವಾಲಿವಚನಾಚ್ಛಾಂತಃ ಕುರ್ವನ್ ಯುಕ್ತಮತಂದ್ರಿತಃ ।
ಜಗ್ರಾಹ ಸೋಽಭ್ಯನುಜ್ಞಾತೋ ಮಾಲಾಂ ತಾಂ ಚೈವ ಕಾಂಚನೀಮ್

ತಾಂ ಮಾಲಾಂ ಕಾಂಚನೀಂ ದತ್ತ್ವಾ ವಾಲೀ ದೃಷ್ಟ್ವಾತ್ಮಜಂ ಸ್ಥಿತಮ್
ಸಂಸಿದ್ಧಃ ಪ್ರೇತ್ಯಭಾವಾಯ ಸ್ನೇಹಾದಂಗದಮಬ್ರವೀತ್ ॥ ೧೯

ದೇಶಕಾಲೌ ಭಜಸ್ವಾದ್ಯ ಕ್ಷಮಮಾಣಃ ಪ್ರಿಯಾಪ್ರಿಯೇ ।
ಸುಖದುಃಖಸಹಃ ಕಾಲೇ ಸುಗ್ರೀವವಶಗೋ ಭವ ॥ ೨೦

ಯಥಾ ಹಿ ತ್ವಂ ಮಹಾಬಾಹೋ ಲಾಲಿತಃ ಸತತಂ ಮಯಾ ।
ನ ತಥಾ ವರ್ತಮಾನಂ ತ್ವಾಂ ಸುಗ್ರೀವೋ ಬಹು ಮಂಸ್ಯತೇ ॥ ೨೧

---

ಇದರ ತೇಜಸ್ಸೂ ಹೊರಟುಹೋದೀತು" ಎಂದನು. ವಾಲಿಯು ಭ್ರಾತೃ ವಾತ್ಸಲ್ಯದಿಂದ ಆಡಿದ ನುಡಿಯನ್ನು ಕೇಳಿ, ಸುಗ್ರೀವನ ವಿಜಯೋತ್ಸಾಹವು ಮಣ್ಣುಪಾಲಾಯಿತು. ದೈನ್ಯದಿಂದ ವಿಷಣ್ಣನಾದ ಸುಗ್ರೀವನು ರಾಹು ಹಿಡಿದ ಚಂದ್ರನಂತೆ ಕಾಣಿಸಿದನು (೧೬-೧೭). ವಾಲಿಯ ಸ್ನೇಹಪೂರ್ಣ ವಾದ ವಾಕ್ಯದಿಂದ ಸುಗ್ರೀವನ ಮನಸ್ಸಿಗೆ ಸ್ವಲ್ಪ ಹಗುರವೆನಿಸಿತು. ವಾಲಿಯ ಸೂಚನೆಯಂತೆ ನಡೆಯಬೇಕೆಂಬ ಚಚ್ಚರದಿಂದ ಅವನು ಮುಂದೆ ಬಂದು, ಅಣ್ಣನ ಅನುಮತಿಯಿಂದ ಆ ಕಾಂಚನಮಾಲೆಯನ್ನು ಸ್ವೀಕರಿಸಿದನು. ವಾಲಿಯು ಆ ಮಾಲೆಯನ್ನು ಸುಗ್ರೀವನಿಗೆ ಕೊಟ್ಟು ತನ್ನ ಮಗನ ಕಡೆಗೆ ನೋಡಿದನು (೧೮-೧೯). ತಾನು ಪರಲೋಕದ ಪ್ರಯಾಣಕ್ಕೆ ಸಿದ್ಧನಾಗಿ, ಅಂಗದನನ್ನು ಕುರಿತು ಪ್ರೀತಿಯಿಂದ "ಮಗು-ಅಂಗದ, ಇನ್ನುಮೇಲೆ ದೇಶ ಕಾಲಗಳ ಪರಿಸ್ಥಿತಿಯನ್ನು ನೋಡಿ ನಡೆದುಕೊ. ಪ್ರಿಯವೊ ಅಪ್ರಿಯವೊ— ಎಲ್ಲವನ್ನೂ ತಾಳ್ಮೆಯಿಂದ ಸಹಿಸಿಕೊಳ್ಳಬೇಕು. ಕಾಲೋಚಿತವಾಗಿ ಸುಖ ದುಃಖಗಳೆರಡನ್ನೂ ಅನುಭವಿಸಲು ಸಿದ್ಧನಾಗಿರಬೇಕು. ವತ್ಸ, ಸುಗ್ರೀವನು ಹೇಳಿದಂತೆ ಕೇಳಿಕೊಂಡಿರು (೨೦). ನನ್ನ ನಿರಂತರವಾದ ಲಾಲನೆಯಲ್ಲಿ ನಡೆದಂತೆ ಇನ್ನುಮೇಲೆ ನಡೆಯದು. ಹಾಗೆಯೇ ಮುದ್ದಾಟದಿಂದ ನೀನು ನಡೆದರೆ ಸುಗ್ರೀವನು ಮೆಚ್ಚಲಾರ. ಸುಗ್ರೀವನಿಗೆ ಯಾರು ಮಿತ್ರರಲ್ಲವೋ

ಮಾಸ್ಯಾಮಿತ್ರೈರ್ಗತಂ ಗಚ್ಛೇರ್ಮಾ ಶತ್ರುಭಿರರಿಂದಮ ।
ಭರ್ತುರರ್ಥಪರೋ ದಾಂತಃ ಸುಗ್ರೀವವಶಗೋ ಭವ ॥ ೨೨

ನ ಚಾತಿಪ್ರಣಯಃ ಕಾರ್ಯಃ ಕರ್ತವ್ಯೋಽಪ್ರಣಯಶ್ಚ ತೇ ।
ಉಭಯಂ ಹಿ ಮಹಾನ್ ದೋಷಸ್ತಸ್ಮಾದಂತರದೃಗ್ಭವ ॥ ೨೩

ಇತ್ಯುಕ್ತ್ವಾಥ ವಿವೃತ್ತಾಕ್ಷಃ ಶರಸಂಪೀಡಿತೋ ಭೃಶಮ್ ।
ವಿವೃತ್ತೈರ್ದಶನೈರ್ಭೀಮೈರ್ಬಭೂವೋತ್ಕ್ರಾಂತಜೀವಿತಃ ॥ ೨೪

ತತೋ ವಿಚುಕ್ರುಶುಸ್ತತ್ರ ವಾನರಾ ಹತಯೂಥಪಾಃ ।
ಪರಿದೇವಯಮಾನಾಸ್ತೇ ಸರ್ವೇ ಪ್ಲವಗಪುಂಗವಾಃ ॥ ೨೫

ಕಿಷ್ಕಿಂಧಾ ಹ್ಯದ್ಯ ಶೂನ್ಯಾಸೀತ್ ಸ್ವರ್ಗತೇ ವಾನರಾಧಿಪೇ ।
ಉದ್ಯಾನಾನಿ ಚ ಶೂನ್ಯಾನಿ ಪರ್ವತಾಃ ಕಾನನಾನಿ ಚ ॥ ೨೬

ಹತೇ ಪ್ಲವಗಶಾರ್ದೂಲೇ ನಿಷ್ಪ್ರಭಾ ವಾನರಾಃ ಕೃತಾಃ ।
ಯಸ್ಯೋದ್ಯೋಗೇನ ಮಹತಾ ಕಾನನಾನಿ ವನಾನಿ ಚ ॥ ೨೭

---

ಅವರೊಡನೆ ಸ್ನೇಹವನ್ನು ಬೆಳೆಸಬೇಡ. ಅವನ ಶತ್ರುಗಳೊಡನೆಯೂ ಸೇರಬೇಡ. ನಿನ್ನ ಪ್ರಭುವಿನ ಕಾರ್ಯದಲ್ಲಿ ನಿರತನಾಗಿ ತಾಳ್ಮೆಯಿಂದಿರು. ಸುಗ್ರೀವನಿಗೆ ವಿಧೇಯನಾಗಿರು (೨೧-೨೨) ರಾಜರೊಡನೆ ಅತಿಸ್ನೇಹ, ಸ್ನೇಹರಾಹಿತ್ಯ—ಇವು ಕೂಡದು ಇವೆರಡೂ ಅನರ್ಥಕಾರಿ ಆದ್ದರಿಂದ, ಕಂದ, ಮಧ್ಯಸ್ಥನಾಗಿ ವರ್ತಿಸು" ಎಂದನು. ಶರಾಘಾತದಿಂದ ವಾಲಿಯು ಅತಿಯಾಗಿ ನೊಂದು ಕುಂದಿದ್ದನು. ಅಷ್ಟರಲ್ಲಿ ಅವನ ಕಣ್ಣಾಲಿಗಳು ತಿರುಗುತ್ತ ನೆಳೆದುಕೊಂಡವು. ಹೆದರಿಕೆಯಾಗುವಂತೆ ಹಲ್ಲುಗಳು ಕಿರಿದು ನೆಟಿದು ಕೊಂಡವು. ವಾಲಿಯ ಪ್ರಾಣವು ಹಾರಿತು (೨೩-೨೪). ತಮ್ಮ ನಾಯಕನು ಮೃತನಾದನೆಂದು ಅಲ್ಲಿ ನೆರೆದಿದ್ದ ವಾನರರು ಗೋಳೋ ಎಂದು ಅಳಲಾರಂಭಿಸಿದರು ವಾನರರೆಲ್ಲರೂ ಗೋಳಿಡುತ್ತ "ಅಯ್ಯೋ! ನಮ್ಮ ಕಿಷ್ಕಿಂಧೆಯು ಶೂನ್ಯವಾಯಿತು! ವಾನರೇಶ್ವರನು ಸ್ವರ್ಗಸ್ಥನಾದನು. ಉದ್ಯಾನಗಳು, ಬೆಟ್ಟಗಳು, ವನಗಳು—ಎಲ್ಲವೂ ಹಾಳುಬಿದ್ದವು! (೨೫-೨೬). ಈ ಕಪಿ ಶಾರ್ದೂಲನು ಹತನಾದಮೇಲೆ ನಮ್ಮ ಕಪಿಗಳ ವರ್ಚಸ್ಸು ಹೋಯಿತು! ಈತನ ಮಹತ್ತರವಾದ ಪರಿಶ್ರಮದಿಂದ ಅರಣ್ಯಗಳೂ ಉದ್ಯಾನಗಳೂ ಸದಾ

ಪುಷ್ಪೌಘೇಣಾನುಬಧ್ಯಂತೇ ಕರಿಷ್ಯತಿ ತದದ್ಯ ಕಃ ।
ಯೇನ ದತ್ತಂ ಮಹದ್ಯುದ್ಧಂ ಗಂಧರ್ವಸ್ಯ ಮಹಾತ್ಮನಃ ॥ ೨೮

ಗೋಲಭಸ್ಯ ಮಹಾಬಾಹೋರ್ದಶ ವರ್ಷಾಣಿ ಪಂಚ ಚ ।
ನೈವ ರಾತ್ರೌ ನ ದಿವಸೇ ತದ್ಯುದ್ಧಮುಪಶಾಮ್ಯತಿ ॥ ೨೯

ತತಸ್ತು ಷೋಡಶೇ ವರ್ಷೇ ಗೋಲಭೋ ವಿನಿಪಾತಿತಃ ।
ತಂ ಹತ್ವಾ ದುರ್ವಿನೀತಂ ತು ವಾಲೀ ದಂಷ್ಟ್ರಾಕರಾಲವಾನ್ ॥ ೩೦

ಸರ್ವಾಭಯಕರೋಽಸ್ಮಾಕಂ ಕಥಮೇಷ ನಿಪಾತಿತಃ ॥

ಹತೇ ತು ವೀರೇ ಪ್ಲವಗಾಧಿಪೇ ತದಾ
ಪ್ಲವಂಗಮಾಸ್ತತ್ರ ನ ಶರ್ಮ ಲೇಭಿರೇ ।
ವನೇಚರಾಃ ಸಿಂಹಯುತೇ ಮಹಾವನೇ
ಯಥಾ ಹಿ ಗಾವೋ ನಿಹತೇ ಗವಾಂ ಪತೌ ॥ ೩೧

---

ಪುಷ್ಪರಾಶಿಯಿಂದ ತುಂಬಿದ್ದವು. ಇನ್ನುಮೇಲೆ ಹೀಗೆ ಮಾಡತಕ್ಕವನಾರು? (೨೭). ಮಹಾತ್ಮನೂ ಮಹಾಪರಾಕ್ರಮಿಯೂ ಆದ ಗೋಲಭನೆಂಬ ಗಂಧರ್ವನೊಡನೆ ನಮ್ಮ ವಾಲಿಯು ಖಾಡಾಖಾಡಿಯಾಗಿ ಹೋರಾಡಿದನಲ್ಲ! ಹದಿನೈದು ವರ್ಷಗಳವರೆಗೆ ಒಂದೇ ಸಮನೆ ಯುದ್ಧಮಾಡಿದನಲ್ಲ! ಆ ಯುದ್ಧಕ್ಕೆ ರಾತ್ರಿಯೂ ನಿಲುಗಡೆ ಇಲ್ಲ, ಹಗಲೂ ನಿಲುಗಡೆ ಇಲ್ಲ! (೨೮-೨೯). ಕಡೆಗೆ ಹದಿನಾರನೆಯ ವರ್ಷದಲ್ಲಿ ನಮ್ಮ ರಾಜನು ಆ ಗೋಲಭನನ್ನು ಧ್ವಂಸಮಾಡಿದನಲ್ಲವೆ? ಅಂಥ ಅದಮ್ಯನಾದ ಗಂಧರ್ವನನ್ನು ಈ ವೀರಾಗ್ರೇಸರನು ಒರಸಿಹಾಕಿದನೆ! ನಮಗೆ ಸರ್ವತೋಮುಖವಾಗಿ ಅಭಯವನ್ನಿತ್ತು ರಕ್ಷಿಸುತ್ತಿದ್ದ ದಂಷ್ಟ್ರಾಕರಾಲನಾದ ವಾಲಿಯು ಹೇಗೆತಾನೆ ಹತನಾಗಿರಬಹುದು?" ಎಂದು ವಿಲಪಿಸಿದರು (೩೦). ರಣಮಲ್ಲನಾದ ವಾಲಿಯು ಮರಣಹೊಂದಲು, ಅಲ್ಲಿದ್ದ ಕಪಿಗಳಿಗೆ ಮನಃಸ್ವಾಸ್ಥ್ಯವು ತಪ್ಪಿ ಹೋಯಿತು ಸಿಂಹಸಂಚಾರವಿರುವ ಮಹಾರಣ್ಯದಲ್ಲಿ ತಮ್ಮನ್ನು ರಕ್ಷಿಸುವ ಗೂಳಿಯು ಹತವಾಗಲು ಗೋವುಗಳು ಚಿಂತೆಗೊಳಗಾಗುವಂತೆ, ಕಪಿಗಳು

ತತಸ್ತು ತಾರಾ ವ್ಯಸನಾರ್ಣವಾಪ್ಲುತಾ
ಮೃತಸ್ಯ ಭರ್ತುರ್ವದನಂ ಸಮೀಕ್ಷ್ಯ ಸಾ ।
ಜಗಾಮ ಭೂಮಿಂ ಪರಿರಭ್ಯ ವಾಲಿನಂ
ಮಹಾದ್ರುಮಂ ಛಿನ್ನಮಿವಾಶ್ರಿತಾ ಲತಾ ॥ ೩೨

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ದ್ವಾವಿಂಶಃ ಸರ್ಗಃ

---

## ತ್ರಯೋವಿಂಶಃ ಸರ್ಗಃ

### ಅಂಗದಾಭಿವಾದನಮ್

ತತಃ ಸಮುಪಜಿಘ್ರಂತೀ ಕಪಿರಾಜಸ್ಯ ತನ್ಮುಖಮ್ ।
ಪತಿಂ ಲೋಕಶ್ರುತಾ ತಾರಾ ಮೃತಂ ವಚನಮಬ್ರವೀತ್ ॥ ೧

ಶೇಷೇ ತ್ವಂ ವಿಷಮೇ ದುಃಖಮನುಕ್ತ್ವಾ ವಚನಂ ಮಮ ।
ಉಪಲೋಪಚಿತೇ ವೀರ ಸುದುಃಖೇ ವಸುಧಾತಲೇ ॥ ೨

---

ಚಿಂತೆಯಿಂದ ಕಂಗೆಟ್ಟರು (೩೧) ತಾರೆಯು ಶೋಕಸಾಗರದಲ್ಲಿ ಮುಳುಗಿದಳು. ಮೃತನಾದ ಗಂಡನ ಮುಖವನ್ನು ನೋಡುತ್ತಲೇ ಅವನನ್ನು ಆಲಿಂಗಿಸಿಕೊಂಡು ನೆಲದಮೇಲುರುಳಿದಳು. ಕತ್ತರಿಸಿಬಿದ್ದ ಮಹಾವೃಕ್ಷವನ್ನು ಬಳಸಿದ ಲತೆಯಂತೆ ತಾರೆಯು ಗೋಚರಿಸಿದಳು (೩೨).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಇಪ್ಪತ್ತೆರಡನೆಯ ಸರ್ಗ

---

## ಸರ್ಗ ೨೩

**ತಾರೆಯ ವಿಲಾಪ. ನೀಲನು ವಾಲಿಯ ಎದೆಯಿಂದ ಬಾಣವನ್ನು ಕೀಳುವುದು. ಅಂಗದನು ತಂದೆಗೆ ಅಭಿವಾದಿಸುವುದು.**

ತಾರೆಯು ಮೃತನಾದ ಕಪಿರಾಜನ ಮುಖವನ್ನು ಆಘ್ರಾಣಿಸುತ್ತ ಸಕಲರಿಗೂ ಕೇಳುವಂತೆ ಗಟ್ಟಿಯಾಗಿ ಅಳುತ್ತ ಹೀಗೆಂದಳು : "ಹಾ ವೀರಾಗ್ರಣಿ ! ನನಗೆ ಒಂದು ಹಿತವಾಕ್ಯವನ್ನೂ ಹೇಳದೆ ಹಳ್ಳತಿಟ್ಟಾದ ಈ ನೆಲದಲ್ಲಿ

ಮತ್ತಃ ಪ್ರಿಯತರಾ ನೂನಂ ವಾನರೇಂದ್ರ ಮಹೀ ತವ ।
ಶೇಷೇ ಹಿ ತಾಂ ಪರಿಷ್ವಜ್ಯ ಮಾಂ ಚ ನ ಪ್ರತಿಭಾಷಸೇ ॥ ೩

ಸುಗ್ರೀವಸ್ಯ ವಶಂ ಪ್ರಾಪ್ತೋ ವಿಧಿರೇಷ ಭವತ್ಯಹೋ ।
ಸುಗ್ರೀವ ಏವ ವಿಕ್ರಾಂತೋ ವೀರ ಸಾಹಸಿಕಪ್ರಿಯ ॥ ೪

ಋಕ್ಷವಾನರಮುಖ್ಯಾಸ್ತ್ವಾಂ ಬಲಿನಃ ಪರ್ಯುಪಾಸತೇ ।
ಏಷಾಂ ವಿಲಪಿತಂ ಕೃಚ್ಛ್ರಮಂಗದಸ್ಯ ಚ ಶೋಚತಃ ॥ ೫

ಮಮ ಚೇಮಾಂ ಗಿರಂ ಶ್ರುತ್ವಾ ಕಿಂ ತ್ವಂ ನ ಪ್ರತಿಬುಧ್ಯಸೇ ।
ಇದಂ ತದ್ವೀರಶಯನಂ ಯತ್ರ ಶೇಷೇ ಹತೋ ಯುಧಿ ॥ ೬

ಶಾಯಿತಾ ನಿಹತಾ ಯತ್ರ ತ್ವಯೈವ ರಿಪವಃ ಪುರಾ ।
ವಿಶುದ್ಧಸತ್ವಾಭಿಜನ ಪ್ರಿಯಯುದ್ಧ ಮಮ ಪ್ರಿಯ ॥ ೭

ಮಾಮನಾಥಾಂ ವಿಹಾಯೈಕಾಂ ಗತಸ್ತ್ವಮಸಿ ಮಾನದ ।
ಶೂರಾಯ ನ ಪ್ರದಾತವ್ಯಾ ಕನ್ಯಾ ಖಲು ವಿಪಶ್ಚಿತಾ ॥ ೮

---

ಮಲಗಿಬಿಟ್ಟೆಯಾ? ಕಲ್ಲುಗಳಿಂದ ತುಂಬಿ ಕಷ್ಟಕರವಾದ ಭೂಮಿಯಲ್ಲಿ ಪವಡಿಸಿಬಿಟ್ಟೆಯಾ? (೧-೨). ವಾನರೇಂದ್ರ, ನಿನಗೆ ಈ ಭೂಮಿಯು ನನಗಿಂತ ಹೆಚ್ಚಿನ ಪ್ರೇಯಸಿಯಾಗಿರಬೇಕು! ಅವಳನ್ನು ಆಲಿಂಗಿಸಿಕೊಂಡು ನನ್ನೊಡನೆ ಮಾತನ್ನೇ ಆಡುವುದಿಲ್ಲ! ನೀನು ಸುಗ್ರೀವನಿಗೆ ವಶನಾದೆ ಯೆಂಬುದು, ಅಬ್ಬಾ! ಎಂತಹ ದೈವವಿಪರ್ಯಾಸ! ಸುಗ್ರೀವನೇ ವಿಜಯಶಾಲಿಯಾದ, ಓ ಸಾಹಸಪ್ರಿಯ! (೩-೪) ಬಲಶಾಲಿಗಳಾದ ಭಲ್ಲೂಕರೂ ಕಪಿನಾಯಕರೂ ನಿನ್ನ ಸುತ್ತಲೂ ನೆರೆದಿದ್ದಾರೆ ಅಂಗದನು ಅಳುತ್ತಿದ್ದಾನೆ. ಈ ಹಾಹಾಕಾರವು ನಿನಗೆ ಕೇಳಿಸುವುದಿಲ್ಲವೆ? ನನ್ನ ವಿಲಾಪವು ಕೇಳಿಸದೆ? ಏಕೆ ನಿನಗೆ ಎಚ್ಚರವಾಗದು? ಯುದ್ಧದಲ್ಲಿ ಹತನಾಗಿ ನೀನು ಮಲಗಿರುವ ವೀರಶಯನವು ಯಾವುದು! (೫-೬) ನಿನ್ನ ಶತ್ರುಗಳನ್ನು ಕೊಂದು ಉರುಳಿಸುತ್ತಿದ್ದ ವೀರಶಯನವೇ ಇದು! ಕೇವಲ ಪರಾಕ್ರಮದ ಮೂರ್ತಿ ನೀನು ಪರಿಶುದ್ಧವಂಶದಲ್ಲಿ ಜನಿಸಿದವನು ನೀನು. ಯುದ್ಧವೆಂದರೆ ನಿನಗೆ ಎಷ್ಟು ಪ್ರೀತಿ! ಹಾ ನನ್ನ ಕಾಂತ! (೭). ನನ್ನನ್ನು ದಿಕ್ಕಿಲ್ಲದಂತೆ ಮಾಡಿ ಒಬ್ಬಳನ್ನೇ ಬಿಟ್ಟು ಹೊರಟುಹೋದೆಯಾ? ನಿನ್ನ ಕೈಹಿಡಿದುದರಿಂದ ನನಗೊಂದು ಬಿಗುಮಾನ ಬಂದಿತ್ತು. ಬುದ್ಧಿಶಾಲಿಯಾದವನು ಶೂರನಿಗೆ

ಶೂರಭಾರ್ಯಾಂ ಹತಾಂ ಪಶ್ಯ ಸದ್ಯೋ ಮಾಂ ವಿಧವಾಂ ಕೃತಾಮ್
ಅವಭಗ್ನಶ್ಚ ಮೇ ಮಾನೋ ಭಗ್ನಾ ಮೇ ಶಾಶ್ವತೀ ಗತಿಃ ॥ ೯

ಅಗಾಧೇ ಚ ನಿಮಗ್ನಾಸ್ಮಿ ವಿಪುಲೇ ಶೋಕಸಾಗರೇ ।
ಅಶ್ಮಸಾರಮಯಂ ನೂನಮಿದಂ ಮೇ ಹೃದಯಂ ದೃಢಮ್ ॥ ೧೦

ಭರ್ತಾರಂ ನಿಹತಂ ದೃಷ್ಟ್ವಾ ಯನ್ನಾದ್ಯ ಶತಧಾ ಗತಮ್ ।
ಸುಹೃಚ್ಚೈವ ಹಿ ಭರ್ತಾ ಚ ಪ್ರಕೃತ್ಯಾ ಮಮ ಚ ಪ್ರಿಯಃ ॥ ೧೧

ಆಹವೇ ಚ ಪರಾಕ್ರಾಂತಃ ಶೂರಃ ಪಂಚತ್ವಮಾಗತಃ ।
ಪತಿಹೀನಾ ತು ಯಾ ನಾರೀ ಕಾಮಂ ಭವತು ಪುತ್ರಿಣೀ ॥ ೧೨

ಧನಧಾನ್ಯೈಃ ಸುಪೂರ್ಣಾಪಿ ವಿಧವೇತ್ಯುಚ್ಯತೇ ಜನೈಃ ।
ಸ್ವಗಾತ್ರಪ್ರಭವೇ ವೀರ ಶೇಷೇ ರುಧಿರಕರ್ದಮೇ ॥ ೧೩

ಕೃಮಿರಾಗಪರಿಸ್ತೋಮೇ ತ್ವಮಾತ್ಮಶಯನೇ ಯಥಾ ।
ರೇಣುಶೋಣಿತಸಂವೀತಂ ಗಾತ್ರಂ ತವ ಸಮಂತತಃ ॥ ೧೪

---

ಮಗಳನ್ನು ಕೊಟ್ಟು ಮದುವೆಮಾಡಬಾರದು! ಶೂರನ ಮಡದಿ ಒಂದು ದಿನ ವಿಧವೆಯಾಗುವಳು! ಶೂರನ ಮಡದಿಯಾದ ನಾನು ಹೇಗೆ ವಿಧವೆಯಾಗಿ ಹಾಳಾದೆ, ನೋಡು! ನನ್ನ ಬಿಗುಮಾನವೆಲ್ಲ ಬೂದಿಯಾಯಿತು. ನನ್ನ ಗತಿಯು ಸಂಪೂರ್ಣವಾಗಿ ನಾಶವಾಯಿತು (೮-೯). ಅಗಾಧವಾದ ದೊಡ್ಡ ಶೋಕಸಾಗರದಲ್ಲಿ ನಾನು ಮುಳುಗಿಹೋದೆನು ನನ್ನ ಎದೆಯು ಕಗ್ಗಲ್ಲಿನಿಂದಲೇ ಆಗಿರಬೇಕು. ಪತಿಯು ಹತನಾದುದನ್ನು ಕಂಡರೂ ಈ ಎದೆ ನೂರು ಚೂರಾಗಿ ಸಿಡಿದುಹೋಗಲಿಲ್ಲ! ನನಗೆ ಮಿತ್ರನಾಗಿ ಪತಿಯಾಗಿ ಪ್ರಿಯನಾಗಿದ್ದ ಈ ರಣಧೀರನು ಪಂಚತ್ವವನ್ನೈದಿದನಲ್ಲ! ಗಂಡನಿಲ್ಲದ ಹೆಂಗಸಿಗೆ ಮಕ್ಕಳಿದ್ದರೇನು? (೧೦-೧೧) ಸಮೃದ್ಧಿಯಾಗಿ ಧನಧಾನ್ಯಗಳಿದ್ದರೇನು? 'ವಿಧವೆ' ಎಂದು ಜನರಿಂದ ಕರೆಸಿಕೊಳ್ಳುವುದು ತಪ್ಪದು ಹಾ ನಾಥ—ರಣವೀರ, ನಿನ್ನ ಮೈಯಿಂದ ಹರಿದ ರಕ್ತದ ಕೊಚ್ಚೆಯಲ್ಲಿಯೇ ನೀನು ಮಲಗಬೇಕಾಯಿತೆ? (೧೨-೧೩). ಲಾಕ್ಷಾರಸದಿಂದ* ಕೆಂಪಾದ

---

* ಕೃಮಿರಾಗ = ಲಾಕ್ಷಾರಸ. 'ಕೃಮಿರಾಗಂ ವದಂತ್ಯಾರ್ಯಾ ಲಾಕ್ಷಿಕಂ ಪ್ರಿಯದರ್ಶನಮ್' ಎಂದು ಉತ್ಪಲಮಾಲಾಕೋಶ; ಕೆಲವರು 'ಕೃಮಿ = ಇಂದ್ರ ಗೋಪವೆಂಬ ಕೃಮಿಯಂತೆ, ರಾಗ = ಕೆಂಪುಬಣ್ಣವಿರುವ' ಎಂದು ಅರ್ಥಮಾಡಿದ್ದಾರೆ.

ಪರಿರಬ್ಧುಂ ನ ಶಕ್ನೋಮಿ ಭುಜಾಭ್ಯಾಂ ಪ್ಲವಗರ್ಷಭ ।
ಕೃತಕೃತ್ಯೋಽದ್ಯ ಸುಗ್ರೀವೋ ವೈರೇಽಸ್ಮಿನ್ನತಿದಾರುಣೇ ॥ ೧೫

ಯಸ್ಯ ರಾಮವಿಮುಕ್ತೇನ ಹೃತಮೇಕೇಷುಣಾ ಭಯಮ್ ।
ಶರೇಣ ಹೃದಿ ಲಗ್ನೇನ ಗಾತ್ರಸಂಸ್ಪರ್ಶನೇ ತವ ॥ ೧೬

ವಾರ್ಯಾಮಿ ತ್ವಾಂ ನಿರೀಕ್ಷಂತೀ ತ್ವಯಿ ಪಂಚತ್ವಮಾಗತೇ ।
ಉದ್ಬಬರ್ಹ ಶರಂ ನೀಲಸ್ತಸ್ಯ ಗಾತ್ರಗತಂ ತದಾ ॥ ೧೭

ಗಿರಿಗಹ್ವರಸಂಲೀನಂ ದೀಪ್ತಮಾಶೀವಿಷಂ ಯಥಾ ।
ತಸ್ಯ ನಿಷ್ಕೃಷ್ಯಮಾಣಸ್ಯ ಬಾಣಸ್ಯ ಚ ಬಭೌ ದ್ಯುತಿಃ ॥ ೧೮

ಅಸ್ತಮಸ್ತಕಸಂರುದ್ಧೋ ರಶ್ಮಿರ್ದಿನಕರಾದಿವ ।
ಪೇತುಃ ಕ್ಷತಜಧಾರಾಸ್ತು ವ್ರಣೇಭ್ಯಸ್ತಸ್ಯ ಸರ್ವಶಃ ॥ ೧೯

ತಾಮ್ರಗೈರಿಕಸಂಪೃಕ್ತಾ ಧಾರಾ ಇವ ಧರಾಧರಾತ್ ।
ಅವಕೀರ್ಣಂ ವಿಮಾರ್ಜಂತೀ ಭರ್ತಾರಂ ರಣರೇಣುನಾ ॥ ೨೦

---

ಮೇಲುಹಾಸಿಗೆಯುಳ್ಳ ನಿನ್ನ ಸುಪ್ಪತ್ತಿಗೆಯಲ್ಲಿ ಮಲಗಿದಂತೆ ಮಲಗಿರುವೆಯಲ್ಲ! ವಾನರೇಶ್ವರ, ಧೂಳಿ ರಕ್ತಗಳಿಂದ ನಿನ್ನ ದೇಹವು ಮುಚ್ಚಿಹೋಗಿದೆಯಲ್ಲ, ಇದನ್ನು ಹೇಗೆ ಅಪ್ಪಿಕೊಳ್ಳಲಿ? ಸುಗ್ರೀವನ ವೈರವು ಇಷ್ಟು ಘೋರವಾಗಿ ಪರಿಣಮಿಸಿತು. ಅವನು ಕೃತಕೃತ್ಯನಾದನು (೧೪-೧೫) ರಾಮನು ಬಿಟ್ಟ ಒಂದು ಬಾಣದಿಂದ ಸುಗ್ರೀವನ ಭಯವೆಲ್ಲವೂ ನೀಗಿತು. ಎದೆಯಲ್ಲಿ ನೆಟ್ಟಿರುವ ಈ ಬಾಣವು ನಿನ್ನನ್ನು ಅಪ್ಪಿಕೊಳ್ಳದಂತೆ ನನ್ನನ್ನು ತಡೆಯುವುದಲ್ಲ! ನೀನು ಮೃತನಾಗಿ ಮಲಗಿದರೂ ಸುಮ್ಮನೆ ನಿನ್ನನ್ನು ನೋಡುವಂತಾಯಿತೆ!" ಎಂದು ಹಲುಬಿದಳು (೧೬-೧೭). ಆಗ ನೀಲನು ಮುಂದೆ ಬಂದು ವಾಲಿಯ ದೇಹದಲ್ಲಿ ನಾಟಿದ್ದ ಬಾಣವನ್ನು, ಗಿರಿಗುಹೆಯಲ್ಲಿ ಭುಗಿಲೆನ್ನುವ ವಿಷಸರ್ಪವನ್ನು ಹೊರಗೆಳೆಯುವಂತೆ ಕಿತ್ತೆಳೆದನು. ಕಿತ್ತೆಳೆಯುವಾಗ ಆ ಬಾಣದ ಪ್ರಭೆಯು ಮುಳುಗುವ ಸೂರ್ಯನಿಂದ ಹೊರಟು ಅಸ್ತಪರ್ವತದಲ್ಲಿ ಚೆಲ್ಲಿದ ರಶ್ಮಿಯಂತೆ ಕಂಗೊಳಿಸಿತು ವಾಲಿಯ ದೇಹದಲ್ಲಾದ ಗಾಯಗಳಿಂದ ರಕ್ತದ ಹೊಳೆಗಳು ಹರಿದವು (೧೮-೧೯) ಗೈರಿಕಧಾತು ಸಮ್ಮಿಶ್ರವಾದ ಕೆಂಪನೆಯ ಜಲಧಾರೆಗಳು ಬೆಟ್ಟದಿಂದ ಸುರಿದಂತೆ ಸುರಿದವು.

ಅಸ್ತ್ರೈರ್ನಯನಜೈಃ ಶೂರಂ ಸಿಷೇಚಾಸ್ತ್ರಸಮಾಹತಮ್ ।
ರುಧಿರೋಕ್ಷಿತಸರ್ವಾಂಗಂ ದೃಷ್ಟ್ವಾ ವಿನಿಹತಂ ಪತಿಮ್ ॥ ೨೧

ಉವಾಚ ತಾರಾ ಪಿಂಗಾಕ್ಷಂ ಪುತ್ರಮಂಗದಮಂಗನಾ ।
ಅವಸ್ಥಾಂ ಪಶ್ಚಿಮಾಂ ಪಶ್ಯ ಪಿತುಃ ಪುತ್ರ ಸುದಾರುಣಾಮ್ ॥ ೨೨

ಸಂಪ್ರಸಕ್ತಸ್ಯ ವೈರಸ್ಯ ಗತೋಽಂತಃ ಪಾಪಕರ್ಮಣಾ ।
ಬಾಲಸೂರ್ಯೋಜ್ಜ್ವಲತನುಂ ಪ್ರಯಾಂತಂ ಯಮಸಾದನಮ್ ॥

ಅಭಿವಾದಯ ರಾಜಾನಂ ಪಿತರಂ ಪುತ್ರ ಮಾನದಮ್ ।
ಏವಮುಕ್ತಃ ಸಮುತ್ಥಾಯ ಜಗ್ರಾಹ ಚರಣೌ ಪಿತುಃ ॥ ೨೪

ಭುಜಾಭ್ಯಾಂ ಪೀನವೃತ್ತಾಭ್ಯಾಮಂಗದೋಽಹಮಿತಿ ಬ್ರುವನ್ ।
ಅಭಿವಾದಯಮಾನಂ ತ್ವಾಮಂಗದಂ ತ್ವಂ ಯಥಾ ಪುರಾ ॥ ೨೫

ದೀರ್ಘಾಯುರ್ಭವ ಪುತ್ರೇತಿ ಕಿಮರ್ಥಂ ನಾಭಿಭಾಷಸೇ ।
ಅಹಂ ಪುತ್ರಸಹಾಯಾ ತ್ವಾಮುಪಾಸೇ ಗತಚೇತನಮ್ ॥ ೨೬

---

ತಾರೆಯು ರಣಧೂಳಿಯಿಂದ ಮುಸುಕಿದ ಗಂಡನ ಮೈಯನ್ನು ಒರಸುತ್ತ, ಶರಹತನಾದ ಆ ಶೂರನನ್ನು ಕಣ್ಣೀರಿನಿಂದ ನೆನೆಸಿದಳು. ಸರ್ವಾಂಗಗಳಲ್ಲಿಯೂ ರಕ್ತದಿಂದ ತೊಯ್ದುಹೋಗಿದ್ದ ಪತಿಯನ್ನು ವೀಕ್ಷಿಸಿ ಮತ್ತೆ ಹಲುಬತೊಡಗಿದಳು (೨೦-೨೧) ಅವಳು ಪುತ್ರನಾದ ಅಂಗದನನ್ನು ಕುರಿತು "ಮಗನೆ, ನಿನ್ನ ತಂದೆಗೆ ಬಂದ ಭೀಕರವಾದ ಅಂತಿಮಾವಸ್ಥೆಯನ್ನು ನೋಡು! ಪಾಪಿಯಾದ ಸುಗ್ರೀವನು ತನ್ನ ಸೇಡನ್ನು ತೀರಿಸಿಕೊಂಡನು! ಬಾಲಸೂರ್ಯನಂತೆ ಪ್ರಜ್ವಲಿಸುವ ದೇಹವುಳ್ಳವನಾಗಿ ಮಹಾರಾಜನು ಯಮಲೋಕಕ್ಕೆ ಹೊರಟಿದ್ದಾನೆ (೨೨-೨೩). ಮಗನೆ, ನಿನ್ನ ತಂದೆಗೆ ನಮಸ್ಕಾರಮಾಡು" ಎಂದಳು ಆಗ ಅಂಗದನು ಎದ್ದುಬಂದು ದುಂಡು ದುಂಡಾದ ತನ್ನ ಪುಷ್ಟಬಾಹುಗಳನ್ನು ನೀಡಿ, ವಾಲಿಯ ಎರಡು ಪಾದಗಳನ್ನೂ ಮುಟ್ಟಿ "ಅಪ್ಪ, ನಾನು ಅಂಗದ" ಎಂದು ಹೇಳುತ್ತ ನಮಸ್ಕರಿಸಿದನು. ತಾರೆಯು "ಪ್ರಾಣನಾಥ, ಅಂಗದನು ಅಭಿವಾದನೆಮಾಡುತ್ತಿದ್ದಾನೆ. ಹಿಂದೆ ನೀನು ಆಶೀರ್ವದಿಸುತ್ತಿದ್ದಂತೆ 'ವತ್ಸ, ದೀರ್ಘಾಯುಷ್ಮಂತನಾಗು!' ಎಂದು ಏಕೆ ಹೇಳುವುದಿಲ್ಲ? (೨೪-೨೫). ನಾನು ಪುತ್ರನೊಡನೆ ಬಂದು ಗತಪ್ರಾಣನಾದ ನಿನ್ನ ಸಮೀಪದಲ್ಲಿದ್ದೇನೆ. ಸಿಂಹದಿಂದ ನಿಹತವಾದ ವೃಷಭದ

ಸಿಂಹೇನ ನಿಹತಂ ಸದ್ಯೋ ಗೌಃ ಸವತ್ಸೇವ ಗೋವೃಷಮ್ ।
ಇಷ್ಟ್ವಾ ಸಂಗ್ರಾಮಯಜ್ಞೇನ ರಾಮಪ್ರಹರಣಾಂಭಸಿ ॥ ೨೭
ಅಸ್ಮಿನ್ನವಭೃಥೇ ಸ್ನಾತಃ ಕಥಂ ಪತ್ನ್ಯಾ ಮಯಾ ವಿನಾ ।
ಯಾ ದತ್ತಾ ದೇವರಾಜೇನ ತವ ತುಷ್ಟೇನ ಸಂಯುಗೇ ॥ ೨೮
ಶಾತಕುಂಭಮಯೀಂ ಮಾಲಾಂ ತಾಂ ತೇ ಪಶ್ಯಾಮಿ ನೇಹ ಕಿಮ್ ।
ರಾಜಶ್ರೀರ್ನ ಜಹಾತಿ ತ್ವಾಂ ಗತಾಸುಮಪಿ ಮಾನದ ॥ ೨೯
ಸೂರ್ಯಸ್ಯಾವರ್ತಮಾನಸ್ಯ ಶೈಲರಾಜಮಿವ ಪ್ರಭಾ ॥

ನ ಮೇ ವಚಃ ಪಥ್ಯಮಿದಂ ತ್ವಯಾ ಕೃತಂ
ನ ಚಾಸ್ಮಿ ಶಕ್ತಾ ವಿನಿವಾರಣೇ ತವ ।
ಹತಾ ಸಪುತ್ರಾಸ್ಮಿ ಹತೇನ ಸಂಯುಗೇ
ಸಹ ತ್ವಯಾ ಶ್ರೀರ್ವಿಜಹಾತಿ ಮಾಮಿಹ ॥ ೩೦

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ತ್ರಯೋವಿಂಶಃ ಸರ್ಗಃ

---

ಬಳಿಯಲ್ಲಿ ಕರುವಿನೊಡನೆ ಬಂದ ಗೋವಿನಂತೆ ಪರದಾಡುತ್ತಿದ್ದೇನೆ. ನಾಥ, ನೀನು ಸಂಗ್ರಾಮಯಜ್ಞವನ್ನು ನೆರವೇರಿಸಿ ರಾಮಬಾಣವೆಂಬ ಜಲದಲ್ಲಿ ಅವಭೃಥಸ್ನಾನವನ್ನು ಮಾಡಿದೆಯಲ್ಲವೆ? ಪತ್ನಿಯಾದ ನನ್ನನ್ನು ಬಿಟ್ಟು ನೀನೊಬ್ಬನೇ ಅವಭೃಥಸ್ನಾನವನ್ನು ಮಾಡಬಹುದೆ? (೨೬–೨೭). ಅಯ್ಯೋ! ನಿನ್ನ ಕೊರಳಲ್ಲಿ ಸುವರ್ಣಮಾಲೆಯನ್ನು ಕಾಣೆನಲ್ಲ, ಇದೇನು! ನಿನ್ನ ರಣಶೌರ್ಯವನ್ನು ಕಂಡು ದೇವರಾಜನು ಸಂತುಷ್ಟನಾಗಿ ಅದನ್ನು ಕೊಟ್ಟಿದ್ದನಲ್ಲ! ಕಾಂತ, ನೀನು ಗತಪ್ರಾಣನಾದರೂ ರಾಜತೇಜಸ್ಸು ನಿನ್ನನ್ನು ಬಿಟ್ಟು ಚಲಿಸಿಲ್ಲ ಸೂರ್ಯನು ಅಸ್ತಂಗತನಾದರೂ ಅವನ ಪ್ರಭೆಯು ಮೇರುಪರ್ವತದಿಂದ ಚಲಿಸದಂತೆ, ರಾಜಲಕ್ಷ್ಮಿಯು ನಿನ್ನನ್ನಗಲಿ ಹೋಗಿಲ್ಲ (೨೮–೨೯) ನಾನು ಹೇಳಿದ ಪಥ್ಯದ ನುಡಿಯನ್ನು ನೀನು ಕೇಳದೆಹೋದೆ. ನಿನ್ನನ್ನು ತಡೆಯುವ ಶಕ್ತಿ ನನಗಿರಲಿಲ್ಲ. ಒಟ್ಟಿನಲ್ಲಿ ನಾನೂ ಅಂಗದನೂ ಕೆಟ್ಟೆವು. ಯುದ್ಧಹತನಾದ ನಿನ್ನೊಡನೆ ಸಕಲ ಸೌಭಾಗ್ಯವೂ ನನ್ನ ಕೈಬಿಟ್ಟಿತು" ಎಂದು ವಿಲಪಿಸಿದಳು (೩೦).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಇಪ್ಪತ್ತುಮೂರನೆಯ ಸರ್ಗ

# ಚತುರ್ವಿಂಶಃ ಸರ್ಗಃ

## ಸುಗ್ರೀವತಾರಾಶ್ವಾಸನಮ್

ತಾಂ ತ್ವಶ್ರುವೇಗೇನ ದುರಾಸದೇನ
ತ್ವಭಿಪ್ಲುತಾಂ ಶೋಕಮಹಾರ್ಣವೇನ ।
ಪಶ್ಯಂಸ್ತದಾ ವಾಲ್ಯನುಜಸ್ತರಸ್ವೀ
ಭ್ರಾತುರ್ವಧೇನಾಪ್ರತಿಮೇನ ತೇಪೇ ॥ ೧

ಸ ಬಾಷ್ಪಪೂರ್ಣೇನ ಮುಖೇನ ವೀಕ್ಷ್ಯ
ಕ್ಷಣೇನ ನಿರ್ವಿಣ್ಣಮನಾ ಮನಸ್ವೀ ।
ಜಗಾಮ ರಾಮಸ್ಯ ಶನೈಃ ಸಮೀಪಂ
ಭೃತ್ಯೈರ್ವೃತಃ ಸಂಪರಿದೂಯಮಾನಃ ॥ ೨

ಸ ತಂ ಸಮಾಸಾದ್ಯ ಗೃಹೀತಚಾಪ-
ಮುದಾತ್ತಮಾಶೀವಿಷತುಲ್ಯಬಾಣಮ್ ।
ಯಶಸ್ವಿನಂ ಲಕ್ಷಣಲಕ್ಷಿತಾಂಗ-
ಮವಸ್ಥಿತಂ ರಾಘವಮಿತ್ಯುವಾಚ ॥ ೩

## ಸರ್ಗ ೨೪

ಸುಗ್ರೀವನ ದುಃಖ. ತಾರೆಯ ವಿಲಾಪ. ಶ್ರೀರಾಮನ ಹಿತೋಕ್ತಿ.

ಹೀಗೆ ಬಳಬಳನೆ ಕಣ್ಣೀರು ಸುರಿಸುತ್ತ ದುಃಖಸಾಗರದಲ್ಲಿ ಮುಳುಗಿದ್ದ ತಾರೆಯನ್ನು ಕಂಡು ವಾಲಿಯ ತಮ್ಮನಾದ ಸುಗ್ರೀವನಿಗೆ ಸಂಕಟವಾಯಿತು. ತಾನು ಮಾಡಿಸಿದ ಸಹೋದರವಧೆ ಅಸದೃಶವಾದುದೆಂದು ಅವನಿಗೆ ಪಶ್ಚಾತ್ತಾಪವಾಯಿತು (೧). ಅವನ ಮುಖದಲ್ಲಿ ಕಂಬನಿ ಹರಿಯಿತು. ಮನಸ್ಸಿಗೆ ಯಾವುದೂ ಬೇಡವೆನಿಸಿತು. ಸುಗ್ರೀವನು ಖಿನ್ನನಾಗಿ ತನ್ನ ಪರಿವಾರದೊಂದಿಗೆ ಶ್ರೀರಾಮನ ಬಳಿಗೆ ಮೆಲ್ಲನೆ ಹೋದನು. ಧೀರೋದಾತ್ತನಾದ ಶ್ರೀರಾಮನು ಧನುಸ್ಸನ್ನು ಹಿಡಿದು ಸರ್ಪಸಮಾನಗಳಾದ ಶರಗಳನ್ನು ಧರಿಸಿ ನಿಂತಿದ್ದನು. ಕೀರ್ತಿಶಾಲಿಯೂ ಶುಭಲಕ್ಷಣಲಕ್ಷಿತನೂ ಆದ

ಯಥಾಪ್ರತಿಜ್ಞಾತಮಿದಂ ನರೇಂದ್ರ
ಕೃತಂ ತ್ವಯಾ ದೃಷ್ಟಫಲಂ ಚ ಕರ್ಮ ।
ಮಮಾದ್ಯ ಭೋಗೇಷು ನರೇಂದ್ರಪುತ್ರ
ಮನೋ ನಿವೃತ್ತಂ ಸಹ ಜೀವಿತೇನ ॥ ೪

ಅಸ್ಯಾಂ ಮಹಿಷ್ಯಾಂ ತು ಭೃಶಂ ರುದತ್ಯಾಂ
ಪುರೇ ಚ ವಿಕ್ರೋಶತಿ ದುಃಖತಪ್ತೇ ।
ಹತೇಽಗ್ರಜೇ ಸಂಶಯಿತೇಽಂಗದೇ ಚ
ನ ರಾಮ ರಾಜ್ಯೇ ರಮತೇ ಮನೋ ಮೇ ॥ ೫

ಕ್ರೋಧಾದಮರ್ಷಾದತಿವಿಪ್ರಧರ್ಷಾ-
ದ್ಭ್ರಾತುರ್ವಧೋ ಮೇಽನುಮತಃ ಪುರಸ್ತಾತ್ ।
ಹತೇ ತ್ವಿದಾನೀಂ ಹರಿಯೂಥಪೇಽಸ್ಮಿನ್
ಸುತೀವ್ರಮಿಕ್ಷ್ವಾಕುಕುಮಾರ ತಪ್ಸ್ಯೇ ॥ ೬

ಶ್ರೇಯೋಽದ್ಯ ಮನ್ಯೇ ಮಮ ಶೈಲಮುಖ್ಯೇ
ತಸ್ಮಿನ್ನಿವಾಸಶ್ಚಿರಮೃಶ್ಯಮೂಕೇ ।

---

ರಾಘವನನ್ನು ನೋಡಿ ಸುಗ್ರೀವನು ಹೀಗೆಂದನು (೨-೩): "ನರೇಂದ್ರ, ನೀನು ಪ್ರತಿಜ್ಞೆಮಾಡಿದಂತೆ ನಿನ್ನ ಕಾರ್ಯವನ್ನು ನಿರ್ವಹಿಸಿದ್ದೀಯೆ. ಇದರ ಪರಿಣಾಮವು ಎದುರಿಗೆ ಕಾಣಿಸುತ್ತಿದೆ ನನಗೆ ರಾಜಭೋಗದಲ್ಲಿ ಆಸೆಯೋ ತಪ್ಪಿಹೋಯಿತು ಬದುಕಿರಲು ಕೂಡ ನನಗೆ ಮನಸ್ಸಿಲ್ಲ (೪). ಈ ರಾಜ ಪತ್ನಿಯು ಹೇಗೆ ರೋದಿಸುತ್ತಿರುವಳು, ನೋಡು. ಇಡೀ ನಗರವೇ ದುಃಖ ದಿಂದ ಸಂಕಟಪಡುತ್ತಿದೆ. ಅಣ್ಣನು ಹತನಾದನು. ಅಂಗದನು ಜೀವಸಹಿತ ಉಳಿಯುವನೋ ಇಲ್ಲವೋ ! ಶ್ರೀರಾಮ, ನನಗೆ ಈ ರಾಜ್ಯದಲ್ಲಿ ಮನಸ್ಸಿಲ್ಲ (೫). ಅಣ್ಣನ ವಧೆ ಮೊದಲು ನನಗೆ ಸರಿಯಾಗಿ ತೋರಿತು. ಅವನ ಕ್ರೋಧ, ಅವನ ಅಸಹಿಷ್ಣುತೆ, ಅವನಿಂದಾದ ಅಸಹನೀಯ ಪೀಡೆ–ಇವು ಗಳಿಂದ ಅವನನ್ನು ಸಂಹರಿಸಲು ಒಪ್ಪಿಕೊಂಡೆನು. ಆದರೆ ಕಪಿರಾಜನೀಗ ಹತನಾದಮೇಲೆ ನನಗೆ ಬಹಳ ಪಶ್ಚಾತ್ತಾಪವಾಗುತ್ತಿದೆ, ಸಂಕಟವಾಗುತ್ತಿದೆ. ರಾಘವ, ಆ ಋಷ್ಯಮೂಕಪರ್ವತದಲ್ಲಿ ನೆಲೆಸಿರುವುದೇ ಮೇಲೆನಿಸುತ್ತಿದೆ.

ಯಥಾ ತಥಾ ವರ್ತಯತಃ ಸ್ವವೃತ್ತ್ಯಾ
ನೇಮಂ ನಿಹತ್ಯ ತ್ರಿದಿವಸ್ಯ ಲಾಭಃ ॥ ೭
ನ ತ್ವಾಂ ಜಿಘಾಂಸಾಮಿ ಚರೇತಿ ಯನ್ಮಾ-
ಮಯಂ ಮಹಾತ್ಮಾ ಮತಿಮಾನುವಾಚ ।
ತಸ್ಯೈವ ತದ್ರಾಮ ವಚೋಽನುರೂಪ-
ಮಿದಂ ಪುನಃ ಕರ್ಮ ಚ ಮೇಽನುರೂಪಮ್ ॥ ೮
ಭ್ರಾತಾ ಕಥಂ ನಾಮ ಮಹಾಗುಣಸ್ಯ
ಭ್ರಾತುರ್ವಧಂ ರಾಘವ ರೋಚಯೇತ ।
ರಾಜ್ಯಸ್ಯ ದುಃಖಸ್ಯ ಚ ವೀರ ಸಾರಂ
ನ ಚಿಂತಯನ್ ಕಾಮಪುರಸ್ಕೃತಃ ಸನ್ ॥ ೯
ವಧೋ ಹಿ ಮೇ ಮತೋ ನಾಸೀತ್ ಸ್ವಮಾಹಾತ್ಮ್ಯಾವ್ಯತಿಕ್ರಮಾತ್
ಮಮಾಸೀದ್ಬುದ್ಧಿದೌರಾತ್ಮ್ಯಾತ್ ಪ್ರಾಣಹಾರೀ ವ್ಯತಿಕ್ರಮಃ ॥ ೧೦
ದ್ರುಮಶಾಖಾವಭಗ್ನೋಽಹಂ ಮುಹೂರ್ತಂ ಪರಿನಿಷ್ಟನನ್ ।
ಸಾಂತ್ವಯಿತ್ವಾ ತ್ವನೇನೋಕ್ತೋ ನ ಪುನಃ ಕರ್ತುಮರ್ಹಸಿ ॥ ೧೧

---

ಹೇಗೋ ನಮ್ಮ ಕಪಿವೃತ್ತಿಯಿಂದ ಜೀವಿಸುವುದೇ ಉತ್ತಮ. ಅಣ್ಣನನ್ನು ಕೊಲ್ಲುವುದರಿಂದ ಸ್ವರ್ಗವು ಕೈಸೇರುವುದಾದರೂ ಬೇಡ (೬-೭). ವಾಲಿಯು ವಿವೇಕಶಾಲಿ. ನನ್ನನ್ನು ಹೊಡೆದೋಡಿಸುವಾಗಲೂ "ಸುಗ್ರೀವ, ನಿನ್ನನ್ನು ಕೊಲ್ಲಲಾರೆ ಬದುಕು, ಹೋಗು!" ಎಂದು ಹೇಳುತ್ತಿದ್ದನು. ಆ ಮಹಾತ್ಮನಿಗೆ ಅದು ಅನುರೂಪವಾದ ನುಡಿಯಾಯಿತು. ಪಾಪಾತ್ಮನಾದ ನನಗೆ ಅಣ್ಣನನ್ನು ಕೊಲ್ಲಿಸುವುದೇ ಅನುರೂಪವಾದ ಕೃತ್ಯವಾಯಿತು! (೮). ನನ್ನ ಹೊರತಾಗಿ ಇನ್ನು ಯಾವ ಸೋದರನು ಗುಣಶಾಲಿಯಾದ ಸೋದರನ ಕೊಲೆಯನ್ನು ಬಯಸಿಯಾನು? ರಾಜ್ಯಸುಖಕ್ಕೂ ಸೋದರವಧೆಯ ದುಃಖಕ್ಕೂ ಇರುವ ತಾರತಮ್ಯವನ್ನು ಗಣಿಸದೆ ಯಾವನು ಹೀಗೆ ಮಾಡಿಯಾನು? (೯) ವಾಲಿಯು ತನ್ನ ಘನತೆಗೆ ಕುಂದು ಬಂದೀತೆಂದು ನನ್ನನ್ನು ಕೊಲ್ಲಲು ಸಮ್ಮತಿಸಲಿಲ್ಲ ದುರಾತ್ಮನಾದ ನಾನು ಅವನ ಪ್ರಾಣವನ್ನು ತೆಗೆದು ಮರ್ಯಾದೆಯನ್ನತಿಕ್ರಮಿಸಿದೆನು ಮರದ ಕೊಂಬೆಯಿಂದೊಮ್ಮೆ

ಭ್ರಾತೃತ್ವಮಾರ್ಯಭಾವಶ್ಚ ಧರ್ಮಶ್ಚಾನೇನ ರಕ್ಷಿತಃ ।
ಮಯಾ ಕ್ರೋಧಶ್ಚ ಕಾಮಶ್ಚ ಕಪಿತ್ವಂ ಚ ಪ್ರದರ್ಶಿತಮ್ ॥ ೧೨

ಅಚಿಂತನೀಯಂ ಪರಿವರ್ಜನೀಯ-
ಮನೀಪ್ಸನೀಯಂ ಸ್ವನವೇಕ್ಷಣೀಯಮ್ ।
ಪ್ರಾಪ್ತೋಽಸ್ಮಿ ಪಾಪ್ಮಾನಮಿಮಂ ವಯಸ್ಯ
ಭ್ರಾತುರ್ವಧಾತ್ತ್ವಾಷ್ಟ್ರವಧಾದಿವೇಂದ್ರಃ ॥ ೧೩

ಪಾಪ್ಮಾನಮಿಂದ್ರಸ್ಯ ಮಹೀ ಜಲಂ ಚ
ವೃಕ್ಷಾಶ್ಚ ಕಾಮಂ ಜಗೃಹುಃ ಸ್ತ್ರಿಯಶ್ಚ ।
ಕೋ ನಾಮ ಪಾಪ್ಮಾನಮಿಮಂ ಕ್ಷಮೇತ
ಶಾಖಾಮೃಗಸ್ಯ ಪ್ರತಿಪತ್ತುಮಿಚ್ಛನ್ ॥ ೧೪

ನಾರ್ಹಾಮಿ ಸಂಮಾನಮಿಮಂ ಪ್ರಜಾನಾಂ
ನ ಯೌವರಾಜ್ಯಂ ಕುತ ಏವ ರಾಜ್ಯಮ್ ।

---

ಅವನು ನನ್ನನ್ನು ಬಡಿದನು. ನಾನು ನೋವಿನಿಂದ ತತ್ತರಿಸಿ ಅರಚಿಕೊಂಡಾಗ ವಾಲಿಯು ನನ್ನನ್ನು ಸಂತೈಸಿ "ಇನ್ನುಮೇಲೆ ಹೀಗೆ ಯುದ್ಧಕ್ಕೆ ಬರಬೇಡ!" ಎಂದು ತಿಳಿಸಿದನು (೧೦-೧೧). ರಾಘವ, ತಾನು ಒಡಹುಟ್ಟಿದವನೆಂಬುದನ್ನೂ ದೊಡ್ಡತನವನ್ನೂ ಧರ್ಮವನ್ನೂ ವಾಲಿಯು ಉಳಿಸಿಕೊಂಡನು. ನಾನು ಕಾಮಕ್ರೋಧಗಳಿಗೆ ಒಳಗಾಗಿ ನನ್ನ ಮಂಗತನವನ್ನು ತೋರಿಸಿಕೊಂಡೆನು! (೧೨). ವಯಸ್ಯ, ಮಾಡಬಾರದ ಪಾಪಕೃತ್ಯವನ್ನು ಮಾಡಿದೆನು. ಊಹಾತೀತವಾದ, ಸಜ್ಜನದೂರವಾದ, ಬಯಸಬಾರದ, ನೋಡಬಾರದ ಪಾಪಕರ್ಮವನ್ನು ಮಾಡಿದೆನು ಇಂದ್ರನು ವಿಶ್ವರೂಪನನ್ನು* ಕೊಂದಂತೆ ಅಣ್ಣನನ್ನು ಕೊಂದು ಭ್ರಾತೃಹತ್ಯಾದೋಷಕ್ಕೆ ಗುರಿಯಾದೆನು (೧೩). ಇಂದ್ರನ ಪಾಪವನ್ನು ಭೂಮಿಯೂ ಜಲವೂ ವೃಕ್ಷಗಳೂ ಸ್ತ್ರೀಯರೂ ಹಂಚಿಕೊಂಡರು ವಾನರನಾದ ನನಗೆ ಉಪಕಾರಮಾಡುವುದಕ್ಕಾಗಿ ಯಾವನು ತಾನೆ ನನ್ನ ಪಾಪವನ್ನು ಹೊತ್ತುಕೊಂಡಾನು? ನಾನು ಪ್ರಜೆಗಳ ಗೌರವಕ್ಕೆ

---

* ತ್ವಾಷ್ಟ್ರ = ತ್ವಷ್ಟೃ ಬ್ರಹ್ಮನ ಪುತ್ರನಾದ ವಿಶ್ವರೂಪ; ವಿಶ್ವರೂಪನ ತಮ್ಮನಾದ ವೃತ್ರನೆಂದೂ ಅರ್ಥಮಾಡಬಹುದು. ಇವರಿಬ್ಬರನ್ನೂ ಇಂದ್ರನು ಸಂಹರಿಸಿದನು.

ಅಧರ್ಮಯುಕ್ತಂ ಕುಲನಾಶಯುಕ್ತ-
ಮೇವಂ ವಿಧಂ ರಾಘವ ಕರ್ಮ ಕೃತ್ವಾ ॥ ೧೫

ಪಾಪಸ್ಯ ಕರ್ತಾಸ್ಮಿ ವಿಗರ್ಹಿತಸ್ಯ
ಕ್ಷುದ್ರಸ್ಯ ಲೋಕಾಪಕೃತಸ್ಯ ಚೈವ ।
ಶೋಕೋ ಮಹಾನ್ ಮಾಮಭಿವರ್ತತೇಽಯಂ
ವೃಷ್ಟೇರ್ಯಥಾ ನಿಮ್ನಮಿವಾಂಬುವೇಗಃ ॥ ೧೬

ಸೋದರ್ಯಘಾತಾಪರಗಾತ್ರವಾಲಃ
ಸಂತಾಪಹಸ್ತಾಕ್ಷಿಶಿರೋವಿಷಾಣಃ ।
ಏನೋಮಯೋ ಮಾಮಭಿಹಂತಿ ಹಸ್ತೀ
ದೃಪ್ತೋ ನದೀಕೂಲಮಿವ ಪ್ರವೃದ್ಧಃ ॥ ೧೭

ಅಂಹೋ ಬತೇದಂ ನೃವರಾವಿಷಹ್ಯಂ
ನಿವರ್ತತೇ ಮೇ ಹೃದಿ ಸಾಧು ವೃತ್ತಮ್ ।
ವಿವರ್ಣಮಗ್ನೌ ಪರಿತಪ್ಯಮಾನಂ
ಕಿಟ್ಟಂ ಯಥಾ ರಾಘವ ಜಾತರೂಪಮ್ ॥ ೧೮

---

ಪಾತ್ರನಾಗಲಿಲ್ಲ. ಯುವರಾಜಪದವಿಗೂ ನಾನು ಅರ್ಹನಲ್ಲ ಇನ್ನು ರಾಜ್ಯವನ್ನಾಳುವ ಯೋಗ್ಯತೆ ನನಗೆಲ್ಲಿದೆ? ರಾಘವ, ಕುಲನಾಶಹೇತುವಾದ ಈ ಬಗೆಯ ಪಾಪಕೃತ್ಯವನ್ನು ನಡೆಸಿದಮೇಲೆ ರಾಜನಾಗುವ ಅರ್ಹತೆ ನನಗೆ ಉಳಿಯಲಿಲ್ಲ (೧೪-೧೫). ನಿಂದ್ಯವೂ ತುಚ್ಛವೂ ಸರ್ವಜನಬಹಿಷ್ಕೃತವೂ ಆದ ಪಾಪಕಾರ್ಯವನ್ನೆಸಗಿದೆನು. ಮಹತ್ತರವಾದ ಶೋಕವು ನನ್ನನ್ನು ಸೆಳೆಯುತ್ತಿದೆ. ಮಳೆಯ ಪ್ರವಾಹವೇಗವು ಹಳ್ಳದಲ್ಲಿ ನುಗ್ಗಿ ಬರುವಂತೆ ದುಃಖವು ನನ್ನೆಡೆಗೆ ನುಗ್ಗುತ್ತಿದೆ (೧೬). ಮಹಾಪಾಪವೆಂಬ ಮತ್ತಮತಂಗಜವು, ನದೀತೀರವನ್ನು ತಿವಿಯುವಂತೆ ನನ್ನನ್ನು ತಿವಿಯುತ್ತಿದೆ. ಸೋದರನ ಕೊಲೆಯೆಂಬುದೇ ಇದರ ಹಿಂಭಾಗದಲ್ಲಿರುವ ಬಾಲ. ಕೊಲೆಯಿಂದಾದ ಸಂಕಟವೇ ಈ ಮದ್ದಾನೆಯ ಸೊಂಡಿಲು, ಕಣ್ಣು, ತಲೆ, ಕೋರೆಯ ಹಲ್ಲು (೧೭). ಅಯ್ಯೋ! ತಡೆಯಲಶಕ್ಯವಾದ ಈ ಪಾಪಕರ್ಮವನ್ನು ಕಂಡು, ಸಚ್ಚಾರಿತ್ರವೆಲ್ಲವೂ ನನ್ನನ್ನು ಬಿಟ್ಟು ತೊಲಗಿದಂತಾಯಿತು. ಬೆಂಕಿಯಲ್ಲಿಟ್ಟು

ಮಹಾಬಲಾನಾಂ ಹರಿಯೂಥಪಾನಾ-
ಮಿದಂ ಕುಲಂ ರಾಘವ ಮನ್ನಿಮಿತ್ತಮ್ ।
ಅಸ್ಯಾಂಗದಸ್ಯಾಪಿ ಚ ಶೋಕತಾಪಾ-
ದರ್ಧಸ್ಥಿತಪ್ರಾಣಮಿತೀವ ಮನ್ಯೇ ॥ ೧೯

ಸುತಃ ಸುಲಭ್ಯಃ ಸುಜನಃ ಸುವಶ್ಯಃ
ಕುತಃ ಸುಪುತ್ರಃ ಸದೃಶೋಽಂಗದೇನ ।
ನ ಚಾಪಿ ವಿದ್ಯೇತ ಸ ವೀರ ದೇಶೋ
ಯಸ್ಮಿನ್ ಭವೇತ್ ಸೋದರಸಂನಿಕರ್ಷಃ ॥ ೨೦

ಯದ್ಯಂಗದೋ ವೀರವರಾದ್ಯ ಜೀವೇ-
ಜ್ಜೀವೇಚ್ಚ ಮಾತಾ ಪರಿಪಾಲನಾರ್ಥಮ್ ।
ವಿನಾ ತು ಪುತ್ರಂ ಪರಿತಾಪದೀನಾ
ತಾರಾ ನ ಜೀವೇದಿತಿ ನಿಶ್ಚಿತಂ ಮೇ ॥ ೨೧

ಸೋಽಹಂ ಪ್ರವೇಕ್ಷ್ಯಾಮ್ಯತಿದೀಪ್ತಮಗ್ನಿಂ
ಭ್ರಾತ್ರಾ ಚ ಪುತ್ರೇಣ ಚ ಸಖ್ಯಮಿಚ್ಛನ್ ।

---

ಊದಿದಾಗ ಚಿನ್ನವು ಬಣ್ಣಗೆಟ್ಟ ಕಿಟ್ಟವನ್ನು ಉಗುಳಿಹೋದಂತಾಯಿತು (೧೮). ರಾಘವ, ಈ ಅಂಗದನ ಸಂಕಟವನ್ನು ಕಂಡು ಬಲಾಢ್ಯರಾದ ಕಪಿ ನಾಯಕರಿಗೆ ಅರ್ಧಪ್ರಾಣವೇ ಹೋದಂತಾಗಿದೆ. ಈ ಅನರ್ಥಕ್ಕೆ ನಾನೇ ಮೂಲವಾದೆ! ಲೋಕದಲ್ಲಿ ಪುತ್ರನನ್ನು ಪಡೆಯಬಹುದು, ಸಜ್ಜನರನ್ನು ವಶಪಡಿಸಿಕೊಳ್ಳಬಹುದು. ಆದರೆ ಅಂಗದನಂತಹ ಪುತ್ರನು ದೊರೆತಾನೆ? ಸೋದರನಿರುವ ಒಂದು ದೇಶವು ಇದ್ದೀತೆ? (ಸೋದರನಂತಹ ಇನ್ನೊಬ್ಬ ಆಪ್ತನು ಇದ್ದಾನೆ?) (೧೯–೨೦). ಶ್ರೀರಾಮ, ಅಂಗದನು ಬದುಕಿ ಉಳಿಯುವ ಪಕ್ಷದಲ್ಲಿ ಅವನ ತಾಯಿ ಅವನ ಪರಿಪಾಲನೆಗಾಗಿ ಜೀವವನ್ನು ಹಿಡಿದಾಳು, ಪುತ್ರನು ಉಳಿಯದಿದ್ದರೆ, ಸಂಕಟದಿಂದ ಪರಿತಪಿಸುವ ತಾರೆಯು ಎಂದಿಗೂ ಬದುಕಲಾರಳೆಂದು ನಿಶ್ಚಯವಾಗಿ ನನಗೆ ಅನ್ನಿಸಿದೆ. ಈ ಅನರ್ಥಕ್ಕೆ ಕಾರಣನಾದ ನಾನು ಉರಿಯುವ ಬೆಂಕಿಯಲ್ಲಿ ಹಾರುವೆನು ನನ್ನ ಅಣ್ಣನಿಗೂ ವತ್ಸನಾದ ಅಂಗದನಿಗೂ ಸಂಗಡಿಗನಾಗಿ ಅವರೊಡನೆ ಹೊರಟು

ಇಮೇ ವಿಚೇಷ್ಯಂತಿ ಹರಿಪ್ರವೀರಾಃ
ಸೀತಾಂ ನಿದೇಶೇ ತವ ವರ್ತಮಾನಾಃ ॥ ೨೨

ಕೃತ್ಸ್ನಂ ತು ತೇ ಸೇತ್ಸ್ಯತಿ ಕಾರ್ಯಮೇತ-
ನ್ಮಯ್ಯಪ್ರತೀತೇ ಮನುಜೇಂದ್ರಪುತ್ರ ।
ಕುಲಸ್ಯ ಹಂತಾರಮಜೀವನಾರ್ಹಂ
ರಾಮಾನುಜಾನೀಹಿ ಕೃತಾಗಸಂ ಮಾಮ್ ॥ ೨೩

ಇತ್ಯೇವಮಾರ್ತಸ್ಯ ರಘುಪ್ರವೀರಃ
ಶ್ರುತ್ವಾ ವಚೋ ವಾಲ್ಯನುಜಸ್ಯ ತಸ್ಯ ।
ಸಂಜಾತಬಾಷ್ಪಃ ಪರವೀರಹಂತಾ
ರಾಮೋ ಮುಹೂರ್ತಂ ವಿಮನಾ ಬಭೂವ ॥ ೨೪

ತಸ್ಮಿನ್ ಕ್ಷಣೇಽಭೀಕ್ಷ್ಣಮವೇಕ್ಷ್ಯಮಾಣಃ
ಕ್ಷಿತಿಕ್ಷಮಾವಾನ್ ಭುವನಸ್ಯ ಗೋಪ್ತಾ ।
ರಾಮೋ ರುದಂತೀಂ ವ್ಯಸನೇ ನಿಮಗ್ನಾಂ
ಸಮುತ್ಸುಕಃ ಸೋಽಥ ದದರ್ಶ ತಾರಾಮ್ ॥ ೨೫

---

ಹೋಗುವೆನು! ಈ ಕಪಿವೀರರು ನಿನ್ನ ಅಜ್ಞೆಗೆ ವಿಧೇಯರಾಗಿ ಸೀತಾದೇವಿಯನ್ನು ಹುಡುಕಿಕೊಡುವರು! (೨೧-೨೨) ಹೇಳಹೆಸರಿಲ್ಲದಂತೆ ನಾನು ಸತ್ತುಹೋದರೂ, ರಾಜಪುತ್ರ, ನಿನ್ನ ಕಾರ್ಯವು ಪೂರ್ಣವಾಗಿ ಸಿದ್ಧಿಸುವುದು ನಾನು ಕುಲಘಾತಕ; ನಾನು ಬದುಕಿರಬಾರದು! ಶ್ರೀರಾಮ, ಪಾಪಿಯಾದ ನನಗೆ ಅನುಜ್ಞೆಯನ್ನು ಕೊಡು" ಎಂದು ಗೋಗರೆದನು (೨೩). ಹೀಗೆ ದುಃಖಾರ್ತನಾದ ಸುಗ್ರೀವನ ವಿಲಾಪವನ್ನು ಕೇಳಿ, ರಘುನಾಥನ ಕಣ್ಣಲ್ಲಿ ನೀರು ತುಂಬಿತು ಪರಂತಪನಾದ ಶ್ರೀರಾಮನು ವಿಷಾದದಿಂದ ಒಂದು ಕ್ಷಣಕಾಲ ದಿಕ್ಕುತೋಚದೆ ಸ್ತಬ್ಧನಾಗಿ ನಿಂತನು ನೆರೆದವರೆಲ್ಲರೂ ಅವನನ್ನೇ ಗಮನಿಸಿ ನೋಡುತ್ತಿದ್ದರು. ಆಗ ಪೃಥಿವಿಯಂತೆ ಕ್ಷಮಾಶೀಲನೂ ಭುವನರಕ್ಷಣದಕ್ಷನೂ ಆದ ಶ್ರೀರಾಮನು ವ್ಯಸನಮಗ್ನಳಾಗಿ ಒಂದೇ ಸಮನೆ ಕಣ್ಣೀರುಸುರಿಸುತ್ತ ಅಳುತ್ತಿದ್ದ ತಾರೆಯನ್ನು ಮರುಕದಿಂದ ವೀಕ್ಷಿಸಿದನು

ತಾಂ ಚಾರುನೇತ್ರಾಂ ಕಪಿಸಿಂಹನಾಥಂ
ಪತಿಂ ಸಮಾಶ್ಲಿಷ್ಯ ತದಾ ಶಯಾನಾಮ್ ।
ಉತ್ಥಾಪಯಾಮಾಸುರದೀನಸತ್ತ್ವಾಂ
ಮಂತ್ರಿಪ್ರಧಾನಾಃ ಕಪಿವೀರಪತ್ನೀಮ್ ॥ ೨೬

ಸಾ ವಿಸ್ಫುರಂತೀ ಪರಿರಭ್ಯಮಾಣಾ
ಭರ್ತುಃ ಸಕಾಶಾದಪನೀಯಮಾನಾ ।
ದದರ್ಶ ರಾಮಂ ಶರಚಾಪಪಾಣಿಂ
ಸ್ವತೇಜಸಾ ಸೂರ್ಯಮಿವ ಜ್ವಲಂತಮ್ ॥ ೨೭

ಸುಸಂವೃತಂ ಪಾರ್ಥಿವಲಕ್ಷಣೈಶ್ಚ
ತಂ ಚಾರುನೇತ್ರಂ ಮೃಗಶಾವನೇತ್ರಾ ।
ಅದೃಷ್ಟಪೂರ್ವಂ ಪುರುಷಪ್ರಧಾನ-
ಮಯಂ ಸ ಕಾಕುತ್ಸ್ಥ ಇತಿ ಪ್ರಜಜ್ಞೇ ॥ ೨೮

ತಸ್ಯೇಂದ್ರಕಲ್ಪಸ್ಯ ದುರಾಸದಸ್ಯ
ಮಹಾನುಭಾವಸ್ಯ ಸಮೀಪಮಾರ್ಯಾ ।

---

(೨೪-೨೫) (ಅವನ ಇಂಗಿತವನ್ನರಿತು) ಮಂತ್ರಿಮುಖ್ಯರಾದ ಕೆಲವು ಕಪಿನಾಯಕರು ತಾರೆಯ ಬಳಿಗೆ ಹೋಗಿ, ಕಪಿವೀರನಾದ ತನ್ನ ಪತಿಯನ್ನಾಲಿಂಗಿಸಿಕೊಂಡು ಭೂಮಿಯಮೇಲೆ ಹೊರಳುತ್ತಿದ್ದ ಅವಳನ್ನು ಮೇಲಕ್ಕೆತ್ತಿ ಕುಳ್ಳಿರಿಸಿದರು (೨೬). ಅನಂತರ ಅವಳನ್ನು ಹಿಡಿದುಕೊಂಡು, ಅವಳ ಗಂಡನ ಸಮೀಪದಿಂದ ಶ್ರೀರಾಮನಿದ್ದಲ್ಲಿಗೆ ಕರೆತಂದರು. ಬಿಲ್ಲು ಬಾಣಗಳನ್ನು ಹಿಡಿದು ತನ್ನ ತೇಜೋವಿಶೇಷದಿಂದ ಭಾಸ್ಕರನಂತೆ ಬೆಳಗುತ್ತ ನಿಂತಿದ್ದ ಶ್ರೀರಾಮನನ್ನು ತಾರೆಯು ನೋಡಿದಳು (೨೭). ಹರಿಣನೇತ್ರೆಯಾದ ತಾರೆಯು, ಸಮಸ್ತ ರಾಜಲಕ್ಷಣಗಳಿಂದ ಶೋಭಿತನಾಗಿ ತೇಜೋಮಯ ಮನೋಜ್ಞನೇತ್ರನಾಗಿ, ಹಿಂದೆಂದೂ ನೋಡದ ರೂಪವೈಭವಸಂಪನ್ನನಾಗಿ ವಿರಾಜಿಸುತ್ತಿದ್ದ ಆ ಪುರುಷೋತ್ತಮನನ್ನು ನೋಡಿದಳು. ನೋಡಿ, ವಾಲಿಯನ್ನು ಸಂಹರಿಸಿದ ಆ ಕಾಕುತ್ಸ್ಥನೇ ಇವನು ಎಂದುಕೊಂಡಳು (೨೮). ದೇವೇಂದ್ರನಂತೆ ದರ್ಶನೀಯನೂ ದುರಾಸದನೂ ಆದ ಆ ಮಹಾನುಭಾವನ

ಆರ್ತಾತಿಶೋರ್ಣಂ ವ್ಯಸನಾಭಿಪನ್ನಾ
ಜಗಾಮ ತಾರಾ ಪರಿವಿಹ್ವಲಂತೀ ॥ ೨೯

ಸಾ ತಂ ಸಮಾಸಾದ್ಯ ವಿಶುದ್ಧಸತ್ತ್ವಾ
ಶೋಕೇನ ಸಂಭ್ರಾಂತಶರೀರಭಾವಾ ।
ಮನಸ್ವಿನೀ ವಾಕ್ಯಮುವಾಚ ತಾರಾ
ರಾಮಂ ರಣೋತ್ಕರ್ಷಣಲಬ್ಧಲಕ್ಷ್ಯಮ್ ॥ ೩೦

ತ್ವಮಪ್ರಮೇಯಶ್ಚ ದುರಾಸದಶ್ಚ
ಜಿತೇಂದ್ರಿಯಶ್ಚೋತ್ತಮಧಾರ್ಮಿಕಶ್ಚ ।
ಅಕ್ಷಯ್ಯಕೀರ್ತಿಶ್ಚ ವಿಚಕ್ಷಣಶ್ಚ
ಕ್ಷಿತಿಕ್ಷಮಾವಾನ್ ಕ್ಷತಜೋಪಮಾಕ್ಷಃ ॥ ೩೧

ತ್ವಮಾತ್ತಬಾಣಾಸನಬಾಣಪಾಣಿ-
ರ್ಮಹಾಬಲಃ ಸಂಹನನೋಪಪನ್ನಃ ।
ಮನುಷ್ಯದೇಹಾಭ್ಯುದಯಂ ವಿಹಾಯ
ದಿವ್ಯೇನ ದೇಹಾಭ್ಯುದಯೇನ ಯುಕ್ತಃ ॥ ೩೨

---

ಸಮೀಪಕ್ಕೆ ಮಾನನೀಯಳಾದ ತಾರೆಯು ಅತ್ಯಂತ ದುಃಖದಿಂದ ಅಳುಕುತ್ತ ಬಳುಕುತ್ತ ಮುಗ್ಗರಿಸುತ್ತ ಹೋದಳು ಶುದ್ಧಚಿತ್ತಳಾದ ತಾರೆಗೆ ಶೋಕಾತಿರೇಕದಿಂದ ತನ್ನ ಮೈಮೇಲೆ ಪರಿವೆಯೇ ಇರಲಿಲ್ಲ ರಣರಂಗದಲ್ಲಿ ಜಯಶಾಲಿಯಾಗಿ ನಿಂತಿದ್ದ ಶ್ರೀರಾಮನನ್ನುದ್ದೇಶಿಸಿ ಆ ಧೀರಳು ಧೈರ್ಯದಿಂದ ಹೇಳಿದಳು (೨೯-೩೦): "ರಾಮ, ನಿನ್ನ ಮಹಿಮೆ ಊಹೆಗೆ ನಿಲುಕದು. ನೀನು ಮಹಾವೀರನೂ ಜಿತೇಂದ್ರಿಯನೂ ಧರ್ಮನಿಷ್ಠನೂ ಆಗಿದ್ದೀಯೆ! ನಿನಗೆ ಶಾಶ್ವತವಾದ ಕೀರ್ತಿ ಲಭಿಸಿತು! ಕಾರ್ಯದಕ್ಷ ನೀನು. ಪೃಥಿವಿಯಂತೆ ಕ್ಷಮಾಶೀಲನಾಗಿದ್ದೀಯೆ ರಕ್ತನೇತ್ರನಾಗಿದ್ದೀಯೆ! (೩೧). ಬಿಲ್ಲುಬಾಣಗಳನ್ನು ಹಿಡಿದು ಮಹಾಬಲನೂ ದೃಢಕಾಯನೂ ಆಗಿದ್ದೀಯೆ. ಮನುಷ್ಯನ ರೂಪಲಕ್ಷಣಗಳನ್ನು ಮೀರಿದ ದಿವ್ಯವಾದ ದೇಹಸೌಭಾಗ್ಯವನ್ನು ಪಡೆದಿದ್ದೀಯೆ. ಯಾವ ಬಾಣದಿಂದ ನನ್ನ ಪ್ರಿಯನನ್ನು ಹೊಡೆದು

ಯೇನೈಕಬಾಣೇನ ಹತಃ ಪ್ರಿಯೋ ಮೇ
ತೇನೈವ ಮಾಂ ತ್ವಂ ಜಹಿ ಸಾಯಕೇನ ।
ಹತಾ ಗಮಿಷ್ಯಾಮಿ ಸಮೀಪಮಸ್ಯ
ನ ಮಾಮೃತೇ ರಾಮ ರಮೇತ ವಾಲೀ ॥ ೩೩

ಸ್ವರ್ಗೇಽಪಿ ಪದ್ಮಾಮಲಪತ್ರನೇತ್ರಃ
ಸಮೇತ್ಯ ಸಂಪ್ರೇಕ್ಷ್ಯ ಚ ಮಾಮಪಶ್ಯನ್ ।
ನ ಹ್ಯೇಷ ಉಚ್ಚಾವಚತಾಮ್ರಚೂಡಾ
ವಿಚಿತ್ರವೇಷಾಪ್ಸರಸೋಽಭಜಿಷ್ಯತ್ ॥ ೩೪

ಸ್ವರ್ಗೇಽಪಿ ಶೋಕಂ ಚ ವಿವರ್ಣತಾಂ ಚ
ಮಯಾ ವಿನಾ ಪ್ರಾಪ್ಸ್ಯತಿ ವೀರ ವಾಲೀ ।
ರಮ್ಯೇ ನಗೇಂದ್ರಸ್ಯ ತಟಾವಕಾಶೇ
ವಿದೇಹಕನ್ಯಾರಹಿತೋ ಯಥಾ ತ್ವಮ್ ॥ ೩೫

ತ್ವಂ ವೇತ್ಥ ಯಾವದ್ವನಿತಾವಿಹೀನಃ
ಪ್ರಾಪ್ನೋತಿ ದುಃಖಂ ಪುರುಷಃ ಕುಮಾರಃ ।
ತತ್ತ್ವಂ ಪ್ರಜಾನನ್ ಜಹಿ ಮಾಂ ನ ವಾಲೀ
ದುಃಖಂ ಮಮಾದರ್ಶನಜಂ ಭಜೇತ ॥ ೩೬

---

ಕೊಂದೆಯೋ, ಅದೇ ಬಾಣದಿಂದ ನನ್ನನ್ನು ಹೊಡೆದು ಕೊಂದುಬಿಡು! ನಾನು ಸತ್ತು ನನ್ನ ಪ್ರಿಯನ ಬಳಿಗೆ ಹೋಗುವೆನು. ರಾಮ, ನಾನಿಲ್ಲದಿದ್ದರೆ ವಾಲಿಗೆ ಸಂತುಷ್ಟಿಯಾಗದು (೩೨-೩೩). ಪದ್ಮನೇತ್ರನಾದ ನನ್ನ ವಾಲಿಯು ಸ್ವರ್ಗದಲ್ಲಿಯೂ ನನಗಾಗಿ ಅರಸುವನು! ಅಲ್ಲಿ ನನ್ನನ್ನು ಕಾಣದಿದ್ದರೆ, ಅಪ್ಸರೆಯರು ನಾನಾಬಗೆಯ ಕೆಂಪು ಹೂಗಳನ್ನು ಮಸ್ತಕದಲ್ಲಿ ಮುಡಿದು ವಿಚಿತ್ರವೇಷದಿಂದ ಬಂದರೂ ಅವರನ್ನು ನನ್ನ ಕಾಂತನು ಬಯಸನು (೩೪). ಎಲೈ ವೀರನೆ, ನಾನಿಲ್ಲದಿದ್ದರೆ ಸ್ವರ್ಗದಲ್ಲಿಯೂ ವಾಲಿಗೆ ದುಃಖವಾಗುವುದು. ಅವನ ಮುಖವು ಬಾಡುವುದು. ರಮಣೀಯವಾದ ಬೆಟ್ಟದ ತಪ್ಪಲಿನಲ್ಲಿಯೂ ವೈದೇಹಿಯಿಲ್ಲದೆ ನೀನು ಕೊರಗುವಂತೆ, ಅವನು ಕೊರಗುವನು (೩೫). ಬಳಿಯಲ್ಲಿ ವನಿತೆಯಿಲ್ಲದಿದ್ದರೆ, ತರುಣನಾದ ಪುರುಷನಿಗೆ ಎಷ್ಟು ದುಃಖ

ಯಚ್ಚಾಪಿ ಮನ್ಯೇತ ಭವಾನ್ ಮಹಾತ್ಮಾ
ಸ್ತ್ರೀಘಾತದೋಷೋ ನ ಭವೇತ್ತು ಮಹ್ಯಮ್ ।
ಆತ್ಮೇಯಮಸ್ಯೇತಿ ಚ ಮಾಂ ಜಹಿ ತ್ವಂ
ನ ಸ್ತ್ರೀವಧಃ ಸ್ಯಾನ್ಮನುಜೇಂದ್ರಪುತ್ರ ॥ ೩೭

ಶಾಸ್ತ್ರಪ್ರಯೋಗಾದ್ವಿವಿಧಾಚ್ಚ ವೇದಾ-
ದಾತ್ಮಾ ಹ್ಯನನ್ಯಃ ಪುರುಷಸ್ಯ ದಾರಾಃ ।
ದಾರಪ್ರದಾನಾನ್ನ ಹಿ ದಾನಮನ್ಯತ್
ಪ್ರದೃಶ್ಯತೇ ಜ್ಞಾನವತಾಂ ಹಿ ಲೋಕೇ ॥ ೩೮

ತ್ವಂ ಚಾಪಿ ಮಾಂ ತಸ್ಯ ಮಮ ಪ್ರಿಯಸ್ಯ
ಪ್ರದಾಸ್ಯಸೇ ಧರ್ಮಮವೇಕ್ಷ್ಯ ವೀರ ।
ಅನೇನ ದಾನೇನ ನ ಲಪ್ಸ್ಯಸೇ ತ್ವ-
ಮಧರ್ಮಯೋಗಂ ಮಮ ವೀರ ಘಾತಾತ್ ॥ ೩೯

ವಾಗುವುದೆಂಬುದನ್ನು ನೀನು ಬಲ್ಲೆ! ಅದನ್ನು ಮನಸ್ಸಿನಲ್ಲಿಟ್ಟು, ರಾಮ, ನನ್ನನ್ನು ಕೊಂದುಬಿಡು! ನನ್ನನ್ನು ಕಾಣದೆ ವಾಲಿಗೆ ವಿರಹದುಃಖವಾಗುವುದು ಬೇಡ (೩೬) ಓ ರಾಜಪುತ್ರ, ನನ್ನನ್ನು ಕೊಂದರೆ ಸ್ತ್ರೀಹತ್ಯಾದೋಷವು ಮಹಾತ್ಮನಾದ ನಿನಗೆ ಗಂಟುಬೀಳುವುದೆಂದು ಶಂಕಿಸಬೇಡ. ನಾನು ವಾಲಿಯ ಆತ್ಮವೇ ಸರಿ ಈ ತಾರೆಯು ವಾಲಿಗಿಂತ ಬೇರೆಯವಳಲ್ಲವೆಂದು ಭಾವಿಸಿ ನನ್ನನ್ನು ಸಂಹರಿಸು! ಸ್ತ್ರೀಹತ್ಯಾದೋಷವು ನಿನಗೆ ಬರುವುದಿಲ್ಲ (೩೭). ಶಾಸ್ತ್ರೀಯ ವ್ಯವಹಾರದಿಂದಲೂ ವಿವಿಧ ವೇದವಾಕ್ಯದಿಂದಲೂ ಪತ್ನಿಯು ಪತಿಯ ಆತ್ಮವೆಂದು ಸಿದ್ಧವಾಗಿದೆ.* ಅವಳು ಪುರುಷನಿಂದ ಭಿನ್ನಳಲ್ಲ (ನನ್ನನ್ನು ವಾಲಿಗೆ ಅರ್ಪಿಸು). ಲೋಕದಲ್ಲಿ ಸ್ತ್ರೀದಾನಕ್ಕಿಂತಲೂ ಉತ್ತಮವಾದ ಇನ್ನೊಂದು ದಾನವಿಲ್ಲವೆಂಬುದು ಜ್ಞಾನಿಗಳಿಗೆ ಅಭಿಮತ (೩೮). ನೀನು ಧರ್ಮದಲ್ಲಿ ದೃಷ್ಟಿಯನ್ನಿಟ್ಟು ನನ್ನನ್ನು ನನ್ನ

* 'ಜಾಯಾಪತ್ಯೋರ್ನ ವಿಭಾಗೋ ವಿದ್ಯತೇ । ಪಾಣಿಗ್ರಹಣಾದ್ಧಿ ಸಹತ್ವಂ ಕರ್ಮಸು' (ಆಪ. ಧ. ಸೂ.). 'ಅರ್ಧೋ ವಾ ಏಷ ಆತ್ಮನೋ ಯತ್ಪತ್ನೀ, ಆತ್ಮಾ ವೈ ದಾರಾಃ' (ಶ್ರುತಿ).

ಆರ್ತಾಮನಾಥಾಮಪನೀಯಮಾನಾ-
ಮೇವಂವಿಧಾಮರ್ಹಸಿ ಮಾಂ ನಿಹಂತುಮ್ ।
ಅಹಂ ಹಿ ಮಾತಂಗವಿಲಾಸಗಾಮಿನಾ
ಪ್ಲವಂಗಮಾನಾಮೃಷಭೇಣ ಧೀಮತಾ ॥ ೪೦

ವಿನಾ ವರಾರ್ಹೋತ್ತಮಹೇಮಮಾಲಿನಾ
ಚಿರಂ ನ ಶಕ್ಷ್ಯಾಮಿ ನರೇಂದ್ರ ಜೀವಿತುಮ್ ।
ಇತ್ಯೇವಮುಕ್ತಸ್ತು ವಿಭುರ್ಮಹಾತ್ಮಾ
ತಾರಾಂ ಸಮಾಶ್ವಾಸ್ಯ ಹಿತಂ ಬಭಾಷೇ ॥ ೪೧

ಮಾ ವೀರಭಾರ್ಯೇ ವಿಮತಿಂ ಕುರುಷ್ವ
ಲೋಕೋ ಹಿ ಸರ್ವೋ ವಿಹಿತೋ ವಿಧಾತ್ರಾ ।
ತಂ ಚೈವ ಸರ್ವಂ ಸುಖದುಃಖಯೋಗಂ
ಲೋಕೋಽಬ್ರವೀತ್ತೇನ ಕೃತಂ ವಿಧಾತ್ರಾ ॥ ೪೨

ತ್ರಯೋ ಹಿ ಲೋಕಾ ವಿಹಿತಂ ವಿಧಾನಂ
ನಾತಿಕ್ರಮಂತೇ ವಶಗಾ ಹಿ ತಸ್ಯ ।

---

ಪ್ರಿಯನೊಡನೆ ಸೇರಿಸಿಬಿಡು ಈ ಸ್ತ್ರೀದಾನದಿಂದ, ವೀರಾಗ್ರೇಸರ, ನನ್ನನ್ನು ವಧಿಸಿದ ದೋಷವು ನಿನಗೆ ತಗಲುವುದಿಲ್ಲ ನಾನು ದುಃಖಾರ್ತೆಯಾಗಿದ್ದೇನೆ; ಅನಾಥೆಯಾಗಿದ್ದೇನೆ; ಪ್ರಿಯವಿಯುಕ್ತೆಯಾಗಿದ್ದೇನೆ ನನ್ನನ್ನೀಗ ವಧಿಸುವುದೇ ಯುಕ್ತವಾದುದು ಆಹಾ! ವಾನರೇಶ್ವರನಾದ ನನ್ನ ವಾಲಿಯು ಗಜವಿಲಾಸಗಾಮಿ. ಎಂತಹ ಧೀಮಂತ! (೩೯–೪೦) ಸರ್ವೋತ್ತಮವಾದ ಹೇಮಮಾಲೆಯನ್ನು ಧರಿಸಿ ಶೋಭಿಸುವ ನನ್ನ ಕಾಂತನನ್ನು, ರಾಜಪುತ್ರ, ನಾನು ಬಿಟ್ಟಿರಲಾರೆ!" ಎಂದು ಹಲುಬಿದಳು. ಹೀಗೆ ತಾರೆಯು ನಿವೇದಿಸಲಾಗಿ, ಮಹಾತ್ಮನೂ ಲೋಕನಾಥನೂ ಆದ ಶ್ರೀರಾಮನು ಅವಳನ್ನು ಸಂತೈಸುತ್ತ ಹಿತವಾಕ್ಯವನ್ನಾಡಿದನು (೪೧) : "ಎಲೌ ವೀರಪತ್ನಿ, ಧೈರ್ಯಗುಂದಬೇಡ. ಸಮಸ್ತ ಲೋಕವೃತ್ತವೂ ವಿಧಿಸಂಕಲ್ಪದಂತೆ ನಡೆಯುತ್ತದೆ. ಸುಖದುಃಖಗಳೆಲ್ಲವೂ ದೈವೇಚ್ಛೆಯಿಂದ ಸಂಭವಿಸುತ್ತವೆಯೆಂದು ಲೋಕವು ಸಾರುತ್ತದೆ. ಮೂರು ಲೋಕಗಳೂ ವಿಧಾತನಿಗೆ ವಶವಾಗಿವೆ.

ಪ್ರೀತಿಂ ಪರಾಂ ಪ್ರಾಪ್ಸ್ಯಸಿ ತಾಂ ತಥೈವ
ಪುತ್ರಸ್ತು ತೇ ಪ್ರಾಪ್ಸ್ಯತಿ ಯೌವರಾಜ್ಯಮ್ ॥ ೪೩
ಧಾತ್ರಾ ವಿಧಾನಂ ವಿಹಿತಂ ತಥೈವ
ನ ಶೂರಪತ್ನ್ಯಃ ಪರಿದೇವಯಂತಿ ॥

ಆಶ್ವಾಸಿತಾ ತೇನ ತು ರಾಘವೇಣ
ಪ್ರಭಾವಯುಕ್ತೇನ ಪರಂತಪೇನ ।
ಸಾ ವೀರಪತ್ನೀ ಧ್ವನತಾ ಮುಖೇನ
ಸುವೇಷರೂಪಾ ವಿರರಾಮ ತಾರಾ ॥ ೪೪

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಚತುರ್ವಿಂಶಃ ಸರ್ಗಃ



ಆತನ ಆದೇಶವನ್ನು ಯಾರೂ ಅತಿಕ್ರಮಿಸಲಾರರು. ತಾರೆ, ಮೊದಲಿದ್ದಂತೆ ಸಕಲ ಭೋಗಗಳನ್ನೂ ನೀನು ಮುಂದೆ ಅನುಭವಿಸುವೆ! ನಿನ್ನ ಪುತ್ರನಾದ ಅಂಗದನು ಯುವರಾಜಪದವಿಯನ್ನು ಪಡೆಯುವನು (೪೨-೪೩) ಹಾಗೆಯೇ ನಡೆಯಬೇಕೆಂಬುದು ವಿಧಿಯ ಸಂಕಲ್ಪ. ವೀರಪತ್ನಿಯರಾದ ನಿನ್ನಂತಹವರು ಈ ರೀತಿಯಲ್ಲಿ ಶೋಕಿಸಬಾರದು" ಎಂದು ಹೇಳಿದನು ಪ್ರಭಾವಶಾಲಿಯಾದ ರಾಘವನು ಈ ಪ್ರಕಾರವಾಗಿ ಸಮಾಧಾನಪಡಿಸಲು, ವೀರಪತ್ನಿಯಾದ ತಾರೆಯು ಗಟ್ಟಿಯಾಗಿ ಅಳುವುದನ್ನು ನಿಲ್ಲಿಸಿದಳು ತನ್ನ ಉಡಿಗೆತೊಡಿಗೆಗಳನ್ನು ಸರಿಪಡಿಸಿಕೊಂಡಳು (೪೪)

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಇಪ್ಪತ್ತುನಾಲ್ಕನೆಯ ಸರ್ಗ



## ಪಂಚವಿಂಶಃ ಸರ್ಗಃ

### ವಾಲಿಸಂಸ್ಕಾರಃ

**ಸುಗ್ರೀವಂ ಚೈವ ತಾರಾಂ ಚ ಸಾಂಗದಾಂ ಸಹಲಕ್ಷ್ಮಣಃ ।**
**ಸಮಾನಶೋಕಃ ಕಾಕುತ್ಸ್ಥಃ ಸಾಂತ್ವಯನ್ನಿದಮಬ್ರವೀತ್ ॥ ೧**

**ನ ಶೋಕಪರಿತಾಪೇನ ಶ್ರೇಯಸಾ ಯುಜ್ಯತೇ ಮೃತಃ ।**
**ಯದತ್ರಾನಂತರಂ ಕಾರ್ಯಂ ತತ್ಸಮಾಧಾತುಮರ್ಹಥ ॥ ೨**

**ಲೋಕವೃತ್ತಮನುಷ್ಠೇಯಂ ಕೃತಂ ವೋ ಬಾಷ್ಪಮೋಕ್ಷಣಮ್ ।**
**ನ ಕಾಲಾದುತ್ತರಂ ಕಿಂಚಿತ್ ಕರ್ಮ ಶಕ್ಯಮುಪಾಸಿತುಮ್ ॥ ೩**

**ನಿಯತಿಃ ಕಾರಣಂ ಲೋಕೇ ನಿಯತಿಃ ಕರ್ಮಸಾಧನಮ್ ।**
**ನಿಯತಿಃ ಸರ್ವಭೂತಾನಾಂ ನಿಯೋಗೇಷ್ವಿಹ ಕಾರಣಮ್ ॥ ೪**

**ನ ಕರ್ತಾ ಕಸ್ಯಚಿತ್ ಕಶ್ಚಿನ್ನಿಯೋಗೇ ಚಾಪಿ ನೇಶ್ವರಃ ।**
**ಸ್ವಭಾವೇ ವರ್ತತೇ ಲೋಕಸ್ತಸ್ಯ ಕಾಲಃ ಪರಾಯಣಮ್ ॥ ೫**

### ಸರ್ಗ ೨೫

#### ಶ್ರೀರಾಮನ ಹಿತೋಪದೇಶ. ವಾಲಿಯ ಸಂಸ್ಕಾರ.

ಹೀಗೆ ಸುಗ್ರೀವನೂ ತಾರೆಯೂ ಅಂಗದನೂ ದುಃಖಿಸುವುದನ್ನು ಕಂಡು ಶ್ರೀರಾಮಲಕ್ಷ್ಮಣರೂ ಅವರಂತೆ ದುಃಖಿತರಾದರು. ಆಗ ಶ್ರೀರಾಮನು ಅವರನ್ನು ಸಂತೈಸುತ್ತ ಹೀಗೆಂದನು: "ಶೋಕಾರ್ತರಾಗಿ ಸುಮ್ಮನೆ ಕೊರಗುವುದು ಮೃತನಿಗೆ ಶ್ರೇಯಸ್ಕರವಲ್ಲ. ಮುಂದಿನ ಕರ್ತವ್ಯವನ್ನು ಸಮಾಧಾನದಿಂದ ನಿರ್ವಹಿಸಿರಿ (೧-೨). ಶಿಷ್ಟಸಂಪ್ರದಾಯದಂತೆ ಊರ್ಧ್ವ ಕರ್ಮವನ್ನೀಗ ನಡೆಸಬೇಕು. ಕಣ್ಣೀರು ಸುರಿಸುವುದನ್ನು ಸಾಕುಮಾಡಿರಿ. ಕಾಲವನ್ನುಲ್ಲಂಘಿಸಿ ಯಾವ ಕಾರ್ಯವನ್ನು ಸಾಧಿಸುವುದೂ ಶಕ್ಯವಲ್ಲ. ಕಾಲರೂಪನಾದ ಈಶ್ವರನು ಲೋಕದಲ್ಲಿ ಸಕಲ ವಿಷಯಗಳಿಗೂ ಕಾರಣನಾಗಿದ್ದಾನೆ. ಸಕಲ ಕ್ರಿಯೆಗಳಿಗೂ ಅವನೇ ನಿಮಿತ್ತ. ಎಲ್ಲ ಪ್ರಾಣಿಗಳ ಪ್ರೇರಣೆಗೆ ಅವನೇ ಮೂಲಕಾರಣ (೩-೪). ಸ್ವತಂತ್ರನಾಗಿ ಯಾವನೂ ಯಾವುದನ್ನೂ ಮಾಡಲಾರ. ಇನ್ನೊಬ್ಬನನ್ನು ನಿಯಮಿಸಲು ಯಾವನೂ

ನ ಕಾಲಃ ಕಾಲಮತ್ಯೇತಿ ನ ಕಾಲಃ ಪರಿಹೀಯತೇ ।
ಸ್ವಭಾವಂ ಚ ಸಮಾಸಾದ್ಯ ನ ಕಶ್ಚಿದತಿವರ್ತತೇ ॥ ೬

ನ ಕಾಲಸ್ಯಾಸ್ತಿ ಬಂಧುತ್ವಂ ನ ಹೇತುರ್ನ ಪರಾಕ್ರಮಃ ।
ನ ಮಿತ್ರಜ್ಞಾತಿಸಂಬಂಧಃ ಕಾರಣಂ ನಾತ್ಮನೋ ವಶಃ ॥ ೭

ಕಿಂ ತು ಕಾಲಪರೀಣಾಮೋ ದ್ರಷ್ಟವ್ಯಃ ಸಾಧು ಪಶ್ಯತಾ ।
ಧರ್ಮಶ್ಚಾರ್ಥಶ್ಚ ಕಾಮಶ್ಚ ಕಾಲಕ್ರಮಸಮಾಹಿತಾಃ ॥ ೮

ಇತಃ ಸ್ವಾಂ ಪ್ರಕೃತಿಂ ವಾಲೀ ಗತಃ ಪ್ರಾಪ್ತಃ ಕ್ರಿಯಾಫಲಮ್ ।
ಧರ್ಮಾರ್ಥಕಾಮಸಂಯೋಗೈಃ ಪವಿತ್ರಂ ಪ್ಲವಗೇಶ್ವರಃ ॥ ೯

ಸ್ವಧರ್ಮಸ್ಯ ಚ ಸಂಯೋಗಾಜ್ಜಿತಸ್ತೇನ ಮಹಾತ್ಮನಾ ।
ಸ್ವರ್ಗಃ ಪರಿಗೃಹೀತಶ್ಚ ಪ್ರಾಣಾನಪರಿರಕ್ಷತಾ ॥ ೧೦

---

ಸಮರ್ಥನಲ್ಲ. ಲೋಕವೆಲ್ಲವೂ ತನ್ನ ಕರ್ಮಕ್ಕೆ ಅನುಗುಣವಾಗಿ ನಡೆಯುತ್ತದೆ ಅದಕ್ಕೆ ಕಾಲರೂಪನಾದ ಈಶ್ವರನು ಸಹಕಾರಿಕಾರಣ (೫). ಕಾಲವು ತನ್ನ ವ್ಯವಸ್ಥೆಯನ್ನು ಎಂದಿಗೂ ಉಲ್ಲಂಘಿಸುವುದಿಲ್ಲ. ಕಾಲಕ್ಕೆ ಹಾನಿಯೆಂಬುದಿಲ್ಲ. ಯಾವನೂ ತನ್ನ ಪ್ರಾರಬ್ಧಕರ್ಮವನ್ನು ಮೀರಿ ಹೋಗಲಾರನು ಕಾಲರೂಪವಾದ ದೈವಕ್ಕೆ ಬಂಧುವೆಂಬ ಪಕ್ಷಪಾತವಿಲ್ಲ. ಅದನ್ನು ತಡೆಯಲು ಯಾವ ಉಪಾಯವೂ ಇಲ್ಲ. ದೈವದ ವಿಷಯದಲ್ಲಿ ಪರಾಕ್ರಮವು ನಡೆಯದು. ಮಿತ್ರರ ಅಥವಾ ಬಂಧುಬಳಗಗಳ ಸಹಾಯವು ದೈವವನ್ನೆದುರಿಸಲು ನೆರವಾಗದು. ಕಾಲವು ನಮಗೆ ವಶವಾಗತಕ್ಕದ್ದಲ್ಲ (೬–೭). ಆದ್ದರಿಂದ ಸಕಲವೂ ಕರ್ಮದ ಫಲವಾಗಿ ಕಾಲದಿಂದ ಸಂಭವಿಸುತ್ತದೆಯೆಂದು ವಿವೇಕಿಯು ಚೆನ್ನಾಗಿ ಮನಗಾಣಬೇಕು. ಧರ್ಮಾರ್ಥಕಾಮಗಳು ಕಾಲದ ವ್ಯವಸ್ಥೆಗೆ ಒಳಪಟ್ಟಿರುತ್ತವೆ. ವಾಲಿಯು ಸಹಜವಾದ ತನ್ನ ಗತಿಯನ್ನು ಕಂಡುಕೊಂಡಿದ್ದಾನೆ. ಆ ವಾನರೇಶ್ವರನು ಪುಣ್ಯಕರ್ಮಸಮಾರ್ಜಿತವಾಗಿ ಧರ್ಮಾರ್ಥಕಾಮಸಂಯುಕ್ತವಾದ ಶುಭಫಲವನ್ನು ಅನುಭವಿಸಿದ್ದಾನೆ (೮–೯) ಆ ಮಹಾತ್ಮನು ಸ್ವಧರ್ಮವನ್ನು ಪರಿಪಾಲಿಸಿ ಸ್ವರ್ಗವನ್ನು ಗಳಿಸಿದ್ದಾನೆ. ತನ್ನ ಪ್ರಾಣವನ್ನೊಪ್ಪಿಸಿ ಸ್ವರ್ಗವನ್ನು ಪಡೆದಿದ್ದಾನೆ. ಆ ಕಪೀಶ್ವರನಿಗೆ

ಏಷಾ ವೈ ನಿಯತಿಃ ಶ್ರೇಷ್ಠಾ ಯಾಂ ಗತೋ ಹರಿಯೂಥಪಃ ।
ತದಲಂ ಪರಿತಾಪೇನ ಪ್ರಾಪ್ತಕಾಲಮುಪಾಸ್ಯತಾಮ್ ॥ ೧೧

ವಚನಾಂತೇ ತು ರಾಮಸ್ಯ ಲಕ್ಷ್ಮಣಃ ಪರವೀರಹಾ ।
ಅವದತ್ ಪ್ರಶ್ರಿತಂ ವಾಕ್ಯಂ ಸುಗ್ರೀವಂ ಗತಚೇತಸಮ್ ॥ ೧೨

ಕುರು ತ್ವಮಸ್ಯ ಸುಗ್ರೀವ ಪ್ರೇತಕಾರ್ಯಮನಂತರಮ್ ।
ತಾರಾಂಗದಾಭ್ಯಾಂ ಸಹಿತೋ ವಾಲಿನೋ ದಹನಂ ಪ್ರತಿ ॥ ೧೩

ಸಮಾಜ್ಞಾಪಯ ಕಾಷ್ಠಾನಿ ಶುಷ್ಕಾಣಿ ಚ ಬಹೂನಿ ಚ ।
ಚಂದನಾದೀನಿ ದಿವ್ಯಾನಿ ವಾಲಿಸಂಸ್ಕಾರಕಾರಣಾತ್ ॥ ೧೪

ಸಮಾಶ್ವಾಸಯ ಚೈನಂ ತ್ವಮಂಗದಂ ದೀನಚೇತಸಮ್ ।
ಮಾ ಭೂರ್ಬಾಲಿಶಬುದ್ಧಿಸ್ತ್ವಂ ತ್ವದಧೀನಮಿದಂ ಪುರಮ್ ॥ ೧೫

ಅಂಗದಸ್ತ್ವಾನಯೇನ್ಮಾಲ್ಯಂ ವಸ್ತ್ರಾಣಿ ವಿವಿಧಾನಿ ಚ ।
ಘೃತಂ ತೈಲಮಥೋ ಗಂಧಾನ್ ಯಚ್ಚಾತ್ರ ಸಮನಂತರಮ್ ॥ ೧೬

---

ಶ್ರೇಷ್ಠವಾದ ಸದ್ಗತಿಯು ಲಭಿಸಿದೆ. ಆದ್ದರಿಂದ ನೀವು ಶೋಕಿಸಬೇಡಿರಿ. ಕಾಲೋಚಿತವಾದ ಮುಂದಿನ ಕರ್ತವ್ಯವನ್ನು ನಡೆಸಿ" ಎಂದು ಹೇಳಿದನು (೧೦-೧೧). ಅನಂತರ ಧೀರನಾದ ಲಕ್ಷ್ಮಣನು ದಿಕ್ಕುತೋರದೆ ನಿಂತಿದ್ದ ಸುಗ್ರೀವನನ್ನು ನೋಡಿ ನಯಪೂರ್ವಕವಾಗಿ "ಸುಗ್ರೀವ, ವಾಲಿಗೆ ಮುಂದೆ ನಡೆಸಬೇಕಾದ ಪ್ರೇತಕಾರ್ಯಕ್ಕೆ ಅಣಿಮಾಡು; ತಾರೆ ಮತ್ತು ಅಂಗದ ರೊಡನೆ ನೀನು ವಾಲಿಯ ದಹನಕಾರ್ಯವನ್ನಾರಂಭಿಸು (೧೨-೧೩). ಶ್ರೀಗಂಧವೇ ಮೊದಲಾದ ಒಣಗಿದ ಸೌದೆಗಳನ್ನು ಸಂಗ್ರಹಿಸುವಂತೆ ಸೂಚಿಸು. ವಾಲಿಯ ದಹನಸಂಸ್ಕಾರಕ್ಕೆ ಬೇಕಾಗುವಷ್ಟನ್ನು ರಾಶಿಮಾಡುವಂತೆ ತಿಳಿಸು. ದೀನಚಿತ್ತನಾಗಿ ರೋದಿಸುತ್ತಿರುವ ಅಂಗದನನ್ನು ಸಂತೈಸು. ಸುಗ್ರೀವ, ಅಜ್ಞನಂತೆ ನೀನು ಬುದ್ಧಿಗೆಡಬೇಡ. ಈ ನಗರವೆಲ್ಲವೂ ಈಗ ನಿನಗೆ ಅಧೀನ ವಾಗಿ ನಿನ್ನನ್ನು ನಂಬಿಕೊಂಡಿದೆ (೧೪-೧೫). ಅಂಗದನು ಹೋಗಿ ಈಗ ಬೇಕಾಗಿರುವ ಹೂಗಳು, ವಿವಿಧ ವಸ್ತ್ರಗಳು, ತುಪ್ಪ, ಎಣ್ಣೆ, ಗಂಧದ್ರವ್ಯಗಳು

ತ್ವಂ ತಾರ ಶಿಬಿಕಾಂ ಶೀಘ್ರಮಾದಾಯಾಗಚ್ಛ ಸಂಭ್ರಮಾತ್ ।
ತ್ವರಾ ಗುಣವತೀ ಯುಕ್ತಾ ಹ್ಯಸ್ಮಿನ್ ಕಾಲೇ ವಿಶೇಷತಃ ॥ ೧೭

ಸಜ್ಜೀಭವಂತು ಪ್ಲವಗಾಃ ಶಿಬಿಕಾವಹನೋಚಿತಾಃ ।
ಸಮರ್ಥಾ ಬಲಿನಶ್ಚೈವ ನಿರ್ಹರಿಷ್ಯಂತಿ ವಾಲಿನಮ್ ॥ ೧೮

ಏವಮುಕ್ತ್ವಾ ತು ಸುಗ್ರೀವಂ ಸುಮಿತ್ರಾನಂದವರ್ಧನಃ ।
ತಸ್ಥೌ ಭ್ರಾತೃಸಮೀಪಸ್ಥೋ ಲಕ್ಷ್ಮಣಃ ಪರವೀರಹಾ ॥ ೧೯

ಲಕ್ಷ್ಮಣಸ್ಯ ವಚಃ ಶ್ರುತ್ವಾ ತಾರಃ ಸಂಭ್ರಾಂತಮಾನಸಃ ।
ಪ್ರವಿವೇಶ ಗುಹಾಂ ಶೀಘ್ರಂ ಶಿಬಿಕಾಸಕ್ತಮಾನಸಃ ॥ ೨೦

ಆದಾಯ ಶಿಬಿಕಾಂ ತಾರಃ ಸ ತು ಪರ್ಯಾಪತತ್ ಪುನಃ ।
ವಾನರೈರುಹ್ಯಮಾನಾಂ ತಾಂ ಶೂರೈರುದ್ವಹನೋಚಿತೈಃ ॥ ೨೧

ದಿವ್ಯಾಂ ಭದ್ರಾಸನಯುತಾಂ ಶಿಬಿಕಾಂ ಸ್ಯಂದನೋಪಮಾಮ್ ।
ಪಕ್ಷಿಕರ್ಮಭಿರಾಚಿತ್ರಾಂ ದ್ರುಮಕರ್ಮವಿಭೂಷಿತಾಮ್ ॥ ೨೨

---

ಮೊದಲಾದುವನ್ನು ತರಲಿ ಎಲೈ ತಾರನೆ, ನೀನು ಶಿಬಿಕೆಯೊಂದನ್ನು ತೆಗೆಸಿಕೊಂಡು ಬೇಗನೆ ಬಾ ಯಾವ ಕಾರ್ಯವನ್ನಾದರೂ ವಿಲಂಬವಿಲ್ಲದೆ ಮಾಡುವುದೊಳ್ಳೆಯದು. ಇಂತಹ ಸಂದರ್ಭದಲ್ಲಂತೂ ತಡವಾಗಲೇಬಾರದು. ಶಿಬಿಕೆಯನ್ನು ಹೊರತಕ್ಕ ಕಪಿಗಳು ಸಜ್ಜಾಗಲಿ. ಸಮರ್ಥರೂ ಬಲಶಾಲಿಗಳೂ ಆದವರು ವಾಲಿಯನ್ನು ಹೊರಬೇಕು" ಎಂದು ನುಡಿದನು (೧೬-೧೮). ಶತ್ರುಸೂದನನಾದ ಲಕ್ಷ್ಮಣನು ಈ ರೀತಿಯಲ್ಲಿ ಸುಗ್ರೀವನಿಗೆ ಆದೇಶವನ್ನಿತ್ತು ತನ್ನ ಅಣ್ಣನ ಬಳಿಗೆ ಬಂದು ನಿಂತುಕೊಂಡನು. ಲಕ್ಷ್ಮಣನ ಆದೇಶವನ್ನು ಕೇಳಿ ತಾರನು ಶಿಬಿಕೆಯನ್ನು ತರಬೇಕೆಂದು ಅವಸರಪಡುತ್ತ ಕಿಷ್ಕಿಂಧೆಯೊಳಗೆ ಹೋದನು (೧೯-೨೦). ಸ್ವಲ್ಪ ಹೊತ್ತಿನಲ್ಲಿಯೇ ಅವನು ಒಂದು ಶಿಬಿಕೆಯನ್ನು ಭಾರ ಹೊರುವುದರಲ್ಲಿ ಸಮರ್ಥರಾದ ವಾನರರಿಂದ ಹೊರಿಸಿಕೊಂಡು ತಂದನು ದಿವ್ಯವಾದ ಆ ಶಿಬಿಕೆಯು ರಥದಂತೆ ವಿಶಾಲವಾಗಿತ್ತು. ಅದರ ಮಧ್ಯದಲ್ಲಿ ಉತ್ತಮವಾದ ಒಂದು ಆಸನವಿತ್ತು. ಆ ಶಿಬಿಕೆಯಲ್ಲಿ ವಿವಿಧ

ಆಚಿತಾಂ ಚಿತ್ರಪತ್ತೀಭಿಃ ಸುನಿವಿಷ್ಟಾಂ ಸಮಂತತಃ ।
ವಿಮಾನಮಿವ ಸಿದ್ಧಾನಾಂ ಜಾಲವಾತಾಯನಾನ್ವಿತಾಮ್ ॥ ೨೩

ಸುನಿಯುಕ್ತಾಂ ವಿಶಾಲಾಂ ಚ ಸುಕೃತಾಂ ವಿಶ್ವಕರ್ಮಣಾ ।
ದಾರುಪರ್ವತಕೋಪೇತಾಂ ಚಾರುಕರ್ಮಪರಿಷ್ಕೃತಾಮ್ ॥ ೨೪

ವರಾಭರಣಹಾರೈಶ್ಚ ಚಿತ್ರಮಾಲ್ಯೋಪಶೋಭಿತಾಮ್ ।
ಗುಹಾಗಹನಸಂಛನ್ನಾಂ ರಕ್ತಚಂದನರೂಷಿತಾಮ್ ॥ ೨೫

ಪುಷ್ಪೌಘೈಃ ಸಮಭಿಚ್ಛನ್ನಾಂ ಪದ್ಮಮಾಲಾಭಿರೇವ ಚ ।
ತರುಣಾದಿತ್ಯವರ್ಣಾಭಿರ್ಭ್ರಾಜಮಾನಾಭಿರಾವೃತಾಮ್ ॥ ೨೬

ಈದೃಶೀಂ ಶಿಬಿಕಾಂ ದೃಷ್ಟ್ವಾ ರಾಮೋ ಲಕ್ಷ್ಮಣಮಬ್ರವೀತ್ ।
ಕ್ಷಿಪ್ರಂ ವಿನೀಯತಾಂ ವಾಲೀ ಪ್ರೇತಕಾರ್ಯಂ ವಿಧೀಯತಾಮ್॥ ೨೭

ತತೋ ವಾಲಿನಮುದ್ಯಮ್ಯ ಸುಗ್ರೀವಃ ಶಿಬಿಕಾಂ ತದಾ ।
ಆರೋಪಯತ ವಿಕ್ರೋಶನ್ನಂಗದೇನ ಸಹೈವ ತು ॥ ೨೮

---

ಪಕ್ಷಿಗಳನ್ನೂ ವೃಕ್ಷಗಳನ್ನೂ ಚಿತ್ರಿಸಿದ್ದರು (೨೧-೨೨). ಯೋಧರ ಸಕ್ಷೆಗಳನ್ನು ಬರೆದಿದ್ದರು. ಅದನ್ನು ಸುತ್ತಲೂ ಭದ್ರವಾಗಿ ಕೂಡಿಸಿ ರಚಿಸಲಾಗಿತ್ತು. ಆ ಶಿಬಿಕೆಯು ಸಿದ್ಧಪುರುಷರ ವಿಮಾನದಂತೆ ಸುಂದರವಾಗಿತ್ತು. ಬಲೆಯಂತಿರುವ ವಾತಾಯನಗಳಿಂದ ರಮ್ಯವಾಗಿತ್ತು. ವಿಶಾಲವಾದ ಆ ಶಿಬಿಕೆಯು ವಿಶ್ವಕರ್ಮನಿಂದ ಶಿಲ್ಪಚಾತುರ್ಯವನ್ನುಪಯೋಗಿಸಿ ರಚಿತವಾಗಿತ್ತು. ಅದು ಮರದ ಗೋಪುರದಿಂದ ವಿಶಿಷ್ಟವಾದ ಒಂದು ಕಲಾಪೂರ್ಣಕೃತಿಯಾಗಿತ್ತು (೨೩-೨೪). ಉತ್ತಮವಾದ ಆಭರಣಗಳಿಂದಲೂ ಹಾರಗಳಿಂದಲೂ ಭೂಷಿತವಾಗಿ ಚಿತ್ರವರ್ಣದ ಪುಷ್ಪಮಾಲೆಗಳಿಂದ ಅಲಂಕೃತವಾಗಿತ್ತು. ಕಿಷ್ಕಿಂಧಾಗುಹೆಯಲ್ಲಿ ಎಚ್ಚರಿಕೆಯಿಂದ ರಕ್ಷಿತವಾಗಿದ್ದ ಆ ಶಿಬಿಕೆಯು ರಕ್ತಚಂದನದಿಂದ ಲಿಪ್ತವಾಗಿತ್ತು. ಪುಷ್ಪರಾಶಿಗಳಿಂದಲೂ ಬಾಲಸೂರ್ಯರಂತೆ ಬೆಳಗುವ ಪದ್ಮಗಳ ಮಾಲೆಗಳಿಂದಲೂ ಆವೃತವಾಗಿತ್ತು (೨೫-೨೬). ಈ ರೀತಿಯಲ್ಲಿ ಶೋಭಿಸುತ್ತಿದ್ದ ಶಿಬಿಕೆಯನ್ನು ನೋಡಿ ಶ್ರೀರಾಮನು ಲಕ್ಷ್ಮಣನನ್ನು ಕುರಿತು "ಲಕ್ಷ್ಮಣ, ವಾಲಿಯ ದೇಹವನ್ನು ಬೇಗನೆ ಸಾಗಿಸಿ ಪ್ರೇತಕಾರ್ಯವು ನಡೆಯುವಂತೆ ಏರ್ಪಡಿಸಬೇಕು" ಎಂದು ಹೇಳಿದನು (೨೭). ಅನಂತರ ಸುಗ್ರೀವನು ಗೋಳೋ ಎಂದು ಅಳುತ್ತ ಅಂಗದನನ್ನು ಕರೆದು

ಆರೋಪ್ಯ ಶಿಬಿಕಾಂ ಚೈವ ವಾಲಿನಂ ಗತಜೀವಿತಮ್ ।
ಅಲಂಕಾರೈಶ್ಚ ವಿವಿಧೈರ್ಮಾಲ್ಯೈರ್ವಸ್ತ್ರೈಶ್ಚ ಭೂಷಿತಮ್ ೨೯

ಆಜ್ಞಾಪಯತ್ತದಾ ರಾಜಾ ಸುಗ್ರೀವಃ ಪ್ಲವಗೇಶ್ವರಃ ।
ಔರ್ಧ್ವದೇಹಿಕಮಾರ್ಯಸ್ಯ ಕ್ರಿಯತಾಮನುರೂಪತಃ ॥ ೩೦

ವಿಶ್ರಾಣಯಂತೋ ರತ್ನಾನಿ ವಿವಿಧಾನಿ ಬಹೂನ್ಯಪಿ ।
ಅಗ್ರತಃ ಪ್ಲವಗಾ ಯಾಂತು ಶಿಬಿಕಾ ಸಮನಂತರಮ್ ॥ ೩೧

ರಾಜ್ಞಾಮೃದ್ಧಿವಿಶೇಷಾ ಹಿ ದೃಶ್ಯಂತೇ ಭುವಿ ಯಾದೃಶಾಃ ।
ತಾದೃಶೈರಿಹ ಕುರ್ವಂತು ವಾನರಾ ಭರ್ತೃಸತ್ಕ್ರಿಯಾಮ್ ॥ ೩೨

ಅಂಗದಂ ಪರಿಗೃಹ್ಯಾಶು ತಾರಪ್ರಭೃತಯಸ್ತದಾ ।
ಕ್ರೋಶಂತಃ ಪ್ರಯಯುಃ ಸರ್ವೇ ವಾನರಾ ಹತಬಾಂಧವಾಃ ॥ ೩೩

ತತಃ ಪ್ರಣಿಹಿತಾಃ ಸರ್ವಾ ವಾನರ್ಯೋಽಸ್ಯ ವಶಾನುಗಾಃ ।
ಚುಕ್ರುಶುರ್ವೀರ ವೀರೇತಿ ಭೂಯಃ ಕ್ರೋಶಂತಿ ತಾಃ ಸ್ತ್ರಿಯಃ ॥ ೩೪

---

ಕೊಂಡು ವಾಲಿಯ ದೇಹವನ್ನೆತ್ತಿ ಶಿಬಿಕೆಯಲ್ಲಿಟ್ಟನು. ಮೃತನಾದ ವಾಲಿಯನ್ನು ಶಿಬಿಕೆಯಲ್ಲಿಟ್ಟು, ಸುಗ್ರೀವನು ವಿವಿಧ ಭೂಷಣಗಳಿಂದಲೂ ಹೂಮಾಲೆಗಳಿಂದಲೂ ವಸ್ತ್ರಗಳಿಂದಲೂ ವಾಲಿಯ ದೇಹವನ್ನಲಂಕರಿಸಿದನು (೨೮-೨೯). ಅನಂತರ ವಾನರೇಶ್ವರನಾದ ಸುಗ್ರೀವನು "ಎಲೈ ವಾನರರೆ, ಅಣ್ಣನಿಗೆ ಅನುರೂಪವಾದ ಮರ್ಯಾದೆಯೊಡನೆ ಉತ್ತರಕ್ರಿಯೆಯನ್ನು ನಡೆಸತಕ್ಕದ್ದು. ವಾನರರು ವಿವಿಧ ರತ್ನಗಳನ್ನು ಯಥೇಷ್ಟವಾಗಿ ದಾನಮಾಡುತ್ತ ಮುಂದೆ ಹೋಗಲಿ. ಅವರ ಹಿಂದೆ ಶಿಬಿಕೆಯು ಸಾಗಲಿ (೩೦-೩೧). ರಾಜರಿಗೆ ಯಾವ ಬಗೆಯ ವೈಭವಗಳು ಲೋಕದಲ್ಲಿ ನಡೆಯುತ್ತವೆಯೋ ಅಂತಹ ವೈಭವಗಳೊಡನೆ ನಿಮ್ಮ ಸ್ವಾಮಿಯ ಉತ್ತರಕ್ರಿಯೆಯನ್ನು ನಡೆಸಿರಿ" ಎಂದು ಆಜ್ಞಾಪಿಸಿದನು. ತಮಗೆ ಬಂಧುವಾದ ವಾಲಿಯನ್ನು ಕಳೆದುಕೊಂಡ ತಾರನೇ ಮೊದಲಾದ ಕಪಿನಾಯಕರು ಅಂಗದನ ಸುತ್ತಲೂ ಸೇರಿ ಅವನನ್ನು ಹಿಡಿದುಕೊಂಡು ರೋದಿಸುತ್ತ ಹೊರಟರು (೩೨-೩೩). ವಾಲಿಯ ಸೇವಕ ವರ್ಗದಲ್ಲಿದ್ದ ಕಪಿಸ್ತ್ರೀಯರು ಆತನ ಸಮೀಪದಲ್ಲಿ 'ಹಾ ವೀರ! ಹಾ ವೀರ!'

ತಾರಾಪ್ರಭೃತಯಃ ಸರ್ವಾ ವಾನರ್ಯೋ ಹತಯೂಥಪಾಃ ।
ಅನುಜಗ್ಮುರ್ಹಿ ಭರ್ತಾರಂ ಕ್ರೋಶಂತ್ಯಃ ಕರುಣಸ್ವನಾಃ ॥ ೩೫

ತಾಸಾಂ ರುದಿತಶಬ್ದೇನ ವಾನರೀಣಾಂ ವನಾಂತರೇ ।
ವನಾನಿ ಗಿರಯಃ ಸರ್ವೇ ವಿಕ್ರೋಶಂತೀವ ಸರ್ವತಃ ॥ ೩೬

ಪುಲಿನೇ ಗಿರಿನದ್ಯಾಸ್ತು ವಿವಿಕ್ತೇ ಜಲಸಂವೃತೇ ।
ಚಿತಾಂ ಚಕ್ರುಃ ಸುಬಹವೋ ವಾನರಾಃ ಶೋಕಕರ್ಶಿತಾಃ ॥ ೩೭

ಅವರೋಪ್ಯ ತತಃ ಸ್ಕಂಧಾಚ್ಛಿಬಿಕಾಂ ವಹನೋಚಿತಾಃ ।
ತಸ್ಥುರೇಕಾಂತಮಾಶ್ರಿತ್ಯ ಸರ್ವೇ ಶೋಕಸಮನ್ವಿತಾಃ ॥ ೩೮

ತತಸ್ತಾರಾ ಪತಿಂ ದೃಷ್ಟ್ವಾ ಶಿಬಿಕಾತಲಶಾಯಿನಮ್ ।
ಆರೋಪ್ಯಾಂಕೇ ಶಿರಸ್ತಸ್ಯ ವಿಲಲಾಪ ಸುದುಃಖಿತಾ ॥ ೩೯

ಹಾ ವಾನರಮಹಾರಾಜ ಹಾ ನಾಥ ಮಮ ವತ್ಸಲ ।
ಹಾ ಮಹಾರ್ಹ ಮಹಾಬಾಹೋ ಹಾ ಮಮ ಪ್ರಿಯ ಪಶ್ಯ ಮಾಮ್

---

ಎಂದು ಕೂಗಿಕೊಂಡರು. ಆ ಸ್ತ್ರೀಯರು ಮತ್ತೆ ಮತ್ತೆ ಕರುಣಧ್ವನಿಯಲ್ಲಿ ಆಕ್ರಂದಿಸುತ್ತಲೇ ಇದ್ದರು. ಪತಿಯನ್ನು ಕಳೆದುಕೊಂಡ ತಾರೆ ಮೊದಲಾದ ವಾನರಸ್ತ್ರೀಯರು ದೀನಧ್ವನಿಯಿಂದ ಅಳುತ್ತ ತಮ್ಮ ಪತಿಯನ್ನು ಹಿಂಬಾಲಿಸಿ ನಡೆದರು (೩೪-೩೫). ವನಮಧ್ಯದಲ್ಲಿ ರೋದಿಸುತ್ತ ಸಾಗುತ್ತಿದ್ದ ಆ ವಾನರ ಸ್ತ್ರೀಯರ ಆಕ್ರಂದನ ಧ್ವನಿಯು ಸುತ್ತಲೂ ಮೊಳಗಿ, ವನಗಳೂ ಗಿರಿಗಳೂ ಅಳುತ್ತಿವೆಯೋ ಎಂಬಂತೆ ತುಮುಲಧ್ವನಿಯಾಯಿತು. ಶೋಕಾರ್ತರಾದ ಬಹುಮಂದಿ ವಾನರರು ಮುಂದೆ ಹೋಗಿ ಒಂದು ಗಿರಿನದಿಯ ಪುಲಿನದಲ್ಲಿ ಸ್ವಚ್ಛವೂ ಜಲಸಮೃದ್ಧವೂ ಆದ ಪ್ರದೇಶವನ್ನಾರಿಸಿ ಚಿತೆಯನ್ನು ನಿರ್ಮಿಸಿದರು (೩೬-೩೭). ವಾಹಕರು ಅಲ್ಲಿಗೆ ಬಂದು ಹೆಗಲಿನಿಂದ ಶಿಬಿಕೆಯನ್ನಿಳುಹಿ ದುಃಖದಿಂದ ವಿಲಪಿಸುತ್ತ ಒಂದು ಕಡೆಯಲ್ಲಿ ನಿಂತುಕೊಂಡರು. ಆಗ ತಾರೆಯು ಶಿಬಿಕೆಯಲ್ಲಿ ಮಲಗಿದ್ದ ತನ್ನ ಪತಿಯನ್ನು ನೋಡುತ್ತ ಅವನ ತಲೆಯನ್ನು ತನ್ನ ತೊಡೆಯಮೇಲಿಟ್ಟುಕೊಂಡು ಬಿಕ್ಕಿ ಬಿಕ್ಕಿ ಅಳತೊಡಗಿದಳು (೩೮-೩೯): “ಹಾ ಮಹಾರಾಜ, ಹಾ ನಾಥ, ಹಾ ನನ್ನ ಕಾಂತ! ಓ ಮಹಾತ್ಮ, ಮಹಾಬಾಹು, ಮನೋಹರ! ನನ್ನನ್ನು ಕಣ್ಣೆತ್ತಿ ನೋಡು.

ಜನಂ ನ ಪಶ್ಯಸೀಮಂ ತ್ವಂ ಕಸ್ಮಾಚ್ಛೋಕಾಭಿಪೀಡಿತಮ್ ।
ಪ್ರಹೃಷ್ಟಮಿವ ತೇ ವಕ್ತ್ರಂ ಗತಾಸೋರಪಿ ಮಾನದ ॥ ೪೧

ಅಸ್ತಾರ್ಕಸಮವರ್ಣಂ ಚ ಲಕ್ಷ್ಯತೇ ಜೀವತೋ ಯಥಾ ।
ಏಷ ತ್ವಾಂ ರಾಮರೂಪೇಣ ಕಾಲಃ ಕರ್ಷತಿ ವಾನರ ॥ ೪೨

ಯೇನ ಸ್ಮ ವಿಧವಾಃ ಸರ್ವಾಃ ಕೃತಾ ಏಕೇಷುಣಾ ರಣೇ ।
ಇಮಾಸ್ತಾಸ್ತವ ರಾಜೇಂದ್ರ ವಾನರ್ಯೋಽಪ್ಲವಗಾಸ್ತವ ॥ ೪೩

ಪಾದೈರ್ವಿಕೃಷ್ಟಮಧ್ವಾನಮಾಗತಾಃ ಕಿಂ ನ ಬುಧ್ಯಸೇ ।
ತವೇಷ್ಟಾ ನನು ನಾಮೈತಾ ಭಾರ್ಯಾಶ್ಚಂದ್ರನಿಭಾನನಾಃ ॥ ೪೪

ಇದಾನೀಂ ನೇಕ್ಷಸೇ ಕಸ್ಮಾತ್ ಸುಗ್ರೀವಂ ಪ್ಲವಗೇಶ್ವರ ।
ಏತೇ ಹಿ ಸಚಿವಾ ರಾಜಂಸ್ತಾರಪ್ರಭೃತಯಸ್ತವ ॥ ೪೫

ಪುರವಾಸೀ ಜನಶ್ಚಾಯಂ ಪರಿವಾರ್ಯಾಸತೇಽನಘ ।
ವಿಸರ್ಜಯೈತಾನ್ ಪ್ಲವಗಾನ್ ಯಥೋಚಿತಮರಿಂದಮ ॥ ೪೬

---

ಶೋಕದಿಂದ ಬಸವಳಿದ ನನ್ನನ್ನೇಕೆ ನೋಡುವುದಿಲ್ಲ ನೀನು ? ಓ ಮಾನದ, ಪ್ರಾಣಹೋಗಿದ್ದರೂ ಮುಖದಲ್ಲಿ ಜೀವಕಳೆ ಇದೆ ! ನಗು ಮಿನುಗುವಂತಿದೆ ! (೪೦-೪೧). ನಿನ್ನ ಮುಖವು ಮುಳುಗುವ ಸೂರ್ಯನಂತಿದೆ. ಬದುಕಿರುವವನ ಮುಖದಂತಿದೆ ! ವಾನರೇಂದ್ರ, ಯಮನೇ ರಾಮರೂಪದಿಂದ ಬಂದು ನಿನ್ನನ್ನು ಸೆಳೆದೊಯ್ಯುವನಲ್ಲ ! ಒಂದೇ ಬಾಣದಿಂದ ಅವನು ನಮ್ಮೆಲ್ಲರನ್ನೂ ವಿಧವೆಯರನ್ನಾಗಿ ಮಾಡಿದನು ಓ ಮಹಾರಾಜ, ಈ ನಿನ್ನ ಕಾಂತೆಯರು ಕಾಲ್ನಡಿಗೆಯನ್ನರಿಯದವರು (೪೨-೪೩). ಇವರು ಅಷ್ಟು ದೂರದಿಂದ ಕಾಲೆಳೆಯುತ್ತ ಬಂದಿರುವುದು ನಿನಗೆ ತಿಳಿಯದೆ ? ಚಂದ್ರಮುಖಿಯರಾದ ಈ ಪತ್ನಿಯರಲ್ಲಿ ನಿನಗೆ ಬಹಳ ಪ್ರೀತಿಯಲ್ಲವೆ ? ಓ ಕಪೀಶ್ವರ, ನಿನ್ನ ಸೋದರನಾದ ಸುಗ್ರೀವನನ್ನಾದರೂ ನೋಡಬಾರದೆ ? ಮಹಾರಾಜ, ತಾರನೇ ಮೊದಲಾದ ನಿನ್ನ ಸಚಿವರು ಬಂದಿದ್ದಾರೆ (೪೪-೪೫). ಪುರಜನರು ಸುತ್ತಲೂ ನೆರೆದಿದ್ದಾರೆ. ಇವರೆಲ್ಲರನ್ನು ಯಥೋಚಿತವಾಗಿ ಮನ್ನಿಸಿ ಅತ್ತ ಕಳಿಸು. ಅನಂತರ ನಾವೆಲ್ಲರೂ ಕ್ರೀಡೋತ್ಸಾಹದಿಂದ ವನದಲ್ಲಿ ವಿಹರಿ

ತತಃ ಕ್ರೀಡಾಮುಹೇ ಸರ್ವಾ ವನೇಷು ಮದನೋತ್ಕಟಾಃ ।
ಏವಂ ವಿಲಪತೀಂ ತಾರಾಂ ಪತಿಶೋಕಪರಿಪ್ಲುತಾಮ್ ॥ ೪೭

ಉತ್ಥಾಪಯಂತಿ ಸ್ಮ ತದಾ ವಾನರ್ಯಃ ಶೋಕಕರ್ಶಿತಾಃ ।
ಸುಗ್ರೀವೇಣ ತತಃ ಸಾರ್ಧಮಂಗದಃ ಪಿತರಂ ರುದನ್ ॥ ೪೮

ಚಿತಾಮಾರೋಪಯಾಮಾಸ ಶೋಕೇನಾಭಿಹತೇಂದ್ರಿಯಃ ।
ತತೋಽಗ್ನಿಂ ವಿಧಿವದ್ದತ್ತ್ವಾ ಸೋಽಪಸವ್ಯಂ ಚಕಾರ ಹ ॥ ೪೯

ಪಿತರಂ ದೀರ್ಘಮಧ್ವಾನಂ ಪ್ರಸ್ಥಿತಂ ವ್ಯಾಕುಲೇಂದ್ರಿಯಃ ।
ಸಂಸ್ಕೃತ್ಯ ವಾಲಿನಂ ತೇ ತು ವಿಧಿಪೂರ್ವಂ ಪ್ಲವಂಗಮಾಃ ॥ ೫೦

ಆಜಗ್ಮುರುದಕಂ ಕರ್ತುಂ ನದೀಂ ಶೀತಜಲಾಂ ಶಿವಾಮ್ ।
ತತಸ್ತೇ ಸಹಿತಾಸ್ತತ್ರ ಹ್ಯಂಗದಂ ಸ್ಥಾಪ್ಯ ಚಾಗ್ರತಃ ॥ ೫೧

ಸುಗ್ರೀವತಾರಾಸಹಿತಾಃ ಸಿಷಿಚುರ್ವಾಲಿನೇ ಜಲಮ್ ।
ಸುಗ್ರೀವೇಣೈವ ದೀನೇನ ದೀನೋ ಭೂತ್ವಾ ಮಹಾಬಲಃ ॥ ೫೨

---

ಸೋಣ!" ಎಂದು ಗೋಳಾಡುತ್ತಿದ್ದಳು. ಹೀಗೆ ಪತಿಶೋಕದಲ್ಲಿ ಮುಳುಗಿ ವಿಲಪಿಸುತ್ತಿದ್ದ ತಾರೆಯನ್ನು ಇತರ ವಾನರಸ್ತ್ರೀಯರು ಮೇಲಕ್ಕೇಳಿಸಿ ರೋದಿಸುತ್ತ ಕರೆದುಕೊಂಡುಹೋದರು (೪೬-೪೭). ಅಂಗದನೂ ಸುಗ್ರೀವನೂ ಅಳುತ್ತ ವಾಲಿಯ ದೇಹವನ್ನು ಚಿತೆಯಮೇಲಕ್ಕೆ ಏರಿಸಿದರು. ಅಂಗದನು ಶೋಕವ್ಯಾಕುಲನಾಗಿ ಸಂಕಟಪಡುತ್ತ ವಿಧಿಪೂರ್ವಕವಾಗಿ ಚಿತೆಗೆ ಅಗ್ನಿಯನ್ನಿಟ್ಟನು. ದೂರಪ್ರಯಾಣಕ್ಕೆ ಹೊರಟ ತಂದೆಯನ್ನು ಅಪಸವ್ಯವಾಗಿ ಸುತ್ತಿದನು (೪೮-೪೯). ಆ ವಾನರರು ವಿಧಿಪೂರ್ವಕವಾಗಿ ವಾಲಿಯ ದಹನಕಾರ್ಯವನ್ನು ನಡೆಸಿ, ಜಲಾಂಜಲಿಯನ್ನರ್ಪಿಸುವುದಕ್ಕಾಗಿ ಶೀತೋದಕಪೂರ್ಣವಾದ ಒಂದು ಪುಣ್ಯನದಿಗೆ ಬಂದರು. ಅಲ್ಲಿ ಅಂಗದ, ಸುಗ್ರೀವ, ತಾರೆಯರನ್ನು ಮುಂದಿಟ್ಟುಕೊಂಡು ವಾಲಿಗೆ ಜಲತರ್ಪಣವನ್ನಿತ್ತರು. ಮಹಾಬಲನಾದ ಶ್ರೀರಾಮನೂ ಅವರೆಲ್ಲರಂತೆ ಶೋಕಾರ್ತನಾಗಿದ್ದನು. ಅವನು ದುಃಖಿಸುತ್ತ, ದೀನನಾದ ಸುಗ್ರೀವನ ಮೂಲಕ ಸಕಲ ಪ್ರೇತಕಾರ್ಯ

ಸಮಾನಶೋಕಃ ಕಾಕುತ್ಸ್ಥಃ ಪ್ರೇತಕಾರ್ಯಾಣ್ಯಕಾರಯತ್ ॥

ತತಸ್ತು ತಂ ವಾಲಿನಮಗ್ರ್ಯಪೌರುಷಂ
ಪ್ರಕಾಶಮಿಕ್ಷ್ವಾಕುವರೇಷುಣಾ ಹತಮ್ ।
ಪ್ರದೀಪ್ಯ ದೀಪ್ತಾಗ್ನಿಸಮೌಜಸಂ ತದಾ
ಸಲಕ್ಷ್ಮಣಂ ರಾಮಮುಪೇಯಿವಾನ್ ಹರಿಃ ॥ ೫೩

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಪಂಚವಿಂಶಃ ಸರ್ಗಃ



ಗಳನ್ನೂ ಮಾಡಿಸಿದನು (೫೦-೫೨) ಹೀಗೆ ಶ್ರೀರಾಮನ ಬಾಣದಿಂದ ಹತನಾದ ವಿಶ್ವವಿಖ್ಯಾತನೂ ಮಹಾಪೌರುಷಶಾಲಿಯೂ ಆದ ವಾಲಿಗೆ ಸುಗ್ರೀವನು ದಹನಸಂಸ್ಕಾರವನ್ನು ನಡೆಸಿದನು ಅನಂತರ ಪ್ರಜ್ವಲಿಸುವ ಅಗ್ನಿಯಂತೆ ತೇಜಸ್ವಿಯಾಗಿ ಲಕ್ಷ್ಮಣಸಮೇತನಾಗಿ ನಿಂತಿದ್ದ ಶ್ರೀರಾಮನ ಬಳಿಗೆ ಸುಗ್ರೀವನು ಬಂದು ನಿಂತನು (೫೩).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಇಪ್ಪತ್ತೈದನೆಯ ಸರ್ಗ



## ಷಡ್ವಿಂಶಃ ಸರ್ಗಃ

### ಸುಗ್ರೀವಾಭಿಷೇಕಃ

ತತಃ ಶೋಕಾಭಿಸಂತಪ್ತಂ ಸುಗ್ರೀವಂ ಕ್ಲಿನ್ನವಾಸಸಮ್ ।
ಶಾಖಾಮೃಗಮಹಾಮಾತ್ರಾಃ ಪರಿವಾರ್ಯೋಪತಸ್ಥಿರೇ ॥ ೧

ಅಭಿಗಮ್ಯ ಮಹಾಬಾಹುಂ ರಾಮಮಕ್ಲಿಷ್ಟಕಾರಿಣಮ್ ।
ಸ್ಥಿತಾಃ ಪ್ರಾಂಜಲಯಃ ಸರ್ವೇ ಪಿತಾಮಹಮಿವರ್ಷಯಃ ॥ ೨

ತತಃ ಕಾಂಚನಶೈಲಾಭಸ್ತರುಣಾರ್ಕನಿಭಾನನಃ ।
ಅಬ್ರವೀತ್ ಪ್ರಾಂಜಲಿರ್ವಾಕ್ಯಂ ಹನುಮಾನ್ ಮಾರುತಾತ್ಮಜಃ ೩

ಭವತ್ಪ್ರಸಾದಾತ್ ಸುಗ್ರೀವಃ ಪಿತೃಪೈತಾಮಹಂ ಮಹತ್ ।
ವಾನರಾಣಾಂ ಸುದುಷ್ಪ್ರಾಪಂ ಪ್ರಾಪ್ತೋ ರಾಜ್ಯಮಿದಂ ಪ್ರಭೋ ॥ ೪

ಭವತಾ ಸಮನುಜ್ಞಾತಃ ಪ್ರವಿಶ್ಯ ನಗರಂ ಶುಭಮ್ ।
ಸಂವಿಧಾಸ್ಯತಿ ಕಾರ್ಯಾಣಿ ಸರ್ವಾಣಿ ಸಸುಹೃದ್ಗಣಃ ॥ ೫

## ಸರ್ಗ ೨೬

### ಸುಗ್ರೀವನ ಪಟ್ಟಾಭಿಷೇಕ.

ಸುಗ್ರೀವನು (ಅಪರಕಾರ್ಯವನ್ನು ನಡೆಸಿ) ಒದ್ದೆಯ ಬಟ್ಟೆಯನ್ನುಟ್ಟೇ ಶೋಕಸಂತಪ್ತನಾಗಿ ಶ್ರೀರಾಮನ ಸಮೀಪಕ್ಕೆ ಬಂದನು. ವಾನರಮಂತ್ರಿಗಳೆಲ್ಲರೂ ಸುಗ್ರೀವನನ್ನು ಬಳಸಿ ನಿಂತರು. ಅವರೆಲ್ಲರೂ ಮಹಾಬಾಹುವೂ ಧರ್ಮನಿಷ್ಠನೂ ಆದ ಶ್ರೀರಾಮನೆದುರಿಗೆ, ಬ್ರಹ್ಮದೇವನೆದುರಿಗೆ ಋಷಿಗಳು ಉಪಸ್ಥಿತರಾಗುವಂತೆ, ಕೈಮುಗಿದುಕೊಂಡು ನಿಂತರು (೧-೨). ಆಗ ಸುವರ್ಣಪರ್ವತಾಕಾರನೂ ಬಾಲಸೂರ್ಯಮಂಡಲದಂತೆ ತೇಜೋವಿಶಿಷ್ಟವಾದ ಮುಖವುಳ್ಳವನೂ ಆದ ಆಂಜನೇಯನು ಶ್ರೀರಾಮನಿಗೆ ಕೈಮುಗಿದು ಹೀಗೆ ವಿಜ್ಞಾಪಿಸಿದನು : “ ಹೇ ಪ್ರಭು, ನಿನ್ನ ಅನುಗ್ರಹದಿಂದ ಸುಗ್ರೀವನಿಗೆ ಪಿತೃಪಿತಾಮಹಪರಂಪರೆಯಿಂದ ಬಂದ ಮಹಾರಾಜ್ಯವು ದೊರೆಯಿತು. ದುರ್ಲಭವಾದ ಈ ಕಪಿರಾಜ್ಯವನ್ನವನು ಪಡೆದನು (೩-೪). ನೀನು ಅನುಮತಿಯನ್ನಿತ್ತರೆ, ಸುಗ್ರೀವನು ರಾಜಧಾನಿಯನ್ನು ಪ್ರವೇಶಿಸಿ ಮಿತ್ರಪರಿವೃತ

ಸ್ನಾತೋಽಯಂ ವಿವಿಧೈರ್ಗಂಧೈರೌಷಧೈಶ್ಚ ಯಥಾವಿಧಿ ।
ಅರ್ಚಯಿಷ್ಯತಿ ರತ್ನೈಶ್ಚ ಮಾಲ್ಯೈಶ್ಚ ತ್ವಾಂ ವಿಶೇಷತಃ ॥ ೬

ಇಮಾಂ ಗಿರಿಗುಹಾಂ ರಮ್ಯಾಮಭಿಗಂತುಮಿತೋಽರ್ಹಸಿ ।
ಕುರುಷ್ವ ಸ್ವಾಮಿಸಂಬಂಧಂ ವಾನರಾನ್ ಸಂಪ್ರಹರ್ಷಯನ್ ॥ ೭

ಏವಮುಕ್ತೋ ಹನುಮತಾ ರಾಘವಃ ಪರವೀರಹಾ ।
ಪ್ರತ್ಯುವಾಚ ಹನೂಮಂತಂ ಬುದ್ಧಿಮಾನ್ ವಾಕ್ಯಕೋವಿದಃ ॥ ೮

ಚತುರ್ದಶ ಸಮಾಃ ಸೌಮ್ಯ ಗ್ರಾಮಂ ವಾ ಯದಿ ವಾ ಪುರಮ್ ।
ನ ಪ್ರವೇಕ್ಷ್ಯಾಮಿ ಹನುಮನ್ ಪಿತುರ್ನಿರ್ದೇಶಪಾಲಕಃ ॥ ೯

ಸುಸಮೃದ್ಧಾಂ ಗುಹಾಂ ರಮ್ಯಾಂ ಸುಗ್ರೀವೋ ವಾನರರ್ಷಭಃ ।
ಪ್ರವಿಷ್ಟೋ ವಿಧಿವದ್ವೀರಃ ಕ್ಷಿಪ್ರಂ ರಾಜ್ಯೇಽಭಿಷಿಚ್ಯತಾಮ್ ॥ ೧೦

ಏವಮುಕ್ತ್ವಾ ಹನೂಮಂತಂ ರಾಮಃ ಸುಗ್ರೀವಮಬ್ರವೀತ್ ।
ವೃತ್ತಜ್ಞೋ ವೃತ್ತಸಂಪನ್ನಮುದಾರಬಲವಿಕ್ರಮಮ್ ॥ ೧೧

---

ನಾಗಿ ಸಕಲ ರಾಜಕಾರ್ಯಗಳನ್ನೂ ನೋಡಿಕೊಳ್ಳುವನು. ಅವನು ಸುಗಂಧ ದ್ರವ್ಯಗಳಿಂದಲೂ ಓಷಧಿಗಳಿಂದಲೂ ಮಿಶ್ರವಾದ ಜಲದಲ್ಲಿ ಸ್ನಾತನಾಗಿ ಪಟ್ಟಾಭಿಷಿಕ್ತನಾದಮೇಲೆ, ರತ್ನಮಾಲ್ಯಗಳಿಂದ ನಿನ್ನನ್ನು ಆದರಿಸಿ ಸತ್ಕರಿಸುವನು (೫-೬). ರಮ್ಯವಾದ ಈ ಕಿಷ್ಕಿಂಧೆಗೆ ನೀನು ಆಗಮಿಸು. ಸುಗ್ರೀವನನ್ನು ಕಪಿರಾಜನನ್ನಾಗಿ ನೇಮಿಸಿ ವಾನರರಿಗೆ ಸಂತೋಷವನ್ನುಂಟುಮಾಡು" ಎಂದನು. ಆಗ ಪ್ರಾಜ್ಞನೂ ವಾಕ್ಯಕೋವಿದನೂ ಆದ ರಘುನಾಥನು "ಸೌಮ್ಯ-ಹನುಮಂತ, ನಾನು ತಂದೆಯ ಆಜ್ಞೆಯನ್ನು ಪಾಲಿಸುತ್ತಿದ್ದೇನೆ. ಹದಿನಾಲ್ಕು ವರ್ಷಗಳವರೆಗೆ ನಗರವನ್ನಾಗಲಿ ಗ್ರಾಮವನ್ನಾಗಲಿ ನಾನು ಪ್ರವೇಶಿಸುವುದಿಲ್ಲ (೭-೯). ಸಂಪತ್ಸಮೃದ್ಧವೂ ರಮ್ಯವೂ ಆದ ಕಿಷ್ಕಿಂಧೆಗೆ ಸುಗ್ರೀವನು ಹೋಗಲಿ. ವಾನರೋತ್ತಮನಾದ ಈ ವೀರನಿಗೆ ಶೀಘ್ರವೇ ಪಟ್ಟಾಭಿಷೇಕವು ನಡೆಯಲಿ" ಎಂದು ಹೇಳಿದನು. ಹೀಗೆ ಹನುಮಂತನಿಗೆ ತಿಳಿಸಿ, ಲೋಕನೀತಿಜ್ಞನಾದ ಶ್ರೀರಾಮನು ಸುಗ್ರೀವನನ್ನು ಕುರಿತು "ವೀರ-ಸುಗ್ರೀವ, ಅಂಗದನು ಶೀಲಸಂಪನ್ನನಾಗಿದ್ದಾನೆ. ಉನ್ನತ ಬಲಪರಾಕ್ರಮ

ಇಮಮಪ್ಯಂಗದಂ ವೀರ ಯೌವರಾಜ್ಯೇಽಭಿಷೇಚಯ ।
ಜ್ಯೇಷ್ಠಸ್ಯ ಸ ಸುತೋ ಜ್ಯೇಷ್ಠಃ ಸದೃಶೋ ವಿಕ್ರಮೇಣ ತೇ ॥ ೧೨

ಅಂಗದೋಽಯಮದೀನಾತ್ಮಾ ಯೌವರಾಜ್ಯಸ್ಯ ಭಾಜನಮ್ ।
ಪೂರ್ವೋಽಯಂ ವಾರ್ಷಿಕೋ ಮಾಸಃ ಶ್ರಾವಣಃ ಸಲಿಲಾಗಮಃ ॥

ಪ್ರವೃತ್ತಾಃ ಸೌಮ್ಯ ಚತ್ವಾರೋ ಮಾಸಾ ವಾರ್ಷಿಕಸಂಜ್ಞಕಾಃ ।
ನಾಯಮುದ್ಯೋಗಸಮಯಃ ಪ್ರವಿಶ ತ್ವಂ ಪುರೀಂ ಶುಭಾಮ್ ೧೪

ಅಸ್ಮಿನ್ ವತ್ಸ್ಯಾಮ್ಯಹಂ ಸೌಮ್ಯ ಪರ್ವತೇ ಸಹಲಕ್ಷ್ಮಣಃ ।
ಇಯಂ ಗಿರಿಗುಹಾ ರಮ್ಯಾ ವಿಶಾಲಾ ಯುಕ್ತಮಾರುತಾ ॥ ೧೫

ಪ್ರಭೂತಸಲಿಲಾ ಸೌಮ್ಯ ಪ್ರಭೂತಕಮಲೋತ್ಪಲಾ ।
ಕಾರ್ತಿಕೇ ಸಮನುಪ್ರಾಪ್ತೇ ತ್ವಂ ರಾವಣವಧೇ ಯತ ॥ ೧೬

ಏಷ ನಃ ಸಮಯಃ ಸೌಮ್ಯ ಪ್ರವಿಶ ತ್ವಂ ಸ್ವಮಾಲಯಮ್ ।
ಅಭಿಷಿಂಚಸ್ವ ರಾಜ್ಯೇ ಚ ಸುಹೃದಃ ಸಂಪ್ರಹರ್ಷಯ ॥ ೧೭

---

ಗಳು ಇವನಲ್ಲಿವೆ (೧೦-೧೧). ಇವನಿಗೆ ಯುವರಾಜಪದವಿಯನ್ನಿತ್ತು ಅಭಿಷೇಕಮಾಡು. ಅಂಗದನು ನಿನ್ನ ಅಣ್ಣನ ಹಿರಿಯ ಮಗನಾಗಿ ಶೌರ್ಯದಲ್ಲಿ ನಿನಗೆ ಸಮಾನನಾಗಿದ್ದಾನೆ. ಆ ಧೀರನು ಯುವರಾಜಪದವಿಗೆ ಅರ್ಹ. ಈಗ ವರ್ಷರ್ತುವಿನಲ್ಲಿ ಆದಿಭಾಗವಾದ ಶ್ರಾವಣಮಾಸ. ಈ ಮಾಸದಲ್ಲಿ ಮಳೆಯು ಅಧಿಕವಾಗಿರುತ್ತದೆ (೧೨-೧೩). ಮಳೆಗಾಲವೆನಿಸಿದ ಆಷಾಢಾದಿ ಚತುರ್ಮಾಸಗಳು ಆರಂಭವಾಗಿವೆ. ಸೌಮ್ಯ-ಸುಗ್ರೀವ, ಇದು ನಮ್ಮ ಉದ್ಯಮಕ್ಕೆ ತಕ್ಕ ಸಮಯವಲ್ಲ. ನೀನು ಕಿಷ್ಕಿಂಧಾನಗರಿಗೆ ಹೋಗು. ನಾನು ಈ ಪರ್ವತದಲ್ಲಿ ಲಕ್ಷ್ಮಣಸಮೇತನಾಗಿ ವಾಸಮಾಡುವೆನು. ಇಲ್ಲಿರುವ ಗಿರಿಗುಹೆಯು ವಿಶಾಲವಾಗಿದ್ದು ನೆಲೆಸಲು ಚೆನ್ನಾಗಿದೆ. ಇದರಲ್ಲಿ ಗಾಳಿಯು ಹಿತಮಿತವಾಗಿ ಬೀಸುತ್ತದೆ (೧೪-೧೫). ಸೌಮ್ಯ, ಈ ಬೆಟ್ಟದಲ್ಲಿ ಜಲ ಸಮೃದ್ಧಿಯೂ ಉತ್ತಮವಾಗಿದೆ. ಕಮಲೋತ್ಪಲಗಳು ಹೇರಳವಾಗಿ ದೊರೆಯುತ್ತವೆ. ಕಾರ್ತಿಕಮಾಸವು ಸಮೀಪಿಸಿದೊಡನೆ ನೀನು ರಾವಣಸಂಹಾರ ಕಾರ್ಯದಲ್ಲಿ ಉದ್ಯುಕ್ತನಾಗಿ ನನಗೆ ಸಹಾಯಮಾಡು. ಮಿತ್ರ, ಇದೇ ನಮ್ಮ ಕಾರ್ಯಸಂಕೇತವಾಗಿರಲಿ. ಇನ್ನು ನೀನು ಗೃಹಾಭಿಮುಖನಾಗಿ ತೆರಳು. ರಾಜ್ಯದಲ್ಲಿ ಪಟ್ಟಾಭಿಷಿಕ್ತನಾಗಿ ಮಿತ್ರರನ್ನು ಸಂತೋಷಪಡಿಸು "

ಇತಿ ರಾಮಾಭ್ಯನುಜ್ಞಾತಃ ಸುಗ್ರೀವೋ ವಾನರಾಧಿಪಃ ।
ಪ್ರವಿವೇಶ ಪುರೀಂ ರಮ್ಯಾಂ ಕಿಷ್ಕಿಂಧಾಂ ವಾಲಿಪಾಲಿತಾಮ್ ॥ ೧೮

ತಂ ವಾನರಸಹಸ್ರಾಣಿ ಪ್ರವಿಷ್ಟಂ ವಾನರೇಶ್ವರಮ್ ।
ಅಭಿವಾದ್ಯ ಪ್ರವಿಷ್ಟಾನಿ ಸರ್ವತಃ ಪರ್ಯವಾರಯನ್ ॥ ೧೯

ತತಃ ಪ್ರಕೃತಯಃ ಸರ್ವಾ ದೃಷ್ಟ್ವಾ ಹರಿಗಣೇಶ್ವರಮ್ ।
ಪ್ರಣಮ್ಯ ಮೂರ್ಧ್ನಾ ಪತಿತಾ ವಸುಧಾಯಾಂ ಸಮಾಹಿತಾಃ ॥ ೨೦

ಸುಗ್ರೀವಃ ಪ್ರಕೃತೀಃ ಸರ್ವಾಃ ಸಂಭಾಷ್ಯೋತ್ಥಾಪ್ಯ ವೀರ್ಯವಾನ್ ।
ಭ್ರಾತುರಂತಃಪುರಂ ಸೌಮ್ಯಂ ಪ್ರವಿವೇಶ ಮಹಾಬಲಃ ॥ ೨೧

ಪ್ರವಿಶ್ಯ ತ್ವಭಿನಿಷ್ಕ್ರಾಂತಂ ಸುಗ್ರೀವಂ ವಾನರರ್ಷಭಮ್ ।
ಅಭ್ಯಷಿಂಚಂತ ಸುಹೃದಃ ಸಹಸ್ರಾಕ್ಷಮಿವಾಮರಾಃ ॥ ೨೨

ತಸ್ಯ ಪಾಂಡರಮಾಜಹ್ರುಶ್ಛತ್ರಂ ಹೇಮಪರಿಷ್ಕೃತಮ್ ।
ಶುಕ್ಲೇ ಚ ವಾಲವ್ಯಜನೇ ಹೇಮದಂಡೇ ಯಶಸ್ಕರೇ ॥ ೨೩

---

ಎಂದು ಹೇಳಿದನು (೧೬-೧೭). ಈ ರೀತಿಯಲ್ಲಿ ಶ್ರೀರಾಮನ ಅನುಜ್ಞೆಯನ್ನು ಪಡೆದು ವಾನರೇಶ್ವರನಾದ ಸುಗ್ರೀವನು, ವಾಲಿಪಾಲಿತವಾಗಿದ್ದ ಕಿಷ್ಕಿಂಧಾನಗರವನ್ನು ಪ್ರವೇಶಿಸಿದನು ಅವನು ನಗರಪ್ರವೇಶಮಾಡಿದಾಗ ಸಾವಿರಾರು ಮಂದಿ ವಾನರನಾಯಕರು ಬಂದು ಅವನಿಗೆ ವಂದಿಸಿ ಸುತ್ತಲೂ ನೆರೆದರು (೧೮-೧೯). ಆಗ ಸಚಿವರೇ ಮೊದಲಾದ ಅಧಿಕಾರಿವರ್ಗದವರು ಸುಗ್ರೀವನಿಗೆ ತಲೆಬಾಗಿ ನೆಲದಮೇಲೆ ಅಡ್ಡಬಿದ್ದು ನಮಸ್ಕರಿಸಿದರು. ಬಲಾಢ್ಯನಾದ ಸುಗ್ರೀವನು ಅವರನ್ನು ಮೇಲಕ್ಕೆತ್ತಿ ಕಾಲೋಚಿತವಾಗಿ ಸಂಭಾಷಿಸಿ, ಅಣ್ಣನಾದ ವಾಲಿಯ ಶಾಂತವಾಗಿದ್ದ ಅಂತಃಪುರವನ್ನು ಪ್ರವೇಶಿಸಿದನು (೨೦-೨೧). (ಅಲ್ಲಿ ತಾರೆ ಮೊದಲಾದ ಸ್ತ್ರೀಯರನ್ನು ಸಂತೈಸಿ) ಹಿಂತಿರುಗಿ ಬಂದನು. ಅನಂತರ ಅವನ ಹಿತೈಷಿಗಳಾದ ವಾನರರು, ಇಂದ್ರನಿಗೆ ದೇವತೆಗಳು ಪಟ್ಟಗಟ್ಟುವಂತೆ, ಸುಗ್ರೀವನಿಗೆ ಪಟ್ಟಾಭಿಷೇಕವನ್ನು ಮಾಡಿದರು. ಸುವರ್ಣಾಲಂಕೃತವಾದ ಶ್ವೇತಚ್ಛತ್ರವನ್ನು ಹಿಡಿದರು. ಚಿನ್ನದ ಹಿಡಿಗಳುಳ್ಳ

ತಥಾ ಸರ್ವಾಣಿ ರತ್ನಾನಿ ಸರ್ವಬೀಜೌಷಧಾನಿ ಚ ।
ಸಕ್ಷೀರಾಣಾಂ ಚ ವೃಕ್ಷಾಣಾಂ ಪ್ರರೋಹಾನ್ ಕುಸುಮಾನಿ ಚ ॥ ೨೪

ಶುಕ್ಲಾನಿ ಚೈವ ವಸ್ತ್ರಾಣಿ ಶ್ವೇತಂ ಚೈವಾನುಲೇಪನಮ್ ।
ಸುಗಂಧೀನಿ ಚ ಮಾಲ್ಯಾನಿ ಸ್ಥಲಜಾನ್ಯಂಬುಜಾನಿ ಚ ॥ ೨೫

ಚಂದನಾನಿ ಚ ದಿವ್ಯಾನಿ ಗಂಧಾಂಶ್ಚ ವಿವಿಧಾನ್ ಬಹೂನ್ ।
ಅಕ್ಷತಂ ಜಾತರೂಪಂ ಚ ಪ್ರಿಯಂಗುಮಧುಸರ್ಪಿಷೀ ॥ ೨೬

ದಧಿ ಚರ್ಮ ಚ ವೈಯಾಘ್ರಂ ವಾರಾಹೀ ಚಾಪ್ಯುಪಾನಹೌ ।
ಸಮಾಲಂಭನಮಾದಾಯ ರೋಚನಾಂ ಸಮನಃಶಿಲಾಮ್ ॥ ೨೭

ಆಜಗ್ಮುಸ್ತತ್ರ ಮುದಿತಾ ವರಾಃ ಕನ್ಯಾಸ್ತು ಷೋಡಶ ।
ತತಸ್ತೇ ವಾನರಶ್ರೇಷ್ಠಂ ಯಥಾಕಾಲಂ ಯಥಾವಿಧಿ ॥ ೨೮

ರತ್ನೈರ್ವಸ್ತ್ರೈಶ್ಚ ಭಕ್ಷ್ಯೈಶ್ಚ ತೋಷಯಿತ್ವಾ ದ್ವಿಜರ್ಷಭಾನ್ ।
ತತಃ ಕುಶಪರಿಸ್ತೀರ್ಣಂ ಸಮಿದ್ಧಂ ಜಾತವೇದಸಮ್ ॥ ೨೯

---

ಶುಭ್ರವಾದ ಚಾಮರಗಳನ್ನು ಬೀಸಿದರು (೨೨-೨೩) ಹಾಗೆಯೇ ಸಕಲ ವಿಧವಾದ ರತ್ನಗಳು, ಬೀಜಗಳು, ಔಷಧಗಳು, ಹಾಲುಸೋರುವ ಮರಗಳ ಚಿಗುರುಗಳು ಮತ್ತು ಹೂಗಳನ್ನು ತಂದಿರಿಸಿದರು. ಇನ್ನು ಕೆಲವು ವಾನರರು ಬಿಳಿಯ ವಸ್ತ್ರಗಳನ್ನೂ ಶುಭ್ರವಾದ ಅನುಲೇಪನದ್ರವ್ಯಗಳನ್ನೂ ತಂದರು. ಸುವಾಸನೆಯುಳ್ಳ ಪುಷ್ಪಮಾಲೆಗಳನ್ನೂ ನೆಲದಲ್ಲಿಯೂ ಜಲದಲ್ಲಿಯೂ ಬೆಳೆಯುವ ಪುಷ್ಪಗಳನ್ನೂ ತಂದಿಟ್ಟರು (೨೪-೨೫). ದಿವ್ಯಚಂದನಗಳು, ಬಗೆಬಗೆಯ ಗಂಧದ್ರವ್ಯಗಳು, ಅಕ್ಷತೆ, ಚಿನ್ನ, ಪ್ರಿಯಂಗುಧಾನ್ಯ, ಜೇನುತುಪ್ಪ, ತುಪ್ಪ, ಮೊಸರು, ಹುಲಿಯ ಚರ್ಮ, ವರಾಹ ಚರ್ಮದಿಂದ ಮಾಡಿದ ಹಾವುಗೆಗಳು, ಅನುಲೇಪನವಿಶೇಷವಾದ ಗೋರೋಚನ, (ತಿಲಕಕ್ಕೆ ಉಪಯೋಗಿಸುವ) ಮಣಿಶಿಲೆ ಮುಂತಾದ ಮಂಗಳದ್ರವ್ಯಗಳನ್ನು ಒದಗಿಸಿದರು (೨೬-೨೭). ಆ ವಾನರರು ಸಂತೋಷದಿಂದ ಮಂಗಳಾರ್ಥವಾಗಿ ಹದಿನಾರು ಮಂದಿ ಉತ್ತಮ ಕನ್ಯೆಯರನ್ನು ಕರೆತಂದರು. ಆ ಕಪಿನಾಯಕರು ಸುಮುಹೂರ್ತದಲ್ಲಿ ವಿಧ್ಯುಕ್ತವಾಗಿ ಸುಗ್ರೀವನಿಗೆ ಅಭಿಷೇಕವನ್ನು ನಡೆಸಲು ಉದ್ಯುಕ್ತರಾದರು. (ಉತ್ಸವಕ್ಕಾಗಿ ಕರೆಸಿದ) ಬ್ರಾಹ್ಮಣೋತ್ತಮರಿಗೆ

ಮಂತ್ರಪೂತೇನ ಹವಿಷಾ ಹುತ್ವಾ ಮಂತ್ರವಿದೋ ಜನಾಃ ।
ತತೋ ಹೈಮಪ್ರತಿಷ್ಠಾನೇ ವರಾಸ್ತರಣಸಂವೃತೇ ॥ ೩೦

ಪ್ರಾಸಾದಶಿಖರೇ ರಮ್ಯೇ ಚಿತ್ರಮಾಲ್ಯೋಪಶೋಭಿತೇ ।
ಪ್ರಾಙ್ಮುಖಂ ವಿವಿಧೈರ್ಮಂತ್ರೈಃ ಸ್ಥಾಪಯಿತ್ವಾ ವರಾಸನೇ ॥ ೩೧

ನದೀನದೇಭ್ಯಃ ಸಂಹೃತ್ಯ ತೀರ್ಥೇಭ್ಯಶ್ಚ ಸಮಂತತಃ ।
ಆಹೃತ್ಯ ಚ ಸಮುದ್ರೇಭ್ಯಃ ಸರ್ವೇಭ್ಯೋ ವಾನರರ್ಷಭಾಃ ॥ ೩೨

ಅಪಃ ಕನಕಕುಂಭೇಷು ನಿಧಾಯ ವಿಮಲಾಃ ಶುಭಾಃ ।
ಶುಭೈರ್ವೃಷಭಶೃಂಗೈಶ್ಚ ಕಲಶೈಶ್ಚಾಪಿ ಕಾಂಚನೈಃ ॥ ೩೩

ಶಾಸ್ತ್ರದೃಷ್ಟೇನ ವಿಧಿನಾ ಮಹರ್ಷಿವಿಹಿತೇನ ಚ ।
ಗಜೋ ಗವಾಕ್ಷೋ ಗವಯಃ ಶರಭೋ ಗಂಧಮಾದನಃ ॥ ೩೪

ಮೈಂದಶ್ಚ ದ್ವಿವಿದಶ್ಚೈವ ಹನುಮಾನ್ ಜಾಂಬವಾನ್ನಲಃ ।
ಅಭ್ಯಷಿಂಚಂತ ಸುಗ್ರೀವಂ ಪ್ರಸನ್ನೇನ ಸುಗಂಧಿನಾ ॥ ೩೫

---

ರತ್ನಗಳನ್ನೂ ವಸ್ತ್ರಗಳನ್ನೂ ಭಕ್ಷ್ಯಗಳನ್ನೂ ಕೊಟ್ಟು ಸಂತೋಷಪಡಿಸಿದರು. ಆಮೇಲೆ ಮಂತ್ರಜ್ಞರಾದ ಬ್ರಾಹ್ಮಣರು ದರ್ಭಪರಿಸ್ತರಣದ ನಡುವೆ ಉರಿಯುವ ಅಗ್ನಿಯಲ್ಲಿ ಮಂತ್ರಪೂತವಾದ ಹವಿಸ್ಸನ್ನರ್ಪಿಸಿ ಹೋಮಮಾಡಿದರು (೨೮-೨೯). ಅರಮನೆಯ ರಮಣೀಯವಾದ ಉಪ್ಪರಿಗೆಯಲ್ಲಿ ಒಂದು ಸಿಂಹಾಸನವು ಇರಿಸಲ್ಪಟ್ಟಿತ್ತು ಅದಕ್ಕೆ ಸುವರ್ಣಮಯವಾದ ಕಾಲುಗಳಿದ್ದವು. ಶ್ರೇಷ್ಠವಾದ ಆಸ್ತರಣದಿಂದ ಹೊದಿಸಲ್ಪಟ್ಟು ಚಿತ್ರಮಾಲ್ಯಗಳಿಂದ ಭೂಷಿತವಾದ ಆ ಪೀಠದಲ್ಲಿ, ಕಪಿನಾಯಕರು ಸುಗ್ರೀವನನ್ನು ಮಂತ್ರಘೋಷದೊಡನೆ ಪೂರ್ವಾಭಿಮುಖವಾಗಿ ಕುಳ್ಳಿರಿಸಿದರು (೩೦-೩೧). ಆ ವಾನರರು ಅಭಿಷೇಕಜಲವನ್ನು ಸಮಸ್ತ ನದನದಿಗಳಿಂದಲೂ* ತೀರ್ಥಗಳಿಂದಲೂ ಸಮುದ್ರಗಳಿಂದಲೂ ಚಿನ್ನದ ಪಾತ್ರೆಗಳಲ್ಲಿ ತುಂಬಿ ತಂದಿದ್ದರು. ಪರಿಮಳಯುಕ್ತವೂ ಪವಿತ್ರವೂ ಆದ ಆ ಜಲವನ್ನು ಗೋಶೃಂಗಗಳಿಂದಲೂ ಸುವರ್ಣಕಲಶಗಳಿಂದಲೂ ಗಜ, ಗವಾಕ್ಷ, ಗವಯ, ಶರಭ, ಗಂಧಮಾದನ,

---

* ನರ್ಮದೆಯೊಂದನ್ನು ಬಿಟ್ಟು ಪಶ್ಚಿಮಾಭಿಮುಖವಾಗಿ ಹರಿಯುವ ಹೊಳೆಗಳನ್ನು ನದಗಳೆಂದು ಹೇಳುತ್ತಾರೆ (ಮಾಘ ೪-೬೬, ಮಲ್ಲಿನಾಥ ವ್ಯಾಖ್ಯಾನ).

ಸಲಿಲೇನ ಸಹಸ್ರಾಕ್ಷಂ ವಸವೋ ವಾಸವಂ ಯಥಾ ।
ಅಭಿಷಿಕ್ತೇ ತು ಸುಗ್ರೀವೇ ಸರ್ವೇ ವಾನರಪುಂಗವಾಃ ॥ ೩೬

ಪ್ರಚುಕ್ರುಶುರ್ಮಹಾತ್ಮಾನೋ ಹೃಷ್ಟಾಸ್ತತ್ರ ಸಹಸ್ರಶಃ ।
ರಾಮಸ್ಯ ತು ವಚಃ ಕುರ್ವನ್ ಸುಗ್ರೀವೋ ಹರಿಪುಂಗವಃ ॥ ೩೭

ಅಂಗದಂ ಸಂಪರಿಷ್ವಜ್ಯ ಯೌವರಾಜ್ಯೇಽಭ್ಯಷೇಚಯತ್ ।
ಅಂಗದೇ ಚಾಭಿಷಿಕ್ತೇ ತು ಸಾನುಕ್ರೋಶಾಃ ಪ್ಲವಂಗಮಾಃ ॥ ೩೮

ಸಾಧು ಸಾಧ್ವಿತಿ ಸುಗ್ರೀವಂ ಮಹಾತ್ಮಾನೋಽಭ್ಯಪೂಜಯನ್ ।
ರಾಮಂ ಚೈವ ಮಹಾತ್ಮಾನಂ ಲಕ್ಷ್ಮಣಂ ಚ ಪುನಃ ಪುನಃ ॥ ೩೯

ಪ್ರೀತಾಶ್ಚ ತುಷ್ಟುವುಃ ಸರ್ವೇ ತಾದೃಶೇ ತತ್ರ ವರ್ತಿನಿ ।
ಹೃಷ್ಟಪುಷ್ಟಜನಾಕೀರ್ಣಾ ಪತಾಕಾಧ್ವಜಶೋಭಿತಾ ॥ ೪೦

ಬಭೂವ ನಗರೀ ರಮ್ಯಾ ಕಿಷ್ಕಿಂಧಾ ಗಿರಿಗಹ್ವರೇ ॥

---

ಮೈಂದ, ದ್ವಿವಿದ, ಹನುಮಂತ, ಜಾಂಬವಂತ, ನಳ—ಮೊದಲಾದವರು ಸುಗ್ರೀವನಿಗೆ ಅಭಿಷೇಕಮಾಡಿದರು (೩೨-೩೫) ವಸುಗಳು ಸಹಸ್ರಾಕ್ಷನಾದ ಇಂದ್ರನಿಗೆ ಅಭಿಷೇಕಮಾಡಿದಂತೆ ವೈಭವದಿಂದ ಅಭಿಷೇಕಕಾರ್ಯವನ್ನು ನಡೆಸಿದರು. ಸುಗ್ರೀವನು ಅಭಿಷಿಕ್ತನಾಗಲು, ಸಕಲವಾನರೋತ್ತಮರೂ ಸಾವಿರಗಟ್ಟಲೆ ಗುಂಪಾಗಿ ನೆರೆದು ನಲಿಯುತ್ತ ಹರ್ಷೋದ್ಗಾರಮಾಡಿದರು (೩೬). ಅನಂತರ ವಾನರೋತ್ತಮನಾದ ಸುಗ್ರೀವನು ಶ್ರೀರಾಮನ ಆದೇಶವನ್ನು ಮನ್ನಿಸಿ, ಅಂಗದನನ್ನು ಪ್ರೀತಿಯಿಂದ ಆಲಿಂಗಿಸಿ ಕರೆತಂದು ಯುವರಾಜಪದವಿಯಲ್ಲಿ ಅವನಿಗೆ ಅಭಿಷೇಕಮಾಡಿಸಿದನು ಅಂಗದನು ಯುವರಾಜನಾಗಿ ಪಟ್ಟಾಭಿಷಿಕ್ತನಾದುದನ್ನು ಕಂಡು, ಅವನಲ್ಲಿ ವಾತ್ಸಲ್ಯವನ್ನಿಟ್ಟುಕೊಂಡಿದ್ದ ವಾನರರೆಲ್ಲರೂ 'ಬಹಳ ಒಳ್ಳೆಯದಾಯಿತು! ಭಲೆ!' ಎಂದು ಹೇಳಿ ಸುಗ್ರೀವನನ್ನು ಹೊಗಳಿದರು; ಮಹಾತ್ಮರಾದ ಶ್ರೀರಾಮಲಕ್ಷ್ಮಣರನ್ನು ಮತ್ತೆ ಮತ್ತೆ ಕೊಂಡಾಡಿದರು (೩೭-೩೯). ಹೀಗೆ ಸುಗ್ರೀವಾಂಗದರಿಬ್ಬರ ಅಭಿಷೇಕೋತ್ಸವವು ಜರುಗಲಾಗಿ, ಸಕಲರೂ ಮೆಚ್ಚಿ ನಲಿದರು. ಗಿರಿಗುಹೆಯಲ್ಲಿದ್ದ ಕಿಷ್ಕಿಂಧಾನಗರಿಯು ಹರ್ಷದಿಂದುಬ್ಬಿದ ಜನರಿಂದಲೂ

ನಿವೇದ್ಯ ರಾಮಾಯ ತದಾ ಮಹಾತ್ಮನೇ
ಮಹಾಭಿಷೇಕಂ ಕಪಿವಾಹಿನೀಪತಿಃ ।
ರುಮಾಂ ಚ ಭಾರ್ಯಾಂ ಪ್ರತಿಲಭ್ಯ ವೀರ್ಯವಾ-
ನವಾಪ ರಾಜ್ಯಂ ತ್ರಿದಶಾಧಿಪೋ ಯಥಾ ॥ ೪೧

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಷಡ್ವಿಂಶಃ ಸರ್ಗಃ



ಧ್ವಜಪತಾಕೆಗಳಿಂದಲೂ ರಮಣೀಯವಾಯಿತು (೪೦). ಅನಂತರ ಕಪೀಶ್ವರನಾದ ಸುಗ್ರೀವನು ಮಹಾತ್ಮನಾದ ಶ್ರೀರಾಮನ ಬಳಿಗೆ ಹೋಗಿ, ಪಟ್ಟಾಭಿಷೇಕದ ವೃತ್ತಾಂತವನ್ನು ನಿವೇದಿಸಿದನು. ಆ ಕಪಿವೀರನು ತನ್ನ ಮಡದಿಯಾದ ರುಮೆಯನ್ನೂ ಕಪಿರಾಜ್ಯವನ್ನೂ ಪಡೆದು, ಸ್ವರ್ಗಾಧಿಪತ್ಯವನ್ನು ಪಡೆದ ದೇವೇಂದ್ರನಂತೆ ವಿರಾಜಿಸಿದನು (೪೧).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಇಪ್ಪತ್ತಾರನೆಯ ಸರ್ಗ



## ಸಪ್ತವಿಂಶಃ ಸರ್ಗಃ

### ಮಾಲ್ಯವನ್ನಿವಾಸಃ

ಅಭಿಷಿಕ್ತೇ ತು ಸುಗ್ರೀವೇ ಪ್ರವಿಷ್ಟೇ ವಾನರೇ ಗುಹಾಮ್ ।
ಆಜಗಾಮ ಸಹ ಭ್ರಾತ್ರಾ ರಾಮಃ ಪ್ರಸ್ರವಣಂ ಗಿರಿಮ್ ॥ ೧

ಶಾರ್ದೂಲಮೃಗಸಂಘುಷ್ಟಂ ಸಿಂಹೈರ್ಭೀಮರವೈರ್ವೃತಮ್ ।
ನಾನಾಗುಲ್ಮಲತಾಗೂಢಂ ಬಹುಪಾದಪಸಂಕುಲಮ್ ॥ ೨

ಋಕ್ಷವಾನರಗೋಪುಚ್ಛೈರ್ಮಾರ್ಜಾರೈಶ್ಚ ನಿಷೇವಿತಮ್ ।
ಮೇಘರಾಶಿನಿಭಂ ಶೈಲಂ ನಿತ್ಯಂ ಶುಚಿಜಲಾಶ್ರಯಮ್ ॥ ೩

ತಸ್ಯ ಶೈಲಸ್ಯ ಶಿಖರೇ ಮಹತೀಮಾಯತಾಂ ಗುಹಾಮ್ ।
ಪ್ರತ್ಯಗೃಹ್ಣತ ವಾಸಾರ್ಥಂ ರಾಮಃ ಸೌಮಿತ್ರಿಣಾ ಸಹ ॥ ೪

## ಸರ್ಗ ೨೭

ಪ್ರಸ್ರವಣಗಿರಿಯಲ್ಲಿ ಶ್ರೀರಾಮನ ನಿವಾಸ. ಸೀತಾಸ್ಮರಣೆಯಿಂದ ದುಃಖ.
ಲಕ್ಷ್ಮಣನ ಸಮಾಧಾನ.

ಹೀಗೆ ಸುಗ್ರೀವನು ಪಟ್ಟಾಭಿಷಿಕ್ತನಾಗಿ (ಆ ವೃತ್ತಾಂತವನ್ನು ಶ್ರೀರಾಮನಿಗೆ ತಿಳಿಸಿ) ಕಿಷ್ಕಿಂಧೆಗೆ ಹೋಗಲು, ಇತ್ತ ಶ್ರೀರಾಮನು ತಮ್ಮನೊಡನೆ ಪ್ರಸ್ರವಣಗಿರಿಗೆ * ಬಂದನು. ಆ ಗಿರಿಯು ಶಾರ್ದೂಲಾದಿ ಹಿಂಸ್ರ ಜಂತುಗಳ ಕೂಗುಗಳಿಂದಲೂ ಸಿಂಹಗಳ ಭೀಮಗರ್ಜನೆಗಳಿಂದಲೂ ಪ್ರತಿಧ್ವನಿತವಾಗಿತ್ತು. ಬಗೆಬಗೆಯ ಪೊದೆಗಳಿಂದಲೂ ಲತೆಗಳಿಂದಲೂ ವ್ಯಾಪ್ತವಾಗಿ ವೃಕ್ಷಗಳಿಂದ ನಿಬಿಡವಾಗಿತ್ತು (೧–೨). ಅಲ್ಲಿ ಕರಡಿ, ಕಪಿ, ಗೋಲಾಂಗೂಲ, ಕಾಡುಬೆಕ್ಕುಗಳು ಸಂಚರಿಸುತ್ತಿದ್ದವು. ಆ ಶೈಲವು ಮೇಘರಾಶಿಯಂತೆ ಸದಾ ತಿಳಿನೀರಿನಂತೆ ತುಳುಕುತ್ತಿತ್ತು. ಶ್ರೀರಾಮನು ಆ ಪರ್ವತದ ಶಿಖರದಲ್ಲಿ ವಿಶಾಲವಾದ ಗುಹೆಯೊಂದನ್ನು ನೋಡಿ, ಅದರಲ್ಲಿ

* ಇದಕ್ಕೆ ಮಾಲ್ಯವಾನ್ ಎಂದು ಇನ್ನೊಂದು ಹೆಸರು. ಇದೂ ಮಲಯವೆಂಬುದೂ ಋಷ್ಯಮೂಕದ ವಿಭಿನ್ನಶಿಖರಗಳೆಂದು ಕಾಣುತ್ತದೆ.

ಕೃತ್ವಾ ಚ ಸಮಯಂ ಸೌಮ್ಯಃ ಸುಗ್ರೀವೇಣ ಸಹಾನಘಃ ।
ಕಾಲಯುಕ್ತಂ ಮಹದ್ವಾಕ್ಯಮುವಾಚ ರಘುನಂದನಃ ॥ ೫

ವಿನೀತಂ ಭ್ರಾತರಂ ಭ್ರಾತಾ ಲಕ್ಷ್ಮಣಂ ಲಕ್ಷ್ಮಿವರ್ಧನಮ್ ।
ಇಯಂ ಗಿರಿಗುಹಾ ರಮ್ಯಾ ವಿಶಾಲಾ ಯುಕ್ತಮಾರುತಾ ॥ ೬

ಅಸ್ಯಾಂ ವಸಾವ ಸೌಮಿತ್ರೇ ವರ್ಷರಾತ್ರಮರಿಂದಮ ।
ಗಿರಿಶೃಂಗಮಿದಂ ರಮ್ಯಮುನ್ನತಂ ಪಾರ್ಥಿವಾತ್ಮಜ ॥ ೭

ಶ್ವೇತಾಭಿಃ ಕೃಷ್ಣತಾಮ್ರಾಭಿಃ ಶಿಲಾಭಿರುಪಶೋಭಿತಮ್ ।
ನಾನಾಧಾತುಸಮಾಕೀರ್ಣಂ ದರೀನಿರ್ಝರಶೋಭಿತಮ್ ॥ ೮

ವಿವಿಧೈರ್ವೃಕ್ಷಷಂಡೈಶ್ಚ ಚಾರು ಚಿತ್ರಲತಾವೃತಮ್ ।
ನಾನಾವಿಹಗಸಂಘುಷ್ಟಂ ಮಯೂರರವನಾದಿತಮ್ ॥ ೯

ಮಾಲತೀಕುಂದಗುಲ್ಮೈಶ್ಚ ಸಿಂಧುವಾರಕುರಂಟಕೈಃ ।
ಕದಂಬಾರ್ಜುನಸರ್ಜೈಶ್ಚ ಪುಷ್ಪಿತೈರುಪಶೋಭಿತಮ್ ॥ ೧೦

---

ಸೌಮಿತ್ರಿಯೊಂದಿಗೆ ವಾಸಮಾಡಬೇಕೆಂದು ನಿರ್ಧರಿಸಿದನು (೩-೪). ಸೌಮ್ಯನಾದ ರಘುನಂದನನು ಸುಗ್ರೀವನೊಡನೆ ತಾನು ಮಾಡಿಕೊಂಡ ಒಪ್ಪಂದವನ್ನು ಸ್ಮರಿಸಿಕೊಂಡು, ವಿನೀತನಾಗಿ ನಿಂತಿದ್ದ ತಮ್ಮನಾದ ಲಕ್ಷ್ಮಣನನ್ನು ನೋಡಿ ಹೀಗೆಂದನು : "ತಮ್ಮ, ಈ ಗಿರಿಗುಹೆಯು ವಿಶಾಲರಮಣೀಯವಾಗಿದೆ. ಗಾಳಿಯು ಹಿತಮಿತವಾಗಿ ಬೀಸುತ್ತಿದೆ (೫-೬). ಈ ಮಳೆಗಾಲದಲ್ಲಿ ಇಲ್ಲಿ ನೆಲೆಸೋಣ. ರಾಜಪುತ್ರ, ಉನ್ನತವಾದ ಈ ಗಿರಿಶಿಖರವು ಮನೋಹರವಾಗಿದೆ. ಬಿಳುಪು ಕಪ್ಪು ಮತ್ತು ಕೆಂಪು ಶಿಲೆಗಳಿಂದ ಶೋಭಿತವಾಗಿದೆ. ವಿವಿಧ ಗೈರಿಕಧಾತುಗಳು ಇಲ್ಲಿ ತುಂಬಿವೆ. ಗವಿಗಳಿಂದಲೂ ಗಿರಿನದಿಗಳಿಂದಲೂ ಸುಂದರವಾಗಿದೆ (೭-೮). ನಾನಾಜಾತಿಯ ಮರಗಳಿಂದಲೂ ಬಣ್ಣಬಣ್ಣದ ಬಳ್ಳಿಗಳಿಂದಲೂ ಚಂದವಾಗಿದೆ. ಬಗೆಬಗೆಯ ಹಕ್ಕಿಗಳು ಕೂಗುತ್ತಿವೆ. ನವಿಲುಗಳು ಕೇಕಾಧ್ವನಿಯಿಂದ ಗಿರಿಶೃಂಗವನ್ನು ಮೊಳಗಿಸುತ್ತಿವೆ. ಜಾಜಿ, ಮಲ್ಲಿಗೆ, ಲಕ್ಕಿ, ಗೋರಂಟೆ, ಈಚಲು, ಮತ್ತಿ, ಬಂದುಗೆಗಳು

ಇಯಂ ಚ ನಲಿನೀ ರಮ್ಯಾ ಫುಲ್ಲಪಂಕಜಮಂಡಿತಾ ।
ನಾತಿದೂರೇ ಗುಹಾಯಾ ನೌ ಭವಿಷ್ಯತಿ ನೃಪಾತ್ಮಜ ॥ ೧೧

ಪ್ರಾಗುದಕ್ಪ್ರವಣೇ ದೇಶೇ ಗುಹಾ ಸಾಧು ಭವಿಷ್ಯತಿ ।
ಪಶ್ಚಾಚ್ಚೈವೋನ್ನತಾ ಸೌಮ್ಯ ನಿವಾತೇಯಂ ಭವಿಷ್ಯತಿ ॥ ೧೨

ಗುಹಾದ್ವಾರೇ ಚ ಸೌಮಿತ್ರೇ ಶಿಲಾ ಸಮತಲಾ ಶುಭಾ ।
ಶ್ಲಕ್ಷ್ಣಾ ಚೈವಾಯತಾ ಚೈವ ಭಿನ್ನಾಂಜನಚಯೋಪಮಾ ॥ ೧೩

ಗಿರಿಶೃಂಗಮಿದಂ ತಾತ ಪಶ್ಯ ಚೋತ್ತರತಃ ಶುಭಮ್ ।
ಭಿನ್ನಾಂಜನಚಯಾಕಾರಮಂಭೋಧರಮಿವೋತ್ಥಿತಮ್ ॥ ೧೪

ದಕ್ಷಿಣಸ್ಯಾಮಪಿ ದಿಶಿ ಸ್ಥಿತಂ ಶ್ವೇತಮಿವಾಂಬರಮ್ ।
ಕೈಲಾಸಶಿಖರಪ್ರಖ್ಯಂ ನಾನಾಧಾತುವಿಭೂಷಿತಮ್ ॥ ೧೫

ಪ್ರಾಚೀನವಾಹಿನೀಂ ಚೈವ ನದೀಂ ಭೃಶಮಕರ್ದಮಾಮ್ ।
ಗುಹಾಯಾಃ ಪೂರ್ವತಃ ಪಶ್ಯ ತ್ರಿಕೂಟೇ ಜಾಹ್ನವೀಮಿವ ॥ ೧೬

---

ಅರಳಿವೆ (೯–೧೦). ಅರಳಿದ ತಾವರೆಗಳಿಂದ ಮಂಡಿತವಾದ ಈ ಸರೋವರವು ರಮ್ಯವಾಗಿದೆ. ಲಕ್ಷ್ಮಣ, ಇದು ನಮ್ಮ ಗುಹೆಗೆ ಹತ್ತಿರದಲ್ಲಿಯೇ ಇದ್ದಂತಾಗುವುದು. ಈ ಗುಹೆಯು ಈಶಾನ್ಯ ದಿಕ್ಕಿನಲ್ಲಿ ಇಳಿಜಾರಾಗಿ ಹಿಂಭಾಗದಲ್ಲಿ ಉನ್ನತವಾಗಿರುವುದರಿಂದ ಒಳ್ಳೆಯದೇ ಆಯಿತು. ಮಳೆಗಾಳಿಯು ಹೊಡೆತವಿರುವುದಿಲ್ಲ (೧೧–೧೨). ಗುಹಾದ್ವಾರದಲ್ಲಿರುವ ಶಿಲೆಯು ಸಮತಳವಾಗಿ ನುಣುಪಾಗಿದೆ. ಇದು ವಿಶಾಲವಾಗಿಯೂ ಇದೆ. ಈ ಶಿಲೆಯು ಕಾಡಿಗೆಯನ್ನು ಬಳಿದಂತೆ ಎಷ್ಟು ಕಪ್ಪಾಗಿದೆ, ನೋಡು! ವತ್ಸ, ಉತ್ತರ ದಿಕ್ಕಿನಲ್ಲಿ ಕಾಣುವ ಈ ಗಿರಿಶಿಖರವನ್ನು ವೀಕ್ಷಿಸು. ಕಾಡಿಗೆಯ ರಾಶಿಯಂತಿರುವ ಈ ಶಿಖರವು ಮೇಲೆದ್ದು ಬಂದ ಮೇಘವೋ ಎಂಬಂತಿದೆ! (೧೩–೧೪). ದಕ್ಷಿಣ ದಿಕ್ಕಿನಲ್ಲಿರುವ ಆ ಶಿಖರವನ್ನು ನೋಡು, ಲಕ್ಷ್ಮಣ! ಬಿಳಿಯ ಬಟ್ಟೆಯನ್ನು ಹರಡಿದಂತಿದೆ. ಕೈಲಾಸಶಿಖರದಂತಿದೆ. ನಾನಾಧಾತುಗಳಿಂದ ಭೂಷಿತವಾಗಿದೆ ಗುಹೆಯ ಪೂರ್ವದಲ್ಲಿ ಪೂರ್ವಾಭಿಮುಖವಾಗಿ ಹರಿಯುವ ನದಿಯನ್ನು ನೋಡಿದೆಯಾ? ಅದರಲ್ಲಿ ಕೆಸರೇ ಇಲ್ಲ! ಆ ನದಿಯು ತ್ರಿಕೂಟದಲ್ಲಿ

*

ಚಂಪಕೈಸ್ತಿಲಕೈಸ್ತಾಲೈಸ್ತಮಾಲೈರತಿಮುಕ್ತಕೈಃ ।
ಪದ್ಮಕೈಃ ಸರಲೈಶ್ಚೈವ ಅಶೋಕೈಶ್ಚೈವ ಶೋಭಿತಾಮ್ ॥ ೧೭

ವಾನೀರೈಸ್ತಿನಿಶೈಶ್ಚೈವ ವಕುಲೈಃ ಕೇತಕೈರ್ಧವೈಃ ।
ಹಿಂತಾಲೈಸ್ತಿರಿಟೈರ್ನೀಪೈರ್ವೇತ್ರಕೈಃ ಕೃತಮಾಲಕೈಃ ॥ ೧೮

ತೀರಜೈಃ ಶೋಭಿತಾ ಭಾತಿ ನಾನಾರೂಪೈಸ್ತತಸ್ತತಃ ।
ವಸನಾಭರಣೋಪೇತಾ ಪ್ರಮದೇವಾಭ್ಯಲಂಕೃತಾ ॥ ೧೯

ಶತಶಃ ಪಕ್ಷಿಸಂಘೈಶ್ಚ ನಾನಾನಾದೈರ್ವಿನಾದಿತಾ ।
ಅನ್ಯೋನ್ಯಮತಿರಕ್ತೈಶ್ಚ ಚಕ್ರವಾಕೈರಲಂಕೃತಾ ॥ ೨೦

ಪುಲಿನೈರತಿರಮ್ಯೈಶ್ಚ ಹಂಸಸಾರಸಸೇವಿತೈಃ ।
ಪ್ರಹಸಂತೀವ ಭಾತ್ಯೇಷಾ ನಾರೀ ಸರ್ವವಿಭೂಷಿತಾ ॥ ೨೧

ಕ್ವಚಿನ್ನೀಲೋತ್ಪಲೈಶ್ಛನ್ನಾ ಭಾತಿ ರಕ್ತೋತ್ಪಲೈಃ ಕ್ವಚಿತ್ ।
ಕ್ವಚಿದಾಭಾತಿ ಶುಕ್ಲೈಶ್ಚ ದಿವ್ಯೈಃ ಕುಮುದಕುಡ್ಮಲೈಃ ॥ ೨೨

---

ಹರಿಯುವ ಗಂಗೆಯಂತೆ ಕಾಣುತ್ತದೆ (೧೫-೧೬). ಚಂಪಕ, ತಿಲಕ, ತಾಲ, ತಮಾಲ, ಅತಿಮುಕ್ತಕ, ಪದ್ಮಪರ್ಣ, ಸರಳ, ಅಶೋಕಾದಿವೃಕ್ಷಗಳಿಂದ ವಿರಾಜಿಸುತ್ತಿದೆ. ವಾನೀರ, ತಿನಿಶ, ಬಕುಳ, ಕೇತಕ, ಧವ, ಹಿಂತಾಳ, ತಿರಿಟ, ವೇತ್ರಕಗಳು ಪುಷ್ಪಮಾಲೆಗಳಿಂದ ಶೋಭಿಸುತ್ತಿವೆ. ಈ ನದಿಯು ತೀರದಲ್ಲಿ ಬೆಳೆದ ವಿವಿಧ ಪುಷ್ಪಿತತರುಗಳಿಂದ ಯುಕ್ತವಾಗಿ, ವಸ್ತ್ರಾಭರಣ ಗಳಿಂದ ಭೂಷಿತಳಾದ ತರುಣಿಯಂತೆ ಕಂಗೊಳಿಸುತ್ತಿದೆ (೧೭-೧೯). ಹಕ್ಕಿಗಳ ಹಿಂಡು ವಿವಿಧ ಧ್ವನಿಯಲ್ಲಿ ಚಿಲಿಪಿಲಿಗುಟ್ಟುತ್ತಿದೆ. ಅನ್ಯೋನ್ಯಪ್ರೇಮದಿಂದ ಚಕ್ರವಾಕದಂಪತಿಗಳು ವಿಹರಿಸುತ್ತಿವೆ ಹಂಸಸಾರಸಗಳು ನಲಿದಾಡುವ ಮನೋಜ್ಞ ಪುಲಿನಗಳಿಂದೊಪ್ಪುವ ಈ ನದಿಯನ್ನು ನೋಡಿದರೆ, ಸಿಂಗರಿಸಿ ಕೊಂಡ ಯುವತಿಯೊಬ್ಬಳು ನಗುತ್ತಿರುವಂತೆ ಭಾಸವಾಗುತ್ತದೆ! (೨೦-೨೧). ಒಂದು ಕಡೆ ನೀಲೋತ್ಪಲಗಳಿದ್ದರೆ, ಇನ್ನೊಂದೆಡೆ ರಕ್ತೋತ್ಪಲಗಳು ಅರಳಿವೆ. ಮತ್ತೊಂದೆಡೆ ದಿವ್ಯವಾದ ಬಿಳಿಯ ಕುಮುದ ಕುಡ್ಮಲಗಳು ವಿರಾಜಿಸುತ್ತಿವೆ.

ಪಾರಿಪ್ಲವಶತೈರ್ಜುಷ್ಟಾ ಬರ್ಹಿಣಕ್ರೌಂಚನಾದಿತಾ ।
ರಮಣೀಯಾ ನದೀ ಸೌಮ್ಯ ಮುನಿಸಂಘೈರ್ನಿಷೇವಿತಾ ॥ ೨೩

ಪಶ್ಯ ಚಂದನವೃಕ್ಷಾಣಾಂ ಪಂಕ್ತೀಃ ಸುರಚಿತಾ ಇವ ।
ಕಕುಭಾನಾಂ ಚ ದೃಶ್ಯಂತೇ ಮನಸೇವೋದಿತಾಃ ಸಮಮ್ ॥ ೨೪

ಅಹೋ ಸುರಮಣೀಯೋಽಯಂ ದೇಶಃ ಶತ್ರುನಿಷೂದನ ।
ದೃಢಂ ರಂಸ್ಯಾವ ಸೌಮಿತ್ರೇ ಸಾಧ್ವತ್ರ ನಿವಸಾವಹೈ ॥ ೨೫

ಇತಶ್ಚ ನಾತಿದೂರೇ ಸಾ ಕಿಷ್ಕಿಂಧಾ ಚಿತ್ರಕಾನನಾ ।
ಸುಗ್ರೀವಸ್ಯ ಪುರೀ ರಮ್ಯಾ ಭವಿಷ್ಯತಿ ನೃಪಾತ್ಮಜ ॥ ೨೬

ಗೀತವಾದಿತ್ರನಿರ್ಘೋಷಃ ಶ್ರೂಯತೇ ಜಯತಾಂ ವರ ।
ನರ್ದತಾಂ ವಾನರಾಣಾಂ ಚ ಮೃದಂಗಾಡಂಬರೈಃ ಸಹ ॥ ೨೭

ಲಬ್ಧ್ವಾ ಭಾರ್ಯಾಂ ಕಪಿವರಃ ಪ್ರಾಪ್ಯ ರಾಜ್ಯಂ ಸುಹೃದ್ವೃತಃ ।
ಧ್ರುವಂ ನಂದತಿ ಸುಗ್ರೀವಃ ಸಂಪ್ರಾಪ್ಯ ಮಹತೀಂ ಶ್ರಿಯಮ್ ॥ ೨೮

---

ನದಿಯಲ್ಲಿ ನೂರಾರು ನೀರುಹಕ್ಕಿಗಳು ಹಾರಾಡುತ್ತಿವೆ. ನವಿಲು ಮತ್ತು ಕ್ರೌಂಚಗಳ ಇಂಚರವು ಮೊಳಗುತ್ತಿದೆ. ಸೌಮ್ಯ–ಲಕ್ಷ್ಮಣ, ಮಹರ್ಷಿ ಸೇವಿತವಾದ ಈ ನದಿಯು ರಮಣೀಯವಾಗಿದೆ (೨೨–೨೩). ಈ ಚಂದನ ವೃಕ್ಷಗಳ ಸಾಲನ್ನು ನೋಡು. ಒಂದಕ್ಕೊಂದು ಜೋಡಿಸಿಟ್ಟಂತೆ ಹೇಗೆ ಸಾಲಾಗಿ ಬೆಳೆದಿವೆ! ಈ ಕೆಂಪು ಮತ್ತಿಗಿಡಗಳೋ! ಮನಸ್ಸಂಕಲ್ಪದಿಂದಲೇ ನಿರ್ಮಿಸಿದಂತೆ ಎಷ್ಟು ಅಚ್ಚುಕಟ್ಟಾಗಿ ಬೆಳೆದಿವೆ, ನೋಡು! (೨೪). ಆಹಾ! ಲಕ್ಷ್ಮಣ, ಅತಿಮನೋಹರವಾದ ಸ್ಥಳವಿದು! ಇಲ್ಲಿ ಆನಂದದಿಂದಿರಬಹುದು. ಇಲ್ಲಿಯೇ ಇರೋಣ, ಲಕ್ಷ್ಮಣ ಸುಗ್ರೀವನ ಕಿಷ್ಕಿಂಧೆಯೂ ಹೆಚ್ಚು ದೂರ ವಿಲ್ಲ. ಚಿತ್ರಕಾನನಗಳಿಂದ ರಮ್ಯವಾದ ಅವನ ಪಟ್ಟಣವು ಸಮೀಪದಲ್ಲಿದೆ (೨೫–೨೬). ಆಗೊ! ಅಲ್ಲಿ ನಡೆಯುವ ಗೀತವಾದ್ಯಗಳ ಘೋಷವು ಕೇಳಿಸುತ್ತಿದೆ. ಮೃದಂಗವನ್ನು ಬಾರಿಸುತ್ತ ಕೇಕೆಹಾಕುವ ಕಪಿಗಳ ಕೂಗು ಕಿವಿಗೆ ಬೀಳುತ್ತಿದೆ. ಕಪಿಶ್ರೇಷ್ಠನಾದ ಸುಗ್ರೀವನು ತನ್ನ ಮಡದಿಯನ್ನೂ ರಾಜ್ಯವನ್ನೂ ಪಡೆದಿದ್ದಾನೆ. ಅವನು ಮಹಾಭಾಗ್ಯವು ಲಭಿಸಿತೆಂದು ಮಿತ್ರ ಪರಿವೃತನಾಗಿ ನಲಿಯುತ್ತಿರುವುದರಲ್ಲಿ ಸಂದೇಹವಿಲ್ಲ" ಎಂದು ಹೇಳಿದನು

**ಇತ್ಯುಕ್ತ್ವಾ ನ್ಯವಸತ್ತತ್ರ ರಾಘವಃ ಸಹಲಕ್ಷ್ಮಣಃ ।**
**ಬಹುದೃಶ್ಯದರೀಕುಂಜೇ ತಸ್ಮಿನ್ ಪ್ರಸ್ರವಣೇ ಗಿರೌ ॥** ೨೯

**ಸುಸುಖೇಽಪಿ ಬಹುದ್ರವ್ಯೇ ತಸ್ಮಿನ್ ಹಿ ಧರಣೀಧರೇ ।**
**ವಸತಸ್ತಸ್ಯ ರಾಮಸ್ಯ ರತಿರಲ್ಪಾಪಿ ನಾಭವತ್ ॥** ೩೦

**ಹೃತಾಂ ಹಿ ಭಾರ್ಯಾಂ ಸ್ಮರತಃ ಪ್ರಾಣೇಭ್ಯೋಽಪಿ ಗರೀಯಸೀಮ್ ।**
**ಉದಯಾಭ್ಯುದಿತಂ ದೃಷ್ಟ್ವಾ ಶಶಾಂಕಂ ಚ ವಿಶೇಷತಃ ॥** ೩೧

**ಆವಿವೇಶ ನ ತಂ ನಿದ್ರಾ ನಿಶಾಸು ಶಯನಂ ಗತಮ್ ।**
**ತತ್ಸಮುತ್ಥೇನ ಶೋಕೇನ ಬಾಷ್ಪೋಪಹತಚೇತಸಮ್ ॥** ೩೨

**ತಂ ಶೋಚಮಾನಂ ಕಾಕುತ್ಸ್ಥಂ ನಿತ್ಯಂ ಶೋಕಪರಾಯಣಮ್ ।**
**ತುಲ್ಯದುಃಖೋಽಬ್ರವೀದ್ಭ್ರಾತಾ ಲಕ್ಷ್ಮಣೋಽನುನಯನ್ ವಚಃ ॥**

**ಅಲಂ ವೀರ ವ್ಯಥಾಂ ಗತ್ವಾ ನ ತ್ವಂ ಶೋಚಿತುಮರ್ಹಸಿ ।**
**ಶೋಚತೋ ವ್ಯವಸೀದಂತಿ ಸರ್ವಾರ್ಥಾ ವಿದಿತಂ ಹಿ ತೇ ॥** ೩೪

---

(೨೭–೨೮). ಹೀಗೆ ನುಡಿದು ರಘುನಾಥನು ಆ ಗುಹೆಯಲ್ಲಿ ಲಕ್ಷ್ಮಣ ಸಮೇತನಾಗಿ ವಾಸವಾಗಿದ್ದನು ಪ್ರಸ್ರವಣಗಿರಿಯಲ್ಲಿ ದರ್ಶನೀಯವಾದ ದರಿಗಳೂ ಲತಾಕುಂಜಗಳೂ ಇದ್ದವು. ಸೌಖ್ಯದಿಂದಿರಲು ಬೇಕಾದ ಫಲಮೂಲಾದಿ ವಸ್ತುಗಳಿದ್ದವು. ಆದರೂ ಅಲ್ಲಿ ವಾಸವಾಗಿದ್ದ ಶ್ರೀರಾಮನ ಮನಸ್ಸಿಗೆ ಸ್ವಲ್ಪವೂ ಗೆಲವು ದೊರೆಯಲಿಲ್ಲ (೨೯–೩೦). ಪ್ರಾಣಪ್ರಿಯಳಾದ ಪತ್ನಿಯು ಅಪಹೃತಳಾದಳೆಂಬ ಸ್ಮರಣೆಯೊಂದೇ ಮನಸ್ಸಿನಲ್ಲಿ ನೆಟ್ಟಿದ್ದಿತು ಉದಯಾಚಲದಲ್ಲಿ ಉದಯಿಸಿ ಮೇಲೇರುವ ಚಂದ್ರನನ್ನು ಕಂಡಾಗಲಂತೂ ಅವನ ವಿರಹ ತಾಪವು ಅಸದಳವಾಗುತ್ತಿತ್ತು. ರಾತ್ರಿಯಲ್ಲಿ ಮಲಗಿದಾಗ ಶ್ರೀರಾಮನಿಗೆ ನಿದ್ರೆಯೇ ಬರುತ್ತಿರಲಿಲ್ಲ. ಸೀತಾಸ್ಮರಣೆಯಿಂದ ಶೋಕಾವೇಶವಾಗಿ ಕಂಬನಿ ಹರಿದು ಚಿತ್ತವು ಚಿಂತಾವೃತವಾಗುತ್ತಿತ್ತು (೩೧–೩೨). ಹೀಗೆ ಅಹೋರಾತ್ರವೂ ಶೋಕಪರಾಯಣನಾಗಿ ಪರಿತಪಿಸುತ್ತಿದ್ದ ಕಾಕುತ್ಸ್ಥನನ್ನು ಕಂಡು ತಮ್ಮನಾದ ಲಕ್ಷ್ಮಣನೂ ಅವನಂತೆಯೇ ದುಃಖಿತನಾಗಿದ್ದನು. ಅವನು ಶ್ರೀರಾಮನನ್ನು ಸಂತೈಸುತ್ತ "ಅಣ್ಣ, ವಿಷಾದಿಸಬೇಡ. ನೀನು ಹೀಗೆ ಶೋಕಿಸುವುದು ತರವಲ್ಲ. ಮನುಷ್ಯನು ಶೋಕಾಧೀನನಾದರೆ ಸಕಲ

ಭವಾನ್ ಕ್ರಿಯಾಪರೋ ಲೋಕೇ ಭವಾನ್ ದೈವಪರಾಯಣಃ ।
ಆಸ್ತಿಕೋ ಧರ್ಮಶೀಲಶ್ಚ ವ್ಯವಸಾಯೀ ಚ ರಾಘವ ॥ ೩೫

ನ ಹ್ಯವ್ಯವಸಿತಃ ಶತ್ರುಂ ರಾಕ್ಷಸಂ ತಂ ವಿಶೇಷತಃ ।
ಸಮರ್ಥಸ್ತ್ವಂ ರಣೇ ಹಂತುಂ ವಿಕ್ರಮೈರ್ಜಿಹ್ಮಕಾರಿಣಮ್ ॥ ೩೬

ಸಮುನ್ಮೂಲಯ ಶೋಕಂ ತ್ವಂ ವ್ಯವಸಾಯಂ ಸ್ಥಿರಂ ಕುರು ।
ತತಃ ಸಪರಿವಾರಂ ತಂ ನಿರ್ಮೂಲಂ ಕುರು ರಾಕ್ಷಸಮ್ ॥ ೩೭

ಪೃಥಿವೀಮಪಿ ಕಾಕುತ್ಸ್ಥ ಸಸಾಗರವನಾಚಲಾಮ್ ।
ಪರಿವರ್ತಯಿತುಂ ಶಕ್ತಃ ಕಿಂ ಪುನಸ್ತಂ ಹಿ ರಾವಣಮ್ ॥ ೩೮

ಶರತ್ಕಾಲಂ ಪ್ರತೀಕ್ಷಸ್ವ ಪ್ರಾವೃಟ್ಕಾಲೋಽಯಮಾಗತಃ ।
ತತಃ ಸರಾಷ್ಟ್ರಂ ಸಗಣಂ ರಾವಣಂ ತ್ವಂ ವಧಿಷ್ಯಸಿ ॥ ೩೯

ಅಹಂ ತು ಖಲು ತೇ ವೀರ್ಯಂ ಪ್ರಸುಪ್ತಂ ಪ್ರತಿಬೋಧಯೇ ।
ದೀಪ್ತೈರಾಹುತಿಭಿಃ ಕಾಲೇ ಭಸ್ಮಚ್ಛನ್ನಮಿವಾನಲಮ್ ॥ ೪೦

---

ಕಾರ್ಯಗಳೂ ಕುಂಠಿತವಾಗುತ್ತವೆ. ಇದೆಲ್ಲವೂ ನಿನಗೆ ತಿಳಿದುದೇ ಸರಿ (೩೩-೩೪). ನೀನು ಕರ್ತವ್ಯಶೀಲನೂ ದೈವವನ್ನು ನಂಬಿದವನೂ ಆಗಿದ್ದೀಯೆ. ಆಸ್ತಿಕತೆಯೂ ಧರ್ಮಶೀಲತೆಯೂ ನಿನ್ನಲ್ಲಿ ನೆಲೆಸಿವೆ. ಉದ್ಯೋಗತತ್ಪರನಾದವನು ನೀನು. ಉದ್ಯೋಗಪರನಾಗದೆ, ಶತ್ರುವಾದ ಆ ರಾಕ್ಷಸನನ್ನು ಕೊಲ್ಲಲು ಸಾಧ್ಯವಾದೀತೆ? ವಂಚಕನಾದ ಆ ವೈರಿಯನ್ನು ರಣರಂಗದಲ್ಲಿ ನಿನ್ನ ಪರಾಕ್ರಮದಿಂದ ವಧಿಸಬೇಕಾದರೆ, ನೀನು ಎದೆಗುಂದಿದರೆ ಆದೀತೆ? (೩೫-೩೬). ಶ್ರೀರಾಮ, ಈ ಶೋಕವನ್ನು ಬದಿಗೊತ್ತಿ ಅಚಲ ನಿರ್ಧಾರವನ್ನು ಕೈಗೊಳ್ಳು. ಆಮೇಲೆ ಆ ರಾಕ್ಷಸನನ್ನು ಅವನ ಪರಿವಾರ ಸಮೇತವಾಗಿ ನಿರ್ನಾಮಗೊಳಿಸಬಹುದು. ಈ ಸಾಗರ ವನ ಪರ್ವತಗಳೊಡನೆ ಪೃಥ್ವಿಯನ್ನೇ ತಲೆಕೆಳಗುಮಾಡುವ ಸಾಮರ್ಥ್ಯ ನಿನ್ನಲ್ಲಿದೆ. ಆ ರಾವಣನನ್ನು ಯಾರು ಕೇಳಬೇಕು! (೩೭-೩೮). ಈಗ ಮಳೆಗಾಲವಾಗಿದೆ. ಶರತ್ಕಾಲವು ಬರುವವರೆಗೆ ತಾಳ್ಮೆಯಿಂದಿರು ಅನಂತರ ರಾವಣನನ್ನೂ ಅವನ ರಾಷ್ಟ್ರಪರಿವಾರಗಳನ್ನೂ ಹುಟ್ಟಡಗಿಸಬಹುದು. ನಿನ್ನಲ್ಲಡಗಿರುವ ಶೌರ್ಯವನ್ನು ನಾನು ಕೇವಲ ಜ್ಞಾಪಿಸುತ್ತಿದ್ದೇನೆ. ಬೂದಿಯಲ್ಲಿ ಮರೆಯಾಗಿರುವ

ಲಕ್ಷ್ಮಣಸ್ಯ ತು ತದ್ವಾಕ್ಯಂ ಪ್ರತಿಪೂಜ್ಯ ಹಿತಂ ಶುಭಮ್ ।
ರಾಘವಃ ಸುಹೃದಂ ಸ್ನಿಗ್ಧಮಿದಂ ವಚನಮಬ್ರವೀತ್ ॥ ೪೧

ವಾಚ್ಯಂ ಯದನುರಕ್ತೇನ ಸ್ನಿಗ್ಧೇನ ಚ ಹಿತೇನ ಚ ।
ಸತ್ಯವಿಕ್ರಮಯುಕ್ತೇನ ತದುಕ್ತಂ ಲಕ್ಷ್ಮಣ ತ್ವಯಾ ॥ ೪೨

ಏಷ ಶೋಕಃ ಪರಿತ್ಯಕ್ತಃ ಸರ್ವಕಾರ್ಯಾವಸಾದಕಃ ।
ವಿಕ್ರಮೇಷ್ವಪ್ರತಿಹತಂ ತೇಜಃ ಪ್ರೋತ್ಸಾಹಯಾಮ್ಯಹಮ್ ॥ ೪೩

ಶರತ್ಕಾಲಂ ಪ್ರತೀಕ್ಷಿಷ್ಯೇ ಸ್ಥಿತೋಽಸ್ಮಿ ವಚನೇ ತವ ।
ಸುಗ್ರೀವಸ್ಯ ನದೀನಾಂ ಚ ಪ್ರಸಾದಮನುಪಾಲಯನ್ ॥ ೪೪

ಉಪಕಾರೇಣ ವೀರಸ್ತು ಪ್ರತಿಕಾರೇಣ ಯುಜ್ಯತೇ ।
ಅಕೃತಜ್ಞೋಽಪ್ರತಿಕೃತೋ ಹಂತಿ ಸತ್ತ್ವವತಾಂ ಮನಃ ॥ ೪೫

ಅಥೈವಮುಕ್ತಃ ಪ್ರಣಿಧಾಯ ಲಕ್ಷ್ಮಣಃ
ಕೃತಾಂಜಲಿಸ್ತತ್ಪ್ರತಿಪೂಜ್ಯ ಭಾಷಿತಮ್ ।

---

ಅಗ್ನಿಯನ್ನು ಉದ್ದೀಪಕಗಳಾದ ಆಜ್ಯಾಹುತಿಗಳಿಂದ ಕೆರಳಿಸುವಂತೆ, ನಿನ್ನ ಸಾಮರ್ಥ್ಯವನ್ನು ಕೆದಕುತ್ತಿದ್ದೇನೆ!" ಎಂದು ನುಡಿದನು (೩೯-೪೦). ಲಕ್ಷ್ಮಣ ನಾಡಿದ ನುಡಿಯು ಹಿತಕರವಾದುದೆಂದು ಶ್ರೀರಾಮನು ಮೆಚ್ಚಿದನು. ಅವನು ಶುದ್ಧಹೃದಯನಾದ ಲಕ್ಷ್ಮಣನನ್ನು ಅಭಿನಂದಿಸಿ ಪ್ರೀತಿಪೂರ್ವಕವಾಗಿ "ತಮ್ಮ, ಅನುರಕ್ತನೂ ಹಿತಕಾರಿಯೂ ಸತ್ಯಪರಾಕ್ರಮನೂ ಆದ ಮಿತ್ರನು ಹೇಳತಕ್ಕ ಮಾತನ್ನೇ ನೀನು ಹೇಳಿದ್ದೀಯೆ (೪೧-೪೨). ಇದೋ, ಈ ಶೋಕವನ್ನು ಪರಿತ್ಯಜಿಸಿದೆನು! ಸಕಲ ಕಾರ್ಯಗಳನ್ನೂ ಹಾಳುಮಾಡ ತಕ್ಕದ್ದಿದು! ಪರಾಕ್ರಮಪ್ರಸಂಗದಲ್ಲಿ ಅಪ್ರತಿಹತವಾದ ನನ್ನ ತೇಜಸ್ಸನ್ನು ಉದ್ದೀಪನಗೊಳಿಸುವೆನು! ನೀನು ಹೇಳಿದಂತೆ, ಶರತ್ಕಾಲವು ಬರುವುದನ್ನು ಕಾಯುತ್ತಿರುವೆನು. ಸುಗ್ರೀವನ ಅನುಗ್ರಹವನ್ನೂ ನದಿಗಳ ಪ್ರಸನ್ನತೆ ಯನ್ನೂ ನಿರೀಕ್ಷಿಸುತ್ತಿರುವೆನು (೪೩-೪೪). ಉಪಕಾರವನ್ನು ಪಡೆದ ವೀರನು ಪ್ರತ್ಯುಪಕಾರವನ್ನು ಮಾಡುತ್ತಾನೆ. ಪ್ರತ್ಯುಪಕಾರವನ್ನು ಮಾಡದ ಕೃತಘ್ನನು ಮಹಾತ್ಮರ ಮನಸ್ಸನ್ನು ನೋಯಿಸುತ್ತಾನೆ" ಎಂದು ಹೇಳಿದನು (೪೫) ಶ್ರೀರಾಮನ ಹೇಳಿಕೆಯನ್ನು ಆಲಿಸುತ್ತಿದ್ದ ಲಕ್ಷ್ಮಣನು

ಉವಾಚ ರಾಮಂ ಸ್ವಭಿರಾಮದರ್ಶನಂ
ಪ್ರದರ್ಶಯನ್ ದರ್ಶನಮಾತ್ಮನಃ ಶುಭಮ್ ॥ ೪೬

ಯಥೋಕ್ತಮೇತತ್ತವ ಸರ್ವಮೀಪ್ಸಿತಂ
ನರೇಂದ್ರ ಕರ್ತಾ ನ ಚಿರಾದ್ಧರೀಶ್ವರಃ ।
ಶರತ್ಪ್ರತೀಕ್ಷಃ ಕ್ಷಮತಾಮಿಮಂ ಭವಾನ್
ಜಲಪ್ರಪಾತಂ ರಿಪುನಿಗ್ರಹೇ ಧೃತಃ ॥ ೪೭

ನಿಯಮ್ಯ ಕೋಪಂ ಪ್ರತಿಪಾಲ್ಯತಾಂ ಶರತ್
ಕ್ಷಮಸ್ವ ಮಾಸಾಂಶ್ಚತುರೋ ಮಯಾ ಸಹ ।
ವಸಾಚಲೇಽಸ್ಮಿನ್ ಮೃಗರಾಜಸೇವಿತೇ
ಸಂವರ್ಧಯನ್ ಶತ್ರುವಧೇ ಸಮುದ್ಯಮಮ್ ॥ ೪೮

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಸಪ್ತವಿಂಶಃ ಸರ್ಗಃ



ಅವನ ಮಾತನ್ನು ಅಭಿನಂದಿಸಿದನು. ಪ್ರಸನ್ನನಾದ ಶ್ರೀರಾಮನಿಗೆ ಕೈಮುಗಿದು ತನ್ನ ಅಭಿಪ್ರಾಯವನ್ನು ತಿಳಿಸುತ್ತ "ಅಣ್ಣ, ನೀನು ಹೇಳಿದುದು ಸರಿ. ವಾನರೇಂದ್ರನಾದ ಸುಗ್ರೀವನು ನಿನ್ನ ಅಭೀಷ್ಟವನ್ನು ನೆರವೇರಿಸಿಕೊಡುವನು. ಶರತ್ಕಾಲವನ್ನು ಪ್ರತೀಕ್ಷಿಸುತ್ತ ಈ ಮಳೆಗಾಲವನ್ನು ಸಹಿಸಿಕೊಂಡಿರು. ಶತ್ರುವನ್ನು ನಿಗ್ರಹಿಸಬೇಕೆಂದು ದೃಢನಿಶ್ಚಯನಾಗಿರು (೪೬-೪೭). ಕೋಪವನ್ನು ತಡೆದುಕೊಂಡು ಶರತ್ಕಾಲವನ್ನು ಕಾಯುತ್ತಿರು. ಈ ಬೆಟ್ಟದಲ್ಲಿ ನಾವಿಬ್ಬರು ನಾಲ್ಕು ತಿಂಗಳವರೆಗೆ ಇರೋಣ. ಸಿಂಹ ಸಂಸೇವಿತವಾದ ಈ ಗಿರಿಯಲ್ಲಿ, ಶತ್ರುಸಂಹಾರಮಾಡಲು ಉದ್ಯಮವನ್ನು ತೀವ್ರಗೊಳಿಸು" ಎಂದನು (೪೮).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಇಪ್ಪತ್ತೇಳನೆಯ ಸರ್ಗ



## ಅಷ್ಟಾವಿಂಶಃ ಸರ್ಗಃ

### ಪ್ರಾವೃಡುಜ್ಜೃಂಭಣಮ್

ಸ ತಥಾ ವಾಲಿನಂ ಹತ್ವಾ ಸುಗ್ರೀವಮಭಿಷಿಚ್ಯ ಚ ।
ವಸನ್ ಮಾಲ್ಯವತಃ ಪೃಷ್ಠೇ ರಾಮೋ ಲಕ್ಷ್ಮಣಮಬ್ರವೀತ್ ॥ ೧

ಅಯಂ ಸ ಕಾಲಃ ಸಂಪ್ರಾಪ್ತಃ ಸಮಯೋಽದ್ಯ ಜಲಾಗಮಃ ।
ಸಂಪಶ್ಯ ತ್ವಂ ನಭೋ ಮೇಘೈಃ ಸಂವೃತಂ ಗಿರಿಸಂನಿಭೈಃ ॥ ೨

ನವಮಾಸಧೃತಂ ಗರ್ಭಂ ಭಾಸ್ಕರಸ್ಯ ಗಭಸ್ತಿಭಿಃ ।
ಪೀತ್ವಾ ರಸಂ ಸಮುದ್ರಾಣಾಂ ದ್ಯೌಃ ಪ್ರಸೂತೇ ರಸಾಯನಮ್ ॥ ೩

ಶಕ್ಯಮಂಬರಮಾರುಹ್ಯ ಮೇಘಸೋಪಾನಪಂಕ್ತಿಭಿಃ ।
ಕುಟಜಾರ್ಜುನಮಾಲಾಭಿರಲಂಕರ್ತುಂ ದಿವಾಕರಮ್ ॥ ೪

## ಸರ್ಗ ೨೮

### ಮಳೆಗಾಲದ ವಿಜೃಂಭಣೆ.

ಈ ಪ್ರಕಾರವಾಗಿ ಶ್ರೀರಾಮನು ವಾಲಿಯನ್ನು ವಧಿಸಿ, ಸುಗ್ರೀವನಿಗೆ ಪಟ್ಟಾಭಿಷೇಕ ಮಾಡಿಸಿ ಮಾಲ್ಯವತ್ಪರ್ವತದ ಮೇಲೆ ವಾಸವಾಗಿದ್ದನು. ಒಂದು ದಿನ ಲಕ್ಷ್ಮಣನನ್ನು ನೋಡಿ ರಾಘವನು ಹೀಗೆಂದನು: "ವತ್ಸ, ಆ ಸಮಯವು ಬಂದೇ ಬಿಟ್ಟಿತು. ಈಗ ಮಳೆಗಾಲ. ಪರ್ವತಾಕಾರದ ಮೋಡಗಳು ಆಕಾಶದಲ್ಲಿ ವ್ಯಾಪಿಸಿರುವುದನ್ನು ನೋಡು! (೧-೨). ಗಗನಾಂಗನೆಯು ಸೂರ್ಯಕಿರಣಗಳ ಮೂಲಕ ಸಮುದ್ರದ ರಸವನ್ನು ಹೀರಿ, ನವಮಾಸ ಪರ್ಯಂತ ಗರ್ಭವನ್ನು ಧರಿಸಿ, ಈಗ ರಸಾಯನವನ್ನು* ಹಡೆಯುತ್ತಿದ್ದಾಳೆ! (೩). ಮೋಡದ ಪದರದ ಸೋಪಾನಪಂಕ್ತಿಗಳಿಂದ ಆಕಾಶದಲ್ಲಿ ಹತ್ತಿಹೋಗಿ, ಗಿರಿಮಲ್ಲಿಗೆ ಮತ್ತು ಅರ್ಜುನಪುಷ್ಪದ ಮಾಲೆಗಳಿಂದ ಸೂರ್ಯನನ್ನು

* ರಸಾಯನ=ಜೀವನಾಧಾರವಾದ ವಸ್ತು. ಲೋಕದಲ್ಲಿ ನಡೆಯುವ ಸ್ತ್ರೀವೃತ್ತವು ಇಲ್ಲಿ ಸೂಚಿತವಾಗುವುದರಿಂದ ಸಮಾಸೋಕ್ತಿಯೆಂಬ ಅಲಂಕಾರ.

ಸಂಧ್ಯಾರಾಗೋತ್ಥಿತೈಸ್ತಾಮ್ರೈರಂತೇಷ್ವಧಿಕಪಾಂಡರೈಃ ।
ಸ್ನಿಗ್ಧೈರಭ್ರಪಟಚ್ಛೇದೈರ್ಬದ್ಧವ್ರಣಮಿವಾಂಬರಮ್ ॥ ೫

ಮಂದಮಾರುತನಿಃಶ್ವಾಸಂ ಸಂಧ್ಯಾಚಂದನರಂಜಿತಮ್ ।
ಆಪಾಂಡುಜಲದಂ ಭಾತಿ ಕಾಮಾತುರಮಿವಾಂಬರಮ್ ॥ ೬

ಏಷಾ ಘರ್ಮಪರಿಕ್ಲಿಷ್ಟಾ ನವವಾರಿಪರಿಪ್ಲುತಾ ।
ಸೀತೇವ ಶೋಕಸಂತಪ್ತಾ ಮಹೀ ಬಾಷ್ಪಂ ವಿಮುಂಚತಿ ॥ ೭

ಮೇಘೋದರವಿನಿರ್ಮುಕ್ತಾಃ ಕಹ್ಲಾರಸುಖಶೀತಲಾಃ ।
ಶಕ್ಯಮಂಜಲಿಭಿಃ ಪಾತುಂ ವಾತಾಃ ಕೇತಕಗಂಧಿನಃ ॥ ೮

ಏಷ ಫುಲ್ಲಾರ್ಜುನಃ ಶೈಲಃ ಕೇತಕೈರಧಿವಾಸಿತಃ ।
ಸುಗ್ರೀವ ಇವ ಶಾಂತಾರಿರ್ಧಾರಾಭಿರಭಿಷಿಚ್ಯತೇ ॥ ೯

---

ಅಲಂಕರಿಸಬಹುದಾಗಿದೆ! ಒದ್ದೆಯಾದ ಮೇಘಖಂಡಗಳು ಸಂಧ್ಯಾರಾಗದಿಂದ ಕೆಂಪಾಗಿ ಸುತ್ತಲೂ ಬೆಳ್ಳಗೆ ಸ್ವಚ್ಛವಾಗಿವೆ. ಇವನ್ನು ನೋಡಿದರೆ, ಬಟ್ಟೆಯ ತುಂಡುಗಳಿಂದ ಆಕಾಶಕ್ಕೆ ಗಾಯದ ಪಟ್ಟಿಗಳನ್ನು ಕಟ್ಟಿದಂತೆ ಕಾಣುವುದು! (೪-೫). ಮಂದಮಾರುತವೆಂಬ ನಿಶ್ವಾಸದಿಂದ ಯುಕ್ತವಾಗಿ, ಸಂಧ್ಯಾರಾಗವೆಂಬ ರಕ್ತಚಂದನದಿಂದ ರಂಜಿತವಾಗಿ, ಬಿಳಿಯ ಮೋಡದಿಂದ ಸಹಿತವಾದ ಅಂಬರವು ವಿರಹತಾಪದಿಂದ ಬಿಳಿಚಿಕೊಂಡಿರುವ ಕಾಮಾತುರನಂತೆ ಕಂಗೊಳಿಸುವುದು! (೬). ಬೇಸಿಗೆಯಿಂದ ಬಳಲಿ, ಮಳೆಗಾಲದ ಹೊಸ ನೀರಿನಿಂದ ನೆನೆದು, ಬಾಷ್ಪವನ್ನು* ಬಿಡುವ ಈ ಭೂದೇವಿಯು, ಶೋಕಸಂತಪ್ತಳಾಗಿ ಬಾಷ್ಪವನ್ನು ಹರಿಸುವ ಸೀತೆಯಂತೆ ತೋರುವಳು! (೭). ಮೇಘಮಂಡಲದಿಂದ ತೂರಿಬಂದು, ಕಹ್ಲಾರಪುಷ್ಪದಂತೆ ಸುಖಶೀತಲವಾಗಿ, ಕೇದಗೆಯ ಸುಗಂಧವನ್ನು ಹೊತ್ತು ಬೀಸುವ ಗಾಳಿಯನ್ನು ಬೊಗಸೆಬೊಗಸೆಯಾಗಿ ಕುಡಿದುಬಿಡಬಹುದು! (೮). ಈ ಶೈಲದಲ್ಲಿ ಅರ್ಜುನವೃಕ್ಷಗಳು ಅರಳಿವೆ. ಕೇದಗೆಯ ಸುವಾಸನೆಯು ಹರಡಿದೆ. ದಾವಾಗ್ನಿಯೆಂಬ ಇದರ

---

* ಬಾಷ್ಪ = ಆವಿ; ಕಣ್ಣೀರು.

ಮೇಘಕೃಷ್ಣಾಜಿನಧರಾ ಧಾರಾಯಜ್ಞೋಪವೀತಿನಃ ।
ಮಾರುತಾಪೂರಿತಗುಹಾಃ ಪ್ರಾಧೀತಾ ಇವ ಪರ್ವತಾಃ ॥ ೧೦

ಕಶಾಭಿರಿವ ಹೈಮೀಭಿರ್ವಿದ್ಯುದ್ಭಿರಭಿತಾಡಿತಮ್ ।
ಅಂತಃ ಸ್ತನಿತನಿರ್ಘೋಷಂ ಸವೇದನಮಿವಾಂಬರಮ್ ॥ ೧೧

ನೀಲಮೇಘಾಶ್ರಿತಾ ವಿದ್ಯುತ್ ಸ್ಫುರಂತೀ ಪ್ರತಿಭಾತಿ ಮೇ ।
ಸ್ಫುರಂತೀ ರಾವಣಸ್ಯಾಂಕೇ ವೈದೇಹೀವ ತಪಸ್ವಿನೀ ॥ ೧೨

ಇಮಾಸ್ತಾ ಮನ್ಮಥವತಾಂ ಹಿತಾಃ ಪ್ರತಿಹತಾ ದಿಶಃ ।
ಅನುಲಿಪ್ತಾ ಇವ ಘನೈರ್ನಷ್ಟಗ್ರಹನಿಶಾಕರಾಃ ॥ ೧೩

ಕ್ವಚಿದ್ಬಾಷ್ಪಾಭಿಸಂರುದ್ಧಾನ್ ವರ್ಷಾಗಮಸಮುತ್ಸುಕಾನ್ ।
ಕುಟಜಾನ್ ಪಶ್ಯ ಸೌಮಿತ್ರೇ ಪುಷ್ಪಿತಾನ್ ಗಿರಿಸಾನುಷು ॥ ೧೪

---

ಶತ್ರುಪಕ್ಷವು ಅಡಗಿದೆ ಈಗ ಧಾರೆಧಾರೆಯಾಗಿ ಮಳೆಯ ಅಭಿಷೇಕವಾಗುತ್ತಿದೆ ಆದ್ದರಿಂದ ಪುಷ್ಪಾಲಂಕೃತನಾಗಿ, ಸುಗಂಧವನ್ನು ಬಳಿದುಕೊಂಡು, ವಾಲಿಯನ್ನು ನಿಗ್ರಹಿಸಿ ಪಟ್ಟಾಭಿಷಿಕ್ತನಾಗುತ್ತಿರುವ ಸುಗ್ರೀವನಂತೆ ಈ ಶೈಲವು ರಂಜಿಸುತ್ತಿದೆ !(೯). ಲಕ್ಷ್ಮಣ, ಈ ಬೆಟ್ಟಗಳನ್ನು ನೋಡು ಮೋಡವೆಂಬ ಕೃಷ್ಣಾಜಿನವನ್ನು ಹೊದೆದು, ವೃಷ್ಟಿಧಾರೆಯೆಂಬ ಯಜ್ಞೋಪವೀತವನ್ನು ಧರಿಸಿ, ವಾಯುಪೂರಿತ ಗುಹೆಗಳಿಂದ ಧ್ವನಿಗೈಯುವ ಈ ಬೆಟ್ಟಗಳು ವೇದಾಧ್ಯಯನವನ್ನು ಮಾಡುತ್ತಿರುವ ವಿಪ್ರರಂತೆ ಕಾಣುತ್ತವೆ ! (೧೦). ಲಕ್ಷ್ಮಣ, ಆಕಾಶದಲ್ಲಿ ಗುಡುಗುವುದನ್ನು ಕೇಳಿದೆಯಾ ? ಚಿನ್ನದ ಚಾಟಿಗಳಂತಿರುವ ಮಿಂಚುಗಳ ಹೊಡೆತವನ್ನು ತಾಳಲಾರದೆ, ಆಕಾಶವು ವೇದನೆಯಿಂದ ಕೂಗಿಕೊಳ್ಳುವಂತೆ ತೋರುತ್ತದೆ ! (೧೧). ನೀಲಮೇಘದ ನಡುವೆ ಮಿಂಚುವ ಮಿಂಚನ್ನು ಕಂಡಾಗ, ರಾವಣನ ಅಂಕದಲ್ಲಿ ಅನಾಥೆಯಾಗಿ ಸಂಕಟಪಟ್ಟ ಸೀತೆಯಂತೆ ಇದು ಮಿಂಚುವುದೆಂದು ನನಗೆ ಅನ್ನಿಸುತ್ತದೆ ! (೧೨). ಸಮಸ್ತ ದಿಕ್ಕುಗಳನ್ನೂ ಬಳಿದಂತೆ ಮೋಡಗಳು ಕವಿದು, ಚಂದ್ರಾದಿ ಗ್ರಹಗಳು ಅದೃಶ್ಯವಾಗಿವೆ. ಯಾವುದು ಯಾವ ದಿಕ್ಕೆಂದು ತೋರದಾಗಿದೆ. ಈ ಪರಿಸ್ಥಿತಿಯು ಕಾಂತಾಯುಕ್ತರಾದ ಕಾಮಿಗಳಿಗೆ ಮಾತ್ರ ಹಿತಕರವಾಗುತ್ತದೆ ! (೧೩). ಗಿರಿಸಾನುಗಳಲ್ಲಿ ಪುಷ್ಪಿತಗಳಾದ ಈ ಕುಟಜವೃಕ್ಷ

ಮಮ ಶೋಕಾಭಿಭೂತಸ್ಯ ಕಾಮಸಂದೀಪನಾನ್ ಸ್ಥಿತಾನ್ ॥

ರಜಃ ಪ್ರಶಾಂತಂ ಸಹಿಮೋಽದ್ಯ ವಾಯು-
ರ್ನಿದಾಘದೋಷಪ್ರಸರಾಃ ಪ್ರಶಾಂತಾಃ ।
ಸ್ಥಿತಾ ಹಿ ಯಾತ್ರಾ ವಸುಧಾಧಿಪಾನಾಂ
ಪ್ರವಾಸಿನೋ ಯಾಂತಿ ನರಾಃ ಸ್ವದೇಶಾನ್ ॥ ೧೫

ಸಂಪ್ರಸ್ಥಿತಾ ಮಾನಸವಾಸಲುಬ್ಧಾಃ
ಪ್ರಿಯಾನ್ವಿತಾಃ ಸಂಪ್ರತಿ ಚಕ್ರವಾಕಾಃ ।
ಅಭೀಕ್ಷ್ಣವರ್ಷೋದಕವಿಕ್ಷತೇಷು
ಯಾನಾನಿ ಮಾರ್ಗೇಷು ನ ಸಂಪತಂತಿ ॥ ೧೬

ಕ್ವಚಿತ್ ಪ್ರಕಾಶಂ ಕ್ವಚಿದಪ್ರಕಾಶಂ
ನಭಃ ಪ್ರಕೀರ್ಣಾಂಬುಧರಂ ವಿಭಾತಿ ।

---

ಗಳನ್ನು ನೋಡು. ಇವು (ನವಜಲಸೇಕದಿಂದೆದ್ದ) ಬಾಷ್ಪದಿಂದ ಕೂಡಿ, ವರ್ಷಾಕಾಲದ ಆಗಮನವಾಯಿತೆಂದು ಉತ್ಸಾಹಗೊಂಡಿವೆ! ಸೌಮಿತ್ರಿ, ಶೋಕತಪ್ತನಾದ ನನಗೆ ಈ ವೃಕ್ಷಗಳು ವಿರಹತಾಪವನ್ನು ಹೆಚ್ಚಿಸುತ್ತವೆ!* (೧೪). ನೆಲದ ಧೂಳಿಯಡಗಿ ಗಾಳಿಯು ಶೀತಲವಾಗಿದೆ. ಬೇಸಗೆಯಿಂದಾದ ತಾಪವೇ ಮೊದಲಾದವು ಶಾಂತವಾದವು. ಭೂಪಾಲರ ವಿಜಯಯಾತ್ರೆಯು ನಿಂತುಹೋಗಿದೆ. ಪ್ರವಾಸಿಗಳು ತಮ್ಮ ದೇಶಗಳಿಗೆ ಹಿಂದಿರುಗುತ್ತಿದ್ದಾರೆ (೧೫). ಈಗ ಮಾನಸಸರೋವರದಲ್ಲಿ ವಾಸಮಾಡಬೇಕೆಂಬ ಆಸೆಯಿಂದ ಹಂಸಗಳು ಹೊರಟುಹೋದವು. ಚಕ್ರವಾಕಗಳು ತಮ್ಮ ಕಾಂತೆಯರೊಂದಿಗೆ ನಲಿಯುತ್ತಿವೆ. ಮಳೆ ಸುರಿದು ದಾರಿಗಳು ಕೆಟ್ಟುಹೋಗಿರುವುದರಿಂದ ವಾಹನಗಳು ಸಂಚರಿಸುವುದಿಲ್ಲ (೧೬). ಮೋಡಗಳು ಕವಿದಿರುವುದರಿಂದ ಆಕಾಶವು ಕೆಲವು ಕಡೆ ಅಪ್ರಕಾಶವಾಗಿಯೂ ಕೆಲವು ಕಡೆ ಪ್ರಕಾಶವಾಗಿಯೂ ಇದೆ. ಪರ್ವತಗಳು ಕೆಲವು ಕಡೆ ನಾಗರದ ರಭಸವನ್ನು ತಡೆಗಟ್ಟಿದಾಗ

---

* ಕುಟಜವೃಕ್ಷಗಳನ್ನು ನೋಡಿ ಕಾಂತಾಯುಕ್ತರಾದ ತರುಣರ ಸ್ಮರಣೆಯಾಗುವುದೆಂದು ಅಭಿಪ್ರಾಯ. ಪುಷ್ಪಿತ=ಪುಷ್ಪದಂತಿರುವ ನಗುವಿನಿಂದ ಯುಕ್ತ; ಬಾಷ್ಪ=ಆನಂದಬಾಷ್ಪ; ವರ್ಷಾಗಮನ=ಕಾಂತಾಗಮನ.

ಕ್ವಚಿತ್ ಕ್ವಚಿತ್ ಪರ್ವತಸಂನಿರುದ್ಧಂ
ರೂಪಂ ಯಥಾ ಶಾಂತಮಹಾರ್ಣವಸ್ಯ ॥ ೧೭

ವ್ಯಾಮಿಶ್ರಿತಂ ಸರ್ಜಕದಂಬಪುಷ್ಪೈ
ರ್ನವಂ ಜಲಂ ಪರ್ವತಧಾತುತಾಮ್ರಮ್ ।
ಮಯೂರಕೇಕಾಭಿರನುಪ್ರಯಾತಂ
ಶೈಲಾಪಗಾಃ ಶೀಘ್ರತರಂ ವಹಂತಿ ॥ ೧೮

ರಸಾಕುಲಂ ಷಟ್ಪದಸಂನಿಕಾಶಂ
ಪ್ರಭುಜ್ಯತೇ ಜಂಬುಫಲಂ ಪ್ರಕಾಮಮ್ ।
ಅನೇಕವರ್ಣಂ ಪವನಾವಧೂತಂ
ಭೂಮೌ ಪತತ್ಯಾಮ್ರಫಲಂ ವಿಪಕ್ವಮ್ ॥ ೧೯

ವಿದ್ಯುತ್ಪತಾಕಾಃ ಸಬಲಾಕಮಾಲಾಃ
ಶೈಲೇಂದ್ರಕೂಟಾಕೃತಿಸಂನಿಕಾಶಾಃ ।
ಗರ್ಜಂತಿ ಮೇಘಾಃ ಸಮುದೀರ್ಣನಾದಾ
ಮತ್ತಾ ಗಜೇಂದ್ರಾ ಇವ ಸಂಯುಗಸ್ಥಾಃ ॥ ೨೦

---

ಪ್ರಶಾಂತವಾದ ಸಾಗರವಿರುವಂತೆ, ಆಕಾಶವು ಕಾಣಿಸುತ್ತಿದೆ (೧೭). ಲಕ್ಷ್ಮಣ, ಗಿರಿನದಿಗಳು ಹೊಸ ನೀರನ್ನು ಹೊತ್ತು ಎಷ್ಟು ವೇಗವಾಗಿ ಹರಿಯುತ್ತಿವೆ, ನೋಡಿದೆಯಾ? ನೀರಿನಲ್ಲಿ ಸರ್ಜಕದಂಬ ಪುಷ್ಪಗಳು ತೇಲಿಹೋಗುತ್ತಿವೆ ಗೈರಿಕಧಾತುಗಳಿಂದ ಸಮ್ಮಿಶ್ರವಾದ ನೀರು ಕೆಂಪಾಗಿದೆ. ನವಿಲುಗಳ ಕೇಕಾರವವು ನದೀಜಲವನ್ನು ಹಿಂಬಾಲಿಸುತ್ತಿದೆ! (೧೮) ದುಂಬಿಯಂತೆ ಕಪ್ಪಾಗಿ ರಸಭರಿತವಾದ ನೇರಳೆಯಹಣ್ಣನ್ನು ಜನರು ಈಗ ಯಥೇಚ್ಛವಾಗಿ ತಿನ್ನುತ್ತಿದ್ದಾರೆ. ವಿವಿಧ ವರ್ಣವುಳ್ಳ ಮಾಗಿದ ಮಾವಿನಹಣ್ಣು ಗಾಳಿಯಿಂದ ನೆಲದಮೇಲೆ ಉದುರುತ್ತಿದೆ (೧೯). ಕೊಕ್ಕರೆಗಳು ಸಾಲುಗಟ್ಟಿ ಮೋಡಗಳ ಬಳಿಯಲ್ಲಿ ಹಾರಾಡುತ್ತಿವೆ. ಗಿರಿಶೃಂಗಗಳಂತೆ ಬೃಹದಾಕಾರದ ಈ ಮೋಡ ಗಳು ಮಿಂಚುಗಳೆಂಬ ಧ್ವಜಪಟಗಳನ್ನು ಹಾರಿಸುತ್ತ ಗುಡುಗುವಾಗ, ರಣ

ವರ್ಷೋದಕಾಪ್ಯಾಯಿತಶಾದ್ವಲಾನಿ
ಪ್ರವೃತ್ತನೃತ್ತೋತ್ಸವಬರ್ಹಿಣಾನಿ ।
ವನಾನಿ ನಿರ್ವೃಷ್ಟಬಲಾಹಕಾನಿ
ಪಶ್ಯಾಪರಾಹ್ಣೇಷ್ವಧಿಕಂ ವಿಭಾಂತಿ ॥ ೨೧

ಸಮುದ್ವಹಂತಃ ಸಲಿಲಾತಿಭಾರಂ
ಬಲಾಕಿನೋ ವಾರಿಧರಾ ನದಂತಃ ।
ಮಹತ್ಸು ಶೃಂಗೇಷು ಮಹೀಧರಾಣಾಂ
ವಿಶ್ರಮ್ಯ ವಿಶ್ರಮ್ಯ ಪುನಃ ಪ್ರಯಾಂತಿ ॥ ೨೨

ಮೇಘಾಭಿಕಾಮಾ ಪರಿಸಂಪತಂತೀ
ಸಂಮೋದಿತಾ ಭಾತಿ ಬಲಾಕಪಂಕ್ತಿಃ ।
ವಾತಾವಧೂತಾ ವರಪೌಂಡರೀಕೀ
ಲಂಬೇವ ಮಾಲಾ ರಚಿತಾಂಬರಸ್ಯ ॥ ೨೩

ಬಾಲೇಂದ್ರಗೋಪಾಂತರಚಿತ್ರಿತೇನ
ವಿಭಾತಿ ಭೂಮಿರ್ನವಶಾದ್ವಲೇನ ।

---

ರಂಗದಲ್ಲಿ ಘೀಂಕರಿಸುವ ಮದ್ದಾನೆಗಳಂತೆ ಕಾಣುತ್ತವೆ! (೨೦). ಸೌಮಿತ್ರಿ, ಈ ಅರಣ್ಯಪ್ರದೇಶಗಳನ್ನು ನೋಡು ಮಳೆನೀರಿನಿಂದ ಹಚ್ಚನೆ ಹುಲುಸಾದ ಹುಲ್ಲುಗಾವಲು ನಳನಳಿಸುತ್ತಿದೆ. ನವಿಲುಗಳು ಹಿಗ್ಗಿನಿಂದ ಕುಣಿಯಲು ತೊಡಗಿವೆ. ಈ ಸ್ಥಳದಲ್ಲಿ ಮೋಡಗಳು ಚೆನ್ನಾಗಿ ಮಳೆ ಸುರಿಸಿವೆ. ಸಂಜೆಯ ಹೊತ್ತಿ ಇದನ್ನು ನೋಡಲು ಬಲು ಚೆಂದವಾಗಿರುತ್ತದೆ (೨೧). ಕೊಕ್ಕರೆಗಳ ಹಾರವನ್ನು ಹಾಕಿಕೊಂಡು ಹೊರಲಾರದ ಜಲಭಾರವನ್ನು ಹೊತ್ತಿರುವ ಜಲದಗಳು ಅರಚುತ್ತ, ಗಿರಿಗಳ ಉನ್ನತ ಶಿಖರಗಳಲ್ಲಿ ವಿಶ್ರಮಿಸುತ್ತ ವಿಶ್ರಮಿಸುತ್ತ, ಮುಂದೆ ಸಾಗುವುದನ್ನು ನೋಡು, ಲಕ್ಷ್ಮಣ! (೨೨). ಮೇಘಗಳಲ್ಲಿ ಮೋಹಗೊಂಡು ಮೇಲೆ ಹಾರಿ ನಲಿಯುತ್ತ ಬರುವ ಕೊಕ್ಕರೆಗಳ ಸಾಲನ್ನು ನೋಡು ; ಬಿಳಿಯ ತಾವರೆಗಳಿಂದ ರಚಿತವಾದ ಮನೋಹರ ಮಾಲೆಯನ್ನು ತೂಗಾಡುವಂತೆ ಅಂಬರಕ್ಕೆ ಹಾಕಿದಂತಿದೆ! ಗಾಳಿಯಿಂದ ಮಾಲೆ ಅಲ್ಲಾಡುವಂತಿದೆ! (೨೩) ವಿಶಾಲವಾದ ಹಸಿರು ಹುಲ್ಲುಗಾವಲು ಕೆಂಪುಬಣ್ಣದ

ಗಾತ್ರಾನುವೃತ್ತೇನ ಶುಕಪ್ರಭೇಣ
ನಾರೀವ ಲಾಕ್ಷೋಕ್ಷಿತಕಂಬಲೇನ ॥ ೨೪

ನಿದ್ರಾ ಶನೈಃ ಕೇಶವಮಭ್ಯುಪೈತಿ
ದ್ರುತಂ ನದೀ ಸಾಗರಮಭ್ಯುಪೈತಿ ।
ಹೃಷ್ಟಾ ಬಲಾಕಾ ಘನಮಭ್ಯುಪೈತಿ
ಕಾಂತಾ ಸಕಾಮಾ ಪ್ರಿಯಮಭ್ಯುಪೈತಿ ॥ ೨೫

ಜಾತಾ ವನಾಂತಾಃ ಶಿಖಿಸಂಪ್ರನೃತ್ತಾ
ಜಾತಾಃ ಕದಂಬಾಃ ಸಕದಂಬಶಾಖಾಃ ।
ಜಾತಾ ವೃಷಾ ಗೋಷು ಸಮಾನಕಾಮಾ
ಜಾತಾ ಮಹೀ ಸಸ್ಯವನಾಭಿರಾಮಾ ॥ ೨೬

ವಹಂತಿ ವರ್ಷಂತಿ ನದಂತಿ ಭಾಂತಿ
ಧ್ಯಾಯಂತಿ ನೃತ್ಯಂತಿ ಸಮಾಶ್ವಸಂತಿ ।
ನದ್ಯೋ ಘನಾ ಮತ್ತಗಜಾ ವನಾಂತಾಃ
ಪ್ರಿಯಾವಿಹೀನಾಃ ಶಿಖಿನಃ ಪ್ಲವಂಗಾಃ ॥ ೨೭

---

ಇಂದ್ರಗೋಪ ಹುಳುಗಳಿಂದ ಚಿತ್ರವರ್ಣವಾಗಿದೆ. ಲಾಕ್ಷಾರಸದಿಂದ ಚಿತ್ರಿತವಾದ ಹಸಿರುಸೀರೆಯನ್ನುಟ್ಟಿರುವ ನಾರಿಯಂತೆ ಭೂದೇವಿಯು ಕಾಣುತ್ತಾಳೆ! (೨೪). ಲಕ್ಷ್ಮಣ, ಈಗ ಯೋಗನಿದ್ರೆಯು ಮೆಲ್ಲನೆ ಶ್ರೀಮನ್ನಾರಾಯಣನಲ್ಲಿ ಸೇರಿಕೊಳ್ಳುತ್ತಿದೆ ನದಿಯು ಬೇಗ ಬೇಗನೆ ಸಮುದ್ರದ ಕಡೆಗೆ ಧಾವಿಸುತ್ತಿದೆ. ಬಲಾಕೆಯು ನಲಿಯುತ್ತ ಮೇಘದ ಬಳಿಗೆ ಸಾರುತ್ತಿದೆ. ಕಾಮಿನಿಯು ಕಾಂತನ ಸಮೀಪಕ್ಕೆ ಹೋಗುತ್ತಿದ್ದಾಳೆ! (೨೫). ವನಪ್ರದೇಶಗಳು ಮಯೂರನೃತ್ಯದಿಂದ ಮನೋಹರವಾದವು. ಕದಂಬವೃಕ್ಷಗಳು ಕುಸುಮಸಮೃದ್ಧಿಯುಳ್ಳ ಕೊಂಬೆಗಳಿಂದ ಸುಂದರವಾದವು. ಗೂಳಿಗಳು ಗೋವುಗಳಂತೆ ಕಾಮಾರ್ತವಾದವು. ಭೂಮಿಯು ಸಸ್ಯಸಂಪತ್ತಿನಿಂದ ಮನೋರಮವಾಯಿತು (೨೬). ಲಕ್ಷ್ಮಣ, ಹೊಳೆಗಳು ಹರಿಯುತ್ತ, ಮೋಡಗಳು ಮಳೆ ಸುರಿಸುತ್ತ, ಮತ್ತಮಾತಂಗಗಳು ಘೀಂಕರಿಸುತ್ತ, ವನಾಂತಗಳು ವಿರಾಜಿಸುತ್ತ ಇರುವ ವರ್ಷಾಕಾಲವಿದು. ಪ್ರಿಯಾವಿಯುಕ್ತರು

ಪ್ರಹರ್ಷಿತಾಃ ಕೇತಕಪುಷ್ಪಗಂಧ-
ಮಾಘ್ರಾಯ ಹೃಷ್ಟಾ ವನನಿರ್ಝರೇಷು ।
ಪ್ರಪಾತಶಬ್ದಾಕುಲಿತಾ ಗಜೇಂದ್ರಾಃ
ಸಾರ್ಧಂ ಮಯೂರೈಃ ಸಮದಾ ನದಂತಿ ॥ ೨೮

ಧಾರಾನಿಪಾತೈರಭಿಹನ್ಯಮಾನಾಃ
ಕದಂಬಶಾಖಾಸು ವಿಲಂಬಮಾನಾಃ ।
ಕ್ಷಣಾರ್ಜಿತಂ ಪುಷ್ಪರಸಾವಗಾಢಂ
ಶನೈರ್ಮದಂ ಷಟ್ಚರಣಾಸ್ತ್ಯಜಂತಿ ॥ ೨೯

ಅಂಗಾರಚೂರ್ಣೋತ್ಕರಸಂನಿಕಾಶೈಃ
ಫಲೈಃ ಸುಪರ್ಯಾಪ್ತರಸೈಃ ಸಮೃದ್ಧೈಃ ।
ಜಂಬೂದ್ರುಮಾಣಾಂ ಪ್ರವಿಭಾಂತಿ ಶಾಖಾ
ನಿಲೀಯಮಾನಾ ಇವ ಷಟ್ಪದೌಘೈಃ ॥ ೩೦

ತಡಿತ್ಪತಾಕಾಭಿರಲಂಕೃತಾನಾ-
ಮುದೀರ್ಣಗಂಭೀರಮಹಾರವಾಣಾಮ್ ।

---

ಯಾವುದೋ ಧ್ಯಾನದಲ್ಲಿ ಮುಳುಗಿದ್ದಾರೆ! ನವಿಲುಗಳು ನರ್ತಿಸುತ್ತಿವೆ. ಕಪಿಗಳು (ಸಮೃದ್ಧವಾಗಿ ಆಹಾರವು ದೊರೆಯುವುದರಿಂದ) ನೆಮ್ಮದಿಯಲ್ಲಿವೆ (೨೭). ವನನದೀತೀರದಲ್ಲಿ ಸಂಚರಿಸುವ ಕಾಡಾನೆಗಳಿಗೆ ಕೇದಗೆಯ ಗಂಧವನ್ನಾಘ್ರಾಣಿಸಿ ಮದವೇರಿದೆ. ಜಲಪ್ರಪಾತಗಳು ಭೋರ್ಗರೆಯುವುದನ್ನು ಕೇಳಿ ರೇಗಿ, ಆ ಕಾಡಾನೆಗಳು ನವಿಲುಗಳ ಕೇಕಾಧ್ವನಿಯೊಡನೆ ಘೀಂಕರಿಸುತ್ತಿವೆ (೨೮). ಕದಂಬಗಳ ಕೊಂಬೆಗಳಲ್ಲಿ ಲಂಬಿಸಿ ಇಂಬುಗೊಳ್ಳುವ ದುಂಬಿಗಳ ದುರವಸ್ಥೆಯನ್ನು ನೋಡು! ಮಕರಂದಪಾನದಿಂದ ಕ್ಷಣಮಾತ್ರದಲ್ಲಿ ಬಂದ ಮದವನ್ನು ಮಳೆಯ ಹೊಡೆತಕ್ಕೆ ಸಿಕ್ಕಿ ಮೆಲ್ಲಮೆಲ್ಲನೆ ಕಳೆದುಕೊಳ್ಳುತ್ತಿವೆ! (೨೯). ರಸವನ್ನು ತುಳುಕುವ ನೇರಿಳೆಹಣ್ಣುಗಳು ಇದ್ದಿಲು ಚೂರುಗಳ ರಾಶಿಯನ್ನು ಪೇರಿಸಿದಂತೆ ಮಾಗಿ ನಿಂತಿವೆ! ನೇರಿಳೆಯ ಕೊಂಬೆಗಳು ದುಂಬಿಗಳಿಂದ ಮುಚ್ಚಿಹೋದಂತಿವೆ! (೩೦). ಪತಾಕೆಗಳಂತಿರುವ ಮಿಂಚುಗಳಿಂದ ಕೂಡಿ ಗಂಭೀರವಾಗಿ ಗುಡುಗುವ ಮೋಡಗಳು, ರಣರಂಗ

ವಿಭ್ರಾಂತಿ ರೂಪಾಣಿ ಬಲಾಹಕಾನಾಂ
ರಣೋದ್ಯತಾನಾಮಿವ ವಾರಣಾನಾಮ್ ॥ ೩೦

ಮಾರ್ಗಾನುಗಃ ಶೈಲವನಾನುಸಾರೀ
ಸಂಪ್ರಸ್ಥಿತೋ ಮೇಘರವಂ ನಿಶಮ್ಯ ।
ಯುದ್ಧಾಭಿಕಾಮಃ ಪ್ರತಿನಾಗಶಂಕೀ
ಮತ್ತೋ ಗಜೇಂದ್ರಃ ಪ್ರತಿಸಂನಿವೃತ್ತಃ ॥ ೩೧

ಕ್ವಚಿತ್ ಪ್ರಗೀತಾ ಇವ ಷಟ್ಪದೌಘೈಃ
ಕ್ವಚಿತ್ ಪ್ರನೃತ್ತಾ ಇವ ನೀಲಕಂಠೈಃ ।
ಕ್ವಚಿತ್ ಪ್ರಮತ್ತಾ ಇವ ವಾರಣೇಂದ್ರೈ-
ರ್ವಿಭಾಂತ್ಯನೇಕಾಶ್ರಯಿಣೋ ವನಾಂತಾಃ ॥ ೩೩

ಕದಂಬಸರ್ಜಾರ್ಜುನಕಂದಲಾಢ್ಯಾ
ವನಾಂತಭೂಮಿರ್ನವವಾರಿಪೂರ್ಣಾ ।
ಮಯೂರಮತ್ತಾಭಿರುತಪ್ರನೃತ್ತೈ-
ರಾಪಾನಭೂಮಿಪ್ರತಿಮಾ ವಿಭಾತಿ ॥ ೩೪

---

ದಲ್ಲಿ ನಿಂತು ಗರ್ಜಿಸುವ ಗಜಗಳಂತೆ ಕಾಣುತ್ತವೆ. ವತ್ಸ, ಆ ಸಲಗನನ್ನು ನೋಡು! ಅಡವಿಯ ದಾರಿಯನ್ನು ಹಿಡಿದು ಹೋಗುತ್ತಿದ್ದ ಆ ಮದ್ದಾನೆಯು ಗುಡುಗಿನ ಶಬ್ದವನ್ನು ಕೇಳಿ, ಎದುರಾಳಿಯಾದ ಮತ್ತೊಂದು ಆನೆಯು ಘೀಂಕರಿಸು ವುದೆಂದು ತಿಳಿದುಕೊಂಡಿದೆ! ಅದರೊಡನೆ ಹೋರಾಡಬೇಕೆಂದು ಹಿಂದಿರುಗಿ ಬರುತ್ತಿದೆ! (೩೧-೩೨). ಈ ಪ್ರದೇಶದಲ್ಲಿ ವಿವಿಧ ವೈಚಿತ್ರ್ಯವುಂಟು. ವನಗಳು ಭ್ರಮರಗಳಿಂದ ಹಾಡುವಂತೆಯೂ, ನವಿಲುಗಳಿಂದ ಕುಣಿಯು ವಂತೆಯೂ, ಗಜೇಂದ್ರಗಳಿಂದ ಮದಿಸಿದಂತೆಯೂ ಕಾಣುತ್ತವೆ! (೩೩). ಸೌಮಿತ್ರಿ, ಈ ವನಭೂಮಿಯು ಮದ್ಯಪಾನಮಾಡುವ ಸ್ಥಳದಂತೆ ಇದೆ! ಇದೂ ಪಾನಭೂಮಿಯಂತೆ ಕದಂಬ, ಸರ್ಜ, ಅರ್ಜುನ, ಕಂದಲಗಳ ಹೂ ಗಳಿಂದ ಯುಕ್ತವಾಗಿ ಮದ್ಯದಂತಿರುವ ನವಜಲದಿಂದ ತುಂಬಿದೆ! ನವಿಲು ಗಳ ಉನ್ಮತ್ತ ಕೇಕೆಗಳೂ ಹುಚ್ಚಾಟದ ನೃತ್ಯಗಳೂ ನಡೆಯುತ್ತಿವೆ! (೩೪).

ಮುಕ್ತಾಸಕಾಶಂ ಸಲಿಲಂ ಪತದ್ವೈ
ಸುನಿರ್ಮಲಂ ಪತ್ರಪುಟೇಷು ಲಗ್ನಮ್ ।
ಹೃಷ್ಟಾ ವಿವರ್ಣಚ್ಛದನಾ ವಿಹಂಗಾಃ
ಸುರೇಂದ್ರದತ್ತಂ ತೃಷಿತಾಃ ಪಿಬಂತಿ ॥ ೩೫

ಷಟ್ಪಾದತಂತ್ರೀಮಧುರಾಭಿಧಾನಂ
ಪ್ಲವಂಗಮೋದೀರಿತಕಂಠತಾಲಮ್ ।
ಆವಿಷ್ಕೃತಂ ಮೇಘಮೃದಂಗನಾದೈ-
ರ್ವನೇಷು ಸಂಗೀತಮಿವ ಪ್ರವೃತ್ತಮ್ ॥ ೩೬

ಕ್ವಚಿತ್ ಪ್ರನೃತ್ತೈಃ ಕ್ವಚಿದುನ್ನದದ್ಭಿಃ
ಕ್ವಚಿಚ್ಚ ವೃಕ್ಷಾಗ್ರನಿಷಣ್ಣಕಾಯೈಃ ।
ವ್ಯಾಲಂಬಬರ್ಹಾಭರಣೈರ್ಮಯೂರೈ-
ರ್ವನೇಷು ಸಂಗೀತಮಿವ ಪ್ರವೃತ್ತಮ್ ॥ ೩೭

ಸ್ವನೈರ್ಘನಾನಾಂ ಪ್ಲವಗಾಃ ಪ್ರಬುದ್ಧಾ
ವಿಹಾಯ ನಿದ್ರಾಂ ಚಿರಸಂನಿರುದ್ಧಾಮ್ ।

---

ಮರದೆಲೆಗಳಮೇಲೆ ಉದುರಿದ ಜಲಕಣಗಳು ಮುತ್ತಿನಂತೆ ಮಿನುಗುತ್ತಿವೆ. ಚಿತ್ರವರ್ಣದ ಗರಿಗಳಿರುವ ಚಾತಕಗಳು ಬಾಯಾರಿ ಬಂದು, ದೇವೇಂದ್ರದತ್ತವಾದ ಜಲಕಣಗಳನ್ನು ಹರ್ಷದಿಂದ ಕುಡಿಯುತ್ತಿವೆ (೩೫) ತಮ್ಮ ವನದಲ್ಲಿ ಸಂಗೀತಸಭೆಯು ನಡೆಯುವಂತಿದೆ! ಭ್ರಮರ ಝೇಂಕಾರವೆಂಬ ಮಧುರ ವೀಣಾಧ್ವನಿಯು ಕೇಳಿಸುತ್ತಿದೆ. ಕಪ್ಪೆಗಳ ಭೇಕಾರವು ಕಂಠತಾಳವಾಗಿದೆ! ಮೋಡವು ಮೃದಂಗವನ್ನು ಬಾರಿಸುತ್ತಿದೆ! (೩೬). ಅಲ್ಲದೆ ಬಣ್ಣಬಣ್ಣದ ಗರಿಗಳೆಂಬ ಆಭರಣಗಳನ್ನು ತೊಟ್ಟ ಮಯೂರಗಳು ಅಲ್ಲಲ್ಲಿ ನರ್ತಕರಂತೆ ನರ್ತಿಸುತ್ತಲೂ ಸಂಗೀತವನ್ನು ಮೆಚ್ಚಿ ಹರ್ಷೋದ್ಗಾರ ಮಾಡುವಂತೆ ಕೂಗುತ್ತಲೂ ಇವೆ! ಆ ಮಯೂರಗಳೇ ಮರಗಳನ್ನೇರಿ ಸಂಗೀತ ಸಭೆಯ ಸಾಮಾಜಿಕರಂತೆ ಕುಳಿತಿವೆ! (೩೭). ಮೇಘಗರ್ಜನೆಗಳಿಂದ ಕಪ್ಪೆಗಳಿಗೆ ವೆಚ್ಚರವಾಗಿದೆ. ದೀರ್ಘಕಾಲದ ನಿದ್ರೆಯನ್ನು ಬಿಟ್ಟು ಎಚ್ಚತ್ತಿವೆ. ವಿವಿಧಾಕೃತಿಯ ಕಪ್ಪೆಗಳು ಹೊಸ ಮೋಡದ ಮಳೆಯ ಹೊಡೆತಕ್ಕೆ ಸಿಕ್ಕಿ

ಅನೇಕರೂಪಾಕೃತಿವರ್ಣನಾದಾ
ನವಾಂಬುಧಾರಾಭಿಹತಾ ನದಂತಿ ॥ ೩೮

ನದ್ಯಃ ಸಮುದ್ವಾಹಿತಚಕ್ರವಾಕಾ-
ಸ್ತಟಾನಿ ಶೀರ್ಣಾನ್ಯಪವಾಹಯಿತ್ವಾ ।
ದೃಪ್ತಾ ನವಪ್ರಾಭೃತಪೂರ್ಣಭೋಗಾ
ದ್ರುತಂ ಸ್ವಭರ್ತಾರಮುಪೋಪಯಾಂತಿ ॥ ೩೯

ನೀಲೇಷು ನೀಲಾಃ ಪ್ರವಿಭಾಂತಿ ಸಕ್ತಾ
ಮೇಘೇಷು ಮೇಘಾ ನವವಾರಿಪೂರ್ಣಾಃ ।
ದವಾಗ್ನಿದಗ್ಧೇಷು ದವಾಗ್ನಿದಗ್ಧಾಃ
ಶೈಲೇಷು ಶೈಲಾ ಇವ ಬದ್ಧಮೂಲಾಃ ॥ ೪೦

ಪ್ರಹೃಷ್ಟಸಂನಾದಿತಬರ್ಹಿಣಾನಿ
ಸಶಕ್ರಗೋಪಾಕುಲಶಾದ್ವಲಾನಿ ।
ಚರಂತಿ ನೀಪಾರ್ಜುನವಾಸಿತಾನಿ
ಗಜಾಃ ಸುರಮ್ಯಾಣಿ ವನಾಂತರಾಣಿ ॥ ೪೧

---

ನಾನಾ ನಾದದಿಂದ ವಚಗುಟ್ಟುತ್ತಿವೆ (೩೮). ನದಿಗಳು ತೇಲುವ ಚಕ್ರವಾಕ ಪಕ್ಷಿಗಳನ್ನು ಪ್ರವಾಹಭರದಿಂದ ಮೇಲೇರಿಸುತ್ತ, ಜರಿದು ಅಡ್ಡಲಾದ ತಟಗಳನ್ನು ಉರುಳಿಸುತ್ತ, ಹೊಸ ಹೂ ಮೊದಲಾದ ಭೋಗದ ಕಾಣಿಕೆಗಳನ್ನು ಹಿಡಿದು, ತಮ್ಮ ಪತಿಯಾದ ಸಮುದ್ರರಾಜನ ಕಡೆಗೆ ಗರ್ವದಿಂದ ಧಾವಿಸುತ್ತಿವೆ!* (೩೯). ಕಾಳ್ಗಿಚ್ಚಿನಿಂದ ಸುಟ್ಟ ಬೆಟ್ಟಗಳು ಕರ್ರಗೆ ಒಂದರ ಬಳಿಯೊಂದು ಹೊಂದಿ ಕಾಣುವಂತೆ, ನವಜಲಪೂರ್ಣವಾದ ಕರಿಯ ಕಾರ್ಮೋಡಗಳು ಒಂದರಮೇಲೊಂದು ಸರಿದಿವೆ (೪೦). ವನಾಂತರದ ಶಾದ್ವಲಗಳು ಹರ್ಷದಿಂದುಬ್ಬಿ ಕೂಗುವ ನವಿಲುಗಳ ಕೇಕಾರವದಿಂದ ಪ್ರತಿಧ್ವನಿತವಾಗಿವೆ.

---

* ಕಾಮಾರ್ತರಾದ ನವಯುವತಿಯರು ತಮ್ಮ ಸ್ತನಗಳನ್ನುಬ್ಬಿಸಿಕೊಂಡು, ಅಡ್ಡಬಂದ ವಿಘ್ನಗಳನ್ನು ಲೆಕ್ಕಿಸದೆ, ಸುಗಂಧಾದಿ ಭೋಗಸಾಮಗ್ರಿಯನ್ನು ಹಿಡಿದು ಪ್ರಿಯರ ಬಳಿಗೆ ತ್ವರೆಯಿಂದ ಹೋಗುತ್ತಾರೆ ಎಂಬ ಅರ್ಥಸಾಮ್ಯವು ಇಲ್ಲಿ ವಿವಕ್ಷಿತವಾಗಿದೆ. ಸಮಾಸೋಕ್ತಿಯೆಂಬ ಅಲಂಕಾರ.

ನವಾಂಬುಧಾರಾಹತಕೇಸರಾಣಿ
ದ್ರುತಂ ಪರಿತ್ಯಜ್ಯ ಸರೋರುಹಾಣಿ ।
ಕದಂಬಪುಷ್ಪಾಣಿ ಸಕೇಸರಾಣಿ
ವನಾನಿ ಹೃಷ್ಟಾ ಭ್ರಮರಾಃ ಪತಂತಿ ॥ ೪೨

ಮತ್ತಾ ಗಜೇಂದ್ರಾ ಮುದಿತಾ ಗವೇಂದ್ರಾ
ವನೇಷು ವಿಶ್ರಾಂತತರಾ ಮೃಗೇಂದ್ರಾಃ ।
ರಮ್ಯಾ ನಗೇಂದ್ರಾ ನಿಭೃತಾ ನರೇಂದ್ರಾಃ
ಪ್ರಕ್ರೀಡಿತೋ ವಾರಿಧರೈಃ ಸುರೇಂದ್ರಃ ॥ ೪೩

ಮೇಘಾಃ ಸಮುದ್ಭೂತಸಮುದ್ರನಾದಾ
ಮಹಾಜಲೌಘೈರ್ಗಗನಾವಲಂಬಾಃ ।
ನದೀಸ್ತಟಾಕಾನಿ ಸರಾಂಸಿ ವಾಪೀ-
ರ್ಮಹೀಂ ಚ ಕೃತ್ಸ್ನಾಮಪವಾಹಯಂತಿ ॥ ೪೪

ವರ್ಷಪ್ರವೇಗಾ ವಿಪುಲಾಃ ಪತಂತಿ
ಪ್ರವಾಂತಿ ವಾತಾಃ ಸಮುದೀರ್ಣಘೋಷಾಃ ।

---

ಇಂದ್ರಗೋಪ ಹುಳುಗಳು ಹರಡಿವೆ. ಕದಂಬ ಮತ್ತು ಅರ್ಜುನ ಪುಷ್ಪಗಳಿಂದ ಸುವಾಸಿತವಾದ ಸುಂದರ ಶಾದ್ವಲಗಳಲ್ಲಿ ಆನೆಗಳು ಸಂಚರಿಸುತ್ತಿವೆ (೪೧). ಲಕ್ಷ್ಮಣ, ಅತ್ತ ನೋಡು; ಕಮಲದ ಕೇಸರಗಳು ವೃಷ್ಟಿಧಾರೆಯಿಂದ ಉದುರಲಾಗಿ, ದುಂಬಿಗಳು ಥಟ್ಟನೆ ಮೇಲೆ ಹಾರುತ್ತಿವೆ. ಆ ದುಂಬಿಗಳು ಕೇಸರಯುಕ್ತವಾದ ಕದಂಬಪುಷ್ಪಗಳಿರುವ ವನಗಳಿಗೆ ಎರಗುತ್ತಿವೆ (೪೨). ಲಕ್ಷ್ಮಣ, ಈ ಮಳೆಗಾಲದಲ್ಲಿ ಮಾತಂಗಗಳು ಮದದಿಂದ ಕೊಬ್ಬಿವೆ. ಹೋರಿಗಳು ಹರ್ಷದಿಂದುಬ್ಬಿವೆ. ಸಿಂಹಗಳು ವನದಲ್ಲಿ ವಿಶ್ರಮಿಸುತ್ತಿವೆ. ಗಿರಿಗಳು ರಮಣೀಯವಾಗಿ ರಾಜಿಸುತ್ತಿವೆ. ರಾಜರು ವಿಜಯಯಾತ್ರೆಯನ್ನು ನಿಲ್ಲಿಸಿ ಸುಮ್ಮನಿದ್ದಾರೆ. ದೇವೇಂದ್ರನು ಮೇಘಗಳಿಂದ ಆಟವಾಡುತ್ತಿದ್ದಾನೆ! (೪೩). ಮೇಘಗಳು ಜಲರಾಶಿಯನ್ನು ಹೊತ್ತು ಗಗನದಲ್ಲಿ ಮೆರೆಯುತ್ತ, ಸಮುದ್ರಘೋಷವನ್ನು ಮರೆಸುವಂತೆ ಮೊರೆಯುತ್ತ, ಹೊಳೆ ಹೊಂಡಗಳನ್ನೂ ಕೆರೆ ಬಾವಿಗಳನ್ನೂ ಜಲದಿಂದ ತುಳುಕಿಸುತ್ತ ನೆಲವೆಲ್ಲವನ್ನೂ ನೀರಿನಲ್ಲಿ ತೇಲಿಸುತ್ತಿವೆ (೪೪). ವೃಷ್ಟಿಧಾರೆಗಳು ವಿಪುಲವಾಗಿ ಸುರಿಯುತ್ತಿವೆ.

ಪ್ರನಷ್ಟಕೂಲಾಃ ಪ್ರವಹಂತಿ ಶೀಘ್ರಂ
ನದ್ಯೋ ಜಲೈರ್ವಿಪ್ರತಿಪನ್ನಮಾರ್ಗಾಃ ॥ ೪೫

ನರೈರ್ನರೇಂದ್ರಾ ಇವ ಪರ್ವತೇಂದ್ರಾಃ
ಸುರೇಂದ್ರದತ್ತೈಃ ಪವನೋಪನೀತೈಃ ।
ಘನಾಂಬುಕುಂಭೈರಭಿಷಿಚ್ಯಮಾನಾ
ರೂಪಂ ಶ್ರಿಯಂ ಸ್ವಾಮಿವ ದರ್ಶಯಂತಿ ॥ ೪೬

ಘನೋಪಗೂಢಂ ಗಗನಂ ಸತಾರಂ
ನ ಭಾಸ್ಕರೋ ದರ್ಶನಮಭ್ಯುಪೈತಿ ।
ನವೈರ್ಜಲೌಘೈರ್ಧರಣೀ ವಿತೃಪ್ತಾ
ತಮೋವಿಲಿಪ್ತಾ ನ ದಿಶಃ ಪ್ರಕಾಶಾಃ ॥ ೪೭

ಮಹಾಂತಿ ಕೂಟಾನಿ ಮಹೀಧರಾಣಾಂ
ಧಾರಾಭಿಧೌತಾನ್ಯಧಿಕಂ ವಿಭಾಂತಿ ।
ಮಹಾಪ್ರಮಾಣೈರ್ವಿಪುಲೈಃ ಪ್ರಪಾತೈ-
ರ್ಮುಕ್ತಾಕಲಾಪೈರಿವ ಲಂಬಮಾನೈಃ ॥ ೪೮

---

ಬಿರುಗಾಳಿಯು ಬಿರ್ರೆಂದು ಬೀಸುತ್ತಿದೆ. ಹೊಳೆಗಳು ದಡವನ್ನುರುಳಿಸಿ ದಾರಿತಪ್ಪಿ ವೇಗದಿಂದ ಹರಿಯುತ್ತಿವೆ. ಜನರಿಂದ ನರೇಂದ್ರರು ಪಟ್ಟಾಭಿಷಿಕ್ತರಾಗುವಂತೆ ಪರ್ವತರಾಜರು ಅಭಿಷಿಕ್ತರಾಗುತ್ತಿದ್ದಾರೆ, ನೋಡು! ಇಂದ್ರನು ಒದಗಿಸಿರುವ ಮೋಡಗಳೆಂಬ ಜಲಕುಂಭಗಳನ್ನು ವಾಯುವು ತಂದು, ಈ ಪರ್ವತರಾಜರಮೇಲೆ ಬಗ್ಗಿಸುತ್ತಿದ್ದಾನೆ! ಇವು ನರೇಂದ್ರರಂತೆ ತಮ್ಮ ನಿರ್ಮಲರೂಪವನ್ನೂ ವೈಭವವನ್ನೂ ಪ್ರದರ್ಶಿಸುತ್ತಿವೆ! (೪೫-೪೬) ಗಗನದಲ್ಲಿ ಮೋಡಗಳು ಮುಚ್ಚಿರುವುದರಿಂದ ಸೂರ್ಯನೂ ಕಾಣಿಸನು, ನಕ್ಷತ್ರಗಳೂ ಕಾಣಿಸವು. ನವಜಲಧಾರೆಗಳಿಂದ ಭೂಮಿಯು ಸಂತೃಪ್ತವಾಗಿದೆ ಕತ್ತಲೆ ಕವಿದು ದಿಕ್ಕುಗಳು ತಿಳಿಯದಂತೆ ಮಲಿನವಾಗಿವೆ (೪೭). ಮಳೆನೀರಿನಿಂದ ತೊಳೆಯಲ್ಪಟ್ಟ ಗಿರಿಶೃಂಗಗಳಲ್ಲಿ, ದೊಡ್ಡದೊಡ್ಡ ತೊರೆಗಳು ಹರಿಯುವುದರಿಂದ ಮುತ್ತಿನ ಹಾರಗಳನ್ನು ಧರಿಸಿದಂತೆ ಗಿರಿಶಿಖರಗಳು

ಶೈಲೋಪಲಪ್ರಸ್ಖಲಮಾನವೇಗಾಃ
ಶೈಲೋತ್ತಮಾನಾಂ ವಿಪುಲಾಃ ಪ್ರಪಾತಾಃ ।
ಗುಹಾಸು ಸಂನಾದಿತಬರ್ಹಿಣಾಸು
ಹಾರಾ ವಿಶೀರ್ಯಂತ ಇವಾಭಿಭಾಂತಿ ॥ ೪೯

ಶೀಘ್ರಪ್ರವೇಗಾ ವಿಪುಲಾಃ ಪ್ರಪಾತಾ
ನಿರ್ಧೌತಶೃಂಗೋಪತಲಾ ಗಿರೀಣಾಮ್ ।
ಮುಕ್ತಾಕಲಾಪಪ್ರತಿಮಾಃ ಪತಂತೋ
ಮಹಾಗುಹೋತ್ಸಂಗತಲೈರ್ಧ್ರಿಯಂತೇ ॥ ೫೦

ಸುರತಾಮರ್ದವಿಚ್ಛಿನ್ನಾಃ ಸ್ವರ್ಗಸ್ತ್ರೀಹಾರಮೌಕ್ತಿಕಾಃ ।
ಪತಂತೀವಾಕುಲಾ ದಿಕ್ಷು ತೋಯಧಾರಾಃ ಸಮಂತತಃ ॥ ೫೧

ನಿಲೀಯಮಾನೈರ್ವಿಹಗೈರ್ನಿಮೀಲದ್ಭಿಶ್ಚ ಪಂಕಜೈಃ ।
ವಿಕಸಂತ್ಯಾ ಚ ಮಾಲತ್ಯಾ ಗತೋಽಸ್ತಂ ಜ್ಞಾಯತೇ ರವಿಃ ॥ ೫೨

ವೃತ್ತಾ ಯಾತ್ರಾ ನರೇಂದ್ರಾಣಾಂ ಸೇನಾ ಪಥ್ಯೇವ ವರ್ತತೇ ।
ವೈರಾಣಿ ಚೈವ ಮಾರ್ಗಾಶ್ಚ ಸಲಿಲೇನ ಸಮೀಕೃತಾಃ ॥ ೫೩

---

ಶೋಭಿಸುತ್ತಿವೆ (೪೮). ನವಿಲುಗಳ ಕೇಕಾರವದಿಂದ ರಮ್ಯವಾದ ಗುಹೆಗಳ ದ್ವಾರದಲ್ಲಿ ಗಿರಿನಿರ್ಝರಗಳು ಬಂಡೆಗಳ ಮೇಲೆ ಧುಮುಕುತ್ತಿವೆ ಆಗ ತೂರಾಡುವ ಜಲಕಣಗಳನ್ನು ನೋಡಿದರೆ, ಮುತ್ತಿನ ಹಾರಗಳನ್ನು ಕಿತ್ತು ಚೆಲ್ಲಿದಂತೆ ಭಾಸವಾಗುತ್ತದೆ (೪೯) ಶೀಘ್ರವೇಗದಿಂದ ಹರಿಯುವ ವಿಪುಲ ಗಿರಿನದಿಗಳು ಗಿರಿಶೃಂಗಗಳ ತಳವನ್ನು ತೊಳೆದು, ಮುಕ್ತಾಹಾರಗಳಂತೆ ಕೆಳಗೆ ಬೀಳುವಾಗ ಮಹಾಗುಹೆಗಳ ಮಧ್ಯತಳಗಳು ಅವುಗಳಿಗೆ ಆಶ್ರಯವನ್ನು ಕೊಡುತ್ತಿವೆ (೫೦). ಲಕ್ಷ್ಮಣ, ನಭಸ್ತಳದಿಂದ ಸುತ್ತಲೂ ಸುರಿಯುವ ವಾರಿಧಾರೆಗಳನ್ನು ನೋಡು. ಸ್ವರ್ಗದಲ್ಲಿರುವ ಅಪ್ಸರೆಯರ ವಿಹಾರಕಾಲದಲ್ಲಿ ಹಾರಗಳು ಹರಿದು ಮುತ್ತುಗಳು ಚೆಲ್ಲಿದವೋ ಎಂಬಂತೆ ಕಾಣುತ್ತದೆ! (೫೧). ಈ ಕಾಲದಲ್ಲಿ ಸೂರ್ಯನು ಮುಳುಗುವನೆಂಬುದು ಕಣ್ಣಿಗೆ ಕಾಣಿಸುವುದಿಲ್ಲ. ಹಕ್ಕಿಗಳು ಗೂಡಿಗೆ ಅಡರುವುದನ್ನೂ, ತಾವರೆಗಳು ಮುಚ್ಚಿಕೊಳ್ಳುವುದನ್ನೂ, ಜಾಜಿಗಳು ಅರಳುವುದನ್ನೂ ನೋಡಿ ಸೂರ್ಯಾಸ್ತವನ್ನು ಊಹಿಸಬೇಕಾಗಿದೆ! (೫೨). ರಾಜರ ಯುದ್ಧಯಾತ್ರೆಯು ಮುಗಿದಿದೆ. ಅವರ ಸೇನೆಯು

ಮಾಸಿ ಪ್ರೋಷ್ಠಪದೇ ಬ್ರಹ್ಮ ಬ್ರಾಹ್ಮಣಾನಾಮಧೀಯತಾಮ್ ।
ಅಯಮಧ್ಯಾಯಸಮಯಃ ಸಾಮಗಾನಾಮುಪಸ್ಥಿತಃ ॥ ೫೪

ನಿವೃತ್ತಕರ್ಮಾಯತನೋ ನೂನಂ ಸಂಚಿತಸಂಚಯಃ ।
ಆಷಾಢೀಮಭ್ಯುಪಗತೋ ಭರತಃ ಕೋಸಲಾಧಿಪಃ ॥ ೫೫

ನೂನಮಾಪೂರ್ಯಮಾಣಾಯಾಃ ಸರಯ್ವಾ ವರ್ಧತೇ ರಯಃ ।
ಮಾಂ ಸಮೀಕ್ಷ್ಯ ಸಮಾಯಾಂತಮಯೋಧ್ಯಾಯಾ ಇವ ಸ್ವನಃ ॥

ಇಮಾಃ ಸ್ಫೀತಗುಣಾ ವರ್ಷಾಃ ಸುಗ್ರೀವಃ ಸುಖಮಶ್ನುತೇ ।
ವಿಜಿತಾರಿಃ ಸದಾರಶ್ಚ ರಾಜ್ಯೇ ಮಹತಿ ಚ ಸ್ಥಿತಃ ॥ ೫೭

ಅಹಂ ತು ಹೃತದಾರಶ್ಚ ರಾಜ್ಯಾಚ್ಚ ಮಹತಶ್ಚ್ಯುತಃ ।
ನದೀಕೂಲಮಿವ ಕ್ಲಿನ್ನಮವಸೀದಾಮಿ ಲಕ್ಷ್ಮಣ ॥ ೫೮

---

ನಡುದಾರಿಯಲ್ಲಿಯೇ ಉಳಿದಿದೆ! ರಾಜರ ವೈರಕ್ಕೂ ನಡೆಯುವ ದಾರಿಗೂ ನೀರು ಸುರಿದು ಕಟ್ಟಾಗಿ, ಅವೆರಡೂ ಸಮವಾದವು! ಭಾದ್ರಪದ ಮಾಸದಲ್ಲಿ ವೇದಾಧ್ಯಯನವನ್ನಾರಂಭಿಸುವ ಸಾಮವೇದಿಗಳಾದ ಬ್ರಾಹ್ಮಣರಿಗೆ ವೇದಾಧ್ಯಯನಕಾಲವು ಪ್ರಾಪ್ತವಾಯಿತು (೫೩-೫೪). ಲಕ್ಷ್ಮಣ, ಕೋಸಲೇಶ್ವರನಾದ ಭರತನು ರಾಜಕಾರ್ಯವಿಸ್ತರವನ್ನು ಈ ಸಮಯದಲ್ಲಿ ನಿಲ್ಲಿಸಿರಬಹುದು. ಸಂಗ್ರಾಹ್ಯವಸ್ತುಗಳನ್ನು ಸೇರಿಸಿಕೊಂಡು ಆಷಾಢ ಶುದ್ಧ ಪೂರ್ಣಿಮೆಯಿಂದ ಯಾವುದಾದರೊಂದು ವ್ರತಸಂಕಲ್ಪವನ್ನು ಕೈಗೊಂಡಿರಬಹುದು (೫೫). ಈಗ ಸರಯೂನದಿಯು ಪ್ರವಾಹಭರದಿಂದ ತುಂಬಿ ಉಕ್ಕುತ್ತಿರಬಹುದು! ಹಿಂದೆ ನಾನು ಅಯೋಧ್ಯೆಯ ಬೀದಿಯಲ್ಲಿ ಬಂದಾಗ ಪ್ರಜೆಗಳ ಆನಂದಕೋಲಾಹಲದಂತೆ, ಸರಯೂನದಿಯು ಭೋರ್ಗರೆಯುವುದು ಕೇಳುತ್ತಿರಬಹುದು! (೫೬). ಗುಣಗಣಮಂಡಿತವಾದ ಈ ವರ್ಷಾಕಾಲವನ್ನು ಸುಗ್ರೀವನು ಸೌಖ್ಯದಿಂದ ಕಳೆಯುತ್ತಿದ್ದಾನೆ. ಶತ್ರುವನ್ನು ನಿಗ್ರಹಿಸಿ, ಮಡದಿಯನ್ನು ಪಡೆದು, ಮಹಾರಾಜ್ಯದಲ್ಲಿ ಪ್ರತಿಷ್ಠಿತನಾಗಿದ್ದಾನೆ. ಲಕ್ಷ್ಮಣ, ನಾನಾದರೋ ಮಹಾರಾಜ್ಯದಿಂದ ಭ್ರಷ್ಟನಾಗಿ ಪತ್ನಿಯನ್ನೂ ಕಳೆದುಕೊಂಡಿದ್ದೇನೆ. ನೆನೆದು ಸಡಿಲವಾದ ನದೀಕೂಲದಂತೆ

ಶೋಕಶ್ಚ ಮಮ ವಿಸ್ತೀರ್ಣೋ ವರ್ಷಾಶ್ಚ ಭೃಶದುರ್ಗಮಾಃ ।
ರಾವಣಶ್ಚ ಮಹಾನ್ ಶತ್ರುರಪಾರಂ ಪ್ರತಿಭಾತಿ ಮೇ ॥ ೫೯

ಅಯಾತ್ರಾಂ ಚೈವ ದೃಷ್ಟ್ವೇಮಾಂ ಮಾರ್ಗಾಂಶ್ಚ ಭೃಶದುರ್ಗಮಾನ್
ಪ್ರಣತೇ ಚೈವ ಸುಗ್ರೀವೇ ನ ಮಯಾ ಕಿಂಚಿದೀರಿತಮ್ ॥ ೬೦

ಅಪಿ ಚಾತಿಪರಿಕ್ಲಿಷ್ಟಂ ಚಿರಾದ್ದಾರೈಃ ಸಮಾಗತಮ್ ।
ಆತ್ಮಕಾರ್ಯಗರೀಯಸ್ತ್ವಾದ್ವಕ್ತುಂ ನೇಚ್ಛಾಮಿ ವಾನರಮ್ ॥ ೬೧

ಸ್ವಯಮೇವ ಹಿ ವಿಶ್ರಮ್ಯ ಜ್ಞಾತ್ವಾ ಕಾಲಮುಪಾಗತಮ್ ।
ಉಪಕಾರಂ ಚ ಸುಗ್ರೀವೋ ವೇತ್ಸ್ಯತೇ ನಾತ್ರ ಸಂಶಯಃ ॥ ೬೨

ತಸ್ಮಾತ್ ಕಾಲಪ್ರತೀಕ್ಷೋಽಹಂ ಸ್ಥಿತೋಽಸ್ಮಿ ಶುಭಲಕ್ಷಣ ।
ಸುಗ್ರೀವಸ್ಯ ನದೀನಾಂ ಚ ಪ್ರಸಾದಮನುಪಾಲಯನ್ ॥ ೬೩

---

ಕುಸಿದುಹೋಗುತ್ತಿದ್ದೇನೆ (೫೭-೫೮). ನನ್ನ ಶೋಕವು ಅಪರಿಮಿತವಾಯಿತು. ವರ್ಷಾಕಾಲವನ್ನು ಕಳೆಯುವುದು ದುಸ್ಸಾಧ್ಯವಾಗಿದೆ. ರಾವಣನು ಮಹಾವೈರಿಯಾಗಿದ್ದಾನೆ. ಕಷ್ಟಪರಂಪರೆಯು ಅಪಾರವಾಗಿದೆಯೆಂದು ತೋರುತ್ತದೆ. ಸುಗ್ರೀವನು ವಿನಯದಿಂದ ನಿವೇದಿಸಿಕೊಂಡರೂ ಮುಂದಿನ ಕಾರ್ಯಾರಂಭವನ್ನು ನಡೆಸುವಂತೆ ನಾನು ಹೇಳಲಿಲ್ಲ. ಸಮರೋದ್ಯಮಕ್ಕೆ ಇದು ಸರಿಯಾದ ಸಮಯವಲ್ಲವೆಂದೂ, ಮಾರ್ಗಗಳು ದುರ್ಗಮವಾಗಿವೆಯೆಂದೂ ತಿಳಿದು ನಾನು ಸುಮ್ಮನಾದೆನು (೫೯-೬೦). ಅದೂ ಅಲ್ಲದೆ, ಸುಗ್ರೀವನು ಬಹಳ ಕಷ್ಟವನ್ನನುಭವಿಸಿದ್ದಾನೆ; ದೀರ್ಘಕಾಲದಮೇಲೆ ಮಡದಿಯೊಡನೆ ಸೇರಿದ್ದಾನೆ. ನನ್ನ ಕಾರ್ಯಗೌರವವಾದರೋ ಬಹಳ ದೊಡ್ಡದು ಎಂದು ಆಲೋಚಿಸಿ, ಅವನಿಗೆ ಯಾವ ಸೂಚನೆಯನ್ನೂ ಕೊಡಲು ನಾನು ಇಚ್ಛೆಸಲಿಲ್ಲ (೬೧). ಸುಗ್ರೀವನು ಸ್ವಲ್ಪಕಾಲದವರೆಗೆ ವಿಶ್ರಮಿಸಿಕೊಳ್ಳಲಿ. ಅನಂತರ ಉದ್ಯೋಗಕಾಲವು ಬಂದಿತೆಂದೂ ನನ್ನಿಂದ ತನಗೆ ಉಪಕಾರವಾಗಿದೆಯೆಂದೂ ಅರಿತು, ಮುಂದಿನ ಕರ್ತವ್ಯವನ್ನು ತಾನೇ ತಿಳಿದುಕೊಳ್ಳುವನು ; ಇದರಲ್ಲಿ ಸಂದೇಹವಿರದು (೬೨). ಆದ್ದರಿಂದ, ವತ್ಸ-ಲಕ್ಷ್ಮಣ, ಶರತ್ಕಾಲವನ್ನು ನಿರೀಕ್ಷಿಸುತ್ತ ಸುಮ್ಮನಿದ್ದೇನೆ. ಸುಗ್ರೀವ ಮತ್ತು

ಉಪಕಾರೇಣ ವೀರೋ ಹಿ ಪ್ರತಿಕಾರೇಣ ಯುಜ್ಯತೇ ।
ಅಕೃತಜ್ಞೋಽಪ್ರತಿಕೃತೋ ಹಂತಿ ಸತ್ತ್ವವತಾಂ ಮನಃ ॥ ೬೪

ತೇನೈವಮುಕ್ತಃ ಪ್ರಣಿಧಾಯ ಲಕ್ಷ್ಮಣಃ
ಕೃತಾಂಜಲಿಸ್ತತ್ ಪ್ರತಿಪೂಜ್ಯ ಭಾಷಿತಮ್ ।
ಉವಾಚ ರಾಮಂ ಸ್ವಭಿರಾಮದರ್ಶನಂ
ಪ್ರದರ್ಶಯನ್ ದರ್ಶನಮಾತ್ಮನಃ ಶುಭಮ್ ॥ ೬೫

ಯಥೋಕ್ತಮೇತತ್ತವ ಸರ್ವಮೀಪ್ಸಿತಂ
ನರೇಂದ್ರ ಕರ್ತಾ ನ ಚಿರಾದ್ಧರೀಶ್ವರಃ ।
ಶರತ್ಪ್ರತೀಕ್ಷಃ ಕ್ಷಮತಾಮಿಮಂ ಭವಾನ್
ಜಲಪ್ರಪಾತಂ ರಿಪುನಿಗ್ರಹೇ ಧೃತಃ ॥ ೬೬

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಅಷ್ಟಾವಿಂಶಃ ಸರ್ಗಃ



ನದಿಗಳ ಪ್ರಸನ್ನತೆಗಾಗಿ ಕಾದಿದ್ದೇನೆ. ವೀರನಾದವನು ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡಿಯೇ ತೀರುತ್ತಾನೆ. ಪ್ರತ್ಯುಪಕಾರಮಾಡದ ಕೃತಘ್ನನು ಮಹಾತ್ಮರ ಮನಸ್ಸನ್ನು ನೋಯಿಸುತ್ತಾನೆ" ಎಂದು ಶ್ರೀರಾಮನು ಹೇಳಿದನು (೬೩-೬೪). ಶ್ರೀರಾಮನ ನುಡಿಯನ್ನು ಆದರ ದಿಂದ ಆಲಿಸುತ್ತಿದ್ದ ಲಕ್ಷ್ಮಣನು ಕೈಮುಗಿದುಕೊಂಡು, ಆತನ ಅಭಿಮತವನ್ನು ಅನುಮೋದಿಸಿದನು. ಲಕ್ಷ್ಮಣನು ಸುಂದರಾಂಗನಾದ ಶ್ರೀರಾಮನಿಗೆ ತನ್ನ ಶುಭಕರವಾದ ಅಭಿಪ್ರಾಯವನ್ನು ತಿಳಿಸುತ್ತ "ಅಣ್ಣ, ನೀನು ಹೇಳುವುದು ಯುಕ್ತವಾಗಿದೆ (೬೫). ವಾನರೇಂದ್ರನು ನಿನ್ನ ಅಭೀಷ್ಟವನ್ನು ಶೀಘ್ರ ದಲ್ಲಿಯೇ ಸಾಧಿಸಿಕೊಡುವನು. ಈ ಮಳೆಗಾಲವು ಕಳೆದು ಶರತ್ಕಾಲವು ಬರುವುದನ್ನು ಪ್ರತೀಕ್ಷಿಸುತ್ತ ತಾಳ್ಮೆಯಿಂದಿರು. ಶತ್ರುವನ್ನು ನಿಗ್ರಹಿಸಲೇ ಬೇಕೆಂದು ದೃಢವ್ರತನಾಗಿರು" ಎಂದು ಹೇಳಿದನು (೬೬).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಇಪ್ಪತ್ತೆಂಟನೆಯ ಸರ್ಗ



## ಏಕೋನತ್ರಿಂಶಃ ಸರ್ಗಃ

### ಹನುಮತ್ಪ್ರತಿಬೋಧನಮ್

ಸಮೀಕ್ಷ್ಯ ವಿಮಲಂ ವ್ಯೋಮ ಗತವಿದ್ಯುದ್ಬಲಾಹಕಮ್ ।
ಸಾರಸಾರವಸಂಘುಷ್ಟಂ ರಮ್ಯಜ್ಯೋತ್ಸ್ನಾನುಲೇಪನಮ್ ॥ ೧

ಸಮೃದ್ಧಾರ್ಥಂ ಚ ಸುಗ್ರೀವಂ ಮಂದಧರ್ಮಾರ್ಥಸಂಗ್ರಹಮ್ ।
ಅತ್ಯರ್ಥಮಸತಾಂ ಮಾರ್ಗಮೇಕಾಂತಗತಮಾನಸಮ್ ॥ ೨

ನಿವೃತ್ತಕಾರ್ಯಂ ಸಿದ್ಧಾರ್ಥಂ ಪ್ರಮದಾಭಿರತಂ ಸದಾ ।
ಪ್ರಾಪ್ತವಂತಮಭಿಪ್ರೇತಾನ್ ಸರ್ವಾನಪಿ ಮನೋರಥಾನ್ ॥ ೩

ಸ್ವಾಂ ಚ ಪತ್ನೀಮಭಿಪ್ರೇತಾಂ ತಾರಾಂ ಚಾಪಿ ಸಮೀಪ್ಸಿತಾಮ್ ।
ವಿಹರಂತಮಹೋರಾತ್ರಂ ಕೃತಾರ್ಥಂ ವಿಗತಜ್ವರಮ್ ॥ ೪

### ಸರ್ಗ ೨೯

ಹನುಮಂತನು ಶ್ರೀರಾಮನ ಕಾರ್ಯವನ್ನು ಸುಗ್ರೀವನಿಗೆ ಜ್ಞಾಪಿಸುವುದು.
ಸುಗ್ರೀವನು ಸಮಸ್ತ ಸೈನ್ಯವನ್ನೂ ಕರೆಸುವಂತೆ ನೀಲನಿಗೆ ಅಜ್ಞಾಪಿಸುವುದು.

ಮಳೆಗಾಲವು ಕಳೆದು ಮಿಂಚುಮೋಡಗಳ ಅಬ್ಬರವಿಳಿಯಿತು. ಗಗನವು ವಿಮಲವಾಯಿತು. ಸಾರಸಪಕ್ಷಿಗಳ ಕೂಗು ಹರಡಿತು. ಆಕಾಶವು ಚೆಲುವಾದ ಬೆಳ್ದಿಂಗಳನ್ನು ಬಳಿದುಕೊಂಡಿತು. ಇದೆಲ್ಲವನ್ನೂ ಹನುಮಂತನು ಸಮೀಕ್ಷಿಸಿದನು (೧). ಇತ್ತ ಸುಗ್ರೀವನು ಇಷ್ಟಾರ್ಥವನ್ನು ಪಡೆದು ವಿಲಾಸದಲ್ಲಿ ಮುಳುಗಿದ್ದನು. ಧರ್ಮಾರ್ಥಗಳನ್ನುಪೇಕ್ಷಿಸಿ ಸಜ್ಜನದೂರವಾದ ಮಾರ್ಗವನ್ನು ಹಿಡಿದಿದ್ದನು. ಅವನು ಅಂತಃಪುರದ ಏಕಾಂತವೊಂದರಲ್ಲಿಯೇ ಆಸಕ್ತನಾಗಿದ್ದನು (೨) ಸುಗ್ರೀವನು ಕೃತಕೃತ್ಯನಾಗಿ ರಾಜಕಾರ್ಯವೆಲ್ಲವನ್ನೂ ತೊರೆದು ಸ್ತ್ರೀಲೋಲುಪನಾಗಿದ್ದನು. ತನ್ನ ಮನೋರಥಗಳೆಲ್ಲವೂ ಸಿದ್ಧಿಸಿದವೆಂದು ನಲಿಯುತ್ತಿದ್ದನು. ಅವನು ತನ್ನ ಮಡದಿಯಾದ ರುಮೆಯನ್ನೂ ಪ್ರಿಯಳಾದ ತಾರೆಯನ್ನೂ ಪಡೆದು ಅಹೋರಾತ್ರವೂ ಕ್ರೀಡಿಸುತ್ತ ನಿಶ್ಚಿಂತೆ

ಕ್ರೀಡಂತಮಿವ ದೇವೇಂದ್ರಂ ನಂದನೇಽಪ್ಸರಸಾಂ ಗಣೈಃ ।
ಮಂತ್ರಿಷು ನ್ಯಸ್ತಕಾರ್ಯಂ ಚ ಮಂತ್ರಿಣಾಮನವೇಕ್ಷಕಮ್ ॥ ೫

ಉತ್ಸನ್ನರಾಜ್ಯಸಂದೇಶಂ ಕಾಮವೃತ್ತಮವಸ್ಥಿತಮ್ ।
ನಿಶ್ಚಿತಾರ್ಥೋಽರ್ಥತತ್ತ್ವಜ್ಞಃ ಕಾಲಧರ್ಮವಿಶೇಷವಿತ್ ॥ ೬

ಪ್ರಸಾದ್ಯ ವಾಕ್ಯೈರ್ಮಧುರೈರ್ಹೇತುಮದ್ಭಿರ್ಮನೋರಮೈಃ ।
ವಾಕ್ಯವಿದ್ವಾಕ್ಯತತ್ತ್ವಜ್ಞಂ ಹರೀಶಂ ಮಾರುತಾತ್ಮಜಃ ॥ ೭

ಹಿತಂ ತಥ್ಯಂ ಚ ಪಥ್ಯಂ ಚ ಸಾಮಧರ್ಮಾರ್ಥನೀತಿಮತ್ ।
ಪ್ರಣಯಪ್ರೀತಿಸಂಯುಕ್ತಂ ವಿಶ್ವಾಸಕೃತನಿಶ್ಚಯಮ್ ॥ ೮

ಹರೀಶ್ವರಮುಪಾಗಮ್ಯ ಹನುಮಾನ್ ವಾಕ್ಯಮಬ್ರವೀತ್ ।
ರಾಜ್ಯಂ ಪ್ರಾಪ್ತಂ ಯಶಶ್ಚೈವ ಕೌಲೀ ಶ್ರೀರಪಿ ವರ್ಧಿತಾ ॥ ೯

---

ಯಲ್ಲಿದ್ದನು (೩-೪) ನಂದನವನದಲ್ಲಿ ಅಪ್ಸರೆಯರೊಡನೆ ವಿಹರಿಸುವ ದೇವೇಂದ್ರನಂತೆ, ಸ್ತ್ರೀಯರೊಡನೆ ವಿಹರಿಸುತ್ತ ಮಂತ್ರಿಗಳಿಗೆ ರಾಜಕಾರ್ಯವನ್ನೊಪ್ಪಿಸಿ ಮಂತ್ರಿಗಳನ್ನೂ ನೋಡದಿದ್ದನು ಆತನು ರಾಜಕಾರ್ಯದ ಸಂಪರ್ಕವನ್ನೇ ಕಡಿದುಹಾಕಿ ಕಾಮಸುಖದಲ್ಲಿ ಮಗ್ನನಾದನು. ಈ ಸಂದರ್ಭವನ್ನು ಹನುಮಂತನು ಸಮೀಕ್ಷಿಸಿದನು. ಹನುಮಂತನಾದರೋ ಕರ್ತವ್ಯವನ್ನು ನಿಶ್ಚಯಿಸಿ ತಿಳಿದವನು. ಕಾರ್ಯಾಕಾರ್ಯಗಳ ತತ್ತ್ವವನ್ನು ಬಲ್ಲವನು. ಕಾಲೋಚಿತವಾದ ಧರ್ಮವು ಯಾವುದೆಂಬುದನ್ನರಿತವನು (೫-೬). ವಾಕ್ಯಕೋವಿದನಾದ ಆ ವಾಯುಪುತ್ರನು ಸುಗ್ರೀವನ ಸಮೀಪಕ್ಕೆ ಹೋಗಿ ಮಧುರವೂ ಯುಕ್ತಿಯುಕ್ತವೂ ಆದ ವಚನದಿಂದ ಸುಗ್ರೀವನನ್ನು ಒಲಿಸಿಕೊಂಡು ಅವನೊಡನೆ ಸಂಭಾಷಿಸಿದನು. ಹನುಮಂತನ ವಚನ ಧೋರಣೆಯು ಹಿತವೂ ಪಥ್ಯವೂ ತಥ್ಯವೂ ಆಗಿದ್ದಿತಲ್ಲದೆ ಸಾಂತ್ವನಯುಕ್ತವಾಗಿ ಧರ್ಮಾರ್ಥನೀತಿಗಳಿಂದ ಸಮನ್ವಿತವಾಗಿದ್ದಿತು. ಸುಗ್ರೀವನಲ್ಲಿ ತನಗಿರುವ ಪ್ರೀತಿವಿಶ್ವಾಸಗಳಿಗೆ ಅನುಗುಣವಾಗಿದ್ದಿತು (೭-೮). ಹನುಮಂತನು ವಾನರೇಶ್ವರನೊಡನೆ ಹೀಗೆಂದನು : "ಮಹಾರಾಜ – ಸುಗ್ರೀವ, ನಿನಗೆ ರಾಜ್ಯವು ಕೈಸೇರಿತು. ಕೀರ್ತಿಯು ಲಭಿಸಿತು. ಕುಲಕ್ರಮಾಗತವಾದ

ಮಿತ್ರಾಣಾಂ ಸಂಗ್ರಹಃ ಶೇಷಸ್ತಂ ಭವಾನ್ ಕರ್ತುಮರ್ಹತಿ ।
ಯೋ ಹಿ ಮಿತ್ರೇಷು ಕಾಲಜ್ಞಃ ಸತತಂ ಸಾಧು ವರ್ತತೇ ॥ ೧೦

ತಸ್ಯ ರಾಜ್ಯಂ ಚ ಕೀರ್ತಿಶ್ಚ ಪ್ರತಾಪಶ್ಚಾಭಿವರ್ಧತೇ ।
ಯಸ್ಯ ಕೋಶಶ್ಚ ದಂಡಶ್ಚ ಮಿತ್ರಾಣ್ಯಾತ್ಮಾ ಚ ಭೂಮಿಪ ॥ ೧೧

ಸಮವೇತಾನಿ ಸರ್ವಾಣಿ ಸ ರಾಜ್ಯಂ ಮಹದಶ್ನುತೇ ।
ತದ್ಭವಾನ್ ವೃತ್ತಸಂಪನ್ನಃ ಸ್ಥಿತಃ ಪಥಿ ನಿರತ್ಯಯೇ ॥ ೧೨

ಮಿತ್ರಾರ್ಥಮಭಿನೀತಾರ್ಥಂ ಯಥಾವತ್ ಕರ್ತುಮರ್ಹತಿ ।
ಸಂತ್ಯಜ್ಯ ಸರ್ವಕರ್ಮಾಣಿ ಮಿತ್ರಾರ್ಥೇ ಯೋ ನ ವರ್ತತೇ ॥ ೧೩

ಸಂಭ್ರಮಾದ್ವಿಕೃತೋತ್ಸಾಹಃ ಸೋಽನರ್ಥೇನಾವರುಧ್ಯತೇ ।
ಯಸ್ತು ಕಾಲವ್ಯತೀತೇಷು ಮಿತ್ರಕಾರ್ಯಮರಿಂದಮ ॥ ೧೪

ಸ ಕೃತ್ವಾ ಮಹತೋಽಪ್ಯರ್ಥಾನ್ನ ಮಿತ್ರಾರ್ಥೇನ ಯುಜ್ಯತೇ ।
ಯದಿದಂ ವೀರ ಕಾರ್ಯಂ ನೋ ಮಿತ್ರಕಾರ್ಯಮರಿಂದಮ ॥ ೧೫

---

ಸಂಪತ್ತು ವರ್ಧಿಸಿತು ಇನ್ನು ಮಿತ್ರಸಂಗ್ರಹವೊಂದು ಉಳಿದಿದೆ. ಅದನ್ನು ನೀನು ಸಾಧಿಸಿಕೊಳ್ಳಬೇಕು. ಕಾಲವನ್ನರಿತು ಮಿತ್ರರೊಡನೆ ಸೇರಿ ಯಾವಾಗಲೂ ಒಳ್ಳೆಯ ರೀತಿಯಿಂದ ವರ್ತಿಸಬೇಕು (೯-೧೦). ಹಾಗೆ ವರ್ತಿಸಿದರೆ ರಾಜ್ಯ, ಕೀರ್ತಿ, ಪ್ರತಾಪಗಳು ಬೆಳೆಯುತ್ತ ಹೋಗುತ್ತವೆ. ಯಾರಲ್ಲಿ ಭಂಡಾರ, ಸೇನೆ, ಮಿತ್ರವರ್ಗ ಮತ್ತು ಪರಿಷ್ಕೃತವಾದ ಬುದ್ಧಿಶಕ್ತಿ– ಇವೆಲ್ಲವೂ ಸಮತೂಕದಲ್ಲಿ ಹೊಂದಿಕೊಂಡಿರುವುವೋ ಅವನು ಮಹಾರಾಜ್ಯ ವನ್ನು ಪಡೆದು ಆಳುವನು. ಮಹಾರಾಜ, ನೀನು ಶೀಲಸಂಪನ್ನನಾಗಿ ಸನ್ಮಾರ್ಗದಲ್ಲಿ ನಡೆಯುತ್ತಿದ್ದೀಯೆ (೧೧-೧೨). ನೀನು ಮಿತ್ರರಿಗೋಸ್ಕರ ಅವರ ಕೋರಿಕೆಗಳನ್ನು ಯಥಾವತ್ತಾಗಿ ನಡೆಸಿಕೊಡಬೇಕು. ನಮ್ಮ ಕಾರ್ಯಗಳನ್ನಾದರೂ ಬಿಟ್ಟು ಮಿತ್ರರ ಕಾರ್ಯದಲ್ಲಿ ನೆರವಾಗಬೇಕು. ಹಾಗಿಲ್ಲದೆ ಏನಾಗುವುದೋ ಎಂಬ ಭಯದಿಂದ ಉತ್ಸಾಹರಹಿತನಾಗಿ ಮಿತ್ರ ರಿಗೆ ನೆರವಾಗದಿದ್ದರೆ, ಅಂಥವನಿಗೆ ಅನರ್ಥಗಳು ಬಂದೆರಗುವುವು (೧೩-೧೪). ಸ್ನೇಹಿತರ ಕಾರ್ಯವನ್ನು ಯುಕ್ತಕಾಲದಲ್ಲಿ ನಡೆಸದೆ, ಕಾಲಾಂತರದಲ್ಲಿ ದೊಡ್ಡ ಕಾರ್ಯವನ್ನು ನಡೆಸಿಕೊಟ್ಟರೂ ಉಪಯೋಗವಿಲ್ಲ. ಅವನು

ಶ್ರೂಯತಾಂ ರಾಘವಸ್ಯೈತದ್ವೈದೇಹ್ಯಾಃ ಪರಿಮಾರ್ಗಣಮ್ ।
ನ ಚ ಕಾಲಮತೀತಂ ತೇ ನಿವೇದಯತಿ ಕಾಲವಿತ್ ॥ ೧೬

ತ್ವರಮಾಣೋಽಪಿ ಸನ್ ಪ್ರಾಜ್ಞಸ್ತವ ರಾಜನ್ ವಶಾನುಗಃ ।
ಕುಲಸ್ಯ ಹೇತುಃ ಸ್ಫೀತಸ್ಯ ದೀರ್ಘಬಂಧುಶ್ಚ ರಾಘವಃ ॥ ೧೭

ಅಪ್ರಮೇಯಪ್ರಭಾವಶ್ಚ ಸ್ವಯಂ ಚಾಪ್ರತಿಮೋ ಗುಣೈಃ ।
ತಸ್ಯ ತ್ವಂ ಕುರು ವೈ ಕಾರ್ಯಂ ಪೂರ್ವಂ ತೇನ ಕೃತಂ ತವ ॥ ೧೮

ಹರೀಶ್ವರ ಹರಿಶ್ರೇಷ್ಠಾನಾಜ್ಞಾಪಯಿತುಮರ್ಹಸಿ ।
ನ ಹಿ ತಾವದ್ಭವೇತ್ ಕಾಲೋ ವ್ಯತೀತಶ್ಚೋದನಾದೃತೇ ॥ ೧೯

ಚೋದಿತಸ್ಯ ಹಿ ಕಾರ್ಯಸ್ಯ ಭವೇತ್ ಕಾಲವ್ಯತಿಕ್ರಮಃ ।
ಅಕರ್ತುರಪಿ ಕಾರ್ಯಸ್ಯ ಭವಾನ್ ಕರ್ತಾ ಹರೀಶ್ವರ ॥ ೨೦

ಕಿಂ ಪುನಃ ಪ್ರತಿಕರ್ತುಸ್ತೇ ರಾಜ್ಯೇನ ಚ ವಧೇನ ಚ ।
ಶಕ್ತಿಮಾನಪಿ ವಿಕ್ರಾಂತೋ ವಾನರರ್ಕ್ಷಗಣೇಶ್ವರ ॥ ೨೧

---

ಸ್ನೇಹಿತರ ಕಾರ್ಯವನ್ನು ನಡೆಸದಂತೆಯೇ ಸರಿ. ಎಲೈ ಶೂರಾಗ್ರಣಿ, ಈಗ ನಾವು ಮಾಡಬೇಕಾದ ಮಿತ್ರಕಾರ್ಯವೆಂದರೆ ಶ್ರೀರಾಮನ ಕಾರ್ಯ ಅದೇ ಸೀತಾನ್ವೇಷಣೆ ಗೊತ್ತಾದ ಕಾಲಾವಧಿಯು ಮೀರಿತೆಂಬುದು ಶ್ರೀರಾಮನಿಗೆ ಗೊತ್ತಿದೆ. ಕಾರ್ಯಾತುರನಾಗಿದ್ದರೂ ಪ್ರಾಜ್ಞನಾದ ಶ್ರೀರಾಮನು, ಮಹಾರಾಜ, ನಿನ್ನನ್ನು ಅನುಸರಿಸಬೇಕೆಂಬ ದೃಷ್ಟಿಯಿಂದ ಈ ವಿಷಯವನ್ನು ನಿನಗೆ ತಿಳಿಸಿಲ್ಲ. ರಾಘವನು ನಿನ್ನ ವಂಶೋನ್ನತಿಗೆ ನಿಮಿತ್ತನಾಗಿದ್ದಾನೆ. ನೀನು ಶಾಶ್ವತವಾಗಿ ನೆನೆಸಿಕೊಳ್ಳಬೇಕಾದ ಬಂಧುವಾಗಿದ್ದಾನೆ (೧೫-೧೭) ಅವನ ಮಹಿಮೆ ಊಹಾತೀತವಾದುದು ಸದ್ಗುಣಗಳಲ್ಲಿ ಅವನಿಗೆ ಎಣೆಯಾದವರಿಲ್ಲ. ಆದ್ದರಿಂದ, ಸುಗ್ರೀವ, ಅವನ ಕಾರ್ಯವನ್ನು ನಡೆಸು. ಅವನು ಮೊದಲೇ ನಿನ್ನ ಕಾರ್ಯವನ್ನು ಸಾಧಿಸಿಕೊಟ್ಟಿದ್ದಾನೆ. ವಾನರೇಶ್ವರ, ವಾನರಮುಖ್ಯರನ್ನು ಕರೆಸಿ ಅವರಿಗೆ ನೀನು ಆಜ್ಞೆಯನ್ನೀಯಬೇಕು ಆಜ್ಞೆಯನ್ನೀಯಲು ಹೆಚ್ಚು ಕಾಲವೇನೂ ಬೇಕಾಗಿಲ್ಲ (೧೮-೧೯). ಆಜ್ಞಪ್ತ ಕಾರ್ಯವನ್ನು ಸಾಧಿಸಲು, ಅನಂತರ ಬಹಳ ಕಾಲ ಬೇಕಾದೀತು. ಮಹಾರಾಜ, ನಿನಗೆ ಉಪಕಾರವನ್ನು ಮಾಡದವನ ಕಾರ್ಯವನ್ನೇ ಸಾಧಿಸಿಕೊಡತಕ್ಕ ಸ್ವಭಾವದವನು ನೀನು; ಹೀಗಿರಲು ವಾಲಿಯನ್ನು ವಧಿಸಿ ನಿನಗೆ

ಕರ್ತುಂ ದಾಶರಥೇಃ ಪ್ರೀತಿಮಾಜ್ಞಾಯಾಂ ಕಿಂ ನ ಸಜ್ಜಸೇ ।
ಕಾಮಂ ಖಲು ಶರೈಃ ಶಕ್ತಃ ಸುರಾಸುರಮಹೋರಗಾನ್ ॥ ೨೨

ವಶೇ ದಾಶರಥಿಃ ಕರ್ತುಂ ತ್ವತ್ಪ್ರತಿಜ್ಞಾಂ ತು ಕಾಂಕ್ಷತೇ ।
ಪ್ರಾಣತ್ಯಾಗಾವಿಶಂಕೇನ ಕೃತಂ ತೇನ ತವ ಪ್ರಿಯಮ್ ॥ ೨೩

ತಸ್ಯ ಮಾರ್ಗಾಮ ವೈದೇಹೀಂ ಪೃಥಿವ್ಯಾಮಪಿ ಚಾಂಬರೇ ।
ನ ದೇವಾ ನ ಚ ಗಂಧರ್ವಾ ನಾಸುರಾ ನ ಮರುದ್ಗಣಾಃ ॥ ೨೪

ನ ಚ ಯಕ್ಷಾ ಭಯಂ ತಸ್ಯ ಕುರ್ಯುಃ ಕಿಮುತ ರಾಕ್ಷಸಾಃ ।
ತದೇವಂ ಶಕ್ತಿಯುಕ್ತಸ್ಯ ಪೂರ್ವಂ ಪ್ರಿಯಕೃತಸ್ತವ ॥ ೨೫

ರಾಮಸ್ಯಾರ್ಹಸಿ ಪಿಂಗೇಶ ಕರ್ತುಂ ಸರ್ವಾತ್ಮನಾ ಪ್ರಿಯಮ್ ।
ನಾಥಸ್ತಾದವನೌ ನಾಪ್ಸು ಗತಿರ್ನೋಪರಿ ಚಾಂಬರೇ ॥ ೨೬

---

ರಾಜ್ಯವನ್ನು ಕೊಡಿಸಿ ಉಪಕರಿಸಿದ ರಾಘವನ ವಿಷಯದಲ್ಲಿ ಹೇಳುವುದೇನು ? ಅವನಿಗೆ ಉಪಕಾರಮಾಡುವ ಸಾಮರ್ಥ್ಯವುಳ್ಳ ಪರಾಕ್ರಮಿ ನೀನು (೨೦-೨೧). ಶ್ರೀರಾಮನ ಅಭೀಷ್ಟವನ್ನು ನೆರವೇರಿಸುವುದಕ್ಕಾಗಿ ಆಜ್ಞೆಯನ್ನು ಹೊರಡಿಸಲು ಏಕೆ ಉದ್ಯುಕ್ತನಾಗಿಲ್ಲ? ಆ ದಶರಥಪುತ್ರನಾದರೋ ಸುರಾಸುರಮಹೋರಗರನ್ನೂ ತನ್ನ ಶರಗಳಿಂದ ಜಯಿಸಿ ವಶಪಡಿಸಿಕೊಳ್ಳಲು ಸ್ವಯಂ ಸಮರ್ಥನಾಗಿದ್ದಾನೆ. ಆದರೆ ನೀನು ಮಾತುಕೊಟ್ಟಿರುವುದರಿಂದ ನಿನ್ನ ಪ್ರತಿಜ್ಞೆಯು ಸತ್ಯವಾದೀತೆಂದು ನಿರೀಕ್ಷಿಸುತ್ತಿದ್ದಾನೆ. ಆತನು ತನ್ನ ಪ್ರಾಣದ ಮೇಲೆಯೂ ಗಮನವಿಡದೆ ನಿನ್ನ ಹಿತವನ್ನು ಸಾಧಿಸಿಕೊಟ್ಟಿದ್ದಾನೆ (೨೨-೨೩). ಆದ್ದರಿಂದ, ಮಹಾರಾಜ, ಪೃಥಿವ್ಯಂತರಿಕ್ಷಗಳನ್ನೂ ಶೋಧಿಸಿ ಆತನ ವೈದೇಹಿಯನ್ನು ಹುಡುಕಿ ತರೋಣ. ಶ್ರೀರಾಮನಿಗೆ ಯಾರ ಭಯವೂ ಇಲ್ಲ. ದೇವಗಂಧರ್ವರಾಗಲಿ ಅಸುರರಾಗಲಿ ಮರುತ್ತುಗಳೇ ಆಗಲಿ ಯಕ್ಷರೇ ಆಗಲಿ, ಅವನನ್ನು ಜಗ್ಗಿಸಲಾರರು ! ಅವನು ಸ್ವಯಂಶಕ್ತನೂ ನಿನಗೆ ಹಿತಕಾರಿಯೂ ಆಗಿದ್ದಾನೆ (೨೪-೨೫). ಆದ್ದರಿಂದ, ಕಪೀಂದ್ರ, ಸರ್ವವಿಧದಲ್ಲಿಯೂ ನೀನು ಶ್ರೀರಾಮನ ಅಭೀಷ್ಟವನ್ನು ನೆರವೇರಿಸಬೇಕು. ಈಗ

ಕಸ್ಮಿಂಶ್ಚಿತ್ ಸಜ್ಜತೇಽಸ್ಮಾಕಂ ಕಪೀಶ್ವರ ತವಾಜ್ಞಯಾ ।
ತದಾಜ್ಞಾಪಯ ಕಃ ಕಿಂ ತೇ ಕೃತೇ ಕುತ್ರ ವ್ಯವಸ್ಯತು ॥ ೨೭

ಹರಯೋ ಹ್ಯಪ್ರಧೃಷ್ಯಾಸ್ತೇ ಸಂತಿ ಕೋಟ್ಯಗ್ರತೋಽನಘಾಃ ।
ತಸ್ಯ ತದ್ವಚನಂ ಶ್ರುತ್ವಾ ಕಾಲೇ ಸಾಧು ನಿವೇದಿತಮ್ ॥ ೨೮

ಸುಗ್ರೀವಃ ಸತ್ತ್ವಸಂಪನ್ನಶ್ಚಕಾರ ಮತಿಮುತ್ತಮಾಮ್ ।
ಸಂದಿದೇಶಾತಿಮತಿಮಾನ್ ನೀಲಂ ನಿತ್ಯಕೃತೋದ್ಯಮಮ್ ॥ ೨೯

ದಿಕ್ಷು ಸರ್ವಾಸು ಸರ್ವೇಷಾಂ ಸೈನ್ಯಾನಾಮುಪಸಂಗ್ರಹೇ ।
ಯಥಾ ಸೇನಾ ಸಮಗ್ರಾ ಮೇ ಯೂಥಪಾಲಾಶ್ಚ ಸರ್ವಶಃ ॥ ೩೦

ಸಮಾಗಚ್ಛಂತ್ಯಸಂಗೇನ ಸೇನಾಗ್ರಾಣಿ ತಥಾ ಕುರು ।
ಯೇ ತ್ವಂತಪಾಲಾಃ ಪ್ಲವಗಾಃ ಶೀಘ್ರಗಾ ವ್ಯವಸಾಯಿನಃ ॥ ೩೧

ಸಮಾನಯಂತು ತೇ ಸೈನ್ಯಂ ತ್ವರಿತಾಃ ಶಾಸನಾನ್ಮಮ ।
ಸ್ವಯಂ ಚಾನಂತರಂ ಸೈನ್ಯಂ ಭವಾನೇವಾನುಪಶ್ಯತು ॥ ೩೨

---

ಯಾರು ಎಲ್ಲಿ ಯಾವ ಕಾರ್ಯದಲ್ಲಿ ಉದ್ಯುಕ್ತರಾಗಬೇಕೆಂಬುದನ್ನು ಆಜ್ಞಾಪಿಸು ಅಜೇಯರಾದ ಕಪಿನಾಯಕರು ಕೋಟಿಗಟ್ಟಲೆ ನಿನ್ನ ಅಧೀನದಲ್ಲಿದ್ದಾರೆ" ಎಂದು ಹೇಳಿದನು (೨೬-೨೭). ಈ ಪ್ರಕಾರವಾಗಿ ಹನುಮಂತನು ತಕ್ಕ ಸಮಯದಲ್ಲಿ ಯೋಗ್ಯರೀತಿಯಿಂದ ಮಾರ್ಗದರ್ಶನ ಮಾಡಲು, ಸತ್ತ್ವಶಾಲಿಯಾದ ಸುಗ್ರೀವನು ಮಿತ್ರಕಾರ್ಯವನ್ನು ನಡೆಸಬೇಕೆಂಬ ಒಳ್ಳೆಯ ನಿರ್ಧಾರವನ್ನು ಕೈಗೊಂಡನು. ಆ ಧೀಮಂತನು ಸದಾ ಉದ್ಯೋಗತತ್ಪರನಾದ ನೀಲನನ್ನು ಕರೆಸಿ "ಸೇನಾಪತಿ-ನೀಲ, ನನ್ನ ಸಕಲ ಯೂಥಪಾಲರು ಸಮಸ್ತದಿಕ್ಕುಗಳಿಂದಲೂ ಕಪಿಸೇನೆಯನ್ನು ಜಮಾಯಿಸಬೇಕೆಂದು ಆಜ್ಞಾಪಿಸು! (೨೮-೩೦) ತಡಮಾಡದೆ ಸೇನೆಗಳೆಲ್ಲವೂ ಒಟ್ಟುಗೂಡುವಂತೆ ಏರ್ಪಡಿಸು. ಅಂತಪಾಲರೆಲ್ಲರೂ ಉದ್ಯಮನಿರತರಾಗತಕ್ಕದ್ದು. ಅವರೆಲ್ಲರೂ ಶೀಘ್ರವಾಗಿ ಹೋಗಿ ತಮ್ಮ ಸೈನ್ಯವನ್ನು ತರುವಂತೆ ನನ್ನ ಆಜ್ಞೆಯಾಗಿದೆಯೆಂದು ತಿಳಿಸು! ರಾಜಧಾನಿಗೆ ಸಮೀಪದಲ್ಲಿರುವ ಸೇನೆಯ ವ್ಯವಸ್ಥೆಯನ್ನು ನೀನೇ ನೋಡಿಕೊಳ್ಳತಕ್ಕದ್ದು (೩೧-೩೨).

ತ್ರಿಪಂಚರಾತ್ರಾದೂರ್ಧ್ವಂ ಯಃ ಪ್ರಾಪ್ನುಯಾನ್ನೇಹ ವಾನರಃ ।
ತಸ್ಯ ಪ್ರಾಣಾಂತಿಕೋ ದಂಡೋ ನಾತ್ರ ಕಾರ್ಯಾ ವಿಚಾರಣಾ ॥ ೩೩

ಹರೀಂಶ್ಚ ವೃದ್ಧಾನುಪಯಾತು ಸಾಂಗದೋ
ಭವಾನ್ ಮಮಾಜ್ಞಾಮಧಿಕೃತ್ಯ ನಿಶ್ಚಿತಾಮ್ ।
ಇತಿ ವ್ಯವಸ್ಥಾಂ ಹರಿಪುಂಗವೇಶ್ವರೋ
ವಿಧಾಯ ವೇಶ್ಮ ಪ್ರವಿವೇಶ ವೀರ್ಯವಾನ್ ॥ ೩೪

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಏಕೋನತ್ರಿಂಶಃ ಸರ್ಗಃ



ಇಂದಿಗೆ ಹದಿನೈದು ದಿನಗಳೊಳಗಾಗಿ ಇಲ್ಲಿಗೆ ಯಾವನು ಬಂದು ಸೇರುವುದಿಲ್ಲವೋ, ಆ ವಾನರನಿಗೆ ಪ್ರಾಣಾಂತಿಕವಾದ ಶಿಕ್ಷೆಯನ್ನು ವಿಧಿಸಲಾಗುವುದು. ಈ ವಿಷಯದಲ್ಲಿ ವಿಚಾರಕ್ಕೆ ಅವಕಾಶವಿಲ್ಲ! (೩೩). ಹಿರಿಯರಾದ ಕಪಿಗಳ ಬಳಿಗೆ ಅಂಗದನನ್ನು ಕರೆದುಕೊಂಡು ನೀನೇ ಹೋಗು. ನನ್ನ ಆಜ್ಞೆಯು ದೃಢವಾದುದೆಂಬುದನ್ನು ಅವರಿಗೆ ತಿಳಿಸು" ಎಂದು ಆದೇಶವಿತ್ತನು. ಕಪೀಶ್ವರನಾದ ಸುಗ್ರೀವನು ಈ ರೀತಿಯಲ್ಲಿ ಮುಂದಿನ ವ್ಯವಸ್ಥೆಯನ್ನು ಮಾಡಿ, ತನ್ನ ಅಂತಃಪುರವನ್ನು ಪ್ರವೇಶಿಸಿದನು (೩೪).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಇಪ್ಪತ್ತೊಂಬತ್ತನೆಯ ಸರ್ಗ



## ತ್ರಿಂಶಃ ಸರ್ಗಃ

### ಶರದ್ವರ್ಣನಮ್

**ಗುಹಾಂ ಪ್ರವಿಷ್ಟೇ ಸುಗ್ರೀವೇ ವಿಮುಕ್ತೇ ಗಗನೇ ಘನೈಃ ।**
**ವರ್ಷರಾತ್ರೋಷಿತೋ ರಾಮಃ ಕಾಮಶೋಕಾಭಿಪೀಡಿತಃ ॥ ೧**

**ಪಾಂಡರಂ ಗಗನಂ ದೃಷ್ಟ್ವಾ ವಿಮಲಂ ಚಂದ್ರಮಂಡಲಮ್ ।**
**ಶಾರದೀಂ ರಜನೀಂ ಚೈವ ದೃಷ್ಟ್ವಾ ಜ್ಯೋತ್ಸ್ನಾನುಲೇಪನಾಮ್ ॥**

**ಕಾಮವೃತ್ತಂ ಚ ಸುಗ್ರೀವಂ ನಷ್ಟಾಂ ಚ ಜನಕಾತ್ಮಜಾಮ್ ।**
**ಬುದ್ಧ್ವಾ ಕಾಲಮತೀತಂ ಚ ಮುಮೋಹ ಪರಮಾತುರಃ ॥ ೩**

**ಸ ತು ಸಂಜ್ಞಾಮುಪಾಗಮ್ಯ ಮುಹೂರ್ತಾನ್ಮತಿಮಾನ್ ಪುನಃ ।**
**ಮನಃಸ್ಥಾಮಪಿ ವೈದೇಹೀಂ ಚಿಂತಯಾಮಾಸ ರಾಘವಃ ॥ ೪**

## ಸರ್ಗ ೩೦

### ಶರತ್ಕಾಲದ ವರ್ಣನೆ ಸುಗ್ರೀವನನ್ನು ಎಚ್ಚರಿಸಬೇಕೆಂದು ಶ್ರೀರಾಮನು ಲಕ್ಷ್ಮಣನಿಗೆ ತಿಳಿಸುವುದು.

ಸುಗ್ರೀವನು ಈ ರೀತಿಯಲ್ಲಿ ಹನುಮಂತನಿಗೆ ಸೂಚನೆಯನ್ನು ಕೊಟ್ಟು ಗುಹೆಯನ್ನು ಪ್ರವೇಶಿಸಿದನು. ಮೋಡಗಳು ಚದರಿ ಆಕಾಶವು ಸ್ವಚ್ಛವಾಗಿತ್ತು. ಶ್ರೀರಾಮನು ವಿರಹಶೋಕಸಂತಪ್ತನಾಗಿ ವರ್ಷಾಕಾಲದ ರಾತ್ರಿಗಳನ್ನು ಕಳೆದದ್ದಾಯಿತು (೧). ಶುಭ್ರವಾದ ಗಗನತಳ, ನಿರ್ಮಲವಾದ ಚಂದ್ರಮಂಡಲ, ಬೆಳದಿಂಗಳು ಚೆಲ್ಲಿದ ಶರತ್ಕಾಲದ ರಜನಿ — ಇವನ್ನು ಶ್ರೀರಾಮನು ವೀಕ್ಷಿಸಿದನು. ಅತ್ತ ಕಾಮಲೋಲುಪನಾದ ಸುಗ್ರೀವ, ಇತ್ತ ಕಳೆದುಹೋದ ಜಾನಕಿ. ಸುಗ್ರೀವನು ಅವಧಿಯಾಗಿ ಹೇಳಿದ್ದ ವರ್ಷಾಕಾಲವು ಮುಗಿದುಹೋಗಿದೆ !—ಇದನ್ನು ನೆನೆದು ಶ್ರೀರಾಮನು ದುಃಖಾರ್ತನಾಗಿ ಹಾಗೆಯೇ ಮೈಮರೆತನು (೨-೩). ಆ ಪ್ರಾಜ್ಞನು ಸ್ವಲ್ಪಹೊತ್ತಿನಲ್ಲಿ ಮೈತಿಳಿದೆದ್ದನು. ವೈದೇಹಿಯು ತನ್ನ ಹೃದಯದಲ್ಲಿಯೇ ಇದ್ದರೂ ಎಲ್ಲಿ

ಆಸೀನಃ ಪರ್ವತಸ್ಯಾಗ್ರೇ ಹೇಮಧಾತುವಿಭೂಷಿತೇ ।
ಶಾರದಂ ಗಗನಂ ದೃಷ್ಟ್ವಾ ಜಗಾಮ ಮನಸಾ ಪ್ರಿಯಾಮ್ ॥ ೫

ದೃಷ್ಟ್ವಾ ಚ ವಿಮಲಂ ವ್ಯೋಮ ಗತವಿದ್ಯುದ್ಬಲಾಹಕಮ್ ।
ಸಾರಸಾರಾವಸಂಘುಷ್ಟಂ ವಿಲಲಾಪಾರ್ತಯಾ ಗಿರಾ ॥ ೬

ಸಾರಸಾರಾವಸಂನಾದೈಃ ಸಾರಸಾರಾವನಾದಿನೀ ।
ಯಾಶ್ರಮೇ ರಮತೇ ಬಾಲಾ ಸಾದ್ಯ ಮೇ ರಮತೇ ಕಥಮ್ ॥ ೭

ಪುಷ್ಪಿತಾಂಶ್ಚಾಸನಾನ್ ದೃಷ್ಟ್ವಾ ಕಾಂಚನಾನಿವ ನಿರ್ಮಲಾನ್ ।
ಕಥಂ ಸಾ ರಮತೇ ಬಾಲಾ ಪಶ್ಯಂತೀ ಮಾಮಪಶ್ಯತೀ ॥ ೮

ಯಾ ಪುರಾ ಕಲಹಂಸಾನಾಂ ಸ್ವರೇಣ ಕಲಭಾಷಿಣೀ ।
ಬುಧ್ಯತೇ ಚಾರುಸರ್ವಾಂಗೀ ಸಾದ್ಯ ಮೇ ಬುಧ್ಯತೇ ಕಥಮ್ ॥ ೯

ನಿಃಸ್ವನಂ ಚಕ್ರವಾಕಾಣಾಂ ನಿಶಮ್ಯ ಸಹಚಾರಿಣಾಮ್ ।
ಪುಂಡರೀಕವಿಶಾಲಾಕ್ಷೀ ಕಥಮೇಷಾ ಭವಿಷ್ಯತಿ ॥ ೧೦

---

ಹೋಗಿರಬಹುದೆಂದು ಚಿಂತೆಗೊಳಗಾದನು! ರಾಘವನು ಚಿನ್ನದ ಅದಿರುಗಳಿಂದ ಮಂಡಿತವಾದ ಪರ್ವತಶಿಖರದಲ್ಲಿ ಕುಳಿತು ಶಾರದಾಕಾಶದಲ್ಲಿ ದೃಷ್ಟಿ ಹಾಯಿಸಿ ತನ್ನ ಕಾಂತೆಯನ್ನು ಕುರಿತು ಚಿಂತಿಸತೊಡಗಿದನು (೪-೫). ಮಿಂಚುಮೋಡಗಳಿಲ್ಲದ ಅದೇ ಶುಭ್ರವಾದ ಗಗನತಳ! ಸಾರಸಪಕ್ಷಿಗಳ ಕೋಲಾಹಲದ ಕೂಗು! ಶ್ರೀರಾಮನಿಗೆ ಕರುಣೆಯುಕ್ಕಿತು. ಅವನು ಗದ್ಗದಧ್ವನಿಯಿಂದ ವಿಲಪಿಸತೊಡಗಿದನು (೬): "ಅಹಾ! ಆಶ್ರಮದಲ್ಲಿದ್ದಾಗ ಆ ನನ್ನ ಕಾಂತೆ ಸಾರಸಪಕ್ಷಿಗಳ ಆಲಾಪವನ್ನು ಕೇಳಿ ಸಾರಸಗಳಂತೆ ಸರಸವಾಗಿ ನುಡಿಯುತ್ತ ನಲಿಯುತ್ತಿದ್ದಳಲ್ಲ! ಈಗ ಆ ಬಾಲೆ ನಲಿಯುವುದೆಂತು? ಅಪರಂಜಿಯಂತೆ ಹೊಳೆಯುವ ಪುಷ್ಪಿತಗಳಾದ ಬಂಧೂಕವೃಕ್ಷಗಳನ್ನು ಆ ಬಾಲೆಯು ಕಂಡಾಗ—ನನ್ನನ್ನು ಕಾಣದಿದ್ದಾಗ, ಅವಳು ನಲಿಯುವುದೆಂತು? (೭-೮). ಹಂಸದಂತೆ ಕಲಭಾಷಿಣಿಯಾದ ನನ್ನ ಕಾಂತೆ (ಪ್ರಭಾತದಲ್ಲಿ) ಕಲಹಂಸಗಳ ಕಲಕಲಾಲಾಪವನ್ನು ಕೇಳಿ ಎಚ್ಚರಗೊಳ್ಳುತ್ತಿದ್ದಳು. ಆ ಸುಂದರಾಂಗಿಯು ಈಗ ಹೇಗೆ ಎಚ್ಚರಗೊಳ್ಳುತ್ತಿರಬಹುದು! ಜೊತೆಗೂಡಿ ಹಾರಾಡುವ ಚಕ್ರವಾಕಗಳ ಇಂಚರವನ್ನಾಲಿಸಿ ಆ ನಳಿನಾಯ

ಸರಾಂಸಿ ಸರಿತೋ ವಾಪೀಃ ಕಾನನಾನಿ ವನಾನಿ ಚ ।
ತಾಂ ವಿನಾ ಮೃಗಶಾವಾಕ್ಷೀಂ ಚರನ್ನಾದ್ಯ ಸುಖಂ ಲಭೇ ॥ ೧೧

ಅಪಿ ತಾಂ ಮದ್ವಿಯೋಗಾಚ್ಚ ಸೌಕುಮಾರ್ಯಾಚ್ಚ ಭಾಮಿನೀಮ್ ।
ಸುದೂರಂ ಪೀಡಯೇತ್ ಕಾಮಃ ಶರದ್ಗುಣನಿರಂತರಃ ॥ ೧೨

ಏವಮಾದಿ ನರಶ್ರೇಷ್ಠೋ ವಿಲಲಾಪ ನೃಪಾತ್ಮಜಃ ।
ವಿಹಂಗ ಇವ ಸಾರಂಗಃ ಸಲಿಲಂ ತ್ರಿದಶೇಶ್ವರಾತ್ ॥ ೧೩

ತತಶ್ಚಂಚೂರ್ಯ ರಮ್ಯೇಷು ಫಲಾರ್ಥೀ ಗಿರಿಸಾನುಷು ।
ದದರ್ಶ ಪರ್ಯುಪಾವೃತ್ತೋ ಲಕ್ಷ್ಮೀವಾನ್ ಲಕ್ಷ್ಮಣೋಽಗ್ರಜಮ್ ॥

ತಂ ಚಿಂತಯಾ ದುಃಸಹಯಾ ಪರೀತಂ
ವಿಸಂಜ್ಞಮೇಕಂ ವಿಜನೇ ಮನಸ್ವೀ ।
ಭ್ರಾತುರ್ವಿಷಾದಾತ್ ಪರಿತಾಪದೀನಃ
ಸಮೀಕ್ಷ್ಯ ಸೌಮಿತ್ರಿರುವಾಚ ರಾಮಮ್ ॥ ೧೫

---

ತಾಕ್ಷಿಯ ಸ್ಥಿತಿ ಏನಾದೀತು? (೯-೧೦). ನಾನು ಈ ಸರೋವರಗಳಲ್ಲಿ, ಹೊಳೆಗಳಲ್ಲಿ, ಕೊಳಗಳಲ್ಲಿ. ಕಾನನಗಳಲ್ಲಿ, ವನಗಳಲ್ಲಿ ಎಷ್ಟು ಅಲೆದರೂ ಆ ಹರಿಣಾಕ್ಷಿಯಿಲ್ಲದೆ ಸುಖವೇ ತೋರುವುದಿಲ್ಲ. ಸುಕುಮಾರಿಯಾದ ಆ ತರುಣಿಯು ನನ್ನ ವಿರಹದುಃಖದಲ್ಲಿರುವಳೆಂದರಿತು, ಮನ್ಮಥನು ಶರತ್ಕಾಲದ ಸೌಂದರ್ಯದಿಂದುಬ್ಬಿ ಅವಳನ್ನು ಮತ್ತಷ್ಟು ಪೀಡಿಸಬಹುದಲ್ಲವೆ?" (೧೧-೧೨). ಈ ಪ್ರಕಾರವಾಗಿ ಪುರುಷೋತ್ತಮನಾದ ಆ ರಾಜಕುಮಾರನು ದುಃಖಿಸಿದನು ದೇವೇಂದ್ರನ ಅನುಗ್ರಹದಿಂದ ಸುರಿಯುವ ಮಳೆನೀರಿಗಾಗಿ ಚಾತಕಪಕ್ಷಿಯು ಮೊರೆಯಿಡುವಂತೆ, ಶ್ರೀರಾಮನು ಸೀತೆಗಾಗಿ ಹಾತೊರೆದು ಹಂಬಲಿಸಿದನು (೧೩). ಆಗ ಲಕ್ಷ್ಮಣನು ಫಲಮೂಲಗಳನ್ನು ತರುವುದಕ್ಕಾಗಿ ರಮ್ಯವಾದ ಗಿರಿಪ್ರದೇಶಗಳಿಗೆ ಹೋಗಿದ್ದನು. ಅವನು ಅಲ್ಲಲ್ಲಿ ಅಲೆದು ಬಂದು ಅಣ್ಣನನ್ನು ಕಂಡನು. ಅಣ್ಣನು ನಿರ್ಜನವಾದ ಪ್ರದೇಶದಲ್ಲಿ ಒಬ್ಬನೇ ಕುಳಿತು ದುಸ್ಸಹವಾದ ಚಿಂತೆಯಲ್ಲಿ ಮುಳುಗಿ ಮೈಮರೆತಿದ್ದನು. ಅವನ ಶೋಕಪರಾಯಣತೆಯನ್ನು ಕಂಡು ಸೌಮಿತ್ರಿಗೆ ಬಹಳ ವಿಷಾದವಾಯಿತು. ಆ ಧೀರನು ಶ್ರೀರಾಮನನ್ನು

ಕಿಮಾರ್ಯ ಕಾಮಸ್ಯ ವಶಂಗತೇನ
ಕಿಮಾತ್ಮಪೌರುಷ್ಯಪರಾಭವೇನ ।
ಅಯಂ ಹ್ರಿಯಾ ಸಂಹ್ರಿಯತೇ ಸಮಾಧಿಃ
ಕಿಮತ್ರ ಯೋಗೇನ ನಿವರ್ತತೇ ನ ॥ ೧೬

ಕ್ರಿಯಾಭಿಯೋಗಂ ಮನಸಃ ಪ್ರಸಾದಂ
ಸಮಾಧಿಯೋಗಾನುಗತಂ ಚ ಕಾಲಮ್ ।
ಸಹಾಯಸಾಮರ್ಥ್ಯಮದೀನಸತ್ತ್ವ
ಸ್ವಕರ್ಮಹೇತುಂ ಚ ಕುರುಷ್ವ ಹೇತುಮ್ ॥ ೧೭

ನ ಜಾನಕೀ ಮಾನವವಂಶನಾಥ
ತ್ವಯಾ ಸನಾಥಾ ಸುಲಭಾ ಪರೇಣ ।
ನ ಚಾಗ್ನಿಚೂಡಾಂ ಜ್ವಲಿತಾಮುಪೇತ್ಯ
ನ ದಹ್ಯತೇ ವೀರ ವರಾರ್ಹ ಕಶ್ಚಿತ್ ॥ ೧೮

ಸಲಕ್ಷಣಂ ಲಕ್ಷ್ಮಣಮಪ್ರಧೃಷ್ಯಂ
ಸ್ವಭಾವಜಂ ವಾಕ್ಯಮುವಾಚ ರಾಮಃ ।

---

ನೋಡಿ ಹೀಗೆಂದನು (೧೪-೧೫) : "ಅಣ್ಣ, ಹೀಗೆ ಕಾಮಪರವಶನಾದರೆ ಏನು ಪ್ರಯೋಜನ? ನಿನ್ನ ಪೌರುಷವನ್ನು ನೀನೇ ಅಲ್ಲಗಳೆಯುವುದರಿಂದ ಏನಾದೀತು? ಹೀಗೆ ಬೇಸರಪಡುವುದರಿಂದ ಚಿತ್ತಪ್ರಸಾದವು ಕಲಕಿಹೋಗುತ್ತದೆ. ನಿಷ್ಠೆಯಿಂದ ಕರ್ತವ್ಯವನ್ನಾಚರಿಸಿದರೆ ಯಾವ ಕಷ್ಟವು ಪರಿಹಾರವಾಗದೆ ಉಳಿದೀತು? (೧೬). ಕರ್ಮನಿಷ್ಠನಾಗಿ ಮನಃಪ್ರಸನ್ನತೆಯನ್ನು ಕಾಪಾಡಿಕೊ. ಏಕಾಗ್ರತೆಯಿಂದಲೂ ಕಾರ್ಯನಿಷ್ಠತೆಯಿಂದಲೂ ಕಾಲವನ್ನು ಉಪಯೋಗಿಸು. ನಿನ್ನ ಪರಾಕ್ರಮವು ಅಸಾಧಾರಣವಾದುದು. ಸಹಾಯಕನಾದ ಸುಗ್ರೀವನ ಸಾಮರ್ಥ್ಯವೂ ನಿನ್ನ ಕಾರ್ಯೋನ್ಮುಖತೆಯೂ ಕಾರ್ಯಸಿದ್ಧಿಗೆ ಸಾಧನವೆಂದು ನಿಶ್ಚಯಿಸು (೧೭). ಮನುಕುಲತಿಲಕ, ನೀನು ನಾಥನಾಗಿರುವಾಗ ಜಾನಕಿಯು ಇನ್ನೊಬ್ಬನಿಂದ ದಕ್ಕಿಸಿಕೊಳ್ಳಲು ಸಾಧ್ಯವೆ? ಉರಿಯುವ ಅಗ್ನಿಜ್ವಾಲೆಯನ್ನು ಮುಟ್ಟಿ ಕೈಸುಡಿಸಿಕೊಳ್ಳದವನು ಯಾವನೂ ಇಲ್ಲ" ಎಂದನು (೧೮). ಧೀರಗಂಭೀರನಾದ ಲಕ್ಷ್ಮಣನು ಹೀಗೆನ್ನಲು, ಶ್ರೀರಾಮನು ತನಗೆ ಸಹಜವಾದ ಧೈರ್ಯದ ನುಡಿ

ಹಿತಂ ಚ ಪಥ್ಯಂ ಚ ನಯಪ್ರಸಕ್ತಂ
ಸಸಾಮ ಧರ್ಮಾರ್ಥಸಮಾಹಿತಂ ಚ ॥ ೧೯

ನಿಃಸಂಶಯಂ ಕಾರ್ಯಮವೇಕ್ಷಿತವ್ಯಂ
ಕ್ರಿಯಾವಿಶೇಷೋ ಹ್ಯನುವರ್ತಿತವ್ಯಃ ।
ನನು ಪ್ರವೃತ್ತಸ್ಯ ದುರಾಸದಸ್ಯ
ಕುಮಾರ ಕಾರ್ಯಸ್ಯ ಫಲಂ ನ ಚಿಂತ್ಯಮ್ ॥ ೨೦

ಅಥ ಪದ್ಮಪಲಾಶಾಕ್ಷೀಂ ಮೈಥಿಲೀಮನುಚಿಂತಯನ್ ।
ಉವಾಚ ಲಕ್ಷ್ಮಣಂ ರಾಮೋ ಮುಖೇನ ಪರಿಶುಷ್ಯತಾ ॥ ೨೧

ತರ್ಪಯಿತ್ವಾ ಸಹಸ್ರಾಕ್ಷಃ ಸಲಿಲೇನ ವಸುಂಧರಾಮ್ ।
ನಿರ್ವರ್ತಯಿತ್ವಾ ಸಸ್ಯಾನಿ ಕೃತಕರ್ಮಾ ವ್ಯವಸ್ಥಿತಃ ॥ ೨೨

---

ಯಿಂದ "ವತ್ಸ-ಲಕ್ಷ್ಮಣ, ನಿಸ್ಸಂಶಯವಾಗಿ ನಮ್ಮ ಕಾರ್ಯದಲ್ಲಿ ಗಮನ ವಿಟ್ಟು ಅದನ್ನು ಸಾಧಿಸಲೇಬೇಕು. ಅದು ಹಿತಕರವೂ * ಯುಕ್ತವೂ ಆಗಿದೆ. ನಮ್ಮ ನೀತಿಗೆ ಅನುಗುಣವಾಗಿದೆ. ಈ ಕಾರ್ಯವನ್ನು ಸಾಧ್ಯ ವಾದಷ್ಟು ಸಾಮೋಪಾಯದಿಂದ ಸಾಧಿಸಬೇಕು. ಧರ್ಮಾರ್ಥಸಮನ್ವಿತ ವಾದ ಕಾರ್ಯವಿದು. ಇದನ್ನು ಸಾಧಿಸಲು ವಿಶೇಷವಾದ ವಿಧಾನವನ್ನು ಅನುಸರಿಸಬೇಕಾಗಿದೆ. ಆದರೆ, ತಮ್ಮ, ಇದು ಕಠಿಣವಾದ ಕಾರ್ಯ. ಇದು ಫಲಿಸಬೇಕಾದ ರೀತಿಯನ್ನು ನಾವು ಆಲೋಚಿಸಬೇಕಲ್ಲವೆ ?" ಎಂದು ಹೇಳಿದನು (೧೯-೨೦). ಪದ್ಮನೇತ್ರೆಯಾದ ಜಾನಕಿಯ ನೆನಪು ಮತ್ತೆ ಶ್ರೀರಾಮನನ್ನು ಆವರಿಸಿತು. ಮುಖಕಾಂತಿಯು ಶೋಕದಿಂದ ಕಂದಿತು. ಅವನು ಲಕ್ಷ್ಮಣನನ್ನು ಕುರಿತು ಹೀಗೆಂದನು: "ಲಕ್ಷ್ಮಣ, ಇಂದ್ರನು (ಸಹಸ್ರಧಾರೆಯಾಗಿ) ಮಳೆಸುರಿಸಿ ಭೂಮಿಗೆ ತಂಪೇರಿಸಿದ್ದಾನೆ. ಪೈರುಗಳನ್ನು

---

* ೧೯ ನೆಯ ಶ್ಲೋಕದಲ್ಲಿರುವ 'ಹಿತಂ ಚ ಪಥ್ಯಂ ಚ....', ಇತ್ಯಾದಿ ಶಬ್ದ ಗಳನ್ನು ೨೦ ನೆಯ ಶ್ಲೋಕದಲ್ಲಿರುವ 'ಕಾರ್ಯಂ' ಎಂಬುದಕ್ಕೆ ವಿಶೇಷಣಗಳನ್ನಾಗಿ ಅನ್ವಯಿಸಿ ಇಲ್ಲಿ ಅರ್ಥಮಾಡಿದೆ.

ಸ್ನಿಗ್ಧಗಂಭೀರನಿರ್ಘೋಷಾಃ ಶೈಲದ್ರುಮಪುರೋಗಮಾಃ ।
ವಿಸೃಜ್ಯ ಸಲಿಲಂ ಮೇಘಾಃ ಪರಿಶ್ರಾಂತಾ ನೃಪಾತ್ಮಜ ॥ ೨೩

ನೀಲೋತ್ಪಲದಲಶ್ಯಾಮಾಃ ಶ್ಯಾಮೀಕೃತ್ವಾ ದಿಶೋ ದಶ ।
ವಿಮದಾ ಇವ ಮಾತಂಗಾಃ ಶಾಂತವೇಗಾಃ ಪಯೋಧರಾಃ ॥ ೨೪

ಜಲಗರ್ಭಾ ಮಹಾವೇಗಾಃ ಕುಟಜಾರ್ಜುನಗಂಧಿನಃ ।
ಚರಿತ್ವಾ ವಿರತಾಃ ಸೌಮ್ಯ ವೃಷ್ಟಿವಾತಾಃ ಸಮುದ್ಯತಾಃ ॥ ೨೫

ಘನಾನಾಂ ವಾರಣಾನಾಂ ಚ ಮಯೂರಾಣಾಂ ಚ ಲಕ್ಷ್ಮಣ ।
ನಾದಃ ಪ್ರಸ್ರವಣಾನಾಂ ಚ ಪ್ರಶಾಂತಃ ಸಹಸಾನಘ ॥ ೨೬

ಅಭಿವೃಷ್ಟಾ ಮಹಾಮೇಘೈರ್ನಿರ್ಮಲಾಶ್ಚಿತ್ರಸಾನವಃ ।
ಅನುಲಿಪ್ತಾ ಇವಾಭಾಂತಿ ಗಿರಯಶ್ಚಂದ್ರರಶ್ಮಿಭಿಃ ॥ ೨೭

ಶಾಖಾಸು ಸಪ್ತಚ್ಛದಪಾದಪಾನಾಂ
ಪ್ರಭಾಸು ತಾರಾರ್ಕನಿಶಾಕರಾಣಾಮ್ ।

---

ಬೆಳೆಸಿ ಕೃತಕೃತ್ಯನಾದೆನೆಂದು ಸುಮ್ಮನಾಗಿದ್ದಾನೆ (೨೧–೨೨). ಮೋಡಗಳು ಮಧುರಗಂಭೀರಘೋಷದಿಂದ ಗರ್ಜಿಸುತ್ತ ಗಿರಿತರುಗಳ ಮೇಲೆ ಹಾರಿ ಸಂಚರಿಸಿ ಮಳೆಸುರಿಸಿ ನಾಕಾಗಿ ವಿಶ್ರಮಿಸುತ್ತಿವೆ. ಇಂದೀವರದಳದಂತೆ ಕಪ್ಪಾದ ಕಾರ್ಮೋಡಗಳು ದಶದಿಕ್ಕುಗಳನ್ನೂ ಕಪ್ಪಾಗಿಸಿ ಈಗ ಶಾಂತ ವಾಗಿವೆ. ಮದವಳಿದ ಮಾತಂಗಗಳಂತೆ ತೆಪ್ಪನಾಗಿವೆ (೨೩–೨೪). ಜಲಮಿಶ್ರಿತ ವಾದ ಮಳೆಗಾಳಿಯು ಕೆರಳಿ ಮಹಾವೇಗದಿಂದ ಬೀಸುತ್ತ ಕೊಡಸು, ಮತ್ತಿ ಮುಂತಾದ ಹೂಗಳ ಪರಿಮಳವನ್ನು ಬೀರುತ್ತ ಅಲೆದಲೆದು ವಿಶ್ರಮಿಸಿದೆ. ಲಕ್ಷ್ಮಣ, ಮೇಘಮಾತಂಗಗಳ ಗರ್ಜನೆ, ನವಿಲುಗಳ ಕೇಕೆ, ನದಿಗಳ ಮೊರೆತ– ಎಲ್ಲವೂ ಥಟ್ಟನೆ ನಿಂತುಹೋಗಿವೆ (೨೫–೨೬). ಮೋಡಗಳು ಮಳೆಸುರಿಸಿದ್ದ ರಿಂದ ಬೆಟ್ಟಗಳು ಕೊಳೆಯಿಲ್ಲದೆ ಸ್ವಚ್ಛವಾಗಿವೆ. ಗೈರಿಕಧಾತುಗಳಿಂದ ಸಾನುಪ್ರದೇಶಗಳು ಚಿತ್ರವರ್ಣವಾಗಿವೆ. ಈಗ ಚಂದ್ರಕಿರಣಗಳು ಸುತ್ತಲೂ ಹರಡಿದಾಗ ಈ ಬೆಟ್ಟಗಳು ಚಂದನವನ್ನು ಮೈಗೆ ಬಳಿದುಕೊಂಡಂತೆ ಕಾಣು ತ್ತವೆ (೨೭). ಸಪ್ತಚ್ಛದಗಳ ಕೊಂಬೆಗಳಲ್ಲಿಯೂ ಸೂರ್ಯಚಂದ್ರನಕ್ಷತ್ರ ಗಳಲ್ಲಿಯೂ ಮದ್ದಾನೆಗಳ ಲೀಲಾಗತಿಗಳಲ್ಲಿಯೂ ಶರತ್ಕಾಲವು ಸೊಬಗನ್ನು

ಲೀಲಾಸು ಚೈವೋತ್ತಮವಾರಣಾನಾಂ
ಶ್ರಿಯಂ ವಿಭಜ್ಯಾದ್ಯ ಶರತ್ ಪ್ರವೃತ್ತಾ ॥ ೨೮

ಸಂಪ್ರತ್ಯನೇಕಾಶ್ರಯಚಿತ್ರಶೋಭಾ
ಲಕ್ಷ್ಮೀಃ ಶರತ್ಕಾಲಗುಣೋಪನೀತಾ ।
ಸೂರ್ಯಾಗ್ರಹಸ್ತಪ್ರತಿಬೋಧಿತೇಷು
ಪದ್ಮಾಕರೇಷ್ವಭ್ಯಧಿಕಂ ವಿಭಾತಿ ॥ ೨೯

ಸಪ್ತಚ್ಛದಾನಾಂ ಕುಸುಮೋಪಗಂಧೀ
ಷಟ್ಪಾದವೃಂದೈರನುಗೀಯಮಾನಃ ।
ಮತ್ತದ್ವಿಪಾನಾಂ ಪವನೋಽನುಸಾರೀ
ದರ್ಪಂ ವನೇಷ್ವಭ್ಯಧಿಕಂ ಕರೋತಿ ॥ ೩೦

ಅಭ್ಯಾಗತೈಶ್ಚಾರುವಿಶಾಲಪಕ್ಷೈಃ
ಸ್ಮರಪ್ರಿಯೈಃ ಪದ್ಮರಜೋಽವಕೀರ್ಣೈಃ ।
ಮಹಾನದೀನಾಂ ಪುಲಿನೋಪಯಾತೈಃ
ಕ್ರೀಡಂತಿ ಹಂಸಾಃ ಸಹ ಚಕ್ರವಾಕೈಃ ॥ ೩೧

ಮದಪ್ರಗಲ್ಭೇಷು ಚ ವಾರಣೇಷು
ಗವಾಂ ಸಮೂಹೇಷು ಚ ದರ್ಪಿತೇಷು ।

---

ಹಂಚುತ್ತಲಿದೆ. ವಿವಿಧವಸ್ತುಗಳಿಗೆ ಚಿತ್ರಕಾಂತಿಯನ್ನಿತ್ತಿರುವ ಶರಲ್ಲಕ್ಷ್ಮಿಯು ಕಮಲಾಕರಗಳಲ್ಲಿ ಮಿಗಿಲೆನಿಸಿ ವಿರಾಜಿಸುತ್ತಿದೆ. ಸೂರ್ಯಕಿರಣಸ್ಪರ್ಶದಿಂದ ಕಮಲಗಳು ಹೇಗೆ ಅರಳಿವೆ! (೨೮-೨೯). ಏಳೆಲೆಬಾಳೆಹೂಗಳ ಪರಿಮಳವನ್ನು ಹೊತ್ತ ಗಾಳಿಯು ದುಂಬಿಗಳಿಂದ ಹಾಡಿಸಿಕೊಳ್ಳುತ್ತ, ವನದಲ್ಲಿ ಸುಳಿಯುತ್ತ, ಮತ್ತಮಾತಂಗಗಳ ಮತ್ತನ್ನು ಮತ್ತಷ್ಟು ಉದ್ರೇಕಿಸುತ್ತಿದೆ. ನದೀಪುಲಿನಗಳಲ್ಲಿ ಹಂಸಗಳು ಚಕ್ರವಾಕಗಳೊಡನೆ ಆಟವಾಡುವುದನ್ನು ನೋಡು, ಲಕ್ಷ್ಮಣ! ಆ ಚಕ್ರವಾಕಗಳು ಅಲ್ಲಿಗೆ ಹಾರಿಬಂದು ಸುಂದರವಾದ ರೆಕ್ಕೆಗಳನ್ನು ಕೆದರಿಕೊಂಡು ಆಡುತ್ತಿವೆ. ಆ ಕಾಮುಕಪಕ್ಷಿಗಳ ಮೈಯೆಲ್ಲ ತಾವರೆಯ ಧೂಳಿಯಿಂದ ಮುಚ್ಚಿಹೋಗಿದೆ! (೩೦-೩೧). ಮದವೇರಿದ ಆನೆಗಳಲ್ಲಿ, ಕೊಬ್ಬಿದ ಗೂಳಿಗಳಲ್ಲಿ, ತಿಳಿನೀರಿನ ಹೊಳೆಗಳಲ್ಲಿ—ಶರತ್ಸಮಯದ

ಪ್ರಸನ್ನತೋಯಾಸು ಚ ನಿಮ್ನಗಾಸು
ವಿಭಾತಿ ಲಕ್ಷ್ಮೀರ್ಬಹುಧಾ ವಿಭಕ್ತಾ ॥ ೩೨

ನಭಃ ಸಮೀಕ್ಷ್ಯಾಂಬುಧರೈರ್ವಿಮುಕ್ತಂ
ವಿಮುಕ್ತಬರ್ಹಾಭರಣಾ ವನೇಷು ।
ಪ್ರಿಯಾಸ್ವಸಕ್ತಾ ವಿನಿವೃತ್ತಶೋಭಾ
ಗತೋತ್ಸವಾ ಧ್ಯಾನಪರಾ ಮಯೂರಾಃ ॥ ೩೩

ಮನೋಜ್ಞಗಂಧೈಃ ಪ್ರಿಯಕೈರನಲ್ಪೈಃ
ಪುಷ್ಪಾತಿಭಾರಾವನತಾಗ್ರಶಾಖೈಃ ।
ಸುವರ್ಣಗೌರೈರ್ನಯನಾಭಿರಾಮೈ-
ರುದ್ದ್ಯೋತಿತಾನೀವ ವನಾಂತರಾಣಿ ॥ ೩೪

ಪ್ರಿಯಾನ್ವಿತಾನಾಂ ನಲಿನೀಪ್ರಿಯಾಣಾಂ
ವನೇ ರತಾನಾಂ ಕುಸುಮೋದ್ಧತಾನಾಮ್ ।
ಮದೋತ್ಕಟಾನಾಂ ಮದಲಾಲಸಾನಾಂ
ಗಜೋತ್ತಮಾನಾಂ ಗತಯೋಽದ್ಯ ಮಂದಾಃ ॥ ೩೫

---

ಸೊಬಗನ್ನು ಬಗೆಬಗೆಯಾಗಿ ವಿಭಾಗಿಸಿಟ್ಟಂತೆ ಕಾಣುವುದು. ಆಕಾಶದಲ್ಲಿ ಮೋಡವು ಸರಿದುಹೋದುದನ್ನು ಕಂಡು ಗಂಡುನವಿಲುಗಳು ತಮಗೆ ಒಡವೆಗಳಾದ ಗರಿಗಳನ್ನು ಉಡುಗಿಸಿಕೊಂಡಿವೆ. ಅವು ತಮ್ಮ ಕಾಂತೆಯರಲ್ಲಿಯೂ ಆಸಕ್ತಿಯನ್ನು ತೊರೆದು ಕಾಂತಿಗುಂದಿ ಅಂದಗೆಟ್ಟು, ವನದಲ್ಲಿ ಏನನ್ನೋ ಧ್ಯಾನಿಸುತ್ತಿವೆ! (೩೨-೩೩). ಬಂಧೂಕವೃಕ್ಷಗಳ ಕೊಂಬೆಗಳು ಮನೋಹರವಾದ ಪರಿಮಳವನ್ನು ಬೀರುವ ಹೂಗಳ ಭಾರದಿಂದ ಬಳುಕುತ್ತಿವೆ. ಚಿನ್ನದಂತೆ ಹೊಳೆಯುವ ಈ ಸುಂದರಕುಸುಮಗಳಿಂದ ವನಮಧ್ಯದಲ್ಲಿ (ದೀಪವನ್ನಿಟ್ಟು) ಬೆಳಗಿಸುವಂತಿದೆ, ನೋಡು ಲಕ್ಷ್ಮಣ! (೩೪). ವನದಲ್ಲಿ ನೆಲೆಸಿದ ಮತ್ತವಾರಣಗಳು ಹೆಣ್ಣಾನೆಗಳೊಡನೆ ಪದ್ಮಸರೋವರಗಳತ್ತ ಮೆಲ್ಲಮೆಲ್ಲನೆ ಠೀವಿಯಿಂದ ನಾಗುತ್ತಿವೆ. ಹೂಗಳ ಗಂಧದಿಂದ ಮದವೇರಿ ಇವು ಮದೋದಕವನ್ನು ಸುರಿಸುತ್ತಿವೆ. ಗಗನತಳವು ಸಾಣೆಹಿಡಿದ ಕತ್ತಿಯಂತೆ

ವ್ಯಭ್ರಂ ನಭಃ ಶಸ್ತ್ರವಿಧೌತವರ್ಣಂ
ಕೃಶಪ್ರವಾಹಾಣಿ ನದೀಜಲಾನಿ ।
ಕಹ್ಲಾರಶೀತಾಃ ಪವನಾಃ ಪ್ರವಾಂತಿ
ತಮೋವಿಮುಕ್ತಾಶ್ಚ ದಿಶಃ ಪ್ರಕಾಶಾಃ ॥ ೩೬

ಸೂರ್ಯಾತಪಕ್ರಾಮಣನಷ್ಟಪಂಕಾ
ಭೂಮಿಶ್ಚಿರೋದ್ಘಾಟಿತಸಾಂದ್ರರೇಣುಃ ।
ಅನ್ಯೋನ್ಯವೈರೇಣ ಸಮಾಯುತಾನಾ-
ಮುದ್ಯೋಗಕಾಲೋಽದ್ಯ ನರಾಧಿಪಾನಾಮ್ ॥ ೩೭

ಶರದ್ಗುಣಾಪ್ಯಾಯಿತರೂಪಶೋಭಾಃ
ಪ್ರಹರ್ಷಿತಾಃ ಪಾಂಸುಸಮುಕ್ಷಿತಾಂಗಾಃ ।
ಮದೋತ್ಕಟಾಃ ಸಂಪ್ರತಿ ಯುದ್ಧಲುಬ್ಧಾ
ವೃಷಾ ಗವಾಂ ಮಧ್ಯಗತಾ ನದಂತಿ ॥ ೩೮

ಸಮನ್ಮಥಾಸ್ತೀವ್ರತರಾನುರಾಗಾಃ
ಕುಲಾನ್ವಿತಾ ಮಂದಗತಿಂ ಕರಿಣ್ಯಃ ।

---

ಸ್ವಚ್ಛವಾಗಿದೆ. ನದೀಜಲದ ಪ್ರವಾಹವು ಚಿಕ್ಕದಾಗಿದೆ. ಸೌಗಂಧಿಕಪುಷ್ಪಗಳ ಸೌರಭವನ್ನು ಹೊತ್ತು ಮಾರುತವು ಶೀತಲವಾಗಿ ಬೀಸುತ್ತಿದೆ. ಕತ್ತಲೆಯಡಗಿ ದಿಕ್ಕುಗಳು ಶುಭ್ರವಾಗಿವೆ (೩೫-೩೬). ಬಿಸಿಲು ಕಾಯುವುದರಿಂದ ಕೆಸರು ಒಣಗಿದೆ. ಬಹುದಿನಗಳಾದಮೇಲೆ ಪುನಃ ನೆಲದಿಂದ ಧೂಳಿಯೇಳುತ್ತಿದೆ. ಅನ್ಯೋನ್ಯ ವೈರದಿಂದ ಸಮಯವನ್ನು ಕಾಯುತ್ತಿರುವ ರಾಜರಿಗೆ, ಲಕ್ಷ್ಮಣ, ಈಗ ಉದ್ಯೋಗಕಾಲವು ಒದಗಿದೆ (೩೭). ಅತ್ತನೋಡು ಲಕ್ಷ್ಮಣ, ಹಸುಗಳ ಮಂದೆಯಲ್ಲಿರುವ ಕೊಬ್ಬಿದ ಗೂಳಿಗಳು ಹೋರಾಟಕ್ಕಾಗಿ ಕಾಲು ಕೆರೆದು ಗುಟುರುಹಾಕುತ್ತಿವೆ. ಶರದೃತುವಿನ ಮಹಿಮೆಯಿಂದ ಅವುಗಳ ರೂಪಕ್ಕೆ ಒಂದು ಮೆರಗು ಬಂದಿದೆ. ಆ ಗೂಳಿಗಳು ಮೈಮೇಲೆ ಧೂಳೆರಚಿಕೊಂಡು ಆನಂದಿಸುತ್ತಿವೆ (೩೮). ಹಿಂಡುಗಳಲ್ಲಿರುವ ಹೆಣ್ಣಾನೆಗಳು ಕಾಮಪೀಡೆಗೊಳಗಾಗಿ ಗಂಡಾನೆಯನ್ನು ಅನುರಾಗದಿಂದ ಹಿಂಬಾಲಿಸುತ್ತಿವೆ. ಮದಿಸಿದ ಆ ಸಲಗವಾದರೋ ಗಂಭೀರವಾಗಿ ಹೆಜ್ಜೆಯಿಡುತ್ತ ಮೆಲ್ಲಗೆ ಹೋಗುತ್ತಿದೆ

ಮದಾನ್ವಿತಂ ಸಂಪರಿವಾರ್ಯ ಯಾಂತಂ
ವನೇಷು ಭರ್ತಾರಮನುಪ್ರಯಾಂತಿ ॥ ೩೯

ತ್ಯಕ್ತ್ವಾ ವರಾಣ್ಯಾತ್ಮವಿಭೂಷಣಾನಿ
ಬರ್ಹಾಣಿ ತೀರೋಪಗತಾ ನದೀನಾಮ್ ।
ನಿರ್ಭರ್ತ್ಸ್ಯಮಾನಾ ಇವ ಸಾರಸೌಘೈಃ
ಪ್ರಯಾಂತಿ ದೀನಾ ವಿಮದಾ ಮಯೂರಾಃ ॥ ೪೦

ವಿತ್ರಾಸ್ಯ ಕಾರಂಡವಚಕ್ರವಾಕಾನ್
ಮಹಾರವೈರ್ಭಿನ್ನಕಟಾ ಗಜೇಂದ್ರಾಃ ।
ಸರಃಸು ಬದ್ಧಾಂಬುಜಭೂಷಣೇಷು
ವಿಕ್ಷೋಭ್ಯ ವಿಕ್ಷೋಭ್ಯ ಜಲಂ ಪಿಬಂತಿ ॥ ೪೧

ವ್ಯಪೇತಪಂಕಾಸು ಸುವಾಲುಕಾಸು
ಪ್ರಸನ್ನತೋಯಾಸು ಸಗೋಕುಲಾಸು ।
ಸಸಾರಸಾರಾವವಿನಾದಿತಾಸು
ನದೀಷು ಹೃಷ್ಟಾ ನಿಪತಂತಿ ಹಂಸಾಃ ॥ ೪೨

---

(೩೯) ಲಕ್ಷ್ಮಣ, ಆ ನವಿಲುಗಳ ದೀನದಶೆಯನ್ನು ನೋಡು ! ಅವು ತಮಗೆ ಭೂಷಣಪ್ರಾಯವಾದ ಚೆಲುವಿನ ಗರಿಗಳನ್ನು ಮುದುರಿಕೊಂಡು ನದೀತೀರಕ್ಕೆ ಹೋಗಿವೆ. ಅಲ್ಲಿ (ಕೂಗುತ್ತ ನಲಿಯುತ್ತಿರುವ) ಹಂಸಗಳ ಹಿಂಡನ್ನು ಕಂಡು, ಹಂಸಗಳು ಗದರಿಸಿದವೋ ಎಂಬಂತೆ ಬೇಸರದಿಂದ ನವಿಲುಗಳು ದೂರ ನಾಗುತ್ತಿವೆ ! (೪೦). ಗಂಡಸ್ಥಳದಿಂದ ಮದವನ್ನು ಸ್ರವಿಸುವ ಮಹಾಗಜಗಳು ನೀರುಕುಡಿಯಲು ಸರೋವರಗಳಿಗೆ ಹೋಗಿವೆ. ಪದ್ಮ ಭೂಷಿತಗಳಾದ ಆ ಸರೋವರಗಳಲ್ಲಿರುವ ಕಾರಂಡವ ಚಕ್ರವಾಕಾದಿ ಪಕ್ಷಿಗಳನ್ನು ಘೀಂಕಾರದಿಂದ ಬೆದರಿಸಿ ಓಡಿಸಿ, ತಾವರೆಗಳನ್ನು ಬದಿಗೊತ್ತಿ ಬದಿಗೊತ್ತಿ ನೀರನ್ನು ಕುಡಿಯುತ್ತಿವೆ (೪೧) ನದೀತೀರದಲ್ಲಿ ಕೆಸರಿಲ್ಲ. ಸುಂದರವಾದ ಮರಳು ರಾಶಿ ಹರಡಿದೆ. ತಿಳಿನೀರು ಹರಿಯುತ್ತಿದೆ. ಬಳಿಯಲ್ಲಿ ಗೋವುಗಳು ಸುಳಿದಾಡುತ್ತಿವೆ. ನಾರಸಪಕ್ಷಿಗಳ ಕೇಕೆಗಳು ಮೊಳಗುತ್ತಿವೆ.

ನದೀವನಪ್ರಸ್ರವಣೋದಕಾನಾ-
ಮತಿಪ್ರವೃದ್ಧಾನಿಲಬರ್ಹಿಣಾನಾಮ್ ।
ಪ್ಲವಂಗಮಾನಾಂ ಚ ಗತೋತ್ಸವಾನಾಂ
ದ್ರುತಂ ರವಾಃ ಸಂಪ್ರತಿ ಸಂಪ್ರನಷ್ಟಾಃ ॥ ೪೩

ಅನೇಕವರ್ಣಾಃ ಸುವಿನಷ್ಟಕಾಯಾ
ನವೋದಿತೇಷ್ವಂಬುಧರೇಷು ನಷ್ಟಾಃ ।
ಕ್ಷುಧಾರ್ದಿತಾ ಘೋರವಿಷಾ ಬಿಲೇಭ್ಯ-
ಶ್ಚಿರೋಷಿತಾ ವಿಪ್ರಸರಂತಿ ಸರ್ಪಾಃ ॥ ೪೪

ಚಂಚಚ್ಚಂದ್ರಕರಸ್ಪರ್ಶಹರ್ಷೋನ್ಮೀಲಿತತಾರಕಾ ।
ಅಹೋ ರಾಗವತೀ ಸಂಧ್ಯಾ ಜಹಾತಿ ಸ್ವಯಮಂಬರಮ್ ॥ ೪೫

ದರ್ಶಯಂತಿ ಶರನ್ನದ್ಯಃ ಪುಲಿನಾನಿ ಶನೈಃ ಶನೈಃ ।
ನವಸಂಗಮಸವ್ರೀಡಾ ಜಘನಾನೀವ ಯೋಷಿತಃ ॥ ೪೬

ಆ ನದಿಗಳಿಗೆ ಹಂಸಗಳು ಹರ್ಷದಿಂದ ಬಂದೆರಗುತ್ತಿವೆ. ಲಕ್ಷ್ಮಣ, ಈಗ ನದಿಗಳ ಆರ್ಭಟವಿಲ್ಲ. ಕಾಡಿನ ತೊರೆಗಳ ಸಪ್ಪಳವಿಲ್ಲ. ಬಿರುಗಾಳಿಯ ಝುಂಝಾಕಾರವಿಲ್ಲ. ನವಿಲುಗಳ ಕೇಕಾಧ್ವನಿಯಿಲ್ಲ ಕಪಿಗಳಿಗೆ ಉತ್ಸಾಹವಿಲ್ಲದೆ ಅವುಗಳ ಸದ್ದು ಅಡಗಿದೆ (೪೨-೪೩). ವರ್ಷಾಕಾಲದಲ್ಲಿ ಹೊಸ ಮೋಡಗಳು ಮೇಲೆದ್ದು ಬಂದಾಗ ಸರ್ಪಗಳು ಬಿಲವನ್ನು ಸೇರಿದ್ದವು. ಬಹುಕಾಲ ಅಲ್ಲಿಯೇ ಇದ್ದು ಹಸಿವಿನಿಂದ ಅವು ಕೃಶವಾಗಿದ್ದವು. ಈಗ ಬಣ್ಣಬಣ್ಣದ ಆ ವಿಷಸರ್ಪಗಳು ಬಿಲಗಳಿಂದ ಹೊರಟು ಹರಿದಾಡುತ್ತಿವೆ (೪೪). ಹರಡುತ್ತಿರುವ ಚಂದ್ರಕರಗಳ ಸ್ಪರ್ಶದಿಂದಾದ ಹರ್ಷದಿಂದ ಬೇಗಿ, ರಕ್ತವರ್ಣದ ಸಂಧ್ಯೆಯು ತಾರಕೆಗಳನ್ನು ಮಿನುಗಿಸುತ್ತ ಅಂಬರವನ್ನು ಬಿಟ್ಟು ಸರಿಯುತ್ತಿದ್ದಾಳೆ, ಆಹಾ ! * ಶರತ್ಕಾಲದ ನದಿಗಳು ಮೆಲ್ಲಮೆಲ್ಲನೆ ತಮ್ಮ

* ಇಲ್ಲಿ ಒಂದು ಅರ್ಥಾಂತರವಿದೆ. ' ಅನುರಾಗವತಿಯಾದ ಸಂಧ್ಯೆಯೆಂಬ ಕಾಮಿನಿಯು ಪ್ರಿಯಕರನಾದ ಚಂದ್ರನ ಹಸ್ತಸ್ಪರ್ಶದಿಂದ ಆನಂದಪರವಶಳಾಗಿ ಕಣ್ಣರಳಿಸಿಕೊಂಡು ತಾನಾಗಿಯೇ ಸೀರೆಯನ್ನು ಸಡಿಲಿಸಿಕೊಳ್ಳುತ್ತಾಳೆ '. ಇನ್ನೊಬ್ಬ ನಾಯಿಕಾ ವೃತ್ತಾಂತವು ತೋರುವುದರಿಂದ ಸಮಾಸೋಕ್ತಿಯೆಂಬ ಅಲಂಕಾರವಿದು. ಕರ=ಕಿರಣ ; ಕೈ. ತಾರಕಾ=ನಕ್ಷತ್ರ ; ಕಣ್ಣಾಲಿ. ರಾಗ=ಕೆಂಪು ಬಣ್ಣ ; ಅನುರಾಗ. ಅಂಬರ=ಆಕಾಶ ; ಸೀರೆ.

ರಾತ್ರಿಃ ಶಶಾಂಕೋದಿತಸೌಮ್ಯವಕ್ತ್ರಾ
ತಾರಾಗಣೋನ್ಮೀಲಿತಚಾರುನೇತ್ರಾ ।
ಜ್ಯೋತ್ಸ್ನಾಂಶುಕಪ್ರಾವರಣಾ ವಿಭಾತಿ
ನಾರೀವ ಶುಕ್ಲಾಂಶುಕಸಂವೃತಾಂಗೀ ॥ ೪೭

ವಿಪಕ್ವಶಾಲಿಪ್ರಸವಾನಿ ಭುಕ್ತ್ವಾ
ಪ್ರಹರ್ಷಿತಾ ಸಾರಸಚಾರುಪಂಕ್ತಿಃ ।
ನಭಃ ಸಮಾಕ್ರಾಮತಿ ಶೀಘ್ರವೇಗಾ
ವಾತಾವಧೂತಾ ಗ್ರಥಿತೇವ ಮಾಲಾ ॥ ೪೮
ಸುಪ್ತೈಕಹಂಸಂ ಕುಮುದೈರುಪೇತಂ
ಮಹಾಹ್ರದಸ್ಥಂ ಸಲಿಲಂ ವಿಭಾತಿ ।
ಘನೈರ್ವಿಮುಕ್ತಂ ನಿಶಿ ಪೂರ್ಣಚಂದ್ರಂ
ತಾರಾಗಣಾಕೀರ್ಣಮಿವಾಂತರಿಕ್ಷಮ್ ॥ ೪೯

ಪ್ರಕೀರ್ಣಹಂಸಾಕುಲಮೇಖಲಾನಾಂ
ಪ್ರಬುದ್ಧಪದ್ಮೋತ್ಪಲಮಾಲಿನೀನಾಮ್ ।

---

ಮರಳು ದಿಣ್ಣೆಗಳನ್ನು, ನೂತನ ಸಂಗಮ ಕಾಲದಲ್ಲಿ ಲಜ್ಜೆಯಿಂದ ಬಳುಕುವ ಲಲನೆಯರು ತಮ್ಮ ಜಘನಗಳನ್ನು ಮೆಲ್ಲಮೆಲ್ಲನೆ ತೋರ್ಪಡಿಸುವಂತೆ, ತೋರಿಸುತ್ತಿವೆ! (೪೫-೪೬). ಈ ನಿಶಾಂಗನೆಯು ಚಂದ್ರನಿಂದ ಪ್ರಸನ್ನವದನೆಯಾಗಿ, ತಾರಾಗಣಗಳಿಂದ ಉನ್ಮೀಲಿತ ಚಾರುನಯನೆಯಾಗಿ, ಬೆಳದಿಂಗಳಿಂದ ಶ್ವೇತದುಕೂಲಧಾರಿಣಿಯಾಗಿ, ಬಿಳಿಯ ಸೀರೆಯನ್ನುಟ್ಟ ನಾರಿಯಂತೆ ಕಂಗೊಳಿಸುವಳು! (೪೭). ಲಕ್ಷ್ಮಣ, ಅತ್ತ ನೋಡು! ಸುಂದರ ಸಾರಸ ಪಕ್ಷಿಗಳ ಹಿಂಡು ಮಾಗಿದ ಬತ್ತದ ತೆನೆಗಳನ್ನು ತಿಂದು ನಲಿದು ವೇಗದಿಂದ ಆಕಾಶದತ್ತ ನೆಗೆದು ಹಾರಿಹೋಗುತ್ತಿದೆ. ಗಾಳಿಗೆ ಹಾರುವ ಹೂಮಾಲೆಯಂತೆ ಕಾಣುತ್ತಿದೆ! ಆ ಸರೋವರದ ಜಲದಲ್ಲಿ ಕುಮುದಗಳರಳಿವೆ. ಮಧ್ಯದಲ್ಲಿ ಒಂದು ಹಂಸವು ಮಲಗಿದೆ. ಮೋಡಗಳಿಲ್ಲದ ಆಕಾಶದಂತೆ ಜಲವು ಸ್ವಚ್ಛವಾಗಿದೆ ಸೌಮಿತ್ರಿ, ಆ ಹಂಸವು ರಾತ್ರಿಯಲ್ಲಿ ತಾರಾಗಣಗಳಿಂದೊಪ್ಪುವ ಪೂರ್ಣಚಂದ್ರನಂತೆ ಗೋಚರಿಸುತ್ತಿದೆ! (೪೮-೪೯). ಸರಸಿಗಳಿಗೆ ಇಂದು ಅಧಿಕವಾದ ಒಂದು ಶೋಭೆಯುಂಟಾಗಿದೆ, ಲಕ್ಷ್ಮಣ.

ವಾಪ್ಯುತ್ತಮಾನಾಮಧಿಕಾದ್ಯ ಲಕ್ಷ್ಮೀ-
ರ್ವರಾಂಗನಾನಾಮಿವ ಭೂಷಿತಾನಾಮ್ ॥ ೫೦

ವೇಣುಸ್ವನವ್ಯಂಜಿತತೂರ್ಯಮಿಶ್ರಃ
ಪ್ರತ್ಯೂಷಕಾಲಾನಿಲಸಂಪ್ರವೃದ್ಧಃ ।
ಸಂಮೂರ್ಛಿತೋ ಗಹ್ವರಗೋವೃಷಾಣಾ-
ಮನ್ಯೋನ್ಯಮಾಪೂರಯತೀವ ಶಬ್ದಃ ॥ ೫೧

ನವೈರ್ನದೀನಾಂ ಕುಸುಮಪ್ರಹಾಸೈ-
ರ್ವ್ಯಾಧೂಯಮಾನೈರ್ಮೃದುಮಾರುತೇನ ।
ಧೌತಾಮಲಕ್ಷೌಮಪಟಪ್ರಕಾಶೈಃ
ಕೂಲಾನಿ ಕಾಶೈರುಪಶೋಭಿತಾನಿ ॥ ೫೨

ವನಪ್ರಚಂಡಾ ಮಧುಪಾನಶೌಂಡಾಃ
ಪ್ರಿಯಾನ್ವಿತಾಃ ಷಟ್ಚರಣಾಃ ಪ್ರಹೃಷ್ಟಾಃ ।
ವನೇಷು ಮತ್ತಾಃ ಪವನಾನುಯಾತ್ರಾಂ
ಕುರ್ವಂತಿ ಪದ್ಮಾಸನರೇಣುಗೌರಾಃ ॥ ೫೩

---

ಸುಂದರಿಯರು ಒಡವೆಗಳಿಂದ ಅಲಂಕರಿಸಿಕೊಂಡಂತಾಗಿವೆ! ಸರಸಿಗಳೆಂಬ ಸುದತಿಯರಿಗೆ ಹಂಸಪಂಕ್ತಿಯು ಒಡ್ಯಾಣವಾಗಿದೆ! ಅರಳಿದ ತಾವರೆನೈದಿಲೆಗಳ ಹೂಮಾಲೆ ಇದೆ! (೫೦) ಬಿದಿರು ಮೆಳೆಗಳ ಮಂಜುಳನಾದವೆಂಬ ವಾದ್ಯವನ್ನು ಮೊಳಗಿಸುತ್ತ ಬೆಳಗಿನ ಗಾಳಿಯು ಸುಳಿಯುತ್ತಿದೆ. ಅದರೊಡನೆ ಸಮ್ಮಿಶ್ರವಾದ ಗಿರಿಗಹ್ವರಗಳ ಬಂಭಾರವವೂ ಗೂಳಿಗಳ ಗುಟರೂ ಒಂದಕ್ಕೊಂದು ಪೋಷಕವಾಗಿ ಬೆಳೆದು ಹರಡುತ್ತಿದೆ (೫೧). ನದೀಕೂಲದಲ್ಲಿ ಬೆಳೆದ ನೊದೆಹುಲ್ಲುಗಳ ನಗುವಿನಂತಿರುವ ಹೊಸ ಹೂಗಳು ಮಂದಮಾರುತದಿಂದ ತೂಗಾಡುತ್ತಿವೆ. ಅವನ್ನು ನೋಡಿದರೆ, ನದೀ ತೀರದಲ್ಲಿ ಒಗೆದು ಒಣಹಾಕಿದ ಬಿಳಿಯ ರೇಶ್ಮೆಯ ಬಟ್ಟೆಗಳಂತೆ ಕಾಣುತ್ತವೆ! (೫೨). ವನದೊಳಗಲೆಯುವುದರಲ್ಲಿ ಪ್ರಚಂಡಗಳಾದ ದುಂಬಿಗಳು ಮಧುವನ್ನು ಕುಡಿದು ಮದಿಸಿ, ತಮ್ಮ ಮನದನ್ನೆಯರೊಡನೆ ನಲಿಯುತ್ತ ಗಾಳಿಯನ್ನು ಹಿಂಬಾಲಿಸಿ ಹಾರಿಹೋಗುವುದನ್ನು ನೋಡು, ಲಕ್ಷ್ಮಣ.

ಜಲಂ ಪ್ರಸನ್ನಂ ಕುಮುದಂ ಪ್ರಹಾಸಂ
ಕ್ರೌಂಚಸ್ವನಃ ಶಾಲಿವನಂ ವಿಪಕ್ವಮ್ ।
ಮೃದುಶ್ಚ ವಾಯುರ್ವಿಮಲಶ್ಚ ಚಂದ್ರಃ
ಶಂಸಂತಿ ವರ್ಷವ್ಯಪನೀತಕಾಲಮ್ ॥ ೫೪

ಮೀನೋಪಸಂದರ್ಶಿತಮೇಖಲಾನಾಂ
ನದೀವಧೂನಾಂ ಗತಯೋಽದ್ಯ ಮಂದಾಃ ।
ಕಾಂತೋಪಭುಕ್ತಾಲಸಗಾಮಿನೀನಾಂ
ಪ್ರಭಾತಕಾಲೇಷ್ವಿವ ಕಾಮಿನೀನಾಮ್ ॥ ೫೫

ಸಚಕ್ರವಾಕಾನಿ ಸಶೈವಲಾನಿ
ಕಾಶೈರ್ದುಕೂಲೈರಿವ ಸಂವೃತಾನಿ ।
ಸಪತ್ರಲೇಖಾನಿ ಸರೋಚನಾನಿ
ವಧೂಮುಖಾನೀವ ನದೀಮುಖಾನಿ ॥ ೫೬

ಪ್ರಫುಲ್ಲಬಾಣಾಸನಚಿತ್ರಿತೇಷು
ಪ್ರಹೃಷ್ಟಷಟ್ಪಾದನಿಕೂಜಿತೇಷು ।

---

ತಾವರೆಯ ಮತ್ತು ಬಂದುಗೆಹೂಗಳ ರೇಣುವಿನಿಂದ ಈ ದುಂಬಿಗಳು ಹೊಂಬಣ್ಣವಾಗಿವೆ! (೫೩). ತಿಳಿಯಾದ ನೀರು, ನೈದಿಲೆಗಳ ನಗು, ಕೊಂಚೆಗಳ ಇಂಚರ, ಬೆಳೆದ ಬತ್ತದ ಗದ್ದೆ, ಮಂದಮಾರುತ, ವಿಮಲ ಚಂದಿರ —ಇವು, ಲಕ್ಷ್ಮಣ, ಮಳೆಗಾಲವು ಕಳೆಯಿತೆಂದು ತಿಳಿಸುತ್ತಿವೆ. ಕಾಂತರೊಡನೆ ವಿಹರಿಸಿ ಪ್ರಾತಃಕಾಲದಲ್ಲಿ ಮೆಲ್ಲಮೆಲ್ಲಗೆ ನಡೆಯುವ ಕಾಮಿನಿಯರಂತೆ, ಮೀನಗಳೆಂಬ ಮೇಖಲೆಯನ್ನು ಕಾಣಿಸುತ್ತ ಹರಿಯುವ ನದಿಗಳ ಗತಿಯು ಮಂದವಾಗಿದೆ (೫೪-೫೫). ನದೀಮುಖಗಳು ಕಾಮಿನಿಯರ ಮುಖಗಳಂತೆ ಚೆಂದವಾಗಿವೆ. ಕಾಮಿನಿಯರ ಮುಖದಲ್ಲಿ ಪತ್ರಲೇಖೆಗಳಿರುವಂತೆ ಇಲ್ಲಿ ಚಕ್ರವಾಕಗಳಿವೆ. ಗೋರೋಚನ ತಿಲಕದಂತೆ ಶೈವಲವಿದೆ. ಸೀರೆಯ ಮುಸುಕಿನಂತೆ ಅರಳಿದ ನೊದೆಹುಲ್ಲು ನದೀಮುಖಗಳನ್ನಾವರಿಸಿದೆ! (೫೬). ಅರಳಿದ ಗೋರಂಟಿ ಬಂದುಗೆ ಹೂಗಳಿಂದ ಚಿತ್ರವರ್ಣವಾಗಿಯೂ ಮದದಿಂದ ಬೀಗುವ ದುಂಬಿಗಳಿಂದ ತುಂಬಿಯೂ ಇರುವ ವನಗಳಲ್ಲಿ, ಲಕ್ಷ್ಮಣ,

ಗೃಹೀತಚಾಪೋದ್ಯತಚಂಡದಂಡಃ
ಪ್ರಚಂಡಚಾರೋಽದ್ಯ ವನೇಷು ಕಾಮಃ ॥ ೫೭

ಲೋಕಂ ಸುವೃಷ್ಟ್ಯಾ ಪರಿತೋಷಯಿತ್ವಾ
ನದೀಸ್ತಟಾಕಾನಿ ಚ ಪೂರಯಿತ್ವಾ ।
ನಿಷ್ಪನ್ನಸಸ್ಯಾಂ ವಸುಧಾಂ ಚ ಕೃತ್ವಾ
ತ್ಯಕ್ತ್ವಾ ನಭಸ್ತೋಯಧರಾಃ ಪ್ರನಷ್ಟಾಃ ॥ ೫೮

ಪ್ರಸನ್ನಸಲಿಲಾಃ ಸೌಮ್ಯ ಕುರರೀಭಿರ್ವಿನಾದಿತಾಃ ।
ಚಕ್ರವಾಕಗಣಾಕೀರ್ಣಾ ವಿಭಾಂತಿ ಸಲಿಲಾಶಯಾಃ ॥ ೫೯

ಅಸನಾಃ ಸಪ್ತಪರ್ಣಾಶ್ಚ ಕೋವಿದಾರಾಶ್ಚ ಪುಷ್ಪಿತಾಃ ।
ದೃಶ್ಯಂತೇ ಬಂಧುಜೀವಾಶ್ಚ ಶ್ಯಾಮಾಶ್ಚ ಗಿರಿಸಾನುಷು ॥ ೬೦

ಹಂಸಸಾರಸಚಕ್ರಾಹ್ವೈಃ ಕುರರೈಶ್ಚ ಸಮಂತತಃ ।
ಪುಲಿನಾನ್ಯವಕೀರ್ಣಾನಿ ನದೀನಾಂ ಪಶ್ಯ ಲಕ್ಷ್ಮಣ ॥ ೬೧

ಅನ್ಯೋಽನ್ಯಂ ಬದ್ಧವೈರಾಣಾಂ ಜಿಗೀಷೂಣಾಂ ನೃಪಾತ್ಮಜ ।
ಉದ್ಯೋಗಸಮಯಃ ಸೌಮ್ಯ ಪಾರ್ಥಿವಾನಾಮುಪಸ್ಥಿತಃ ॥ ೬೨

---

ಮನ್ಮಥನು ಚಂಡಕೋದಂಡಧಾರಿಯಾಗಿ ಪ್ರಚಂಡತನವನ್ನು ಮೆರೆಸುತ್ತ ತಾನೇ ತಾನಾಗಿ ಸಂಚರಿಸುತ್ತಿದ್ದಾನೆ! (೫೭). ಮೋಡಗಳು ವೃಷ್ಟಿಯಿಂದ ಜಗತ್ತನ್ನು ತೃಪ್ತಿಪಡಿಸಿ, ಹೊಳೆಗಳನ್ನೂ ಕೆರೆಗಳನ್ನೂ ನೀರಿನಿಂದ ತುಂಬಿಸಿ, ಭೂಮಿಯಲ್ಲಿ ಸಮೃದ್ಧವಾಗಿ ಪೈರನ್ನು ಬೆಳೆಸಿ, ಕಣ್ಣಿಗೆ ಕಾಣದಂತೆ ಆಕಾಶದಿಂದ ಮರೆಯಾದವು! (೫೮). ಸೌಮ್ಯ-ಲಕ್ಷ್ಮಣ, ಜಲಾಶಯಗಳು ತಿಳಿನೀರಿನಿಂದ ತುಂಬಿ ಕೊಂಚೆಗಳ ಇಂಚರದಿಂದ ಮನೋಹರವಾಗಿವೆ. ಚಕ್ರವಾಕಗಳು ಸಂಚರಿಸುತ್ತಿವೆ. ಬೆಟ್ಟದ ತಪ್ಪಲುಗಳಲ್ಲಿ ಬಂಧೂಕ, ಸಪ್ತಪರ್ಣ, ಕೋವಿದಾರ, ದಾಸವಾಳ, ಪ್ರಿಯಂಗು—ಮೊದಲಾದ ವೃಕ್ಷಲತೆಗಳು ಅರಳಿನಿಂತಿವೆ (೫೯-೬೦). ನದೀಪುಲಿನಗಳಲ್ಲಿ ಹಂಸ, ನಾರಸ, ಚಕ್ರವಾಕ, ಕ್ರೌಂಚ—ಮುಂತಾದ ಪಕ್ಷಿಗಳು ಮುತ್ತಿರುವುದನ್ನು ನೋಡು, ಲಕ್ಷ್ಮಣ. ಪರಸ್ಪರ ವೈರವನ್ನು ಬೆಳೆಸಿ ಒಬ್ಬರನ್ನೊಬ್ಬರು ಜಯಿಸಬೇಕೆಂದು ಹಾತೊರೆಯುವ ಕ್ಷತ್ರಿಯ ವೀರರಿಗೆ, ರಾಜಪುತ್ರ, ಇದು ಯುದ್ಧಸನ್ನದ್ಧರಾಗುವ

ಇಯಂ ಸಾ ಪ್ರಥಮಾ ಯಾತ್ರಾ ಪಾರ್ಥಿವಾನಾಂ ನೃಪಾತ್ಮಜ ।
ನ ಚ ಪಶ್ಯಾಮಿ ಸುಗ್ರೀವಮುದ್ಯೋಗಂ ವಾ ತಥಾವಿಧಮ್ ॥ ೬೩

ಚತ್ವಾರೋ ವಾರ್ಷಿಕಾ ಮಾಸಾ ಗತಾ ವರ್ಷಶತೋಪಮಾಃ ।
ಮಮ ಶೋಕಾಭಿಭೂತಸ್ಯ ಸೌಮ್ಯ ಸೀತಾಮಪಶ್ಯತಃ ॥ ೬೪

ಚಕ್ರವಾಕೀವ ಭರ್ತಾರಂ ಪೃಷ್ಠತೋಽನುಗತಾ ವನಮ್ ।
ವಿಷಮಂ ದಂಡಕಾರಣ್ಯಮುದ್ಯಾನಮಿವ ಯಾಂಗನಾ ॥ ೬೫

ಪ್ರಿಯಾವಿಹೀನೇ ದುಃಖಾರ್ತೇ ಹೃತರಾಜ್ಯೇ ವಿವಾಸಿತೇ ।
ಕೃಪಾಂ ನ ಕುರುತೇ ರಾಜಾ ಸುಗ್ರೀವೋ ಮಯಿ ಲಕ್ಷ್ಮಣ ॥ ೬೬

ಅನಾಥೋ ಹೃತರಾಜ್ಯೋಽಯಂ ರಾವಣೇನ ಚ ಧರ್ಷಿತಃ ।
ದೀನೋ ದೂರಗೃಹಃ ಕಾಮೀ ಮಾಂ ಚೈವ ಶರಣಂ ಗತಃ ॥ ೬೭

ಇತ್ಯೇತೈಃ ಕಾರಣೈಃ ಸೌಮ್ಯ ಸುಗ್ರೀವಸ್ಯ ದುರಾತ್ಮನಃ ।
ಅಹಂ ವಾನರರಾಜಸ್ಯ ಪರಿಭೂತಃ ಪರಂತಪ ॥ ೬೮

---

ಸಮಯ ! (೬೧-೬೨). ರಾಜಪುತ್ರ, ಯುದ್ಧಕ್ಕಾಗಿ ಪ್ರಥಮ ಪ್ರಯಾಣ ಮಾಡಲು ರಾಜರಿಗೆ ಇದೇ ತಕ್ಕ ಸಮಯವಾಗಿದೆ. ಆದರೆ ಸುಗ್ರೀವನ ಸುಳಿವೇ ಕಾಣದಾಗಿದೆ ! ಅವನು ನಮಗಾಗಿ ಯಾವ ಪ್ರಯತ್ನವನ್ನು ನಡೆಸುವುದೂ ಕಾಣದು. ವತ್ಸ, ಸೀತೆಯನ್ನು ಕಾಣದೆ ವಿರಹಶೋಕಾಪನ್ನನಾದ ನನಗೆ, ಮಳೆಗಾಲದ ಈ ನಾಲ್ಕು ತಿಂಗಳು ನೂರು ವರ್ಷಗಳಂತೆ ಕಳೆದವು ! (೬೩-೬೪). ಚಕ್ರವಾಕಿಯು ತನ್ನ ಪತಿಯನ್ನು ಬಿಡಲಾರದೆ ಹಿಂಬಾಲಿಸಿ ಹೋಗುವಂತೆ, ಸೀತೆಯು ನನ್ನನ್ನು ಹಿಂಬಾಲಿಸಿ ಕಾಡಿಗೆ ಬಂದಳು. ಉದ್ಯಾನವನಕ್ಕೆ ಬರುವಂತೆ ಘೋರಾರಣ್ಯಕ್ಕೆ ಬಂದಳು. ಲಕ್ಷ್ಮಣ, ಅಂತಹ ಕಾಂತೆಯನ್ನು ಕಳೆದುಕೊಂಡು ದುಃಖಾರ್ತನಾಗಿ, ರಾಜ್ಯವನ್ನು ಕಳೆದುಕೊಂಡು ದೇಶಭ್ರಷ್ಟನಾಗಿ ಕೊರಗುವ ನನ್ನ ವಿಷಯದಲ್ಲಿ ಸುಗ್ರೀವಮಹಾರಾಜನಿಗೆ ದಯೆ ಬರಲಿಲ್ಲ ! (೬೫-೬೬). ಅವನು ಪ್ರಾಯಶಃ ಹೀಗೆಂದುಕೊಂಡಿರಬೇಕು : ' ಈ ರಾಮನು ದಿಕ್ಕಿಲ್ಲದೆ ದೇಶಭ್ರಷ್ಟನಾಗಿ ಬಂದಿದ್ದಾನೆ. ರಾವಣನಿಂದ ಭಗ್ನನಾಗಿದ್ದಾನೆ. ಬಂಧುಬಳಗಗಳಿಲ್ಲದೆ ದೂರದೇಶಕ್ಕೆ ಬಂದು ದೈನ್ಯಾವಸ್ಥೆಯಲ್ಲಿದ್ದಾನೆ. ಹೆಂಡತಿಯನ್ನು

**ಸ ಕಾಲಂ ಪರಿಸಂಖ್ಯಾಯ ಸೀತಾಯಾಃ ಪರಿಮಾರ್ಗಣೇ ।**
**ಕೃತಾರ್ಥಃ ಸಮಯಂ ಕೃತ್ವಾ ದುರ್ಮತಿರ್ನಾವಬುಧ್ಯತೇ ॥ ೬೯**
**ಸ ಕಿಷ್ಕಿಂಧಾಂ ಪ್ರವಿಶ್ಯ ತ್ವಂ ಬ್ರೂಹಿ ವಾನರಪುಂಗವಮ್ ।**
**ಮೂರ್ಖಂ ಗ್ರಾಮ್ಯಸುಖೇ ಸಕ್ತಂ ಸುಗ್ರೀವಂ ವಚನಾನ್ಮಮ ॥ ೭೦**
**ಅರ್ಥಿನಾಮುಪಪನ್ನಾನಾಂ ಪೂರ್ವಂ ಚಾಪ್ಯುಪಕಾರಿಣಾಮ್ ।**
**ಆಶಾಂ ಸಂಶ್ರುತ್ಯ ಯೋ ಹಂತಿ ಸ ಲೋಕೇ ಪುರುಷಾಧಮಃ ॥ ೭೧**
**ಶುಭಂ ವಾ ಯದಿ ವಾ ಪಾಪಂ ಯೋ ಹಿ ವಾಕ್ಯಮುದೀರಿತಮ್ ।**
**ಸತ್ಯೇನ ಪರಿಗೃಹ್ಣಾತಿ ಸ ವೀರಃ ಪುರುಷೋತ್ತಮಃ ॥ ೭೨**
**ಕೃತಾರ್ಥಾ ಹ್ಯಕೃತಾರ್ಥಾನಾಂ ಮಿತ್ರಾಣಾಂ ನ ಭವಂತಿ ಯೇ ।**
**ತಾನ್ ಮೃತಾನಪಿ ಕ್ರವ್ಯಾದಾಃ ಕೃತಘ್ನಾನ್ನೋಪಭುಂಜತೇ ॥ ೭೩**

---

ಕಳೆದುಕೊಂಡು ಕಾಮವಶನಾಗಿ ಅಲೆಯುತ್ತಿದ್ದಾನೆ. ಅಲ್ಲದೆ ನನಗೆ ಶರಣಾಗತನಾಗಿದ್ದಾನೆ!' ಈ ಕಾರಣಗಳಿಂದ ದುರಾತ್ಮನಾದ ಸುಗ್ರೀವನು, ಲಕ್ಷ್ಮಣ, ನನ್ನನ್ನು ಉಪೇಕ್ಷಿಸಿದ್ದಾನೆ (೬೭-೬೮). ಸೀತಾನ್ವೇಷಣೆಗೆ ಕಾಲವನ್ನು ಗೊತ್ತುಮಾಡಿಹೋದ ಆ ದುಷ್ಟನು ಅದನ್ನು ಮರೆತಿದ್ದಾನಲ್ಲ! ಸಹಾಯ ಮಾಡುವೆನೆಂದು ಪ್ರತಿಜ್ಞೆಮಾಡಿದವನು, ತನ್ನ ಕಾರ್ಯವಾದಮೇಲೆ ತೆಪ್ಪಗಿದ್ದಾನಲ್ಲ! ಲಕ್ಷ್ಮಣ, ನೀನು ಈಗಲೇ ಕಿಷ್ಕಿಂಧೆಗೆ ಹೋಗಿ ಸುಗ್ರೀವನನ್ನು ಕಂಡು ಹೇಳು. ಗ್ರಾಮ್ಯಸುಖದಲ್ಲಿ ನಿರತನಾದ ಆ ಮೂರ್ಖನಿಗೆ ನಾನು ಹೇಳಿದ್ದೇನೆಂದು ಈ ಮಾತನ್ನು ತಿಳಿಸು (೬೯-೭೦) : 'ಕಾರ್ಯಾರ್ಥಿಗಳಾಗಿ ಹತ್ತಿರ ಬಂದವರಿಗೂ ತನಗೆ ಉಪಕಾರ ಮಾಡಿದವರಿಗೂ ಸಹಾಯ ಮಾಡುವೆನೆಂದು ಮಾತುಕೊಟ್ಟು, ಆಮೇಲೆ ಆಶಾಭಂಗವನ್ನು ಮಾಡತಕ್ಕವನು ಪುರುಷಾಧಮನೆನಿಸುವನು. ಒಳ್ಳೆಯದೋ ಕೆಟ್ಟದೋ, ಆಡಿದಮೇಲೆ ಸತ್ಯಕ್ಕೆ ಕಟ್ಟುಬಿದ್ದು ಯಾವನು ತನ್ನ ಮಾತನ್ನು ನಡೆಸುವನೋ ಆ ವೀರನು ಪುರುಷೋತ್ತಮನೆನಿಸುವನು (೭೧-೭೨) ಯಾರು ತಮ್ಮ ಕಾರ್ಯವನ್ನು ಮಾತ್ರ ಸಾಧಿಸಿಕೊಂಡು, ಇನ್ನೂ ತಮ್ಮ ಕಾರ್ಯವನ್ನು ಸಾಧಿಸಿಕೊಳ್ಳದೆ ಉಪಕಾರಿಗಳಾಗಿರುವ ಮಿತ್ರರ ಸಮಯಕ್ಕೆ ಒದಗುವುದಿಲ್ಲವೋ, ಅಂತಹವರು ಸತ್ತಮೇಲೆ ಆ ಕೃತಘ್ನರನ್ನು ನಾಯಿ ನರಿಗಳೂ ತಿನ್ನಲಾರವು!' ಎಂದು

ನೂನಂ ಕಾಂಚನಪೃಷ್ಠಸ್ಯ ವಿಕೃಷ್ಟಸ್ಯ ಮಯಾ ರಣೇ ।
ದ್ರಷ್ಟುಮಿಚ್ಛತಿ ಚಾಪಸ್ಯ ರೂಪಂ ವಿದ್ಯುದ್ಗಣೋಪಮಮ್ ॥ ೭೪

ಘೋರಂ ಜ್ಯಾತಲನಿರ್ಘೋಷಂ ಕ್ರುದ್ಧಸ್ಯ ಮಮ ಸಂಯುಗೇ ।
ನಿರ್ಘೋಷಮಿವ ವಜ್ರಸ್ಯ ಪುನಃ ಸಂಶ್ರೋತುಮಿಚ್ಛತಿ ॥ ೭೫

ಕಾಮಮೇವಂಗತೇಽಪ್ಯಸ್ಯ ಪರಿಜ್ಞಾತೇ ಪರಾಕ್ರಮೇ ।
ತ್ವತ್ಸಹಾಯಸ್ಯ ಮೇ ವೀರ ನ ಚಿಂತಾ ಸ್ಯಾನ್ನೃಪಾತ್ಮಜ ॥ ೭೬

ಯದರ್ಥಮಯಮಾರಂಭಃ ಕೃತಃ ಪರಪುರಂಜಯ ।
ಸಮಯಂ ನಾಭಿಜಾನಾತಿ ಕೃತಾರ್ಥಃ ಪ್ಲವಗೇಶ್ವರಃ ॥ ೭೭

ವರ್ಷಾಃ ಸಮಯಕಾಲಂ ತು ಪ್ರತಿಜ್ಞಾಯ ಹರೀಶ್ವರಃ ।
ವ್ಯತೀತಾಂಶ್ಚತುರೋ ಮಾಸಾನ್ ವಿಹರನ್ನಾವಬುಧ್ಯತೇ ॥ ೭೮

ಸಾಮಾತ್ಯಪರಿಷತ್ ಕ್ರೀಡನ್ ಪಾನಮೇವೋಪಸೇವತೇ ।
ಶೋಕದೀನೇಷು ನಾಸ್ಮಾಸು ಸುಗ್ರೀವಃ ಕುರುತೇ ದಯಾಮ್ ॥ ೭೯

---

ಸುಗ್ರೀವನಿಗೆ ಹೇಳು (೭೩). ಲಕ್ಷ್ಮಣ, ನಾನು ಯುದ್ಧಕ್ಕೆಳೆದು ಸುವರ್ಣ ಭೂಷಿತವಾದ ಈ ಕೋದಂಡವನ್ನು ಜಗ್ಗಿದಾಗ, ಮಿಂಚಿನಂತೆ ಮಿಂಚುವ ಇದರ ರೂಪ ಹೇಗಿರುವುದೆಂದು ನೋಡಲು ಸುಗ್ರೀವನು ಬಯಸಿರಬೇಕು! (೭೪). ರಣರಂಗದಲ್ಲಿ ಇದರ ಹೆದೆಯನ್ನು ಕೋಪದಿಂದ ನಾನು ಮಿಡಿದಾಗ, ಸಿಡಿಲಿನಂತೆ ಮೊಳಗುವ ಘೋರನಿರ್ಘೋಷವನ್ನು ಸುಗ್ರೀವನು ಪುನಃ ಕೇಳಲಿಚ್ಛಿಸಿರಬೇಕು! ನನ್ನ ಪರಾಕ್ರಮವನ್ನರಿತಿದ್ದರೂ ಅವನು ಹೀಗೆ ಉಪೇಕ್ಷೆಯಿಂದಿರುವನಲ್ಲ! ಆದರೂ, ಲಕ್ಷ್ಮಣ, ವೀರನಾದ ನಿನ್ನ ನೆರವಿರುವಾಗ ನನಗೆ ಯಾವ ಚಿಂತೆಯೂ ಇಲ್ಲ (೭೫-೭೬). ಆದರೆ ಆ ಕಪೀಶ್ವರನು ತನ್ನ ಕಾರ್ಯವನ್ನು ಕೈಗೂಡಿಸಿಕೊಂಡು ಕೊಟ್ಟ ಮಾತನ್ನು ಮರೆತಿದ್ದಾನೆ. ಯಾವ ಉದ್ದೇಶಕ್ಕಾಗಿ ನಾನು ಅವನ ಕಾರ್ಯವನ್ನು ಕೈಗೊಂಡೆನೋ ಅದರ ಪರಿವೆಯೇ ಅವನಿಗಿಲ್ಲವಾಗಿದೆ (೭೭). ಮಳೆಗಾಲವು ಮುಗಿದೊಡನೆ ಬರುವುದಾಗಿ ಅವಧಿಯನ್ನು ಗೊತ್ತುಮಾಡಲಾಗಿತ್ತು. ನಾಲ್ಕು ತಿಂಗಳಿನಿಂದ ವಿಹಾರದಲ್ಲಿ ಮುಳುಗಿರುವ ಹರೀಶ್ವರನು ಮಳೆಗಾಲವು ಕಳೆದರೂ ಮೈಮರೆತಿದ್ದಾನೆ. ತನ್ನ ಅಮಾತ್ಯರೇ ಮೊದಲಾದ ಪರಿವಾರದೊಡನೆ ಕ್ರೀಡಿಸುತ್ತ

*

ಉಚ್ಯತಾಂ ಗಚ್ಛ ಸುಗ್ರೀವಸ್ತ್ವಯಾ ವತ್ಸ ಮಹಾಬಲ ।
ಮಮ ರೋಷಸ್ಯ ಯದ್ರೂಪಂ ಬ್ರೂಯಾಶ್ಚೈನಮಿದಂ ವಚಃ ॥ ೮೦
ನ ಚ ಸಂಕುಚಿತಃ ಪಂಥಾ ಯೇನ ವಾಲೀ ಹತೋ ಗತಃ ।
ಸಮಯೇ ತಿಷ್ಠ ಸುಗ್ರೀವ ಮಾ ವಾಲಿಪಥಮನ್ವಗಾಃ ॥ ೮೧
ಏಕ ಏವ ರಣೇ ವಾಲೀ ಶರೇಣ ನಿಹತೋ ಮಯಾ ।
ತ್ವಾಂ ತು ಸತ್ಯಾದತಿಕ್ರಾಂತಂ ಹನಿಷ್ಯಾಮಿ ಸಬಾಂಧವಮ್ ॥ ೮೨
ತದೇವಂ ವಿಹಿತೇ ಕಾರ್ಯೇ ಯದ್ಧಿತಂ ಪುರುಷರ್ಷಭ ।
ತತ್ತದ್ಬ್ರೂಹಿ ನರಶ್ರೇಷ್ಠ ತ್ವರ ಕಾಲವ್ಯತಿಕ್ರಮಃ ॥ ೮೩

ಕುರಷ್ವ ಸತ್ಯಂ ಮಯಿ ವಾನರೇಶ್ವರ
ಪ್ರತಿಶ್ರುತಂ ಧರ್ಮಮವೇಕ್ಷ್ಯ ಶಾಶ್ವತಮ್ ।
ಮಾ ವಾಲಿನಂ ಪ್ರೇತ್ಯ ಗತೋ ಯಮಕ್ಷಯಂ
ತ್ವಮದ್ಯ ಪಶ್ಯೇರ್ಮಮ ಚೋದಿತೈಃ ಶರೈಃ ॥ ೮೪

---

ಕುಡಿಯುತ್ತ ಇದ್ದಾನೆ. ಶೋಕದಿಂದ ದೀನರಾಗಿರುವ ನಮ್ಮ ವಿಷಯದಲ್ಲಿ ಅವನಿಗೆ ಮರುಕವಿಲ್ಲ (೭೮–೭೯). ವತ್ಸ–ಲಕ್ಷ್ಮಣ, ನೀನು ಸುಗ್ರೀವನ ಬಳಿಗೆ ಹೋಗಿಬಾ. ಹೋಗಿ, ನನ್ನ ರೋಷಕ್ಕೆ ಅನುಗುಣವಾದ ಈ ಮಾತನ್ನು ಅವನಿಗೆ ಹೇಳು: 'ಎಲೈ ಸುಗ್ರೀವ, ನನ್ನಿಂದ ಹತನಾದ ವಾಲಿಯು ಯಾವ ದಾರಿಯನ್ನು ಹಿಡಿದುಹೋದನೋ, ಆ ದಾರಿ (ನೀನು ಹಿಡಿಸಲಾರದಷ್ಟು) ಇಕ್ಕಟ್ಟಾಗಿಲ್ಲ! ಮಾತುಕೊಟ್ಟಂತೆ ನಡೆದುಕೊ. ವಾಲಿಯ ದಾರಿಯನ್ನು ಹಿಡಿಯಬೇಡ! (೮೦–೮೧). ರಣರಂಗದಲ್ಲಿ ವಾಲಿಯೊಬ್ಬನನ್ನೇ ನಾನು ಶರದಿಂದ ಕೊಂದಿದ್ದೇನೆ. ಸತ್ಯಮಾರ್ಗವನ್ನು ಉಲ್ಲಂಘಿಸಿದ ನಿನ್ನನ್ನಾದರೋ ಬಂಧುಬಾಂಧವಸಮೇತವಾಗಿ ಕೊಂದು ಹಾಕುವೆನು!' ಎಂದು ಹೇಳು. ಲಕ್ಷ್ಮಣ, ಕಾರ್ಯಸ್ಥಿತಿಯು ಈ ಘಟ್ಟವನ್ನು ಮುಟ್ಟಿದೆ. ಆದ್ದರಿಂದ, ಪುರುಷಶ್ರೇಷ್ಠ, ಕಾಲೋಚಿತವಾಗಿ ಯುಕ್ತವಾದುದನ್ನು ಸುಗ್ರೀವನಿಗೆ ಹೇಳು. ಇನ್ನು ಹೊರಡು, ಕಾಲವಿಳಂಬ ಬೇಡ (೮೨–೮೩). ಸುಗ್ರೀವನನ್ನು ಕುರಿತು 'ವಾನರೇಶ್ವರ, ನನ್ನೊಡನೆ ಪ್ರತಿಜ್ಞೆ ಮಾಡಿದಂತೆ ನಡೆದು ಸತ್ಯವನ್ನು ಪಾಲಿಸು. ಧರ್ಮವೊಂದೇ ಶಾಶ್ವತವೆಂದು

ಸ ಪೂರ್ವಜಂ ತೀವ್ರವಿವೃದ್ಧಕೋಪಂ
ಲಾಲಪ್ಯಮಾನಂ ಪ್ರಸಮೀಕ್ಷ್ಯ ದೀನಮ್ ।
ಚಕಾರ ತೀವ್ರಾಂ ಮತಿಮುಗ್ರತೇಜಾ
ಹರೀಶ್ವರೇ ಮಾನವವಂಶನಾಥಃ ॥ ೭೫

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ತ್ರಿಂಶಃ ಸರ್ಗಃ



ತಿಳಿ. ಅಲ್ಲದಿದ್ದರೆ, ನಾನು ಹೊಡೆದ ಬಾಣಗಳಿಂದ ನೀನು ಯಮಲೋಕವನ್ನು ಸೇರಿ ವಾಲಿಯನ್ನು ನೋಡುವ ಪ್ರಸಂಗ ಬಂದೀತು! ಅಂತಹ ಪರಿಸ್ಥಿತಿಯನ್ನು ತಂದುಕೊಳ್ಳಬೇಡ' ಎಂದು ತಿಳಿಸು" ಎಂಬುದಾಗಿ ಶ್ರೀರಾಮನು ಲಕ್ಷ್ಮಣನಿಗೆ ಹೇಳಿದನು (೭೪). ಉಗ್ರತೇಜೋನಿಧಿಯೂ ಮನುಕುಲಶ್ರೇಷ್ಠನೂ ಆದ ಲಕ್ಷ್ಮಣನು ಶ್ರೀರಾಮನ ಕ್ರೋಧೋದ್ರೇಕವನ್ನೂ ದೀನಾಲಾಪವನ್ನೂ ಕೇಳಿ, ಸುಗ್ರೀವನ ವಿಷಯದಲ್ಲಿ ತೀವ್ರವಾದ ಕೋಪವನ್ನು ತಳೆದನು (೭೫).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಮೂವತ್ತನೆಯ ಸರ್ಗ



## ಏಕತ್ರಿಂಶಃ ಸರ್ಗಃ

### ಲಕ್ಷ್ಮಣಕ್ರೋಧಃ

ಸ ಕಾಮಿನಂ ದೀನಮದೀನಸತ್ತ್ವಂ
ಶೋಕಾಭಿಪನ್ನಂ ಸಮುದೀರ್ಣಕೋಪಮ್ ।
ನರೇಂದ್ರಸೂನುರ್ನರದೇವಪುತ್ರಂ
ರಾಮಾನುಜಃ ಪೂರ್ವಜಮಿತ್ಯುವಾಚ ॥ ೧

ನ ವಾನರಃ ಸ್ಥಾಸ್ಯತಿ ಸಾಧುವೃತ್ತೇ
ನ ಮಂಸ್ಯತೇ ಕರ್ಮಫಲಾನುಷಂಗಾನ್ ।
ನ ಭೋಕ್ಷ್ಯತೇ ವಾನರರಾಜ್ಯಲಕ್ಷ್ಮೀಂ
ತಥಾ ಹಿ ನಾಭಿಕ್ರಮತೇಽಸ್ಯ ಬುದ್ಧಿಃ ॥ ೨

ಮತಿಕ್ಷಯಾದ್ಗ್ರಾಮ್ಯಸುಖೇಷು ಸಕ್ತ-
ಸ್ತವ ಪ್ರಸಾದಾಪ್ರತಿಕಾರಬುದ್ಧಿಃ ।

### ಸರ್ಗ ೩೧

**ಲಕ್ಷ್ಮಣನು ಕ್ರೋಧಾವಿಷ್ಟನಾಗಿ ಕಿಷ್ಕಿಂಧೆಯನ್ನು ಪ್ರವೇಶಿಸುವುದು. ಅಂಗದನಿಂದ ಸುಗ್ರೀವನಿಗೆ ಸಂದೇಶ. ಮಂತ್ರಿಗಳು ಲಕ್ಷ್ಮಣನ ಆಗಮನವನ್ನು ಸುಗ್ರೀವನಿಗೆ ತಿಳಿಸುವುದು.**

ಶ್ರೀರಾಮನು ಧೀರಚಿತ್ತನಾಗಿದ್ದರೂ ವಿರಹಶೋಕದಿಂದ ಅಭಿತಪ್ತನಾಗಿ ದೀನನಾಗಿರುವುದನ್ನೂ ಸುಗ್ರೀವನ ನೆರವು ಬರಲಿಲ್ಲವೆಂದು ಕುಪಿತನಾಗಿರುವುದನ್ನೂ ರಾಜಪುತ್ರನಾದ ಲಕ್ಷ್ಮಣನು ಗಮನಿಸಿದನು (೧). ಅವನು ಶ್ರೀರಾಮನನ್ನು ಕುರಿತು "ಅಣ್ಣಾ, ಆ ವಾನರನು ಸನ್ಮಾರ್ಗದಲ್ಲಿ ನಡೆಯುವುದಿಲ್ಲ. ತನ್ನ ದುಷ್ಕರ್ಮಕ್ಕೆ ಫಲವೇನಾದೀತೆಂದು ಅವನು ತಿಳಿದಿಲ್ಲ. ಕಪಿರಾಜ್ಯದ ವೈಭವವನ್ನು ಆತನು ಅನುಭವಿಸಲಾರ. ಆದ್ದರಿಂದಲೇ ಸುಗ್ರೀವನಿಗೆ ಒಳ್ಳೆಯ ಬುದ್ಧಿ ಹುಟ್ಟಲಿಲ್ಲ (೨). ಅವನು ಬುದ್ಧಿಗೆಟ್ಟು ಗ್ರಾಮ್ಯಸುಖದಲ್ಲಿ ಮಗ್ನನಾಗಿದ್ದಾನೆ ನಿನ್ನ ಅನುಗ್ರಹಕ್ಕೆ ಪ್ರತಿಯಾಗಿ ಉಪಕಾರಮಾಡಬೇಕೆಂದು ಅವನಿಗೆ ಮನಸ್ಸಾಗಲಿಲ್ಲ. ಆ ಸುಗ್ರೀವನು

ಹತೋಽಗ್ರಜಂ ಪಶ್ಯತು ವೀರ ತಸ್ಯ
ನ ರಾಜ್ಯಮೇವಂ ವಿಗುಣಸ್ಯ ದೇಯಮ್ ॥ ೩

ನ ಧಾರಯೇ ಕೋಪಮುದೀರ್ಣವೇಗಂ
ನಿಹನ್ಮಿ ಸುಗ್ರೀವಮಸತ್ಯಮದ್ಯ ।
ಹರಿಪ್ರವೀರೈಃ ಸಹ ವಾಲಿಪುತ್ರೋ
ನರೇಂದ್ರಪುತ್ರ್ಯಾ ವಿಚಯಂ ಕರೋತು ॥ ೪

ತಮಾತ್ತ-ಬಾಣಾಸನಮುತ್ಪತಂತಂ
ನಿವೇದಿತಾರ್ಥಂ ರಣಚಂಡಕೋಪಮ್ ।
ಉವಾಚ ರಾಮಃ ಪರವೀರಹಂತಾ
ಸ್ವವೇಕ್ಷಿತಂ ಸಾನುನಯಂ ಚ ವಾಕ್ಯಮ್ ॥ ೫

ನ ಹಿ ವೈ ತ್ವದ್ವಿಧೋ ಲೋಕೇ ಪಾಪಮೇವಂ ಸಮಾಚರೇತ್ ।
ಕೋಪಮಾರ್ಯೇಣ ಯೋ ಹಂತಿ ಸ ವೀರಃ ಪುರುಷೋತ್ತಮಃ ॥ ೬

ನೇದಮದ್ಯ ತ್ವಯಾ ಗ್ರಾಹ್ಯಂ ಸಾಧುವೃತ್ತೇನ ಲಕ್ಷ್ಮಣ ।
ತಾಂ ಪ್ರೀತಿಮನುವರ್ತಸ್ವ ಪೂರ್ವವೃತ್ತಂ ಚ ಸಂಗತಮ್ ॥ ೭

---

ನಮ್ಮಿಂದ ಹತನಾಗಿ ತನ್ನ ಅಣ್ಣನನ್ನು ನೋಡುವುದಕ್ಕೆ ಹೋಗಲಿ! ವೀರಾಗ್ರಣಿ-ಶ್ರೀರಾಮ, ಇಂತಹ ಗುಣಹೀನನಿಗೆ ರಾಜ್ಯವನ್ನು ಒಪ್ಪಿಸಬಾರದು! (೩). ಉಕ್ಕಿಬರುವ ನನ್ನ ಕೋಪವನ್ನು ಇನ್ನು ತಡೆದುಕೊಳ್ಳಲಾರೆ. ಸುಳ್ಳು ಹೇಳಿದ ಸುಗ್ರೀವನನ್ನು ಇಂದು ಕೊಂದುಹಾಕುವೆನು! ವಾಲಿಪುತ್ರನಾದ ಅಂಗದನು ಕಪಿನಾಯಕರೊಡನೆ ಕೂಡಿ ರಾಜಪುತ್ರಿಯಾದ ಸೀತಾದೇವಿಯನ್ನು ಅನ್ವೇಷಿಸಲಿ!" ಎಂದು ನಿವೇದಿಸಿದನು (೪). ಲಕ್ಷ್ಮಣನು ಹೀಗೆ ಹೇಳಿ ಧನುಸ್ಸನ್ನು ಕೈಗೆತ್ತಿಕೊಂಡು ಚಂಡಕೋಪದಿಂದ ಮೇಲೆದ್ದನು. ಆಗ ಶ್ರೀರಾಮನು ತಮ್ಮನನ್ನು ಸಂತೈಸುತ್ತ ವಿಚಾರಪೂರ್ಣವಾಗಿ "ವತ್ಸ, ನಿನ್ನಂತಹವನು ಹೀಗೆ ಮಿತ್ರವಧೆಯೆಂಬ ಪಾಪಕಾರ್ಯವನ್ನು ಮಾಡಬಾರದು. ಯಾವನು ಕೋಪವನ್ನು ವಿವೇಕದಿಂದ ತಡೆದುಕೊಳ್ಳುವನೋ ಆ ವೀರನೇ ಪುರುಷಶ್ರೇಷ್ಠನೆನಿಸುವನು (೫-೬). ಲಕ್ಷ್ಮಣ, ಸಜ್ಜನನಾದ ನೀನು ಈ ಬಗೆಯ ಕೃತ್ಯವನ್ನು ಚಿಂತಿಸಬಾರದು. ಸುಗ್ರೀವನಲ್ಲಿ

ಸಾಮೋಪಹಿತಯಾ ವಾಚಾ ರೂಕ್ಷಾಣಿ ಪರಿವರ್ಜಯನ್ ।
ವಕ್ತುಮರ್ಹಸಿ ಸುಗ್ರೀವಂ ವ್ಯತೀತಂ ಕಾಲಪರ್ಯಯೇ ॥ ೮

ಸೋಽಗ್ರಜೇನಾನುಶಿಷ್ಟಾರ್ಥೋ ಯಥಾವತ್ ಪುರುಷರ್ಷಭಃ ।
ಪ್ರವಿವೇಶ ಪುರೀಂ ವೀರೋ ಲಕ್ಷ್ಮಣಃ ಪರವೀರಹಾ ॥ ೯

ತತಃ ಶುಭಮತಿಃ ಪ್ರಾಜ್ಞೋ ಭ್ರಾತುಃ ಪ್ರಿಯಹಿತೇ ರತಃ ।
ಲಕ್ಷ್ಮಣಃ ಪ್ರತಿಸಂರಬ್ಧೋ ಜಗಾಮ ಭವನಂ ಕಪೇಃ ॥ ೧೦

ಶಕ್ರಬಾಣಾಸನಪ್ರಖ್ಯಂ ಧನುಃ ಕಾಲಾಂತಕೋಪಮಮ್ ।
ಪ್ರಗೃಹ್ಯ ಗಿರಿಶೃಂಗಾಭಂ ಮಂದರಃ ಸಾನುಮಾನಿವ ॥ ೧೧

ಯಥೋಕ್ತಕಾರೀ ವಚನಮುತ್ತರಂ ಚೈವ ಸೋತ್ತರಮ್ ।
ಬೃಹಸ್ಪತಿಸಮೋ ಬುದ್ಧ್ಯಾ ಮತ್ವಾ ರಾಮಾನುಜಸ್ತದಾ ॥ ೧೨

ಕಾಮಕ್ರೋಧಸಮುತ್ಥೇನ ಭ್ರಾತುಃ ಕೋಪಾಗ್ನಿನಾ ವೃತಃ ।
ಪ್ರಭಂಜನ ಇವಾಪ್ರೀತಃ ಪ್ರಯಯೌ ಲಕ್ಷ್ಮಣಸ್ತದಾ ॥ ೧೩

---

ಮೊದಲಿದ್ದ ಪ್ರೀತಿಯನ್ನೇ ಅನುವರ್ತಿಸು. ನಮಗೆ ಅವನೊಡನಾದ ಸ್ನೇಹವನ್ನು ಮನಸ್ಸಿನಲ್ಲಿಟ್ಟರು. ಸಾಮದಿಂದಲೇ ಸುಗ್ರೀವನೊಡನೆ ಸಂಭಾಷಿಸು. ಪರುಷವಾಕ್ಯಗಳನ್ನಾಡಬೇಡ. ಕಾಲಾತಿಕ್ರಮವಾಯಿತೆಂಬ ವಿಷಯವನ್ನು ಅವನಿಗೆ ತಿಳಿಸು" ಎಂದು ನುಡಿದನು (೭-೮). ಹೀಗೆ ಅಣ್ಣನಿಂದ ಯುಕ್ತವಾದ ಸಂದೇಶವನ್ನು ಗ್ರಹಿಸಿ, ಶೂರಾಗ್ರೇಸರನಾದ ಲಕ್ಷ್ಮಣನು ಕಿಷ್ಕಿಂಧೆಗೆ ಹೊರಟನು. ಲಕ್ಷ್ಮಣನು ಸಹಜವಾಗಿ ಒಳ್ಳೆಯ ಸ್ವಭಾವದವನು. ಯುಕ್ತಾಯುಕ್ತ ಪರಿಜ್ಞಾನವುಳ್ಳ ವಿವೇಕಿ. ಆದರೂ ಅಣ್ಣನ ಪ್ರಿಯಹಿತಗಳಲ್ಲಿ ನಿರತನಾದ್ದರಿಂದ ಚಿತ್ತೋದ್ವೇಗದಿಂದಲೇ ಸುಗ್ರೀವನ ನಗರಕ್ಕೆ ತೆರಳಿದನು (೯-೧೦). ಇಂದ್ರಧನುಸ್ಸಿನಂತೆ ಸುಂದರವೂ, ಕಾಲಾಂತಕನಂತೆ ಉಗ್ರವೂ ಗಿರಿಶಿಖರದಂತೆ ಉನ್ನತವೂ ಆದ ಧನುಸ್ಸನ್ನು ಹಿಡಿದು, ಮಂದರ ಪರ್ವತದಂತೆ ಲಕ್ಷ್ಮಣನು ರಭಸದಿಂದ ಹೋದನು ! ಬುದ್ಧಿಯಲ್ಲಿ ಬೃಹಸ್ಪತಿಗೆ ಸಮಾನನಾದ ಆ ರಾಮಾನುಜನು ಅಣ್ಣನ ಮಾತಿನಂತೆ ಹೊರಟು, ಸುಗ್ರೀವನಿಗೆ ಹೇಳಬೇಕಾದ ಉತ್ತರಪ್ರತ್ಯುತ್ತರಗಳನ್ನು ಮನಸ್ಸಿನಲ್ಲಿ ಗುಣಿಸುತ್ತ ಹೋದನು ! (೧೧-೧೨). ಲಕ್ಷ್ಮಣನು ಅಣ್ಣನ ಇಷ್ಟಾರ್ಥವು ನೆರವೇರಲಿಲ್ಲವೆಂಬ ಅಸಮಾಧಾನದಿಂದ ಜನಿಸಿದ ಕೋಪಾಗ್ನಿಯಿಂದ ಉರಿಯುತ್ತ,

ಸಾಲತಾಲಾಶ್ವಕರ್ಣಾಂಶ್ಚ ತರಸಾ ಪಾತಯನ್ ಬಹೂನ್ ।
ಪರ್ಯಸ್ಯನ್ ಗಿರಿಕೂಟಾನಿ ದ್ರುಮಾನನ್ಯಾಂಶ್ಚ ವೇಗಿತಃ ॥ ೧೪

ಶಿಲಾಶ್ಚ ಶಕಲೀಕುರ್ವನ್ ಪದ್ಭ್ಯಾಂ ಗಜ ಇವಾಶುಗಃ ।
ದೂರಮೇಕಪದಂ ತ್ಯಕ್ತ್ವಾ ಯಯೌ ಕಾರ್ಯವಶಾದ್ದ್ರುತಮ್ ॥ ೧೫

ತಾಮಪಶ್ಯದ್ಬಲಾಕೀರ್ಣಾಂ ಹರಿರಾಜಮಹಾಪುರೀಮ್ ।
ದುರ್ಗಾಮಿಕ್ಷ್ವಾಕುಶಾರ್ದೂಲಃ ಕಿಷ್ಕಿಂಧಾಂ ಗಿರಿಸಂಕಟೇ ॥ ೧೬

ರೋಷಾತ್ ಪ್ರಸ್ಫುರಮಾಣೋಷ್ಠಃ ಸುಗ್ರೀವಂ ಪ್ರತಿ ಲಕ್ಷ್ಮಣಃ ।
ದದರ್ಶ ವಾನರಾನ್ ಭೀಮಾನ್ ಕಿಷ್ಕಿಂಧಾಯಾ ಬಹಿಶ್ಚರಾನ್ ॥ ೧೭

ತಂ ದೃಷ್ಟ್ವಾ ವಾನರಾಃ ಸರ್ವೇ ಲಕ್ಷ್ಮಣಂ ಪುರುಷರ್ಷಭಮ್ ।
ಶೈಲಶೃಂಗಾಣಿ ಶತಶಃ ಪ್ರವೃದ್ಧಾಂಶ್ಚ ಮಹೀರುಹಾನ್ ॥ ೧೮

ಜಗೃಹುಃ ಕುಂಜರಪ್ರಖ್ಯಾ ವಾನರಾಃ ಪರ್ವತಾಂತರೇ ।
ತಾನ್ ಗೃಹೀತಪ್ರಹರಣಾನ್ ಹರೀನ್ ದೃಷ್ಟ್ವಾ ತು ಲಕ್ಷ್ಮಣಃ ॥ ೧೯

---

ಮನಶ್ಶಾಂತಿಯನ್ನು ಕಳೆದುಕೊಂಡು, ಬಿರುಗಾಳಿಯಂತೆ ಹೋದನು !(೧೩). ದಾರಿಗೆ ಅಡ್ಡಿಯಾದ ಸಾಲ, ತಾಲ, ಅಶ್ವಕರ್ಣಾದಿ ವಿವಿಧವೃಕ್ಷಗಳನ್ನು ರಭಸದಿಂದುರುಳಿಸುತ್ತ, ಬೆಟ್ಟದಲ್ಲಿದ್ದ ಬಂಡೆಗಳನ್ನು ತಳ್ಳುತ್ತ, ಶೀಘ್ರಗಾಮಿಯಾದ ಆನೆಯಂತೆ ಕಲ್ಲುಗಳನ್ನು ಕಾಲಿನಿಂದೊದೆದು ಪುಡಿಪುಡಿಮಾಡುತ್ತ, ದೂರ ದೂರವಾಗಿ ಹೆಜ್ಜೆಯಿಡುತ್ತ, ಕಾರ್ಯಾವಸರವನ್ನು ಗಮನಿಸಿ ಬೇಗಬೇಗನೆ ಲಕ್ಷ್ಮಣನು ಹೋದನು ! (೧೪-೧೫) ಆ ಇಕ್ಷ್ವಾಕುಶಾರ್ದೂಲನು ಮುಂದೆ ಹೋಗಿ, ವಾನರಬಲದಿಂದ ವ್ಯಾಪ್ತವೂ ದುರ್ಗಮವೂ ಕಪಿರಾಜನ ರಾಜಧಾನಿಯೂ ಆದ ಕಿಷ್ಕಿಂಧೆಯನ್ನು ಪರ್ವತಗಳ ನಡುವೆ ಕಂಡನು. ಕಿಷ್ಕಿಂಧೆಯ ಹೊರಗಡೆ ಭೀಕರಾಕೃತಿಯ ವಾನರರು ಕಾವಲಾಗಿ ಸಂಚರಿಸುತ್ತಿದ್ದುದನ್ನು ನೋಡಿ, ಕೋಪಾವೇಶದಿಂದ ಲಕ್ಷ್ಮಣನ ತುಟಿಯು ನಡುಗತೊಡಗಿತು ! (೧೬-೧೭). ಆ ಕಪಿಗಳೆಲ್ಲರೂ ಲಕ್ಷ್ಮಣನನ್ನು ನೋಡಿದೊಡನೆ, ಬಂಡೆಗಳನ್ನೂ ದೊಡ್ಡದೊಡ್ಡ ಮರಗಳನ್ನೂ ಕೈಗೆ ತೆಗೆದುಕೊಂಡರು. ಸಲಗಗಳಂತಿದ್ದ ಆ ಕಪಿಗಳು ಆಯುಧಧಾರಿಗಳಾದುದನ್ನು ವೀಕ್ಷಿಸಿ, ಲಕ್ಷ್ಮಣನ ಕೋಪವು ಇಮ್ಮಡಿಸಿತು ! ಅಗ್ನಿಗೆ ಇಂಧನವನ್ನು ಸುರಿದಂತಾಯಿತು !

ಬಭೂವ ದ್ವಿಗುಣಂ ಕ್ರುದ್ಧೋ ಬಹ್ವಿಂಧನ ಇವಾನಲಃ ।
ತಂ ತೇ ಭಯಪರೀತಾಂಗಾಃ ಕ್ರುದ್ಧಂ ದೃಷ್ಟ್ವಾ ಪ್ಲವಂಗಮಾಃ॥ ೨೦

ಕಾಲಮೃತ್ಯುಯುಗಾಂತಾಭಂ ಶತಶೋ ವಿದ್ರುತಾ ದಿಶಃ ।
ತತಃ ಸುಗ್ರೀವಭವನಂ ಪ್ರವಿಶ್ಯ ಹರಿಪುಂಗವಾಃ ॥ ೨೧

ಕ್ರೋಧಮಾಗಮನಂ ಚೈವ ಲಕ್ಷ್ಮಣಸ್ಯ ನ್ಯವೇದಯನ್ ।
ತಾರಯಾ ಸಹಿತಃ ಕಾಮೀ ಸಕ್ತಃ ಕಪಿವೃಷೋ ರಹಃ॥ ೨೨

ನ ತೇಷಾಂ ಕಪಿವೀರಾಣಾಂ ಶುಶ್ರಾವ ವಚನಂ ತದಾ ।
ತತಃ ಸಚಿವಸಂದಿಷ್ಟಾ ಹರಯೋ ರೋಮಹರ್ಷಣಾಃ ॥ ೨೩

ಗಿರಿಕುಂಜರಮೇಘಾಭಾ ನಗರ್ಯಾ ನಿರ್ಯಯುಸ್ತದಾ ।
ನಖದಂಷ್ಟ್ರಾಯುಧಾ ಘೋರಾಃ ಸರ್ವೇ ವಿಕೃತದರ್ಶನಾಃ ॥ ೨೪

ಸರ್ವೇ ಶಾರ್ದೂಲದರ್ಪಾಶ್ಚ ಸರ್ವೇ ಚ ವಿಕೃತಾನನಾಃ ।
ದಶನಾಗಬಲಾಃ ಕೇಚಿತ್ ಕೇಚಿದ್ದಶಗುಣೋತ್ತರಾಃ ॥ ೨೫

---

(೧೮-೧೯) ಪ್ರಳಯಕಾಲದ ಮೃತ್ಯುವಿನಂತೆ ಲಕ್ಷ್ಮಣನು ಕ್ರೋಧಾವಿಷ್ಟನಾದುದನ್ನು ಈಕ್ಷಿಸಿದೊಡನೆ, ಕಪಿಗಳು ಹೆದರಿ ಕಂಗಾಲಾಗಿ ದಿಕ್ಕುದಿಕ್ಕಿಗೆ ಓಡಿಹೋದರು ! ಆ ಕಪಿನಾಯಕರು ಸುಗ್ರೀವನ ಅರಮನೆಗೆ ಹೋಗಿ, ಲಕ್ಷ್ಮಣನ ಕೋಪವನ್ನೂ ಅವನು ಕಿಷ್ಕಿಂಧೆಗೆ ಬರುತ್ತಿರುವನೆಂಬುದನ್ನೂ ಅರಿಕೆಮಾಡಿದರು. ಕಪೀಶ್ವರನಾದ ಸುಗ್ರೀವನು ಕಾಮಾಸಕ್ತನಾಗಿ ತಾರೆಯೊಡನೆ ಏಕಾಂತದಲ್ಲಿದ್ದನು (೨೦-೨೨). ಅವನು ಈ ಕಪಿನಾಯಕರ ಮಾತನ್ನು ಗಮನಿಸಲಿಲ್ಲ. ಅಷ್ಟರಲ್ಲಿ ಮಂತ್ರಿಗಳಿಂದ ಆಜ್ಞಪ್ತರಾದ ಕಪಿವೀರರು ನಗರರಕ್ಷಣೆಗೋಸ್ಕರ ಸನ್ನದ್ಧರಾಗಿ ಹೊರಟರು ಬೆಟ್ಟದಂತೆಯೂ ಆನೆಯಂತೆಯೂ ಮೇಘದಂತೆಯೂ ಇದ್ದ ಆ ಕಪಿಗಳನ್ನು ನೋಡಿದರೆ ರೋಮಾಂಚವಾಗುತ್ತಿತ್ತು. ಘೋರಾಕೃತಿಗಳೂ ವಿಕೃತರೂಪರೂ ಆದ ಅವರಿಗೆ ನಖದಂಷ್ಟ್ರಗಳೇ ಆಯುಧಗಳಾಗಿದ್ದವು (೨೩-೨೪). ಎಲ್ಲರೂ ಶಾರ್ದೂಲಗಳಂತೆ ದರ್ಪಶಾಲಿಗಳು. ಅವರ ಮುಖಗಳು ವಿಕಾರವಾಗಿದ್ದವು. ಅವರಲ್ಲಿ ಕೆಲವರು ಹತ್ತಾನೆಗಳ ಬಲವುಳ್ಳವರು. ಕೆಲವರು ನೂರಾನೆಗಳ

ಕೇಚಿನ್ನಾಗಸಹಸ್ರಸ್ಯ ಬಭೂವುಸ್ತುಲ್ಯವಿಕ್ರಮಾಃ ।
ಕೃತ್ಸ್ನಾಂ ಹಿ ಕಪಿಭಿರ್ವ್ಯಾಪ್ತಾಂ ದ್ರುಮಹಸ್ತೈರ್ಮಹಾಬಲೈಃ ॥ ೨೫
ಅಪಶ್ಯಲ್ಲಕ್ಷ್ಮಣಃ ಕ್ರುದ್ಧಃ ಕಿಷ್ಕಿಂಧಾಂ ತಾಂ ದುರಾಸದಾಮ್ ।
ತತಸ್ತೇ ಹರಯಃ ಸರ್ವೇ ಪ್ರಾಕಾರಪರಿಖಾಂತರಾತ್ ॥ ೨೬

ನಿಷ್ಕ್ರಮ್ಯೋದಗ್ರಸತ್ತ್ವಾಸ್ತು ತಸ್ಥುರಾವಿಷ್ಕೃತಂ ತದಾ ।
ಸುಗ್ರೀವಸ್ಯ ಪ್ರಮಾದಂ ಚ ಪೂರ್ವಜಸ್ಯಾರ್ಥಮಾತ್ಮವಾನ್ ॥ ೨೭
ಬುದ್ಧ್ವಾ ಕೋಪವಶಂ ವೀರಃ ಪುನರೇವ ಜಗಾಮ ಸಃ ।
ಸ ದೀರ್ಘೋಷ್ಣಮಹೋಚ್ಛ್ವಾಸಃ ಕೋಪಸಂರಕ್ತಲೋಚನಃ ॥ ೨೮

ಬಭೂವ ನರಶಾರ್ದೂಲಃ ಸಧೂಮ ಇವ ಪಾವಕಃ ।
ಬಾಣಶಲ್ಯಸ್ಫುರಜ್ಜಿಹ್ವಃ ಸಾಯಕಾಸನಭೋಗವಾನ್ ॥ ೨೯
ಸ್ವತೇಜೋವಿಷಸಂಘಾತಃ ಪಂಚಾಸ್ಯ ಇವ ಪನ್ನಗಃ ।
ತಂ ದೀಪ್ತಮಿವ ಕಾಲಾಗ್ನಿಂ ನಾಗೇಂದ್ರಮಿವ ಕೋಪಿತಮ್ ॥ ೩೦
ಸಮಾಸಾದ್ಯಾಂಗದಸ್ತ್ರಾಸಾದ್ವಿಷಾದಮಗಮದ್ಭೃಶಮ್ ।
ಸೋಽಂಗದಂ ರೋಷತಾಮ್ರಾಕ್ಷಃ ಸಂದಿದೇಶ ಮಹಾಯಶಾಃ ॥ ೩೨

---

ಬಲವುಳ್ಳವರು. ಸಾವಿರ ಆನೆಗಳ ಬಲವುಳ್ಳವರು ಕೆಲವರು. ವೃಕ್ಷಗಳನ್ನು ಹೊತ್ತುಕೊಂಡು ಎಲ್ಲೆಲ್ಲಿಯೂ ಬಲಶಾಲಿಗಳಾದ ಕಪಿಗಳು ಕಿಷ್ಕಿಂಧೆಯ ಸುತ್ತಲೂ ನಿಂತುದನ್ನು ಕ್ರುದ್ಧನಾದ ಲಕ್ಷ್ಮಣನು ಕಂಡನು! (೨೫-೨೬). ಬಲಾಢ್ಯರಾದ ಆ ವಾನರರು ಕೋಟೆಯ ಹೊರಗಿರುವ ಕಂದಕದವರೆಗೂ ವ್ಯಾಪಿಸಿ ನಿಂತರು. ಆಗ ಲಕ್ಷ್ಮಣನು ಸುಗ್ರೀವನ ಪ್ರಮಾದವನ್ನೂ ತನ್ನ ಅಣ್ಣನ ಕಾರ್ಯಾವಸರವನ್ನೂ ಚಿಂತಿಸಿ ಮತ್ತಷ್ಟು ಕ್ರುದ್ಧನಾದನು. ಅವನ ಕಣ್ಣುಗಳು ಕೆಂಪಡರಿದವು (೨೭-೨೯). ಬಿಸಿಯಾದ ದೀರ್ಘೋಚ್ಛ್ವಾಸಗಳು ಹೊರಡಲಾರಂಭಿಸಿದವು. ಆ ನರಶಾರ್ದೂಲನು ಹೊಗೆಯುತ್ತಿದ್ದ ಬೆಂಕಿಯಾದನು. ಐದು ಹೆಡೆಗಳ ಕಾಳಸರ್ಪವಾದನು! ಧನುಸ್ಸೆಂಬ ಸರ್ಪಶರೀರದಲ್ಲಿ ಬಾಣಾಗ್ರಗಳೆಂಬ ನಾಲಗೆಗಳು ಸ್ಫುರಿಸಿದವು! ಅವನ ಅದ್ಭುತವಾದ ತೇಜಸ್ಸು ಘೋರವಿಷವಾಯಿತು! ಪ್ರಜ್ವಲಿಸುವ ಕಾಲಾಗ್ನಿಯಂತೆಯೂ ಕೆರಳಿಸಿದ ಗಜೇಂದ್ರನಂತೆಯೂ ಇದ್ದ ಲಕ್ಷ್ಮಣನನ್ನು ಅಂಗದನು ನೋಡಿದನು (೩೦-೩೧). ಅವನು ಅತ್ಯಂತಖಿನ್ನನಾಗಿ ಭಯಪಡುತ್ತ ಲಕ್ಷ್ಮಣನ

ಸುಗ್ರೀವಃ ಕಥ್ಯತಾಂ ವತ್ಸ ಮಮಾಗಮನಮಿತ್ಯುತ ।
ಏಷ ರಾಮಾನುಜಃ ಪ್ರಾಪ್ತಸ್ತ್ವತ್ಸಕಾಶಮರಿಂದಮಃ ॥ ೩೩

ಭ್ರಾತುರ್ವ್ಯಸನಸಂತಪ್ತೋ ದ್ವಾರಿ ತಿಷ್ಠತಿ ಲಕ್ಷ್ಮಣಃ ।
ತಸ್ಯ ವಾಕ್ಯೇ ಯದಿ ರುಚಿಃ ಕ್ರಿಯತಾಂ ಸಾಧು ವಾನರ ॥ ೩೪

ಇತ್ಯುಕ್ತ್ವಾ ಶೀಘ್ರಮಾಗಚ್ಛ ವತ್ಸ ವಾಕ್ಯಮಿದಂ ಮಮ ।
ಲಕ್ಷ್ಮಣಸ್ಯ ವಚಃ ಶ್ರುತ್ವಾ ಶೋಕಾವಿಷ್ಟೋಽಂಗದೋಽಬ್ರವೀತ್ ॥
ಪಿತುಃ ಸಮೀಪಮಾಗಮ್ಯ ಸೌಮಿತ್ರಿರಯಮಾಗತಃ ॥

ಅಥಾಂಗದಸ್ತಸ್ಯ ವಚೋ ನಿಶಮ್ಯ
ಸಂಭ್ರಾಂತಭಾವಃ ಪರಿದೀನವಕ್ತ್ರಃ ।
ನಿಪತ್ಯ ತೂರ್ಣಂ ನೃಪತೇಸ್ತರಸ್ವೀ
ತತಃ ಕುಮಾರಶ್ಚರಣೌ ವವಂದೇ ॥ ೩೬

ಸಂಗೃಹ್ಯ ಪಾದೌ ಪಿತುರಗ್ರ್ಯತೇಜಾ
ಜಗ್ರಾಹ ಮಾತುಃ ಪುನರೇವ ಪಾದೌ ।
ಪಾದೌ ರುಮಾಯಾಶ್ಚ ನಿಪೀಡಯಿತ್ವಾ
ನಿವೇದಯಾಮಾಸ ತತಸ್ತಮರ್ಥಮ್ ॥ ೩೭

---

ಸಮೀಪಕ್ಕೆ ಬಂದನು. ರೋಷತಾಮ್ರಾಕ್ಷನಾದ ಲಕ್ಷ್ಮಣನು ಅಂಗದನನ್ನು ನೋಡಿ "ವತ್ಸ, ನಾನು ಬಂದಿರುವೆನೆಂದು ಸುಗ್ರೀವನಿಗೆ ಹೇಳು. ಶ್ರೀರಾಮನ ತಮ್ಮನಾದ ಲಕ್ಷ್ಮಣನು ತನ್ನ ಅಣ್ಣನ ಕಷ್ಟವನ್ನು ಕಂಡು ಸಂತಪ್ತನಾಗಿ ಬಾಗಿಲಲ್ಲಿ ಬಂದು ನಿಂತಿರುವನೆಂದೂ, ಅವನ ಮಾತು ರುಚಿಸಿದರೆ ಅದರಂತೆ ಸರಿಯಾಗಿ ನಡೆದುಕೊಳ್ಳಬೇಕೆಂದೂ ಸುಗ್ರೀವನಿಗೆ ತಿಳಿಸು (೩೨-೩೪). ವತ್ಸ-ಅಂಗದ, ನನ್ನ ಮಾತನ್ನು ಅವನಿಗೆ ನಿವೇದಿಸಿ ಬೇಗನೆ ಬಾ" ಎಂದನು. ಅಂಗದನು ಚಿಂತಾವಿಷ್ಟನಾಗಿ ಹೋಗಿ ತನ್ನ ಚಿಕ್ಕಪ್ಪನಿಗೆ ಸೌಮಿತ್ರಿಯು ಬಂದ ವೃತ್ತಾಂತವನ್ನು ಅರಿಕೆಮಾಡಿದನು. ಲಕ್ಷ್ಮಣನ ಮಾತನ್ನು ಕೇಳಿ ಅಂಗದನ ಮನಸ್ಸಿಗೆ ಕಳವಳವಾಗಿತ್ತು. ಮುಖವು ಬಾಡಿತ್ತು. ಆ ಕುಮಾರನು ಬೇಗಬೇಗನೆ ಹೋಗಿ ಚಿಕ್ಕಪ್ಪನಾದ ಸುಗ್ರೀವನ ಪಾದಗಳಿಗೆ ವಂದಿಸಿದನು (೩೫-೩೬). ಅನಂತರ ಆ ವೀರನು ತನ್ನ ತಾಯಿಯಾದ ತಾರೆ ಮತ್ತು

ಸ ನಿದ್ರಾಮದಸಂವೀತೋ ವಾನರೋ ನ ವಿಬುದ್ಧವಾನ್ ।
ಬಭೂವ ಮದಮತ್ತಶ್ಚ ಮದನೇನ ಚ ಮೋಹಿತಃ ॥ ೩೮
ತತಃ ಕಿಲಕಿಲಾಂ ಚಕ್ರುರ್ಲಕ್ಷ್ಮಣಂ ಪ್ರೇಕ್ಷ್ಯ ವಾನರಾಃ ।
ಪ್ರಸಾದಯಂತಸ್ತಂ ಕ್ರುದ್ಧಂ ಭಯಮೋಹಿತಚೇತಸಃ ॥ ೩೯
ತೇ ಮಹೌಘನಿಭಂ ದೃಷ್ಟ್ವಾ ವಜ್ರಾಶನಿಸಮಸ್ವನವತ್ ।
ಸಿಂಹನಾದಂ ಸಮಂ ಚಕ್ರುರ್ಲಕ್ಷ್ಮಣಸ್ಯ ಸಮೀಪತಃ ॥ ೪೦
ತೇನ ಶಬ್ದೇನ ಮಹತಾ ಪ್ರತ್ಯಬುಧ್ಯತ ವಾನರಃ ।
ಮದವಿಹ್ವಲತಾಮ್ರಾಕ್ಷೋ ವ್ಯಾಕುಲಸ್ರಗ್ವಿಭೂಷಣಃ ॥ ೪೧
ಅಥಾಂಗದವಚಃ ಶ್ರುತ್ವಾ ತೇನೈವ ಚ ಸಮಾಗತೌ ।
ಮಂತ್ರಿಣೌ ವಾನರೇಂದ್ರಸ್ಯ ಸಂಮತೋದಾರದರ್ಶಿನೌ ॥ ೪೨
ಪ್ಲಕ್ಷಶ್ಚೈವ ಪ್ರಭಾವಶ್ಚ ಮಂತ್ರಿಣಾವರ್ಥಧರ್ಮಯೋಃ ।
ವಕ್ತುಮುಚ್ಚಾವಚಂ ಪ್ರಾಪ್ತಂ ಲಕ್ಷ್ಮಣಂ ತೌ ಶಶಂಸತುಃ ॥ ೪೩

---

ರುಮೆಯ ಚರಣಗಳಿಗೆ ನಮಸ್ಕರಿಸಿ, ಲಕ್ಷ್ಮಣನ ಸಂದೇಶವನ್ನು ನಿವೇದಿಸಿದನು. ಸುಗ್ರೀವನಾದರೋ ನಿದ್ರೆ ಮತ್ತು ಮದ್ಯದ ಅಮಲಿನಲ್ಲಿದ್ದನು. ಕಾಮಮೋಹಿತನಾದ ಅವನಿಗೆ ಏನೊಂದೂ ಸ್ಫುರಿಸಲಿಲ್ಲ (೩೭-೩೮). ಇತ್ತ ನಗರದ ಹೊರಗಿದ್ದ ವಾನರರು ಕ್ರುದ್ಧನಾದ ಲಕ್ಷ್ಮಣನನ್ನು ನೋಡಿ, ಭಯದಿಂದ ದಿಗ್ಭ್ರಾಂತರಾಗಿ ಕಿಲಕಿಲಾ ಎಂದು ಕೋಲಾಹಲಮಾಡಿದರು. ಮಹಾಪ್ರವಾಹದಂತೆ ರಭಸದಿಂದ ಬಂದು ಸಿಡಿಲಿನಂತೆ ಸಿಂಹನಾದಗೈದ ಸೌಮಿತ್ರಿಯನ್ನು ನೋಡಿ, ವಾನರರೂ ಸಹ ಸಿಂಹನಾದಮಾಡಿದರು (೩೯-೪೦). ಮಹತ್ತರವಾದ ಕೋಲಾಹಲವು ನಡೆಯುವುದನ್ನು ಕೇಳಿದಾಗ, ಸುಗ್ರೀವನಿಗೆ ಎಚ್ಚರಿಕೆ ಹುಟ್ಟಿತು. ಮದದಿಂದ ಕೆಂಪಡರಿದ ಕಣ್ಣುಗಳನ್ನು ತಿರುಗಿಸುತ್ತ ಕೆದರಿದ ಹಾರಭೂಷಣಗಳುಳ್ಳವನಾಗಿ ಎದ್ದು ಕುಳಿತನು! (೪೧). ಅಂಗದನ ಮಾತನ್ನು ಕೇಳಿ ಅವನೊಡನೆಯೇ ಪ್ಲಕ್ಷ, ಪ್ರಭಾವ ಎಂಬ ಸುಗ್ರೀವನ ಇಬ್ಬರು ಮಂತ್ರಿಗಳು ಬಂದಿದ್ದರು. ಅವರು ಕಪೀಂದ್ರನ ವಿಶ್ವಾಸಕ್ಕೆ ಪಾತ್ರರೂ ದೀರ್ಘದರ್ಶಿಗಳೂ ಧರ್ಮಾರ್ಥಗಳನ್ನು ಬಲ್ಲವರೂ ಆಗಿದ್ದರು. ಲಕ್ಷ್ಮಣನು ವಿವಿಧವಿಷಯಗಳನ್ನು ಕುರಿತು ಸಂಭಾಷಿಸಲು

ಪ್ರಸಾದಯಿತ್ವಾ ಸುಗ್ರೀವಂ ವಚನೈಃ ಸಾಮನಿಶ್ಚಿತೈಃ ।
ಆಸೀನಂ ಪರ್ಯುಪಾಸೀನೌ ಯಥಾ ಶಕ್ರಂ ಮರುತ್ಪತಿಮ್ ॥ ೪೪

ಸತ್ಯಸಂಧೌ ಮಹಾಭಾಗೌ ಭ್ರಾತರೌ ರಾಮಲಕ್ಷ್ಮಣೌ ।
ವಯಸ್ಯಭಾವಂ ಸಂಪ್ರಾಪ್ತೌ ರಾಜ್ಯಾರ್ಹೌ ರಾಜ್ಯದಾಯಿನೌ ॥ ೪೫

ತಯೋರೇಕೋ ಧನುಷ್ಪಾಣಿರ್ದ್ವಾರಿ ತಿಷ್ಠತಿ ಲಕ್ಷ್ಮಣಃ ।
ಯಸ್ಯ ಭೀತಾಃ ಪ್ರವೇಪಂತೋ ನಾದಾನ್ ಮುಂಚಂತಿ ವಾನರಾಃ ॥

ಸ ಏಷ ರಾಘವಭ್ರಾತಾ ಲಕ್ಷ್ಮಣೋ ವಾಕ್ಯಸಾರಥಿಃ ।
ವ್ಯವಸಾಯರಥಃ ಪ್ರಾಪ್ತಸ್ತಸ್ಯ ರಾಮಸ್ಯ ಶಾಸನಾತ್ ॥ ೪೭

ಅಯಂ ಚ ದಯಿತೋ ರಾಜಂಸ್ತಾರಾಯಾಸ್ತನಯೋಽಂಗದಃ ।
ಲಕ್ಷ್ಮಣೇನ ಸಕಾಶಂ ತೇ ಪ್ರೇಷಿತಸ್ತ್ವರಯಾನಘ ॥ ೪೮

ಸೋಽಯಂ ರೋಷಪರೀತಾಕ್ಷೋ ದ್ವಾರಿ ತಿಷ್ಠತಿ ವೀರ್ಯವಾನ್ ।
ವಾನರಾನ್ ವಾನರಪತೇ ಚಕ್ಷುಷಾ ನಿರ್ದಹನ್ನಿವ ॥ ೪೯

---

ಬಂದಿರಬಹುದೆಂದು ಅವರು ಸುಗ್ರೀವನಿಗೆ ಹೇಳಿದರು (೪೨-೪೩). ಅವರು ಸಾಮಪೂರ್ವಕವಾದ ವಚನಗಳಿಂದ ಸುಗ್ರೀವನನ್ನು ಪ್ರಸನ್ನನನ್ನಾಗಿ ಮಾಡಿಕೊಂಡರು. ದೇವೇಂದ್ರನಂತೆ ವೈಭವದಿಂದ ಕುಳಿತಿದ್ದ ಅವನ ಪಾರ್ಶ್ವದಲ್ಲಿ ಉಪವಿಷ್ಟರಾಗಿ, ಆ ಮಂತ್ರಿಗಳು "ಮಹಾರಾಜ, ಸತ್ಯಸಂಧರೂ ಮಹಾನುಭಾವರೂ ಆದ ರಾಮಲಕ್ಷ್ಮಣರು ನಿನಗೆ ಮಿತ್ರರಾಗಿದ್ದಾರೆ. ಮಹಾರಾಜ್ಯಕ್ಕೆ ಅರ್ಹರಾದ ಆ ಸೋದರರು ನಿನಗೆ ಈ ವಾನರರಾಜ್ಯವನ್ನು ಕೊಡಿಸಿದ್ದಾರೆ (೪೪-೪೫). ಅವರಲ್ಲೊಬ್ಬನಾದ ಲಕ್ಷ್ಮಣನು ಧನುರ್ಧಾರಿಯಾಗಿ ಬಂದು ಬಾಗಿಲಲ್ಲಿ ನಿಂತಿದ್ದಾನೆ. ನಮ್ಮ ವಾನರರು ಅವನಿಗೆ ಹೆದರಿ ನಡುಗುತ್ತ ಹೀಗೆ ಕೂಗಿಕೊಳ್ಳುತ್ತಿದ್ದಾರೆ! ರಾಘವನ ತಮ್ಮನಾದ ಲಕ್ಷ್ಮಣನು ಅಣ್ಣನ ಸಂದೇಶದಿಂದ ಪ್ರೇರಿತನಾಗಿ ಬಂದಿದ್ದಾನೆ. ಕರ್ತವ್ಯವನ್ನು ಸಾಧಿಸಬೇಕೆಂಬ ನಿಶ್ಚಯದಿಂದ ಶ್ರೀರಾಮನ ಆಜ್ಞೆಯಂತೆ ಆಗಮಿಸಿದ್ದಾನೆ (೪೬-೪೭). ತಾರೆಯ ಪ್ರಿಯಪುತ್ರನಾದ ಅಂಗದನನ್ನು ಲಕ್ಷ್ಮಣನೇ ನಿನ್ನ ಬಳಿಗೆ ಕಳಿಸಿದ್ದಾನೆ. ಮಹಾರಾಜ-ಸುಗ್ರೀವ, ಆ ವೀರನು ರೋಷದಿಂದ ರಕ್ತಾಕ್ಷನಾಗಿ ಬಾಗಿಲಲ್ಲಿ ನಿಂತಿದ್ದಾನೆ. ತನ್ನ ಕಣ್ಣುಗಳಿಂದ ವಾನರರನ್ನು ಸುಟ್ಟುಬಿಡು

ತಸ್ಯ ಮೂರ್ಧ್ನಾ ಪ್ರಣಮ್ಯ ತ್ವಂ ಸಪುತ್ರಃ ಸಹ ಬಂಧುಭಿಃ ।
ಗಚ್ಛ ಶೀಘ್ರಂ ಮಹಾರಾಜ ರೋಷೋ ಹ್ಯಸ್ಯ ನಿವರ್ತ್ಯತಾಮ್ ॥ ೫೦

ಯದಾಹ ರಾಮೋ ಧರ್ಮಾತ್ಮಾ ತತ್ತ್ವಂ ಕುರುಷ್ವ ಸಮಾಹಿತಃ ।
ರಾಜಂಸ್ತಿಷ್ಠ ಸ್ವಸಮಯೇ ಭವ ಸತ್ಯಪ್ರತಿಶ್ರವಃ ॥ ೫೧

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಏಕತ್ರಿಂಶಃ ಸರ್ಗಃ



ವನೋ ಎಂಬಂತೆ ನೋಡುತ್ತಿದ್ದಾನೆ! (೪೮-೪೯). ಮಹಾರಾಜ, ನೀನು ಪುತ್ರಪರಿವಾರಸಮೇತನಾಗಿ ಹೋಗಿ ಲಕ್ಷ್ಮಣನಿಗೆ ತಲೆಬಾಗಿ ವಂದಿಸುವು ದೊಳ್ಳೆಯದು. ಅವನ ಕೋಪವನ್ನು ನೀಗಿಸಬೇಕು. ಧರ್ಮಾತ್ಮನಾದ ಶ್ರೀರಾಮನು ಹೇಳಿಕಳಿಸಿದ ಮಾತನ್ನು ಜಾಗರೂಕತೆಯಿಂದ ನಡೆಸು. ವಾನರೇಶ್ವರ, ನೀನು ಅವನಿಗೆ ಕೊಟ್ಟ ಮಾತನ್ನು ನಡೆಸು. ಸತ್ಯಪ್ರತಿಜ್ಞ ನಾಗು" ಎಂದು ನಿವೇದಿಸಿದರು (೫೦-೫೧).

**ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಮೂವತ್ತೊಂದನೆಯ ಸರ್ಗ**



## ದ್ವಾತ್ರಿಂಶಃ ಸರ್ಗಃ

### ಹನೂಮನ್ಮಂತ್ರಃ

ಅಂಗದಸ್ಯ ವಚಃ ಶ್ರುತ್ವಾ ಸುಗ್ರೀವಃ ಸಚಿವೈಃ ಸಹ ।
ಲಕ್ಷ್ಮಣಂ ಕುಪಿತಂ ಶ್ರುತ್ವಾ ಮುಮೋಚಾಸನಮಾತ್ಮವಾನ್ ॥ ೧

ಸಚಿವಾನಬ್ರವೀದ್ವಾಕ್ಯಂ ನಿಶ್ಚಿತ್ಯ ಗುರುಲಾಘವಮ್ ।
ಮಂತ್ರಜ್ಞಾನ್ ಮಂತ್ರಕುಶಲೋ ಮಂತ್ರೇಷು ಪರಿನಿಷ್ಠಿತಾನ್ ॥ ೨

ನ ಮೇ ದುರ್ವ್ಯಾಹೃತಂ ಕಿಂಚಿನ್ನಾಪಿ ಮೇ ದುರನುಷ್ಠಿತಮ್ ।
ಲಕ್ಷ್ಮಣೋ ರಾಘವಭ್ರಾತಾ ಕ್ರುದ್ಧಃ ಕಿಮಿತಿ ಚಿಂತಯೇ ॥ ೩

ಅಸುಹೃದ್ಭಿರ್ಮಮಾಮಿತ್ರೈರ್ನಿತ್ಯಮಂತರದರ್ಶಿಭಿಃ ।
ಮಮ ದೋಷಾನಸಂಭೂತಾನ್ ಶ್ರಾವಿತೋ ರಾಘವಾನುಜಃ ॥ ೪

ಅತ್ರ ತಾವದ್ಯಥಾಬುದ್ಧಿ ಸರ್ವೈರೇವ ಯಥಾವಿಧಿ ।
ಭಾವಸ್ಯ ನಿಶ್ಚಯಸ್ತಾವದ್ವಿಜ್ಞೇಯೋ ನಿಪುಣಂ ಶನೈಃ ॥ ೫

## ಸರ್ಗ ೩೨

### ಸುಗ್ರೀವನಿಗೆ ಹನುಮಂತನ ಹಿತೋಪದೇಶ.

ಅಂಗದನ ನುಡಿಯನ್ನೂ ಲಕ್ಷ್ಮಣನು ಕುಪಿತನಾದ ವೃತ್ತಾಂತವನ್ನೂ ಕೇಳಿ ಸುಗ್ರೀವನಿಗೆ ವಿವೇಕೋದಯವಾಯಿತು ಅವನು ಮಂತ್ರಿಗಳೊಡನೆ ಪೀಠವನ್ನು ಬಿಟ್ಟು ಎದ್ದು ನಿಂತನು ವಿವೇಚನಾಚತುರನಾದ ಆ ಸುಗ್ರೀವನು ನ್ಯೂನಾತಿರೇಕಗಳೇನೆಂದು ವಿಮರ್ಶಿಸಿ, ರಾಜನೀತಿಜ್ಞರೂ ಅನುಭವಿಗಳೂ ಆದ ಸಚಿವರನ್ನು ನೋಡಿ ಹೀಗೆಂದನು (೧-೨): "ಮಂತ್ರಿಗಳೆ, ನಾನು ರಾಮಲಕ್ಷ್ಮಣರಿಗೆ ಯಾವ ತಪ್ಪುಮಾತನ್ನೂ ಆಡಿಲ್ಲ; ಯಾವ ಕೇಡನ್ನೂ ಮಾಡಿಲ್ಲ. ರಾಮನ ತಮ್ಮನಾದ ಆ ಲಕ್ಷ್ಮಣನು ಕೋಪಗೊಂಡಿರುವುದಕ್ಕೆ ಕಾರಣವೇನೆಂದು ಚಿಂತಿಸುತ್ತಿದ್ದೇನೆ. ನನ್ನ ಶತ್ರುಗಳಾದ ಯಾರೋ ದುರಾತ್ಮರು ಸದಾ ಸಮಯವನ್ನು ಕಾಯುತ್ತಿದ್ದಿರಬೇಕು ಅವರು ನನ್ನಲ್ಲಿ ಇಲ್ಲದ ದೋಷಗಳನ್ನು ನನ್ನಲ್ಲಿ ಆರೋಪಿಸಿ ಲಕ್ಷ್ಮಣನಿಗೆ ಚಾಡಿ ಹೇಳಿರಬೇಕು (೩-೪). ಈಗ ನೀವೆಲ್ಲರೂ ಸೇರಿ ನಿಮ್ಮ ಬುದ್ಧಿಯನ್ನುಪಯೋಗಿಸಿ,

ನ ಖಲ್ವಸ್ತಿ ಮಮ ತ್ರಾಸೋ ಲಕ್ಷ್ಮಣಾನ್ನಾಪಿ ರಾಘವಾತ್ ।
ಮಿತ್ರಂ ತ್ವಸ್ಥಾನಕುಪಿತಂ ಜನಯತ್ಯೇವ ಸಂಭ್ರಮಮ್ ॥ ೬

ಸರ್ವಥಾ ಸುಕರಂ ಮಿತ್ರಂ ದುಷ್ಕರಂ ಪರಿಪಾಲನಮ್ ।
ಅನಿತ್ಯತ್ವಾತ್ತು ಚಿತ್ತಾನಾಂ ಪ್ರೀತಿರಲ್ಪೇಽಪಿ ಭಿದ್ಯತೇ ॥ ೭

ಅತೋನಿಮಿತ್ತಂ ತ್ರಸ್ತೋಽಹಂ ರಾಮೇಣ ತು ಮಹಾತ್ಮನಾ ।
ಯನ್ಮಮೋಪಕೃತಂ ಶಕ್ಯಂ ಪ್ರತಿಕರ್ತುಂ ನ ತನ್ಮಯಾ ॥ ೮

ಸುಗ್ರೀವೇಣೈವಮುಕ್ತಸ್ತು ಹನುಮಾನ್ ಮಾರುತಾತ್ಮಜಃ ।
ಉವಾಚ ಸ್ವೇನ ತರ್ಕೇಣ ಮಧ್ಯೇ ವಾನರಮಂತ್ರಿಣಾಮ್ ॥ ೯

ಸರ್ವಥಾ ನೈತದಾಶ್ಚರ್ಯಂ ಯಸ್ತ್ವಂ ಹರಿಗಣೇಶ್ವರ ।
ನ ವಿಸ್ಮರಸಿ ಸುಸ್ನಿಗ್ಧಮುಪಕಾರಕೃತಂ ಶುಭಮ್ ॥ ೧೦

ರಾಘವೇಣ ತು ವೀರೇಣ ಭಯಮುತ್ಸೃಜ್ಯ ದೂರತಃ ।
ತ್ವತ್ಪ್ರಿಯಾರ್ಥಂ ಹತೋ ವಾಲೀ ಶಕ್ರತುಲ್ಯಪರಾಕ್ರಮಃ ॥ ೧೧

---

ಲಕ್ಷ್ಮಣನ ಭಾವವೇನೆಂಬುದನ್ನು ನಿಷ್ಕೃಷ್ಟವಾಗಿ ಮೆಲ್ಲಗೆ ತಿಳಿಯಬೇಕು. ನನಗೆ ಲಕ್ಷ್ಮಣನಿಂದಲೂ ಭಯವಿಲ್ಲ, ರಾಮನಿಂದಲೂ ಇಲ್ಲ! ಆದರೆ, ನಿಷ್ಕಾರಣವಾಗಿ ಮಿತ್ರನು ಕುಪಿತನಾದನೆಂದರೆ, ಮನಸ್ಸಿಗೆ ಕಳವಳವಾಗಿಯೇ ಆಗುತ್ತದೆ (೫-೬). ಸಚಿವರೆ, ಮಿತ್ರನನ್ನು ಸಂಪಾದಿಸುವುದು ಬಹಳ ಸುಲಭ; ಆದರೆ ಹಾಗೆಯೇ ಉಳಿಸಿಕೊಳ್ಳುವುದು ಮಾತ್ರ ಕಷ್ಟ. ಜನರ ಮನಸ್ಸು ಚಂಚಲವಾದ್ದರಿಂದ ಅಲ್ಪಕಾರಣಕ್ಕಾಗಿ ಸ್ನೇಹವು ಕೆಟ್ಟುಹೋಗುತ್ತದೆ (೭). ಆದ್ದರಿಂದ ನಾನು ಹೆದರುತ್ತಿದ್ದೇನೆ. ಮಹಾತ್ಮನಾದ ಶ್ರೀರಾಮನಿಂದ ನನಗಾದ ಉಪಕಾರವನ್ನು ತೀರಿಸಲು ನನಗೆ ಶಕ್ಯವೇ ಇಲ್ಲ" ಎಂದನು. ಆಗ ವಾನರಮಂತ್ರಿಗಳ ಮಧ್ಯದಲ್ಲಿದ್ದ ವಾಯುಪುತ್ರನಾದ ಹನುಮಂತನು ಲಕ್ಷ್ಮಣನ ಕೋಪನಿಮಿತ್ತವನ್ನು ಸ್ವಬುದ್ಧಿಯಿಂದ ತರ್ಕಿಸಿ ಹೀಗೆ ಹೇಳಿದನು (೮-೯): 'ವಾನರೇಂದ್ರ, ನಿನ್ನಲ್ಲಿ ಅತ್ಯಂತಸ್ನೇಹವಿಟ್ಟು ಉಪಕಾರಮಾಡಿದ ಸತ್ಪುರುಷನನ್ನು ನೀನು ಮರೆಯದಿರುವುದು ಅಚ್ಚರಿಯಲ್ಲ (ಇದು ನಿನಗೆ ಸಹಜವಾದ ಗುಣ). ವೀರನಾದ ಶ್ರೀರಾಮನು ನಿನಗೆ ಸುಖವಾಗಲೆಂದು ತನ್ನ ಪ್ರಾಣಭಯವನ್ನು ಲಕ್ಷಿಸದೆ, ಇಂದ್ರನಂತೆ ಪರಾಕ್ರಮಿಯಾದ ವಾಲಿಯನ್ನು

ಸರ್ವಥಾ ಪ್ರಣಯಾತ್ ಕ್ರುದ್ಧೋ ರಾಘವೋ ನಾತ್ರ ಸಂಶಯಃ ।
ಭ್ರಾತರಂ ಸಂಪ್ರಹಿತವಾನ್ ಲಕ್ಷ್ಮಣಂ ಲಕ್ಷ್ಮಿವರ್ಧನಮ್ ॥ ೧೨

ತ್ವಂ ಪ್ರಮತ್ತೋ ನ ಜಾನೀಷೇ ಕಾಲಂ ಕಾಲವಿದಾಂ ವರ ।
ಫುಲ್ಲಸಪ್ತಚ್ಛದಶ್ಯಾಮಾ ಪ್ರವೃತ್ತಾ ತು ಶರಚ್ಛಿವಾ ॥ ೧೩

ನಿರ್ಮಲಗ್ರಹನಕ್ಷತ್ರಾ ದ್ಯೌಃ ಪ್ರನಷ್ಟಬಲಾಹಕಾ ।
ಪ್ರಸನ್ನಾಶ್ಚ ದಿಶಃ ಸರ್ವಾಃ ಸರಿತಶ್ಚ ಸರಾಂಸಿ ಚ ॥ ೧೪

ಪ್ರಾಪ್ತಮುದ್ಯೋಗಕಾಲಂ ತು ನಾವೈಷಿ ಹರಿಪುಂಗವ ।
ತ್ವಂ ಪ್ರಮತ್ತ ಇತಿ ವ್ಯಕ್ತಂ ಲಕ್ಷ್ಮಣೋಽಯಮಿಹಾಗತಃ ॥ ೧೫

ಆರ್ತಸ್ಯ ಹೃತದಾರಸ್ಯ ಪರುಷಂ ಪುರುಷಾಂತರಾತ್ ।
ವಚನಂ ಮರ್ಷಣೀಯಂ ತೇ ರಾಘವಸ್ಯ ಮಹಾತ್ಮನಃ ॥ ೧೬

ಕೃತಾಪರಾಧಸ್ಯ ಹಿ ತೇ ನಾನ್ಯತ್ ಪಶ್ಯಾಮ್ಯಹಂ ಕ್ಷಮಮ್ ।
ಅಂತರೇಣಾಂಜಲಿಂ ಬದ್ಧ್ವಾ ಲಕ್ಷ್ಮಣಸ್ಯ ಪ್ರಸಾದನಾತ್ ॥ ೧೭

---

ಕೊಂಡಿದ್ದಾನೆ (೧೦-೧೧) ನಿನ್ನಲ್ಲಿರುವ ಪ್ರೀತಿಯಿಂದಲೇ ಯಾವುದೋ ಒಂದು ನಿಮಿತ್ತವಾಗಿ ರಾಘವನು ಕೋಪಿಸಿಕೊಂಡಿದ್ದಾನೆಯೇ ಹೊರತು ಬೇರೆ ಇಲ್ಲ ಆದ್ದರಿಂದ ತಮ್ಮನಾದ ಲಕ್ಷ್ಮಣನನ್ನು ಕಳಿಸಿದ್ದಾನೆ. ಕಾಲ ಕ್ಲೃಪ್ತಿಯನ್ನರಿತು ನಡೆಯತಕ್ಕ ನೀನು, ಮಹಾರಾಜ, ಪ್ರಮಾದವಶನಾಗಿ ಈಗ ಯಾವ ಕಾಲವು ಪ್ರಾಪ್ತವಾಗಿದೆಯೆಂಬುದನ್ನು ಅರಿಯದಿದ್ದೀಯೆ. ಶುಭಕರವಾದ ಶರತ್ಕಾಲವು ಬಂದಿದೆಯಲ್ಲ! ಏಳೆಲೆಬಾಳೆಯ ಗಿಡಗಳು ಉಲ್ಲಾಸದಿಂದ ಹಸುರೇರಿವೆ (೧೨-೧೩). ಮೋಡವಿಲ್ಲದೆ ಆಕಾಶವು ಸ್ವಚ್ಛವಾಗಿದೆ. ಗ್ರಹನಕ್ಷತ್ರಗಳು ನಿರ್ಮಲವಾಗಿ ಪ್ರಕಾಶಿಸುತ್ತವೆ. ಸಮಸ್ತ ದಿಗಂತಗಳೂ ನದಿಗಳೂ ಕೊಳಗಳೂ ಪ್ರಸನ್ನವಾಗಿವೆ. ವಾನರೇಶ್ವರ, ಉದ್ಯೋಗಕಾಲವು ಪ್ರಾಪ್ತವಾಗಿದೆಯೆಂಬುದನ್ನು ನೀನು ಗಮನಿಸಿಯೇ ಇಲ್ಲ. ನೀನು ಎಚ್ಚರಿಕೆಯಿಂದಿಲ್ಲವೆಂದೇ ಲಕ್ಷ್ಮಣನು ಇಲ್ಲಿಗೆ ಬಂದಿದ್ದಾನೆಂಬುದು ಸ್ಪಷ್ಟವಾಗಿದೆ! (೧೪-೧೫). ಶ್ರೀರಾಮನಾದರೋ ಶೋಕಾರ್ತನಾಗಿದ್ದಾನೆ ಪತ್ನಿಯನ್ನು ಕಳೆದುಕೊಂಡಿದ್ದಾನೆ. ಒಂದು ವೇಳೆ ಆ ಮಹಾತ್ಮನು ಪರುಷವಾದ ಮಾತನ್ನೇನಾದರೂ ಲಕ್ಷ್ಮಣನ ಮೂಲಕ ಹೇಳಿಕಳಿಸಿದ್ದರೆ, ನೀನು ಸಹಿಸಿಕೊಳ್ಳುವುದೇ ಯೋಗ್ಯವಾದುದು. ಅಪರಾಧವು

ನಿಯುಕ್ತೈರ್ಮಂತ್ರಿಭಿರ್ವಾಚ್ಯೋ ಹ್ಯವಶ್ಯಂ ಪಾರ್ಥಿವೋ ಹಿತಮ್ ।
ಅತ ಏವ ಭಯಂ ತ್ಯಕ್ತ್ವಾ ಬ್ರವೀಮ್ಯವಧೃತಂ ವಚಃ ॥ ೧೮

ಅಭಿಕ್ರುದ್ಧಃ ಸಮರ್ಥೋ ಹಿ ಚಾಪಮುದ್ಯಮ್ಯ ರಾಘವಃ ।
ಸದೇವಾಸುರಗಂಧರ್ವಂ ವಶೇ ಸ್ಥಾಪಯಿತುಂ ಜಗತ್ ॥ ೧೯

ನ ಸ ಕ್ಷಮಃ ಕೋಪಯಿತುಂ ಯಃ ಪ್ರಸಾದ್ಯಃ ಪುನರ್ಭವೇತ್ ।
ಪೂರ್ವೋಪಕಾರಂ ಸ್ಮರತಾ ಕೃತಜ್ಞೇನ ವಿಶೇಷತಃ ॥ ೨೦

ತಸ್ಯ ಮೂರ್ಧ್ನಾ ಪ್ರಣಮ್ಯ ತ್ವಂ ಸಪುತ್ರಃ ಸಸುಹೃಜ್ಜನಃ ।
ರಾಜಂಸ್ತಿಷ್ಠ ಸ್ವಸಮಯೇ ಭರ್ತುರ್ಭಾರ್ಯೇವ ತದ್ವಶೇ ॥ ೨೧

ನ ರಾಮರಾಮಾನುಜಶಾಸನಂ ತ್ವಯಾ
ಕಪೀಂದ್ರ ಯುಕ್ತಂ ಮನಸಾಪ್ಯಪೋಹಿತುಮ್ ।

---

ನಿನ್ನದಾಗಿರುವಾಗ ಬೇರೆ ಯಾವ ಮಾರ್ಗವೂ ಯುಕ್ತವಾಗಿ ನನಗೆ ತೋರುವುದಿಲ್ಲ. ಲಕ್ಷ್ಮಣನಿಗೆ ಕೈಮುಗಿದು ಅವನನ್ನು ಪ್ರಸನ್ನನನ್ನಾಗಿ ಮಾಡಿಕೊಳ್ಳುವುದರ ಹೊರತು ಬೇರೆ ದಾರಿ ಇಲ್ಲ (೧೬-೧೭). ಮಹಾರಾಜ, ನಿಯೋಜಿತರಾದ ಮಂತ್ರಿಗಳು ರಾಜನಿಗೆ ಹಿತವಾದುದನ್ನು ಅವಶ್ಯವಾಗಿ ಹೇಳಲೇಬೇಕು ಆದ್ದರಿಂದ ನಾನು ಹೆದರದೆ ನನ್ನ ನಿಶ್ಚಯವನ್ನು ತಿಳಿಸುತ್ತಿದ್ದೇನೆ. ಶ್ರೀರಾಮನು ಕ್ರುದ್ಧನಾಗಿ ಧನುಸ್ಸನ್ನೆತ್ತಿದನೆಂದರೆ, ದೇವಾಸುರಗಂಧರ್ವಸಹಿತವಾದ ಈ ಜಗತ್ತನ್ನೇ ತನ್ನ ವಶಕ್ಕೆ ತೆಗೆದುಕೊಳ್ಳಲು ಸಮರ್ಥನಾಗಿದ್ದಾನೆ (೧೮-೧೯). ಯಾರನ್ನು ನಾವು ಅನುಗ್ರಹಿಸೆಂದು ಬೇಡಿಕೊಳ್ಳಬೇಕಾಗಿದೆಯೋ ಅವನನ್ನು ರೇಗಿಸುವುದು ಯುಕ್ತವಲ್ಲ. ಅದರಲ್ಲಿಯೂ ಮೊದಲು ಉಪಕೃತನಾಗಿ ಕೃತಜ್ಞನಾಗಿರಬೇಕಾದವನು ಹಾಗೆ ಮಾಡಕೂಡದು (೨೦). ಮಹಾರಾಜ, ನೀನು ಪುತ್ರಾದಿಪರಿವಾರದೊಡನೆ ಹೋಗಿ ಆತನಿಗೆ ತಲೆಬಾಗಿ ನಮಸ್ಕರಿಸು. ನೀನು ಕೊಟ್ಟ ಮಾತನ್ನು ನಡೆಸು. ಪತಿಗೆ ಪತ್ನಿಯು ವಿಧೇಯಳಾಗಿರುವಂತೆ, ಶ್ರೀರಾಮನಿಗೆ ವಿಧೇಯನಾಗಿ ನಡೆದುಕೊ (೨೧). ವಾನರೇಂದ್ರ, ಶ್ರೀರಾಮನ ಆದೇಶವನ್ನಾಗಲಿ, ಲಕ್ಷ್ಮಣನ ಆದೇಶವನ್ನಾಗಲಿ ಮನಸ್ಸಿನಲ್ಲಿಯೂ ನೀನು ಉಲ್ಲಂಘಿಸುವುದು ಯುಕ್ತವಲ್ಲ. ಇಂದ್ರನಂತೆ ವರ್ಚಸ್ವಿಯೂ ಲಕ್ಷ್ಮಣಸಮೇತನಾಗಿಯೂ

ಮನೋ ಹಿ ತೇ ಜ್ಞಾಸ್ಯತಿ ಮಾನುಷಂ ಬಲಂ
ಸರಾಘವಸ್ಯಾಸ್ಯ ಸುರೇಂದ್ರವರ್ಚಸಃ ॥ ೨೨

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ದ್ವಾತ್ರಿಂಶಃ ಸರ್ಗಃ

---

## ತ್ರಯಸ್ತ್ರಿಂಶಃ ಸರ್ಗಃ

### ತಾರಾಸಾಂತ್ವವಚನಮ್

ಅಥ ಪ್ರತಿಸಮಾದಿಷ್ಟೋ ಲಕ್ಷ್ಮಣಃ ಪರವೀರಹಾ ।
ಪ್ರವಿವೇಶ ಗುಹಾಂ ರಮ್ಯಾಂ ಕಿಷ್ಕಿಂಧಾಂ ರಾಮಶಾಸನಾತ್ ॥ ೧

ದ್ವಾರಸ್ಥಾ ಹರಯಸ್ತತ್ರ ಮಹಾಕಾಯಾ ಮಹಾಬಲಾಃ ।
ಬಭೂವುರ್ಲಕ್ಷ್ಮಣಂ ದೃಷ್ಟ್ವಾ ಸರ್ವೇ ಪ್ರಾಂಜಲಯಃ ಸ್ಥಿತಾಃ ॥ ೨

---

ಇರುವ ಆತನ ಮಾನುಷಬಲವೆಷ್ಟೆಂಬುದನ್ನು ನಿನ್ನ ಹೃದಯವೇ ಬಲ್ಲುದು” ಎಂದು ಹೇಳಿದನು (೨೨).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಮೂವತ್ತೆರಡನೆಯ ಸರ್ಗ

---

## ಸರ್ಗ ೩೩

### ತಾರೆಯು ಲಕ್ಷ್ಮಣನಿಗೆ ಸಮಾಧಾನ ಹೇಳುವುದು.

ಇತ್ತ ಶ್ರೀರಾಮನ ಆದೇಶದಂತೆ ಬಂದಿದ್ದ ಲಕ್ಷ್ಮಣನು ಅಂಗದನಿಂದ ಒಳಗೆ ಬರುವಂತೆ ಸಂದೇಶವನ್ನು ಪಡೆದು, ರಮ್ಯವಾದ ಕಿಷ್ಕಿಂಧಾಗುಹೆಯನ್ನು ಪ್ರವೇಶಿಸಿದನು. ಬಾಗಿಲಲ್ಲಿ ಮಹಾಕಾಯರೂ ಬಲಶಾಲಿಗಳೂ ಆದ ವಾನರರು ಕಾವಲಿದ್ದರು. ಅವರೆಲ್ಲರೂ ಲಕ್ಷ್ಮಣನನ್ನು ನೋಡಿ

ನಿಃಶ್ವಸಂತಂ ತು ತಂ ದೃಷ್ಟ್ವಾ ಕ್ರುದ್ಧಂ ದಶರಥಾತ್ಮಜಮ್ ।
ಬಭೂವುರ್ಹರಯಸ್ತ್ರಸ್ತಾ ನ ಚೈನಂ ಪರ್ಯವಾರಯನ್ ॥ ೩
ಸ ತಾಂ ರತ್ನಮಯೀಂ ಶ್ರೀಮಾನ್ ದಿವ್ಯಾಂ ಪುಷ್ಪಿತಕಾನನಾಮ್ ।
ರಮ್ಯಾಂ ರತ್ನಸಮಾಕೀರ್ಣಾಂ ದದರ್ಶ ಮಹತೀಂ ಗುಹಾಮ್ ॥ ೪
ಹರ್ಮ್ಯಪ್ರಾಸಾದಸಂಬಾಧಾಂ ನಾನಾಪಣ್ಯೋಪಶೋಭಿತಾಮ್ ।
ಸರ್ವಕಾಲಫಲೈರ್ವೃಕ್ಷೈಃ ಪುಷ್ಪಿತೈರುಪಶೋಭಿತಾಮ್ ॥ ೫
ದೇವಗಂಧರ್ವಪುತ್ರೈಶ್ಚ ವಾನರೈಃ ಕಾಮರೂಪಿಭಿಃ ।
ದಿವ್ಯಮಾಲ್ಯಾಂಬರಧರೈಃ ಶೋಭಿತಾಂ ಪ್ರಿಯದರ್ಶನೈಃ ॥ ೬
ಚಂದನಾಗರುಪದ್ಮಾನಾಂ ಗಂಧೈಃ ಸುರಭಿಗಂಧಿತಾಮ್ ।
ಮೈರೇಯಾಣಾಂ ಮಧೂನಾಂ ಚ ಸಂಮೋದಿತಮಹಾಪಥಾಮ್ ॥
ವಿಂಧ್ಯಮೇರುಗಿರಿಪ್ರಖ್ಯೈಃ ಪ್ರಾಸಾದೈರುಪಶೋಭಿತಾಮ್ ।
ದದರ್ಶ ಗಿರಿನದ್ಯಶ್ಚ ವಿಮಲಾಸ್ತತ್ರ ರಾಘವಃ ॥ ೮

---

ಕೈಮುಗಿದುಕೊಂಡು ನಿಂತರು (೧-೨). ಕ್ರುದ್ಧನಾಗಿ ನಿಟ್ಟುಸಿರುಬಿಡುತ್ತ ಬರುತ್ತಿದ್ದ ಆ ದಶರಥಪುತ್ರನನ್ನು ವೀಕ್ಷಿಸಿ ಕಪಿಗಳು ಭೀತರಾದರು. ಅವನ ಸಮೀಪಕ್ಕೆ ಬರಲು ಅವರಿಗೆ ಧೈರ್ಯವಾಗಲಿಲ್ಲ. ಲಕ್ಷ್ಮಣನು ದಿವ್ಯ ರಮಣೀಯವಾದ ಆ ವಿಶಾಲಗುಹೆಯನ್ನು ನೋಡುತ್ತ ಹೋದನು. ಅದರಲ್ಲಿದ್ದ ತೋಟಗಳಲ್ಲಿ ಹೂಗಳು ಅರಳಿದ್ದವು. ಸಂಪದ್ಭರಿತವಾದ ಆ ನಗರವು ರತ್ನಗಳಿಂದ ತುಂಬಿದ್ದಿತು (೩-೪). ಉಪ್ಪರಿಗೆಯ ದೊಡ್ಡ ಮನೆಗಳೂ ದೇವಾಲಯಗಳೂ ಅಧಿಕಸಂಖ್ಯೆಯಲ್ಲಿದ್ದವು ಅಂಗಡಿಗಳಲ್ಲಿ ನಾನಾ ಬಗೆಯ ಸರಕುಗಳು ಶೋಭಿಸುತ್ತಿದ್ದವು. ಸರ್ವದಾ ಹಣ್ಣುಹೂಗಳಿಂದ ರಾಜಿಸುವ ವೃಕ್ಷಗಳು ಕಂಗೊಳಿಸುತ್ತಿದ್ದವು (೫). ದೇವಗಂಧರ್ವರ ಅಂಶಗಳಿಂದ ಜನಿಸಿದ ಕಾಮರೂಪಿಗಳಾದ ವಾನರರು ಸಂಚರಿಸುತ್ತಿದ್ದರು. ದಿವ್ಯಮಾಲ್ಯಗಳನ್ನೂ ದಿವ್ಯವಸ್ತ್ರಗಳನ್ನೂ ಧರಿಸಿದ ಆ ವಾನರರ ಆಕೃತಿಯು ಸುಂದರವಾಗಿತ್ತು. ಚಂದನ, ಅಗರು, ಪದ್ಮಕ ಎಂಬ ಸುಗಂಧದ್ರವ್ಯಗಳ ಪರಿಮಳವು ಘಮಘಮಿಸುತ್ತಿತ್ತು. ಮೈರೇಯ, ಮಧು ಮುಂತಾದ ಪಾನೀಯದ್ರವ್ಯಗಳಿಂದ ರಾಜಬೀದಿಗಳು ಜನರಿಗೆ ಆನಂದದಾಯಕವಾಗಿದ್ದವು (೬-೭). ವಿಂಧ್ಯಾಚಲವೋ ಮೇರುಪರ್ವತವೋ ಎಂಬಂತಿದ್ದ ಪ್ರಾಸಾದಗಳು

ಅಂಗದಸ್ಯ ಗೃಹಂ ರಮ್ಯಂ ಮೈಂದಸ್ಯ ದ್ವಿವಿದಸ್ಯ ಚ ।
ಗವಯಸ್ಯ ಗವಾಕ್ಷಸ್ಯ ಗಜಸ್ಯ ಶರಭಸ್ಯ ಚ ॥ ೯

ವಿದ್ಯುನ್ಮಾಲೇಶ್ಚ ಸಂಪಾತೇಃ ಸೂರ್ಯಾಕ್ಷಸ್ಯ ಹನೂಮತಃ ।
ವೀರಬಾಹೋಃ ಸುಬಾಹೋಶ್ಚ ನಲಸ್ಯ ಚ ಮಹಾತ್ಮನಃ ॥ ೧೦

ಕುಮುದಸ್ಯ ಸುಷೇಣಸ್ಯ ತಾರಜಾಂಬವತೋಸ್ತಥಾ ।
ದಧಿವಕ್ತ್ರಸ್ಯ ನೀಲಸ್ಯ ಸುಪಾಟಲಸುನೇತ್ರಯೋಃ ॥ ೧೧

ಏತೇಷಾಂ ಕಪಿಮುಖ್ಯಾನಾಂ ರಾಜಮಾರ್ಗೇ ಮಹಾತ್ಮನಾಮ್ ।
ದದರ್ಶ ಗೃಹಮುಖ್ಯಾನಿ ಮಹಾಸಾರಾಣಿ ಲಕ್ಷ್ಮಣಃ ॥ ೧೨

ಪಾಂಡರಾಭ್ರಪ್ರಕಾಶಾನಿ ದಿವ್ಯಮಾಲ್ಯಯುತಾನಿ ಚ ।
ಪ್ರಭೂತಧನಧಾನ್ಯಾನಿ ಸ್ತ್ರೀರತ್ನೈಃ ಶೋಭಿತಾನಿ ಚ ॥ ೧೩

ಪಾಂಡರೇಣ ತು ಸಾಲೇನ ಪರಿಕ್ಷಿಪ್ತಂ ದುರಾಸದಮ್ ।
ವಾನರೇಂದ್ರಗೃಹಂ ರಮ್ಯಂ ಮಹೇಂದ್ರಸದನೋಪಮಮ್ ॥ ೧೪

---

ವಿರಾಜಿಸುತ್ತಿದ್ದವು. ಅಲ್ಲಲ್ಲಿ ತಿಳಿನೀರಿನ ಗಿರಿನದಿಗಳು ಹರಿಯುತ್ತಿದ್ದವು. ಇವೆಲ್ಲವನ್ನೂ ನೋಡುತ್ತ ಲಕ್ಷ್ಮಣನು ಹೋದನು ಆ ರಾಜಬೀದಿಯಲ್ಲಿ ಕಪಿವೀರರ ಭವನಗಳಿದ್ದವು. ಲಕ್ಷ್ಮಣನು ಅಂಗದ, ಮೈಂದ, ದ್ವಿವಿದ, ಗವಯ, ಗವಾಕ್ಷ, ಗಜ, ಶರಭ ಎಂಬವರ ರಮ್ಯಗೃಹಗಳನ್ನು ವೀಕ್ಷಿಸಿದನು (೮-೯). ಹಾಗೆಯೇ ವಿದ್ಯುನ್ಮಾಲಿ, ಸಂಪಾತಿ, ಸೂರ್ಯಾಕ್ಷ, ಹನುಮಂತ, ವೀರಬಾಹು, ಸುಬಾಹು, ನಳ, ಕುಮುದ, ಸುಷೇಣ, ತಾರ, ಜಾಂಬವಂತ, ದಧಿವಕ್ತ್ರ, ನೀಲ, ಸುಪಾಟಲ, ಸುನೇತ್ರ ಎಂಬ ಮಹಾತ್ಮರಾದ ಕಪಿಮುಖ್ಯರ ಗೃಹಗಳನ್ನೂ ವೀಕ್ಷಿಸಿದನು. ಅತಿದೃಢವಾಗಿದ್ದ ಆ ಗೃಹಗಳು ರಾಜಮಾರ್ಗದಲ್ಲಿ ಶೋಭಿಸುತ್ತಿದ್ದವು (೧೦-೧೨). ಆ ಭವನಗಳು ಬಿಳಿಯ ಮೋಡಗಳಂತೆ ಸ್ವಚ್ಛವಾಗಿ ಉನ್ನತವಾಗಿದ್ದವು. ದಿವ್ಯಮಾಲ್ಯಗಳಿಂದ ಅಲಂಕರಿಸಲ್ಪಟ್ಟಿದ್ದವು. ಧನಧಾನ್ಯಗಳಿಂದ ತುಂಬಿದ್ದವು ಉತ್ತಮ ಸ್ತ್ರೀಯರು ಸಂಚರಿಸುತ್ತಿದ್ದರು (೧೩). ಇವೆಲ್ಲವನ್ನೂ ನೋಡುತ್ತ ಲಕ್ಷ್ಮಣನು ವಾನರೇಂದ್ರನಾದ ಸುಗ್ರೀವನ ಅರಮನೆಯ ಸಮೀಪಕ್ಕೆ ಬಂದನು. ಅರಮನೆಯ ಸುತ್ತಲೂ ಉನ್ನತವಾದ ಬಿಳಿಯ ಪ್ರಾಕಾರವಿತ್ತು.

ಶುಕ್ಲೈಃ ಪ್ರಾಸಾದಶಿಖರೈಃ ಕೈಲಾಸಶಿಖರೋಪಮೈಃ ।
ಸರ್ವಕಾಲಫಲೈರ್ವೃಕ್ಷೈಃ ಪುಷ್ಪಿತೈರುಪಶೋಭಿತಮ್ ॥ ೧೫

ಮಹೇಂದ್ರದತ್ತೈಃ ಶ್ರೀಮದ್ಭಿರ್ನೀಲಜೀಮೂತಸಂನಿಭೈಃ ।
ದಿವ್ಯಪುಷ್ಪಫಲೈರ್ವೃಕ್ಷೈಃ ಶೀತಚ್ಛಾಯೈರ್ಮನೋಹರೈಃ ॥ ೧೬

ಹರಿಭಿಃ ಸಂವೃತದ್ವಾರಂ ಬಲಿಭಿಃ ಶಸ್ತ್ರಪಾಣಿಭಿಃ ।
ದಿವ್ಯಮಾಲ್ಯಾವೃತಂ ಶುಭ್ರಂ ತಪ್ತಕಾಂಚನತೋರಣಮ್ ॥ ೧೭

ಸುಗ್ರೀವಸ್ಯ ಗೃಹಂ ರಮ್ಯಂ ಪ್ರವಿವೇಶ ಮಹಾಬಲಃ ।
ಅವಾರ್ಯಮಾಣಃ ಸೌಮಿತ್ರಿರ್ಮಹಾಭ್ರಮಿವ ಭಾಸ್ಕರಃ ॥ ೧೮

ಸ ಸಪ್ತ ಕಕ್ಷ್ಯಾ ಧರ್ಮಾತ್ಮಾ ನಾನಾಜನಸಮಾಕುಲಾಃ ।
ಪ್ರವಿಶ್ಯ ಸುಮಹದ್ಗುಪ್ತಂ ದದರ್ಶಾಂತಃಪುರಂ ಮಹತ್ ॥ ೧೯

---

ಸುಲಭವಾಗಿ ಅರಮನೆಯನ್ನು ಪ್ರವೇಶಿಸಲು ಶಕ್ಯವಿರಲಿಲ್ಲ. ಆ ಭವನವು ಇಂದ್ರನ ಅರಮನೆಯಂತೆ ರಮಣೀಯವಾಗಿತ್ತು (೧೪). ಅರಮನೆಯ ಮೇಲೆ ಕೈಲಾಸಶಿಖರಗಳಂತಿರುವ ಬಿಳಿಯ ಗೋಪುರಗಳು ಒಪ್ಪುತ್ತಿದ್ದವು. ಆ ಭವನದ ಪ್ರಾಂಗಣದಲ್ಲಿ ಯಾವಾಗಲೂ ಹೂಹಣ್ಣುಗಳಿಂದ ವಿರಾಜಿಸುವ ವೃಕ್ಷಗಳು ಕಂಗೊಳಿಸುತ್ತಿದ್ದವು. ಅಲ್ಲದೆ ದೇವೇಂದ್ರನು ಕೊಟ್ಟಿದ್ದ ದಿವ್ಯ ವೃಕ್ಷಗಳು ಅಲ್ಲಿದ್ದವು. ನೀಲಮೇಘಗಳಂತೆ ಮನೋಹರವಾಗಿ ಬೆಳೆದು ಶೀತಲಚ್ಛಾಯೆಯನ್ನು ಕೊಡುತ್ತಿದ್ದ ಆ ವೃಕ್ಷಗಳಲ್ಲಿ ಯಾವಾಗಲೂ ಹಣ್ಣು ಹೂಗಳು ಜಗ್ಗುತ್ತಿದ್ದವು (೧೫-೧೬). ಬಲಾಢ್ಯರಾದ ಕಪಿಗಳು ಶಸ್ತ್ರಪಾಣಿಗಳಾಗಿ ಮಹಾದ್ವಾರವನ್ನು ಕಾಯುತ್ತಿದ್ದರು. ಆ ರಾಜಭವನವು ದಿವ್ಯ ಮಾಲೆಗಳಿಂದಲೂ ಸುವರ್ಣತೋರಣಗಳಿಂದಲೂ ಅಲಂಕರಿಸಲ್ಪಟ್ಟು ಶುಭ್ರವಾಗಿದ್ದಿತು (೧೭). ಸೂರ್ಯನು ಮೇಘಮಂಡಲದಲ್ಲಿ ನುಗ್ಗಿಹೋಗುವಂತೆ, ಬಲಾಢ್ಯನಾದ ಲಕ್ಷ್ಮಣನು ಯಾವ ತಡೆಯೂ ಇಲ್ಲದೆ ಸುಗ್ರೀವನ ರಮ್ಯವಾದ ಆ ಭವನವನ್ನು ಪ್ರವೇಶಿಸಿದನು. ವಿವಿಧ ಸೇವಕಜನರಿಂದ ಆಕುಲವಾದ ಸಪ್ತಕಕ್ಷ್ಯಗಳನ್ನು ದಾಟಿಹೋಗಿ, ಆ ಧರ್ಮಾತ್ಮನು ಸುಗ್ರೀವನ ಅಂತಃಪುರವನ್ನು ಕಂಡನು. ಅದು ವಿಶಾಲವಾಗಿದ್ದು ಬಲವಾದ ಕಾವಲು

ಹೈಮರಾಜತಪರ್ಯಂಕೈರ್ಬಹುಭಿಶ್ಚ ವರಾಸನೈಃ ।
ಮಹಾರ್ಹಾಸ್ತರಣೋಪೇತೈಸ್ತತ್ರ ತತ್ರೋಪಶೋಭಿತಮ್ ॥ ೨೦

ಪ್ರವಿಶನ್ನೇವ ಸ ತತಂ ಶುಶ್ರಾವ ಮಧುರಸ್ವರಮ್ ।
ತಂತ್ರೀಗೀತಸಮಾಕೀರ್ಣಂ ಸಮಗೀತಪದಾಕ್ಷರಮ್ ॥ ೨೧

ಬಹ್ವೀಶ್ಚ ವಿವಿಧಾಕಾರಾ ರೂಪಯೌವನಗರ್ವಿತಾಃ ।
ಸ್ತ್ರಿಯಃ ಸುಗ್ರೀವಭವನೇ ದದರ್ಶ ಸ ಮಹಾಬಲಃ ॥ ೨೨

ದೃಷ್ಟ್ವಾಭಿಜನಸಂಪನ್ನಾಶ್ಚಿತ್ರಮಾಲ್ಯಕೃತಸ್ರಜಃ ।
ವರಮಾಲ್ಯಕೃತವ್ಯಗ್ರಾ ಭೂಷಣೋತ್ತಮಭೂಷಿತಾಃ ॥ ೨೩

ನಾತೃಪ್ತಾನ್ನಾಪಿ ಚ ವ್ಯಗ್ರಾನ್ನಾನುದಾತ್ತಪರಿಚ್ಛದಾನ್ ।
ಸುಗ್ರೀವಾನುಚರಾಂಶ್ಚಾಪಿ ಲಕ್ಷಯಾಮಾಸ ಲಕ್ಷ್ಮಣಃ ॥ ೨೪

ಕೂಜಿತಂ ನೂಪುರಾಣಾಂ ಚ ಕಾಂಚೀನಾಂ ನಿನದಂ ತಥಾ ।
ಸ ನಿಶಮ್ಯ ತತಃ ಶ್ರೀಮಾನ್ ಸೌಮಿತ್ರಿರ್ಲಜ್ಜಿತೋಽಭವತ್ ॥ ೨೫

---

ದಳದವರಿಂದ ರಕ್ಷಿತವಾಗಿತ್ತು (೧೮-೧೯). ಅಂತಃಪುರದಲ್ಲಿ ಚಿನ್ನ ಬೆಳ್ಳಿಗಳಿಂದ ನಿರ್ಮಿತವಾದ ಮಂಚಗಳಿದ್ದವು ಅಲ್ಲಲ್ಲಿ ಶ್ರೇಷ್ಠವಾದ ಪೀಠಗಳು ಶೋಭಿಸುತ್ತಿದ್ದವು. ಅವುಗಳಮೇಲೆ ಬೆಲೆಬಾಳುವ ಆಸ್ತರಣಗಳನ್ನು ಹಾಸಲಾಗಿತ್ತು. ಲಕ್ಷ್ಮಣನು ಅಂತಃಪುರದೊಳಗೆ ಕಾಲಿಡುತ್ತಲೆ, ಮಧುರವಾದ ವಾದ್ಯಧ್ವನಿಯು ಕೇಳಿಸಿತು! ಅದರೊಡನೆ ವೀಣಾಗಾನವೂ ಅದಕ್ಕೆ ಅನುಗುಣವಾಗಿ ಹಾಡುತ್ತಿದ್ದ ಹಾಡುಗಳ ಪದಾಕ್ಷರಗಳೂ ಕೇಳಿಸಿದವು (೨೦-೨೧). ನಾನಾವಿಧವಾದ ಉಡಿಗೆತೊಡಿಗೆಗಳನ್ನು ಧರಿಸಿ ರೂಪಯೌವನಗರ್ವಿತೆಯರಾದ ಬಹುಮಂದಿ ತರುಣಿಯರನ್ನು ಲಕ್ಷ್ಮಣನು ಕಂಡನು. ಸತ್ಕುಲಪ್ರಸೂತೆಯರಾದ ಕೆಲವು ಸ್ತ್ರೀಯರು ಚಿತ್ರವರ್ಣದ ಹೂಗಳಿಂದ ನಿರ್ಮಿಸಿದ ಹಾರಗಳನ್ನು ಧರಿಸಿ, ಉತ್ತಮಾಭರಣಗಳನ್ನು ತೊಟ್ಟು, ಸುಂದರವಾದ ಮಾಲೆಗಳನ್ನು ಕಟ್ಟುವುದರಲ್ಲಿ ನಿರತರಾಗಿದ್ದರು (೨೨-೨೩). ಅಲ್ಲಿದ್ದ ಸುಗ್ರೀವನ ಅನುಚರರು ಅತೃಪ್ತರಾಗಿರಲಿಲ್ಲ. ಚಿಂತಾತುರರಾಗಿರಲಿಲ್ಲ. ಕೆಳಮಟ್ಟದ ವಸ್ತ್ರಾಭರಣಗಳನ್ನು ಧರಿಸಿದವರೂ ಅಲ್ಲ. ಈ ಅಂಶವೆಲ್ಲವನ್ನೂ ಲಕ್ಷ್ಮಣನು ಗಮನಿಸಿದನು. ಅಂತಃಪುರಸ್ತ್ರೀಯರು ಧರಿಸಿದ ಕಾಲಂದುಗೆಗಳ

ರೋಷವೇಗಪ್ರಕುಪಿತಃ ಶ್ರುತ್ವಾ ಚಾಭರಣಸ್ವನಮ್ ।
ಚಕಾರ ಜ್ಯಾಸ್ವನಂ ವೀರೋ ದಿಶಃ ಶಬ್ದೇನ ಪೂರಯನ್ ॥ ೨೬

ಚಾರಿತ್ರೇಣ ಮಹಾಬಾಹುರಪಕೃಷ್ಟಃ ಸ ಲಕ್ಷ್ಮಣಃ ।
ತಸ್ಥಾವೇಕಾಂತಮಾಶ್ರಿತ್ಯ ರಾಮಶೋಕಸಮನ್ವಿತಃ ॥ ೨೭

ತೇನ ಚಾಪಸ್ವನೇನಾಥ ಸುಗ್ರೀವಃ ಪ್ಲವಗಾಧಿಪಃ ।
ವಿಜ್ಞಾಯಾಗಮನಂ ತ್ರಸ್ತಃ ಸಂಚಚಾಲ ವರಾಸನಾತ್ ॥ ೨೮

ಅಂಗದೇನ ಯಥಾ ಮಹ್ಯಂ ಪುರಸ್ತಾತ್ ಪ್ರತಿವೇದಿತಮ್ ।
ಸುವ್ಯಕ್ತಮೇಷ ಸಂಪ್ರಾಪ್ತಃ ಸೌಮಿತ್ರಿರ್ಭ್ರಾತೃವತ್ಸಲಃ ॥ ೨೯

ಅಂಗದೇನ ಸಮಾಖ್ಯಾತಂ ಜ್ಯಾಸ್ವನೇನ ಚ ವಾನರಃ ।
ಬುಬುಧೇ ಲಕ್ಷ್ಮಣಂ ಪ್ರಾಪ್ತಂ ಮುಖಂ ಚಾಸ್ಯ ವ್ಯಶುಷ್ಯತ ॥ ೩೦

ತತಸ್ತಾರಾಂ ಹರಿಶ್ರೇಷ್ಠಃ ಸುಗ್ರೀವಃ ಪ್ರಿಯದರ್ಶನಾಮ್ ।
ಉವಾಚ ಹಿತಮವ್ಯಗ್ರಸ್ತ್ರಾಸಸಂಭ್ರಾಂತಮಾನಸಃ ॥ ೩೧

---

ಘಲ್ ಘಲ್ ಶಬ್ದವನ್ನೂ ನಡುಗೆಜ್ಜೆಗಳ ಝಣತ್ಕಾರವನ್ನೂ ಕೇಳಿ ಲಕ್ಷ್ಮಣನಿಗೆ ನಾಚಿಕೆಯಾಯಿತು (೨೪–೨೫). ಮರುಕ್ಷಣದಲ್ಲಿ ಅವನು ರೋಷಾವಿಷ್ಟನಾದನು ಆ ವೀರನು ಧನುಸ್ಸಿನ ನಾಣನ್ನು ಮೀಟಿ ದಿಕ್ಕುಗಳು ಮೊಳಗುವಂತೆ ಝೇಂಕಾರಮಾಡಿದನು! ಹೆಂಗಸರಿರುವ ಸ್ಥಳಕ್ಕೆ ಹೋಗದಂತೆ ಸಚ್ಚಾರಿತ್ರವು ಅವನನ್ನು ಹಿಂದೆಳೆಯಿತು. ಆ ವೀರನು ಶ್ರೀರಾಮನ ಸ್ಥಿತಿಯನ್ನು ಚಿಂತಿಸಿ ಶೋಕಾರ್ತನಾಗಿ, ಸ್ತ್ರೀಯರಿಲ್ಲದ ಒಂದು ಸ್ಥಳದಲ್ಲಿ ನಿಂತುಕೊಂಡನು (೨೬–೨೭) ಧನುಷ್ಟಂಕಾರವನ್ನು ಕೇಳಿ ವಾನರೇಂದ್ರನಾದ ಸುಗ್ರೀವನಿಗೆ, ಲಕ್ಷ್ಮಣನು ಅರಮನೆಯೊಳಗೆ ಬಂದನೆಂದು ಅರಿವಾಯಿತು. ಅವನು ಭೀತನಾಗಿ ತನ್ನ ಪೀಠದಿಂದ ಧಿಗ್ಗನೆ ಎದ್ದು ನಿಂತನು! "ಓಹೋ! ಅಂಗದನು ಆಗಲೇ ಹೇಳಿದಂತೆ ಭ್ರಾತೃವತ್ಸಲನಾದ ಲಕ್ಷ್ಮಣನು ಬಂದೇಬಿಟ್ಟನು!" ಎಂದುಕೊಂಡನು (೨೮–೨೯). ಅಂಗದನ ನುಡಿಯಿಂದಲೂ ಧನುಷ್ಟಂಕಾರದಿಂದಲೂ ಲಕ್ಷ್ಮಣನು ಬಂದಿರುವನೆಂದು ಅವನಿಗೆ ಸ್ಪಷ್ಟವಾಯಿತು. ಮುಖವು ಬಾಡಿತು. ಉದ್ವೇಗದಿಂದ ಮನಸ್ಸು ಕಳವಳಿಸಿತು. ಆದರೂ ಕರ್ತವ್ಯಾಂಶದಲ್ಲಿ ಜಾಗರೂಕನಾಗಿ ಆ ಕಪಿಶ್ರೇಷ್ಠನು

ಕಿಂ ನು ತತ್ ಕಾರಣಂ ಸುಭ್ರು ಪ್ರಕೃತ್ಯಾ ಮೃದುಮಾನಸಃ ।
ಸರೋಷ ಇವ ಸಂಪ್ರಾಪ್ತೋ ಯೇನಾಯಂ ರಾಘವಾನುಜಃ ॥ ೩೨

ಕಿಂ ಪಶ್ಯಸಿ ಕುಮಾರಸ್ಯ ರೋಷಸ್ಥಾನಮನಿಂದಿತೇ ।
ನ ಖಲ್ವಕಾರಣೇ ಕೋಪಮಾಹರೇನ್ನರಸತ್ತಮಃ ॥ ೩೩

ಯದಸ್ಯ ಕೃತಮಸ್ಮಾಭಿರ್ಬುಧ್ಯಸೇ ಕಿಂಚಿದಪ್ರಿಯಮ್ ।
ತದ್ಬುದ್ಧ್ಯಾ ಸಂಪ್ರಧಾರ್ಯಾಶು ಕ್ಷಿಪ್ರಮರ್ಹಸಿ ಭಾಷಿತುಮ್ ॥ ೩೪

ಅಥವಾ ಸ್ವಯಮೇವೈನಂ ದ್ರಷ್ಟುಮರ್ಹಸಿ ಭಾಮಿನಿ ।
ವಚನೈಃ ಸಾಂತ್ವಯುಕ್ತೈಶ್ಚ ಪ್ರಸಾದಯಿತುಮರ್ಹಸಿ ॥ ೩೫

ತ್ವದ್ದರ್ಶನವಿಶುದ್ಧಾತ್ಮಾ ನ ಸ ಕೋಪಂ ಕರಿಷ್ಯತಿ ।
ನ ಹಿ ಸ್ತ್ರೀಷು ಮಹಾತ್ಮಾನಃ ಕ್ವಚಿತ್ಕುರ್ವಂತಿ ದಾರುಣಮ್ ॥ ೩೬

ತ್ವಯಾ ಸಾಂತ್ವೈರುಪಕ್ರಾಂತಂ ಪ್ರಸನ್ನೇಂದ್ರಿಯಮಾನಸಮ್ ।
ತತಃ ಕಮಲಪತ್ರಾಕ್ಷಂ ದ್ರಕ್ಷ್ಯಾಮ್ಯಹಮರಿಂದಮಮ್ ॥ ೩೭

---

ತಾರೆಯನ್ನು ನೋಡಿ "ಸುಂದರಿ! ಶ್ರೀರಾಮನ ತಮ್ಮನು ಮೃದುಸ್ವಭಾವದವನು. ಅವನು ಕುಪಿತನಾಗಿ ಬಂದಂತೆ ಕಾಣುತ್ತದೆ. ಕಾರಣವೇನಿರಬಹುದು? (೩೦-೩೨). ಆ ರಾಜಕುಮಾರನ ಕೋಪಕ್ಕೆ ನಿಮಿತ್ತವೇನಿರಬಹುದೆಂದು ನೀನು ಊಹಿಸುವೆ? ಎಂದಿಗೂ ನಿಷ್ಕಾರಣವಾಗಿ ಆ ನರೋತ್ತಮನು ಕೋಪಿಸಿಕೊಳ್ಳಲಾರ. ನಾವು ಆತನಿಗೆ ಅಪ್ರಿಯವಾದದ್ದನ್ನೇನಾದರೂ ಮಾಡಿದ್ದೇವೆಂದು ನಿನಗೆ ಅನಿಸುವುದೆ? ಅಂತಹುದಿದ್ದರೆ ಬೇಗನೆ ಆಲೋಚಿಸಿ ಹೇಳು! (೩೩-೩೪). ಅಥವಾ, ನನ್ನ ಕಾಂತೆ, ನೀನೇ ಹೋಗಿ ಲಕ್ಷ್ಮಣನನ್ನು ನೋಡುವುದೊಳ್ಳೆಯದು! ಸಾಮವಾಕ್ಯಗಳಿಂದ ಅವನನ್ನು ಸಂತೈಸು. ನಿನ್ನನ್ನು ಕಂಡಾಗ ಅವನ ಮನಸ್ಸು ಶಾಂತವಾದೀತು. ನಿನ್ನೊಡನೆ ಕೋಪವನ್ನು ತೋರಿಸಲಾರ. ಏಕೆಂದರೆ, ಮಹಾತ್ಮರು ಸ್ತ್ರೀಯರ ವಿಷಯದಲ್ಲಿ ಕಠೋರವಾಗಿ ವರ್ತಿಸುವುದಿಲ್ಲ (೩೫-೩೬). ನೀನು ಸಾಂತ್ವನವಾಕ್ಯಗಳಿಂದ ಅವನನ್ನು ಮಾತನಾಡಿಸು. ಅವನ ಮನಸ್ಸು ಪ್ರಸನ್ನವಾಗಲಿ. ಅನಂತರ ನಾನು ಹೋಗಿ, ಕಮಲೇಕ್ಷಣನಾದ ಆ ವೀರ

ಸಾ ಪ್ರಸ್ಖಲಂತೀ ಮದವಿಹ್ವಲಾಕ್ಷೀ
ಪ್ರಲಂಬಕಾಂಚೀಗುಣಹೇಮಸೂತ್ರಾ ।
ಸಲಕ್ಷಣಾ ಲಕ್ಷ್ಮಣಸಂನಿಧಾನಂ
ಜಗಾಮ ತಾರಾ ನಮಿತಾಂಗಯಷ್ಟಿಃ ॥ ೩೮

ಸ ತಾಂ ಸಮೀಕ್ಷ್ಯೈವ ಹರೀಶಪತ್ನೀಂ
ತಸ್ಥಾವುದಾಸೀನತಯಾ ಮಹಾತ್ಮಾ ।
ಅವಾಙ್ಮುಖೋಽಭೂನ್ಮನುಜೇಂದ್ರಪುತ್ರಃ
ಸ್ತ್ರೀಸಂನಿಕರ್ಷಾದ್ವಿನಿವೃತ್ತಕೋಪಃ ॥ ೩೯

ಸಾ ಪಾನಯೋಗಾದ್ವಿನಿವೃತ್ತಲಜ್ಜಾ
ದೃಷ್ಟಿಪ್ರಸಾದಾಚ್ಚ ನರೇಂದ್ರಸೂನೋಃ ।
ಉವಾಚ ತಾರಾ ಪ್ರಣಯಪ್ರಗಲ್ಭಂ
ವಾಕ್ಯಂ ಮಹಾರ್ಥಂ ಪರಿಸಾಂತ್ವಪೂರ್ವಮ್ ॥ ೪೦

ಕಿಂ ಕೋಪಮೂಲಂ ಮನುಜೇಂದ್ರಪುತ್ರ
ಕಸ್ತೇ ನ ಸಂತಿಷ್ಠತಿ ವಾಙ್ನಿದೇಶೇ ।

---

ನನ್ನು ಕಾಣುವೆನು!" ಎಂದನು (೩೭). ಆಗ ಲಕ್ಷಣವತಿಯಾದ ತಾರೆಯು ಲಕ್ಷ್ಮಣನ ಸಮೀಪಕ್ಕೆ ಬಂದಳು. ಮಧುಪಾನದಿಂದ ಅವಳ ಕಣ್ಣಾಲಿಗಳು ತಿರುಗುತ್ತಿದ್ದವು. ನಡುವಿನಲ್ಲಿದ್ದ ಒಡ್ಯಾಣವೂ ಕೊರಳಿನಲ್ಲಿದ್ದ ಚಿನ್ನದ ಸರವೂ ಸಡಿಲಿದ್ದವು. ಅವಳು ಎಡವುತ್ತ ಬಳುಕುತ್ತ ಬಂದಳು (೩೮). ಮಹಾಪುರುಷನಾದ ಲಕ್ಷ್ಮಣನು ಆ ಕಪೀಂದ್ರಪತ್ನಿಯನ್ನು ನೋಡಿದೊಡನೆ ತಲೆತಗ್ಗಿಸಿಕೊಂಡು ಉದಾಸೀನಭಾವದಿಂದ ನಿಂತನು. ಸ್ತ್ರೀಯೊಬ್ಬಳು ಸಮೀಪಕ್ಕೆ ಬಂದುದರಿಂದ ಅವನ ಕೋಪಾವೇಶವು ತಗ್ಗಿತು (೩೯). ಮದ್ಯಪಾನದ ಅಮಲಿನಲ್ಲಿದ್ದ ತಾರೆಗೆ ಲಜ್ಜೆಯಾಗಲಿಲ್ಲ. ಲಕ್ಷ್ಮಣನು ಪ್ರಸನ್ನನಾಗಿ ಕಾಣಿಸಿದುದರಿಂದ ಅವಳು ಸ್ನೇಹಪೂರ್ವಕವಾಗಿ ಅವನನ್ನು ಸಂತೈಸುತ್ತ "ಓ ರಾಜಕುಮಾರ, ನಿನ್ನ ಕೋಪಕ್ಕೆ ಕಾರಣವೇನು? ನಿನ್ನ ಆಜ್ಞೆಯನ್ನು ಮೀರತಕ್ಕವನಾರು? ಒಣಮರಗಳಿರುವ ಕಾಡಿಗೆ ಧಾಳಿಯಿಡುವ ದಾವಾಗ್ನಿಯಲ್ಲಿ ಅಂಜಿಕೆಯಿಲ್ಲದೆ ನುಗ್ಗುವವನಾರು!" ಎಂದು ಅರ್ಥಗರ್ಭಿತವಾಗಿ

ಕಃ ಶುಷ್ಕವೃಕ್ಷಂ ವನಮಾಪತಂತಂ
ದವಾಗ್ನಿಮಾಸೀದತಿ ನಿರ್ವಿಶಂಕಃ ॥ ೪೧

ಸ ತಸ್ಯಾ ವಚನಂ ಶ್ರುತ್ವಾ ಸಾಂತ್ವಪೂರ್ವಮಶಂಕಿತಮ್ ।
ಭೂಯಃ ಪ್ರಣಯದೃಷ್ಟಾರ್ಥಂ ಲಕ್ಷ್ಮಣೋ ವಾಕ್ಯಮಬ್ರವೀತ್ ॥

ಕಿಮಯಂ ಕಾಮವೃತ್ತಸ್ತೇ ಲುಪ್ತಧರ್ಮಾರ್ಥಸಂಗ್ರಹಃ ।
ಭರ್ತಾ ಭರ್ತೃಹಿತೇ ಯುಕ್ತೇ ನ ಚೈನಮವಬುಧ್ಯಸೇ ॥ ೪೩

ನ ಚಿಂತಯತಿ ರಾಜ್ಯಾರ್ಥಂ ನಾಸ್ಮಾನ್ ಶೋಕಪರಾಯಣಾನ್ ।
ಸಾಮಾತ್ಯಪರಿಷತ್ತಾರೇ ಪಾನಮೇವೋಪಸೇವತೇ ॥ ೪೪

ಸ ಮಾಸಾಂಶ್ಚತುರಃ ಕೃತ್ವಾ ಪ್ರಮಾಣಂ ಪ್ಲವಗೇಶ್ವರಃ ।
ವ್ಯತೀತಾಂಸ್ತಾನ್ ಮದವ್ಯಗ್ರೋ ವಿಹರನ್ನಾವಬುಧ್ಯತೇ ॥ ೪೫

ನ ಹಿ ಧರ್ಮಾರ್ಥಸಿದ್ಧ್ಯರ್ಥಂ ಪಾನಮೇವಂ ಪ್ರಶಸ್ಯತೇ ।
ಪಾನಾದರ್ಥಶ್ಚ ಧರ್ಮಶ್ಚ ಕಾಮಶ್ಚ ಪರಿಹೀಯತೇ ॥ ೪೬

ಧರ್ಮಲೋಪೋ ಮಹಾಂಸ್ತಾವತ್ ಕೃತೇ ಹ್ಯಪ್ರತಿಕುರ್ವತಃ ।
ಅರ್ಥಲೋಪಶ್ಚ ಮಿತ್ರಸ್ಯ ನಾಶೇ ಗುಣವತೋ ಮಹಾನ್ ॥ ೪೭

---

ಪ್ರಶ್ನೆಮಾಡಿದಳು (೪೦-೪೧). ಹೀಗೆ ತಾರೆಯು ಲಕ್ಷ್ಮಣನನ್ನು ಸಂತೈಸುತ್ತ ಶಂಕೆಗೆ ಅವಕಾಶವಿಲ್ಲದಂತೆ ಸ್ನೇಹದಿಂದ ಮಾತನಾಡಿಸಲಾಗಿ, ಅವನು ಈ ರೀತಿ ಹೇಳಿದನು: "ಎಲೌ ಸೌಮ್ಯಳೆ, ನಿನ್ನ ಪತಿಯು ಏಕೆ ಹೀಗೆ ಕಾಮಲೋಲುಪನಾಗಿದ್ದಾನೆ? ಧರ್ಮಾರ್ಥಗಳನ್ನು ಉಪೇಕ್ಷಿಸಿದ್ದಾನೆ? ಅವನ ಹಿತದಲ್ಲಿ ನಿರತಳಾದ ನೀನು ಈ ವಿಷಯವನ್ನು ಗಮನಿಸದೆ ಇರುವೆಯಲ್ಲ! (೪೨-೪೩). ಆತನು ರಾಜಕಾರ್ಯವನ್ನು ಪರಿಶೀಲಿಸುತ್ತಿಲ್ಲ. ನಾವು ದುಃಖದಲ್ಲಿದ್ದೇವೆಂಬುದನ್ನು ಲೆಕ್ಕಿಸುತ್ತಿಲ್ಲ. ತನ್ನ ಸಚಿವ ಪರಿವಾರದೊಂದಿಗೆ ಮದ್ಯಪಾನದಲ್ಲಿ ತೊಡಗಿದ್ದಾನೆ. ತಾರೆ, ಧರ್ಮಾರ್ಥಗಳನ್ನು ಸಾಧಿಸತಕ್ಕವರಿಗೆ ಈ ಬಗೆಯ ಮದ್ಯಪಾನವು ಯೋಗ್ಯವಲ್ಲ. ಧರ್ಮ, ಅರ್ಥ, ಕಾಮ ಈ ಮೂರೂ ಅದರಿಂದ ಕ್ಷೀಣಿಸುತ್ತವೆ (೪೪-೪೬). ಉಪಕರಿಸಿದವನಿಗೆ ಪ್ರತ್ಯುಪಕಾರವನ್ನು ಮಾಡದಿದ್ದಾಗ ಧರ್ಮಲೋಪವು ಸಿದ್ಧವಾಯಿತು. ಗುಣಶಾಲಿ

ಮಿತ್ರಂ ಹ್ಯವಾಪ್ತಂ ಗುಣಶ್ರೇಷ್ಠಂ ಸತ್ಯಧರ್ಮಪರಾಯಣಮ್ ।
ತದ್ದ್ವಯಂ ತು ಪರಿತ್ಯಕ್ತಂ ನ ತು ಧರ್ಮೇ ವ್ಯವಸ್ಥಿತಮ್ ॥ ೪೮

ತದೇವಂ ಪ್ರಸ್ತುತೇ ಕಾರ್ಯೇ ಕಾರ್ಯಮಸ್ಮಾಭಿರುತ್ತರಮ್ ।
ಯತ್ ಕಾರ್ಯಂ ಕಾರ್ಯತತ್ತ್ವಜ್ಞೇ ತದುದಾಹರ್ತುಮರ್ಹಸಿ ॥

ಸಾ ತಸ್ಯ ಧರ್ಮಾರ್ಥಸಮಾಧಿಯುಕ್ತಂ
ನಿಶಮ್ಯ ವಾಕ್ಯಂ ಮಧುರಸ್ವಭಾವಮ್ ।
ತಾರಾಗತಾರ್ಥೇ ಮನುಜೇಂದ್ರಕಾರ್ಯೇ
ವಿಶ್ವಾಸಯುಕ್ತಂ ತಮುವಾಚ ಭೂಯಃ ॥ ೫೦

ನ ಕೋಪಕಾಲಃ ಕ್ಷಿತಿಪಾಲಪುತ್ರ
ನ ಚಾತಿಕೋಪಃ ಸ್ವಜನೇ ವಿಧೇಯಃ ।
ತ್ವದರ್ಥಕಾಮಸ್ಯ ಜನಸ್ಯ ತಸ್ಯ
ಪ್ರಮಾದಮಪ್ಯರ್ಹಸಿ ವೀರ ಸೋಢುಮ್ ॥ ೫೧

---

ಯಾದ ಮಿತ್ರನನ್ನು ಕಳೆದುಕೊಂಡರೆ ಮಹತ್ತರವಾದ ಅರ್ಥಲೋಪವು ನಿಶ್ಚಿತ (೪೭) ನಿನ್ನ ಪತಿಗೆ ಅರ್ಥವನ್ನು ಸಂಪಾದಿಸಿಕೊಟ್ಟ ಶ್ರೇಷ್ಠನೂ ಸತ್ಯಧರ್ಮಪರಾಯಣನೂ ಆದ ಮಿತ್ರನಿದ್ದಾನಲ್ಲವೆ ? ಆ ಮಿತ್ರನನ್ನು ಉಪೇಕ್ಷಿಸಿದ್ದರಿಂದ ಧರ್ಮಾರ್ಥಗಳೆರಡನ್ನೂ ನಿನ್ನ ಪತಿಯು ಕೈಬಿಟ್ಟಂತಾಯಿತು. ಧರ್ಮಮಾರ್ಗದಲ್ಲಿ ಅವನಿಗೆ ನಿಷ್ಠೆಯುಂಟಾಗಲಿಲ್ಲ (೪೮). ಪರಿಸ್ಥಿತಿಯು ಈ ರೀತಿಗೆ ಬಂದಾಗ ನಾವು ಅದಕ್ಕೆ ತಕ್ಕ ಉತ್ತರವನ್ನು ಕೊಡಲೇಬೇಕಾಗಿದೆ! ತಾರೆ, ನೀನು ಕಾರ್ಯತತ್ತ್ವವನ್ನು ಬಲ್ಲವಳಾಗಿದ್ದೀಯೆ. ನಾವು ಯಾವ ಉತ್ತರವನ್ನು ಕೊಡಬೇಕೆಂಬುದನ್ನು ನೀನೇ ಹೇಳು!" ಎಂದನು (೪೯). ಲಕ್ಷ್ಮಣನ ವಾಕ್ಯವು ಮಧುರವಾಗಿಯೂ ಧರ್ಮಾರ್ಥಗಳನ್ನು ಸಮನ್ವಯಮಾಡತಕ್ಕುದಾಗಿಯೂ ಇದ್ದಿತು. ತಾರೆಯು ಅದನ್ನು ಕೇಳಿ, ಶ್ರೀರಾಮನ ಕಾರ್ಯವು ಇನ್ನೂ ಸಿದ್ಧಿಸಿಲ್ಲವಾದ್ದರಿಂದ ಅದನ್ನು ಸಾಧಿಸುವ ವಿಶ್ವಾಸದಿಂದ ಈತನು ಬಂದಿದ್ದಾನೆ ಎಂದು ತಿಳಿದು ಲಕ್ಷ್ಮಣನಿಗೆ ಹೀಗೆಂದಳು (೫೦): "ರಾಜಕುಮಾರ, ಇದು ಕೋಪಕ್ಕೆ ಸಮಯವಲ್ಲ. ಸ್ವಜನರಲ್ಲಿ ಅತಿಯಾದ ಕೋಪವನ್ನು ಪ್ರದರ್ಶಿಸಬಾರದು.

ಕೋಪಂ ಕಥಂ ನಾಮ ಗುಣಪ್ರಕೃಷ್ಟಃ
ಕುಮಾರ ಕುರ್ಯಾದಪಕೃಷ್ಟಸತ್ತ್ವೇ ।
ಕಸ್ತ್ವದ್ವಿಧಃ ಕೋಪವಶಂ ಹಿ ಗಚ್ಛೇತ್
ಸತ್ತ್ವಾವರುದ್ಧಸ್ತಪಸಃ ಪ್ರಸೂತಿಃ ॥ ೫೨

ಜಾನಾಮಿ ರೋಷಂ ಹರಿವೀರ ಬಂಧೋ-
ರ್ಜಾನಾಮಿ ಕಾರ್ಯಸ್ಯ ಚ ಕಾಲಸಂಗಮ್ ।
ಜಾನಾಮಿ ಕಾರ್ಯಂ ತ್ವಯಿ ಯತ್ಕೃತಂ ನ-
ಸ್ತಚ್ಚಾಪಿ ಜಾನಾಮಿ ಯದತ್ರ ಕಾರ್ಯಮ್ ॥ ೫೩

ತಚ್ಚಾಪಿ ಜಾನಾಮಿ ಯಥಾವಿಷಹ್ಯಂ
ಬಲಂ ನರಶ್ರೇಷ್ಠ ಶರೀರಜಸ್ಯ ।
ಜಾನಾಮಿ ಯಸ್ಮಿಂಶ್ಚ ಜನೇಽವಬದ್ಧಂ
ಕಾಮೇನ ಸುಗ್ರೀವಮಸಕ್ತಮದ್ಯ ॥ ೫೪

ನ ಕಾಮತಂತ್ರೇ ತವ ಬುದ್ಧಿರಸ್ತಿ
ತ್ವಂ ವೈ ಯಥಾ ಮನ್ಯುವಶಂ ಪ್ರಪನ್ನಃ ।

---

ಸುಗ್ರೀವನಿಗೆ ನಿಮ್ಮಿಂದಲೇ ಅರ್ಥಕಾಮಗಳು ಲಭಿಸಿವೆ. ವೀರಾಗ್ರಣಿ, ಅವನು ತಪ್ಪುಮಾಡಿದರೂ ಕ್ಷಮಿಸಬೇಕು (೫೧). ಕುಮಾರ, ಗುಣಶ್ರೇಷ್ಠರಾದವರು ತಮಗಿಂತ ನಿಕೃಷ್ಟರಾದವರಲ್ಲಿ ಕೋಪಿಸಿಕೊಳ್ಳಬಹುದೆ? ನೀನು ಅತ್ಯಂತ ಸಾತ್ವಿಕನೂ ಧರ್ಮದ ಜನ್ಮಭೂಮಿಯೂ ಆಗಿರುವೆ. ನಿನ್ನಂಥವನು ಹೀಗೆ ರೋಷವಶನಾಗಬಹುದೆ? (೫೨). ಕಪಿವೀರನಿಗೆ ಬಂಧುವಾಗಿ ಬಂದ ಶ್ರೀರಾಮನ ಕೋಪಕ್ಕೆ ನಿಮಿತ್ತವೇನೆಂಬುದು ನನಗೆ ಗೊತ್ತಿದೆ. ಅವನ ಕಾರ್ಯವು ವಿಳಂಬಿಸುತ್ತಿದೆಯೆಂಬುದನ್ನು ನಾನು ಬಲ್ಲೆ. ನಿನ್ನಿಂದ ಸುಗ್ರೀವನಿಗಾದ ಉಪಕಾರವನ್ನೂ ನಾನು ಬಲ್ಲೆ. ಈಗ ನಮ್ಮ ಕರ್ತವ್ಯವೇನೆಂಬುದನ್ನೂ ಬಲ್ಲೆ! (೫೩) ಅಲ್ಲದೆ, ನರೋತ್ತಮ, ಮನ್ಮಥನ ಬಲವು ಎಷ್ಟು ದುರ್ವಾರವೆಂಬುದನ್ನೂ ನಾನು ಬಲ್ಲೆ! ಸುಗ್ರೀವನು ಕಾಮವಶನಾಗಿ ಅನವರತವೂ ಯಾರಲ್ಲಿ ಆಸಕ್ತನಾಗಿರುವನೆಂಬುದನ್ನೂ ಬಲ್ಲೆ! (೫೪). ಲಕ್ಷ್ಮಣ, ನಿನಗೆ ಕಾಮತಂತ್ರದಲ್ಲಿ ಪರಿಚಯವಿಲ್ಲ! ಆದ್ದರಿಂದ

ನ ದೇಶಕಾಲೌ ಹಿ ನ ಚಾರ್ಥಧರ್ಮಾ-
ವಪೇಕ್ಷತೇ ಕಾಮರತಿರ್ಮನುಷ್ಯಃ ॥ ೫೫

ತಂ ಕಾಮವೃತ್ತಂ ಮಮ ಸಂನಿಕೃಷ್ಟಂ
ಕಾಮಾಭಿಯೋಗಾಚ್ಚ ನಿವೃತ್ತಲಜ್ಜಮ್ ।
ಕ್ಷಮಸ್ವ ತಾವತ್ ಪರವೀರಹಂತ-
ಸ್ತ್ವದ್ಭ್ರಾತರಂ ವಾನರವಂಶನಾಥಮ್ ॥ ೫೬

ಮಹರ್ಷಯೋ ಧರ್ಮತಪೋಽಭಿಕಾಮಾಃ
ಕಾಮಾನುಕಾಮಾಃ ಪ್ರತಿಬದ್ಧಮೋಹಾಃ ।
ಅಯಂ ಪ್ರಕೃತ್ಯಾ ಚಪಲಃ ಕಪಿಸ್ತು
ಕಥಂ ನ ಸಜ್ಜೇತ ಸುಖೇಷು ರಾಜಾ ॥ ೫೭

ಇತ್ಯೇವಮುಕ್ತ್ವಾ ವಚನಂ ಮಹಾರ್ಥಂ
ಸಾ ವಾನರೀ ಲಕ್ಷ್ಮಣಮಪ್ರಮೇಯಮ್ ।
ಪುನಃ ಸಖೇಲಂ ಮದವಿಹ್ವಲಂ ಚ
ಭರ್ತುರ್ಹಿತಂ ವಾಕ್ಯಮಿದಂ ಬಭಾಷೇ ॥ ೫೮

---

ನೀನು ಹೀಗೆ ಕೋಪವಶನಾಗಿದ್ದೀಯೆ! ಕಾಮಾಸಕ್ತನಿಗೆ ದೇಶಕಾಲಗಳ ಪರಿವೆ ಇರುವುದಿಲ್ಲ! ಅರ್ಥಧರ್ಮಗಳ ಗಣನೆ ಇರುವುದಿಲ್ಲ! (೫೫). ಎಲೈ ಶತ್ರುಸೂದನ, ಸುಗ್ರೀವನು ಕಾಮಲೋಲುಪನಾಗಿ ನನ್ನ ಬಳಿಯಲ್ಲಿದ್ದಾನೆ. ಅದರ ಆವೇಶದಲ್ಲಿ ಲಜ್ಜೆಯನ್ನು ತೊರೆದಿದ್ದಾನೆ ಆ ವಾನರೇಶ್ವರನು ನಿನ್ನ ಸೋದರನೆಂದು ಭಾವಿಸಿ ಮನ್ನಿಸು (೫೬). ತಪೋಧರ್ಮಗಳಲ್ಲಿಯೇ ನಿರತರಾದ ಮಹರ್ಷಿಗಳೂ ಸಹ ಕಾಮವಶರಾಗಿ ಸ್ತ್ರೀವ್ಯಾಮೋಹದಲ್ಲಿ ಸಿಲುಕಿರುವುದುಂಟು. ಈತನಾದರೋ ಚಪಲಸ್ವಭಾವದ ಕಪಿಯಾಗಿದ್ದಾನೆ; (ಭೋಗಸಾಮಗ್ರಿಗಳಿರುವ) ರಾಜನಾಗಿದ್ದಾನೆ" ಎಂದು ಹೇಳಿದಳು (೫೭). ಈ ಪ್ರಕಾರವಾಗಿ ತಾರೆಯು ಮಹಾನುಭಾವನಾದ ಲಕ್ಷ್ಮಣನನ್ನುದ್ದೇಶಿಸಿ ಅರ್ಥಗರ್ಭಿತವಾಗಿ ನುಡಿದು, ತನ್ನ ಪತಿಯಾದ ಸುಗ್ರೀವನಿಗೆ ಹಿತವಾಗಲೆಂದು ಮತ್ತೆ ಮಾತಾಡಿದಳು ಮದ್ಯದ ಜೋಮಿನಿಂದಲೂ ಬೆಡಗಿನಿಂದಲೂ

ಉದ್ಯೋಗಸ್ತು ಚಿರಾಜ್ಞಪ್ತಃ ಸುಗ್ರೀವೇಣ ನರೋತ್ತಮ ।
ಕಾಮಸ್ಯಾಪಿ ವಿಧೇಯೇನ ತವಾರ್ಥಪ್ರತಿಸಾಧನೇ ॥ ೫೯

ಆಗತಾ ಹಿ ಮಹಾವೀರ್ಯಾ ಹರಯಃ ಕಾಮರೂಪಿಣಃ ।
ಕೋಟೀಶತಸಹಸ್ರಾಣಿ ನಾನಾನಗನಿವಾಸಿನಃ ॥ ೬೦

ತದಾಗಚ್ಛ ಮಹಾಬಾಹೋ ಚಾರಿತ್ರಂ ರಕ್ಷಿತಂ ತ್ವಯಾ ।
ಅಚ್ಛಲಂ ಮಿತ್ರಭಾವೇನ ಸತಾಂ ದಾರಾವಲೋಕನಮ್ ॥ ೬೧

ತಾರಯಾ ಚಾಭ್ಯನುಜ್ಞಾತಸ್ತ್ವರಯಾ ಚಾಪಿ ಚೋದಿತಃ ।
ಪ್ರವಿವೇಶ ಮಹಾಬಾಹುರಭ್ಯಂತರಮರಿಂದಮಃ ॥ ೬೨

ತತಃ ಸುಗ್ರೀವಮಾಸೀನಂ ಕಾಂಚನೇ ಪರಮಾಸನೇ ।
ಮಹಾರ್ಹಾಸ್ತರಣೋಪೇತೇ ದದರ್ಶಾದಿತ್ಯಸಂನಿಭಮ್ ॥ ೬೩

ದಿವ್ಯಾಭರಣಚಿತ್ರಾಂಗಂ ದಿವ್ಯರೂಪಂ ಯಶಸ್ವಿನಮ್ ।
ದಿವ್ಯಮಾಲ್ಯಾಂಬರಧರಂ ಮಹೇಂದ್ರಮಿವ ದುರ್ಜಯಮ್ ॥ ೬೪

---

ತಡವರಿಸುತ್ತ "ಲಕ್ಷ್ಮಣ, ಸುಗ್ರೀವನು ನಿನ್ನ ಕಾರ್ಯವನ್ನು ಸಾಧಿಸುವುದಕ್ಕಾಗಿ ಉದ್ಯೋಗವನ್ನು ಆರಂಭಿಸಬೇಕೆಂದು ಹಿಂದೆಯೇ ಆಜ್ಞೆಯನ್ನಿತ್ತಿದ್ದಾನೆ. ಕಾಮವಶನಾದರೂ ಅವನು ಆಜ್ಞೆಯನ್ನು ಹೊರಡಿಸಿದ್ದಾನೆ (೫೮-೫೯). ಕಾಮರೂಪಿಗಳೂ ಮಹಾವೀರರೂ ಆದ ವಾನರರು ಈಗಾಗಲೇ ಬಂದಿದ್ದಾರೆ. ವಿವಿಧ ಪರ್ವತಗಳಲ್ಲಿ ನೆಲೆಸಿರುವ ವಾನರರು ಕೋಟಿಗಟ್ಟಲೆಯಾಗಿ ಬಂದು ಸೇರುತ್ತಿದ್ದಾರೆ (೬೦). ಆದ್ದರಿಂದ, ಓ ಮಹಾಬಾಹು, ನೀನು ನಮ್ಮ ಅಂತಃಪುರಕ್ಕೆ ದಯಮಾಡು. ಹೊರಗೆ ನಿಂತು ನಿನ್ನ ಸಚ್ಚಾರಿತ್ರವನ್ನು ರಕ್ಷಿಸಿಕೊಂಡಿದ್ದೀಯೆ. ಸಜ್ಜನರು ಮಿತ್ರಭಾವದಿಂದ ಪರಸ್ತ್ರೀಯರನ್ನು ನೋಡುವುದರಲ್ಲಿ ದೋಷವಿಲ್ಲ" ಎಂದಳು (೬೧). ಆಗ ಲಕ್ಷ್ಮಣನು, ತಾರೆಯು ಒಪ್ಪಿದುದರಿಂದಲೂ ಕಾರ್ಯಗೌರವದಿಂದಾದ ತ್ವರೆಯಿಂದಲೂ ಚೋದಿತನಾಗಿ, ಅಂತಃಪುರದೊಳಗೆ ಹೋದನು. ಅಲ್ಲಿ ಶ್ರೇಷ್ಠವಾದ ಆಸ್ತರಣದಿಂದ ಹೊದಿಸಿದ ಸುವರ್ಣಮಯವಾದ ದಿವ್ಯಪೀಠದಲ್ಲಿ ಸೂರ್ಯನಂತೆ ಬೆಳಗುತ್ತ ಸುಗ್ರೀವನು ಕುಳಿತಿರುವುದನ್ನು ಲಕ್ಷ್ಮಣನು ಕಂಡನು (೬೨-೬೩). ಕೀರ್ತಿಶಾಲಿಯಾದ ಸುಗ್ರೀವನು ದಿವ್ಯಾಭರಣಗಳನ್ನು

ದಿವ್ಯಾಭರಣಮಾಲ್ಯಾಭಿಃ ಪ್ರಮದಾಭಿಃ ಸಮಾವೃತಮ್ ।
ಸಂರಬ್ಧತರರಕ್ತಾಕ್ಷೋ ಬಭೂವಾಂತಕಸಂನಿಭಃ ॥ ೬೫

ರುಮಾಂ ತು ವೀರಃ ಪರಿರಭ್ಯ ಗಾಢಂ
ವರಾಸನಸ್ಥೋ ವರಹೇಮವರ್ಣಃ ।
ದದರ್ಶ ಸೌಮಿತ್ರಿಮದೀನಸತ್ತ್ವಂ
ವಿಶಾಲನೇತ್ರಃ ಸುವಿಶಾಲನೇತ್ರಮ್ ॥ ೬೬

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ತ್ರಯಸ್ತ್ರಿಂಶಃ ಸರ್ಗಃ



ತೊಟ್ಟು ದಿವ್ಯಮಾಲೆಗಳನ್ನು ಧರಿಸಿ, ದಿವ್ಯವಸ್ತ್ರಗಳನ್ನುಟ್ಟು, ದುರ್ಜಯನಾದ ದೇವೇಂದ್ರನಂತೆ ದಿವ್ಯರೂಪನಾಗಿ ಮಂಡಿಸಿದ್ದನು (೬೪). ಅವನ ಸುತ್ತಲೂ ಅಂಗನೆಯರು ದಿವ್ಯಾಭರಣಗಳನ್ನು ಧರಿಸಿ ದಿವ್ಯಪುಷ್ಪಗಳನ್ನು ಮುಡಿದು ನೆರೆದಿದ್ದರು. (ಸುಗ್ರೀವನ ವೈಭವವನ್ನು ಕಂಡು) ಲಕ್ಷ್ಮಣನ ಕಣ್ಣುಗಳು ಕೋಪದಿಂದ ಕೆಂಪಡರಿದವು! ಅವನು ಕಾಲಾಂತಕನಂತೆ ಕಂಗೊಳಿಸಿದನು! (೬೫). ಸುವರ್ಣವರ್ಣನಾದ ಸುಗ್ರೀವನು ರುಮೆಯನ್ನು ಆಲಿಂಗಿಸಿಕೊಂಡು ಸಿಂಹಾಸನದಲ್ಲಿ ಕುಳಿತಿದ್ದನು. ಪರಾಕ್ರಮಿಯೂ ವಿಶಾಲನೇತ್ರನೂ ಆದ ಸೌಮಿತ್ರಿಯನ್ನು ಸುಗ್ರೀವನು ಕಣ್ಣರಳಿಸಿ ನೋಡಿದನು! (೬೬).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಮೂವತ್ತುಮೂರನೆಯ ಸರ್ಗ



## ಚತುಸ್ತ್ರಿಂಶಃ ಸರ್ಗಃ

### ಸುಗ್ರೀವತರ್ಜನಮ್

ತಮಪ್ರತಿಹತಂ ಕ್ರುದ್ಧಂ ಪ್ರವಿಷ್ಟಂ ಪುರುಷರ್ಷಭಮ್ ।
ಸುಗ್ರೀವೋ ಲಕ್ಷ್ಮಣಂ ದೃಷ್ಟ್ವಾ ಬಭೂವ ವ್ಯಥಿತೇಂದ್ರಿಯಃ ॥ ೧
ಕ್ರುದ್ಧಂ ನಿಃಶ್ವಸಮಾನಂ ತಂ ಪ್ರದೀಪ್ತಮಿವ ತೇಜಸಾ ।
ಭ್ರಾತುರ್ವ್ಯಸನಸಂತಪ್ತಂ ದೃಷ್ಟ್ವಾ ದಶರಥಾತ್ಮಜಮ್ ॥ ೨
ಉತ್ಪಪಾತ ಹರಿಶ್ರೇಷ್ಠೋ ಹಿತ್ವಾ ಸೌವರ್ಣಮಾಸನಮ್ ।
ಮಹಾನ್ ಮಹೇಂದ್ರಸ್ಯ ಯಥಾ ಸ್ವಲಂಕೃತ ಇವ ಧ್ವಜಃ ॥ ೩
ಉತ್ಪತಂತಮನೂತ್ಪೇತೂ ರುಮಾಪ್ರಭೃತಯಃ ಸ್ತ್ರಿಯಃ ।
ಸುಗ್ರೀವಂ ಗಗನೇ ಪೂರ್ಣಂ ಚಂದ್ರಂ ತಾರಾಗಣಾ ಇವ ॥ ೪
ಸಂರಕ್ತನಯನಃ ಶ್ರೀಮಾನ್ ವಿಚಚಾಲ ಕೃತಾಂಜಲಿಃ ।
ಬಭೂವಾವಸ್ಥಿತಸ್ತತ್ರ ಕಲ್ಪವೃಕ್ಷೋ ಮಹಾನಿವ ॥ ೫

## ಸರ್ಗ ೩೪

### ಲಕ್ಷ್ಮಣನು ಸುಗ್ರೀವನನ್ನು ಗದರಿಸಿ ಎಚ್ಚರಿಕೆ ಹೇಳುವುದು.

ಪುರುಷೋತ್ತಮನಾದ ಲಕ್ಷ್ಮಣನು ಯಾವ ತಡೆಯೂ ಇಲ್ಲದೆ ಅಂತಃಪುರದೊಳಗೆ ಹೋಗಲಾಗಿ, ಅವನನ್ನು ಕಂಡು ಸುಗ್ರೀವನ ಮನಸ್ಸು ಅಳುಕಿತು. ಆ ದಶರಥಕುಮಾರನು ಅಣ್ಣನ ಸಂಕಷ್ಟದಿಂದ ನೊಂದು, ಕೋಪದಿಂದ ಬುಸುಗುಟ್ಟುತ್ತ, ತೇಜೋವಿಶೇಷದಿಂದ ಪ್ರಜ್ವಲಿಸುವಂತಿದ್ದನು (೧-೨) ಲಕ್ಷ್ಮಣನನ್ನು ಕಂಡೊಡನೆ ಸುಗ್ರೀವನು ಸುವರ್ಣಾಸನವನ್ನು ಬಿಟ್ಟು ಥಟ್ಟನೆ ಎದ್ದುನಿಂತನು ಎದ್ದುನಿಂತಾಗ ಚೆನ್ನಾಗಿ ಅಲಂಕರಿಸಿದ ಉನ್ನತವಾದ ಇಂದ್ರಧ್ವಜದಂತೆ ಕಂಗೊಳಿಸಿದನು. ಗಗನದಲ್ಲಿ ಪೂರ್ಣ ಚಂದ್ರನನ್ನು ಹಿಂಬಾಲಿಸುವ ತಾರಾಗಣಗಳಂತೆ, ಸುಗ್ರೀವನೊಡನೆ ರುಮೆ ಮೊದಲಾದ ಅಂಗನೆಯರೂ ಎದ್ದುನಿಂತರು (೩-೪). ಕೆಂಪೇರಿದ ನಯನ ಗಳಿಂದ ಶೋಭಿಸುತ್ತಿದ್ದ ಸುಗ್ರೀವನು ಬದ್ಧಾಂಜಲಿಯಾಗಿ ಮುಂದೆ ಬಂದು,

ರುಮಾದ್ವಿತೀಯಂ ಸುಗ್ರೀವಂ ನಾರೀಮಧ್ಯಗತಂ ಸ್ಥಿತಮ್ ।
ಅಬ್ರವೀಲ್ಲಕ್ಷ್ಮಣಃ ಕ್ರುದ್ಧಃ ಸತಾರಂ ಶಶಿನಂ ಯಥಾ ॥ ೬

ಸತ್ತ್ವಾಭಿಜನಸಂಪನ್ನಃ ಸಾನುಕ್ರೋಶೋ ಜಿತೇಂದ್ರಿಯಃ ।
ಕೃತಜ್ಞಃ ಸತ್ಯವಾದೀ ಚ ರಾಜಾ ಲೋಕೇ ಮಹೀಯತೇ ॥ ೭

ಯಸ್ತು ರಾಜಾ ಸ್ಥಿತೋಽಧರ್ಮೇ ಮಿತ್ರಾಣಾಮುಪಕಾರಿಣಾಮ್ ।
ಮಿಥ್ಯಾ ಪ್ರತಿಜ್ಞಾಂ ಕುರುತೇ ಕೋ ನೃಶಂಸತರಸ್ತತಃ ॥ ೮

ಶತಮಶ್ವಾನೃತೇ ಹಂತಿ ಸಹಸ್ರಂ ತು ಗವಾನೃತೇ ।
ಆತ್ಮಾನಂ ಸ್ವಜನಂ ಹಂತಿ ಪುರುಷಃ ಪುರುಷಾನೃತೇ ॥ ೯

ಪೂರ್ವಂ ಕೃತಾರ್ಥೋ ಮಿತ್ರಾಣಾಂ ನ ತತ್ ಪ್ರತಿಕರೋತಿ ಯಃ ।
ಕೃತಘ್ನಃ ಸರ್ವಭೂತಾನಾಂ ಸ ವಧ್ಯಃ ಪ್ಲವಗೇಶ್ವರ ॥ ೧೦

---

ದೊಡ್ಡ ಕಲ್ಪವೃಕ್ಷದಂತೆ ಲಕ್ಷ್ಮಣನೆದುರಿಗೆ ನಿಂತುಕೊಂಡನು. ಆಗ ತಾರಾಗಣಸಮೇತನಾದ ಚಂದಿರನಂತೆ, ರುಮಾಸಹಿತನಾಗಿ ನಾರಿಯರ ಪರಿವಾರದೊಡನೆ ನಿಂತಿದ್ದ ಸುಗ್ರೀವನನ್ನು ನೋಡಿ, ಕ್ರುದ್ಧನಾದ ಲಕ್ಷ್ಮಣನು ಇಂತೆಂದನು (೫-೬) : "ಸುಗ್ರೀವ, ಸತ್ತ್ವಗುಣಸಂಪನ್ನನೂ ಸತ್ಕುಲಪ್ರಸೂತನೂ ಆದ ರಾಜನು ಲೋಕದಲ್ಲಿ ಗೌರವಿಸಲ್ಪಡುತ್ತಾನೆ. ಆ ರಾಜನು ದಯಾಳುವೂ ಜಿತೇಂದ್ರಿಯನೂ ಕೃತಜ್ಞನೂ ಸತ್ಯವಾದಿಯೂ ಆಗಿರಬೇಕು (೭). ಆದರೆ, ಯಾವ ರಾಜನು ಅಧರ್ಮಮಾರ್ಗವನ್ನು ತುಳಿದು, ಉಪಕಾರಿಗಳಾದ ಮಿತ್ರರಿಗೆ ಸುಳ್ಳುಸುಳ್ಳಾಗಿ ಮಾತುಕೊಡುವನೋ ಅವನಿಗಿಂತ ಘಾತುಕನು ಇನ್ನಾವನುಂಟು? (೮). ಒಂದು ಕುದುರೆಯ ವಿಷಯವಾಗಿ ಸುಳ್ಳಾಡಿದರೆ, ನೂರು ಕುದುರೆಗಳನ್ನು ಕೊಂದ ದೋಷವು ಬರುತ್ತದೆ. ಒಂದು ಗೋವಿನ ವಿಷಯವಾಗಿ ಸುಳ್ಳಾಡಿದರೆ, ಸಾವಿರ ಗೋವುಗಳನ್ನು ಕೊಂದ ದೋಷವು ಗಂಟುಬೀಳುತ್ತದೆ. ಒಬ್ಬ ಮನುಷ್ಯನ ವಿಷಯದಲ್ಲಿ ಸುಳ್ಳಾಡಿದರೆ, ಆತ್ಮಹತ್ಯಾದೋಷವೂ ಬಂಧುಹತ್ಯಾದೋಷವೂ ಪ್ರಾಪ್ತವಾಗುತ್ತವೆ (೯). ಎಲೈ ವಾನರೇಶ್ವರ, ಮೊದಲು ಮಿತ್ರರಿಂದ ಉಪಕೃತನಾದವನು ಅವರಿಗೆ ಪ್ರತ್ಯುಪಕಾರವನ್ನು ಮಾಡದಿದ್ದ

ಗೀತೋಽಯಂ ಬ್ರಹ್ಮಣಾ ಶ್ಲೋಕಃ ಸರ್ವಲೋಕನಮಸ್ಕೃತಃ ।
ದೃಷ್ಟ್ವಾ ಕೃತಘ್ನಂ ಕ್ರುದ್ಧೇನ ತಂ ನಿಬೋಧ ಪ್ಲವಂಗಮ ॥ ೧೦

ಬ್ರಹ್ಮಘ್ನೇ ಚ ಸುರಾಪೇ ಚ ಗೋಘ್ನೇ ಭಗ್ನವ್ರತೇ ತಥಾ ।
ನಿಷ್ಕೃತಿರ್ವಿಹಿತಾ ಸದ್ಭಿಃ ಕೃತಘ್ನೇ ನಾಸ್ತಿ ನಿಷ್ಕೃತಿಃ ॥ ೧೨

ಅನಾರ್ಯಸ್ತ್ವಂ ಕೃತಘ್ನಶ್ಚ ಮಿಥ್ಯಾವಾದೀ ಚ ವಾನರ ।
ಪೂರ್ವಂ ಕೃತಾರ್ಥೋ ರಾಮಸ್ಯ ನ ತತ್ ಪ್ರತಿಕರೋಷಿ ಯತ್ ॥

ನನು ನಾಮ ಕೃತಾರ್ಥೇನ ತ್ವಯಾ ರಾಮಸ್ಯ ವಾನರ ।
ಸೀತಾಯಾ ಮಾರ್ಗಣೇ ಯತ್ನಃ ಕರ್ತವ್ಯಃ ಕೃತಮಿಚ್ಛತಾ ॥ ೧೪

ಸ ತ್ವಂ ಗ್ರಾಮ್ಯೇಷು ಭೋಗೇಷು ಸಕ್ತೋ ಮಿಥ್ಯಾಪ್ರತಿಶ್ರವಃ ।
ನ ತ್ವಾಂ ರಾಮೋ ವಿಜಾನೀತೇ ಸರ್ಪಂ ಮಂಡೂಕರಾವಿಣಮ್ ॥ ೧೫

ಮಹಾಭಾಗೇನ ರಾಮೇಣ ಪಾಪಃ ಕರುಣವೇದಿನಾ ।
ಹರೀಣಾಂ ಪ್ರಾಪಿತೋ ರಾಜ್ಯಂ ತ್ವಂ ದುರಾತ್ಮಾ ಮಹಾತ್ಮನಾ ॥ ೧೬

---

ಪಕ್ಷದಲ್ಲಿ ಕೃತಘ್ನನೆನಿಸುತ್ತಾನೆ. ಆ ಕೃತಘ್ನನನ್ನು ಸರ್ವರೂ ಬಹಿಷ್ಕರಿಸಿ ದಂಡಿಸತಕ್ಕದ್ದು (೧೦). ಕೃತಘ್ನನನ್ನು ಕಂಡು ಕ್ರುದ್ಧನಾದ ಬ್ರಹ್ಮನು ಒಂದು ಶ್ಲೋಕವನ್ನು ಹೇಳಿದ್ದಾನೆ. ಸರ್ವಲೋಕಸಮ್ಮಾನ್ಯವಾದ ಅದರ ಅರ್ಥವನ್ನು ಕೇಳು: 'ಬ್ರಹ್ಮಹತ್ಯೆಯನ್ನು ಮಾಡಿದವನಿಗೂ ಸುರಾಪಾಯಿಗೂ ಗೋಹತ್ಯೆ ಮಾಡಿದವನಿಗೂ ವ್ರತಭ್ರಷ್ಟನಿಗೂ ಶಾಸ್ತ್ರವಿಹಿತವಾದ ಪ್ರಾಯಶ್ಚಿತ್ತ ಉಂಟು ಕೃತಘ್ನನಿಗೆ ಮಾತ್ರ ಪ್ರಾಯಶ್ಚಿತವಿಲ್ಲ!' (೧೧-೧೨) ಎಲೈ ವಾನರ, ನೀನು ಅಯೋಗ್ಯ; ಕೃತಘ್ನ; ಅನೃತವಾದಿ! ಶ್ರೀರಾಮನಿಂದ ನಿನ್ನ ಕಾರ್ಯವನ್ನು ಕೈಗೂಡಿಸಿಕೊಂಡು ಕೃತಾರ್ಥನಾಗಿ, ಈಗ ಅವನಿಗೆ ಪ್ರತ್ಯುಪಕಾರಮಾಡದಿದ್ದೀಯೆ! ಏನಯ್ಯಾ ಸುಗ್ರೀವ, ಕೃತಾರ್ಥನಾದ ನಿನಗೆ ಉಪಕಾರವನ್ನು ಮಾಡುವ ಮನಸ್ಸಿದ್ದರೆ, ಸೀತಾದೇವಿಯನ್ನು ಹುಡುಕಲು ಪ್ರಯತ್ನಿಸಬೇಕಲ್ಲವೆ? (೧೩-೧೪). ನೀನು ಗ್ರಾಮ್ಯ ಸುಖದಲ್ಲಿ ತಲ್ಲೀನನಾಗಿ ಕೊಟ್ಟಮಾತನ್ನು ಹುಸಿಯಾಗಿಸಿದ್ದೀಯೆ. ನೀನು

ಕೃತಂ ಚೇನ್ನಾಭಿಜಾನೀಷೇ ರಾಮಸ್ಯಾಕ್ಲಿಷ್ಟಕರ್ಮಣಃ ।
ಸದ್ಯಸ್ತ್ವಂ ನಿಶಿತೈರ್ಬಾಣೈರ್ಹತೋ ದ್ರಕ್ಷ್ಯಸಿ ವಾಲಿನಮ್ ॥ ೧೭

ನ ಚ ಸಂಕುಚಿತಃ ಪಂಥಾ ಯೇನ ವಾಲೀ ಹತೋ ಗತಃ ।
ಸಮಯೇ ತಿಷ್ಠ ಸುಗ್ರೀವ ಮಾ ವಾಲಿಪಥಮನ್ವಗಾಃ ॥ ೧೮

ನ ನೂನಮಿಕ್ಷ್ವಾಕುವರಸ್ಯ ಕಾರ್ಮುಕ-
ಚ್ಯುತಾನ್ ಶರಾನ್ ಪಶ್ಯಸಿ ವಜ್ರಸಂನಿಭಾನ್ ।
ತತಃ ಸುಖಂ ನಾಮ ನಿಷೇವಸೇ ಸುಖೀ
ನ ರಾಮಕಾರ್ಯಂ ಮನಸಾಪ್ಯವೇಕ್ಷಸೇ ॥ ೧೯

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಚತುಸ್ತ್ರಿಂಶಃ ಸರ್ಗಃ

---

ಕಪ್ಪೆಯಂತೆ ವಚಗುಟ್ಟುವ ಸರ್ಪವೆಂದು* ಶ್ರೀರಾಮನಿಗೆ ಗೊತ್ತಾಗದೆ ಹೋಯಿತು! ನಿನ್ನ ಸುಖದುಃಖಗಳನ್ನು ಕೇಳಿ ಕರುಣಾಳುವಾದ ಆ ಮಹಾಭಾಗನು ದುರಾತ್ಮನಾದ ನಿನಗೆ ಕಪಿರಾಜ್ಯವನ್ನು ಕೊಡಿಸಿದನು (೧೪-೧೬). ಶ್ರೀರಾಮನು ಯಾವ ಕ್ಲೇಶವೂ ಇಲ್ಲದೆ ಲೀಲಾಮಾತ್ರವಾಗಿ ಕಾರ್ಯವನ್ನು ಸಾಧಿಸಬಲ್ಲನು. ಅವನ ಉಪಕಾರವು ನಿನಗೆ ನೆನಪಿಲ್ಲವಾದರೆ, ಈಗಲೇ ನೀನು ನಿಶಿತಾಸ್ತ್ರಗಳಿಂದ ಹತನಾಗಿ ವಾಲಿಯನ್ನು ನೋಡುವೆ! (೧೭). ವಾಲಿಯು ಹತನಾಗಿ ಯಾವ ದಾರಿಯನ್ನು ಹಿಡಿದನೋ ಆ ದಾರಿ (ನೀನು ಹಿಡಿಸದಷ್ಟು) ಇಕ್ಕಟ್ಟಾಗಿಲ್ಲ! ಸುಗ್ರೀವ, ಮಾತುಕೊಟ್ಟಂತೆ ನಡೆದುಕೊ! ವಾಲಿಯ ದಾರಿಯನ್ನು ಹಿಡಿಯಬೇಡ (೧೮). ಇಕ್ಷ್ವಾಕು ನಾಥನ ಕೋದಂಡದಿಂದ ಸಿಡಿಲುಗಳಂತೆರಗುವ ಶರಗಳ ರುಚಿಯನ್ನು ನೀನು ಕಂಡಿಲ್ಲ! ಆದ್ದರಿಂದಲೇ ಸುಖವನ್ನನುಭವಿಸುತ್ತ ಆನಂದದಲ್ಲಿ ಮುಳುಗಿದ್ದೀಯೆ. ಶ್ರೀರಾಮನ ಕಾರ್ಯವನ್ನು ಮನಸ್ಸಿಗೂ ತೆಗೆದುಕೊಂಡಿಲ್ಲ!" ಎಂದು ಗದರಿಸಿದನು (೧೯).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಮೂವತ್ತುನಾಲ್ಕನೆಯ ಸರ್ಗ

---

* 'ಸರ್ಪಂ ಮಂಡೂಕರಾವಿಣಮ್' ಇದಕ್ಕೆ ಎರಡು ವಿಧವಾಗಿ ಅರ್ಥವನ್ನು ಹೇಳುತ್ತಾರೆ: ೧. ಸರ್ಪವು ಕಪ್ಪೆಯಂತೆ ಕೂಗುತ್ತಿದ್ದು, ಕಪ್ಪೆಯು ಹತ್ತಿರ ಬಂದಾಗ ಅದನ್ನು ನುಂಗುತ್ತದೆ. ೨. ಸರ್ಪವು ಕಪ್ಪೆಯನ್ನು ಬಾಯಲ್ಲಿ ಹಿಡಿದಾಗ ಕಪ್ಪೆಯು ಕೂಗುತ್ತದೆ. ಅದನ್ನು ಕೇಳಿದ ಜನರು ಆ ಸ್ಥಳದಲ್ಲಿ ಕಪ್ಪೆ ಇದೆಯೆಂದು ಭ್ರಮಿಸುತ್ತಾರೆ.

## ಪಂಚತ್ರಿಂಶಃ ಸರ್ಗಃ

### ತಾರಾಸಮಾಧಾನಮ್

ತಥಾ ಬ್ರುವಾಣಂ ಸೌಮಿತ್ರಿಂ ಪ್ರದೀಪ್ತಮಿವ ತೇಜಸಾ ।
ಅಬ್ರವೀಲ್ಲಕ್ಷ್ಮಣಂ ತಾರಾ ತಾರಾಧಿಪನಿಭಾನನಾ ॥ ೧

ನೈವಂ ಲಕ್ಷ್ಮಣ ವಕ್ತವ್ಯೋ ನಾಯಂ ಪರುಷಮರ್ಹತಿ ।
ಹರೀಣಾಮೀಶ್ವರಃ ಶ್ರೋತುಂ ತವ ವಕ್ತ್ರಾದ್ವಿಶೇಷತಃ ॥ ೨

ನೈವಾಕೃತಜ್ಞಃ ಸುಗ್ರೀವೋ ನ ಶಠೋ ನಾಪಿ ದಾರುಣಃ ।
ನೈವಾನೃತಕಥೋ ವೀರ ನ ಜಿಹ್ಮಶ್ಚ ಕಪೀಶ್ವರಃ ॥ ೩

ಉಪಕಾರಂ ಕೃತಂ ವೀರೋ ನಾಪ್ಯಯಂ ವಿಸ್ಮೃತಃ ಕಪಿಃ ।
ರಾಮೇಣ ವೀರ ಸುಗ್ರೀವೋ ಯದನ್ಯೈರ್ದುಷ್ಕರಂ ರಣೇ ॥ ೪

ರಾಮಪ್ರಸಾದಾತ್ ಕೀರ್ತಿಂ ಚ ಕಪಿರಾಜ್ಯಂ ಚ ಶಾಶ್ವತಮ್ ।
ಪ್ರಾಪ್ತವಾನಿಹ ಸುಗ್ರೀವೋ ರುಮಾಂ ಮಾಂ ಚ ಪರಂತಪ ॥ ೫

### ಸರ್ಗ ೩೫

#### ತಾರೆಯು ಪುನಃ ಲಕ್ಷ್ಮಣನಿಗೆ ಸಮಾಧಾನಹೇಳುವುದು.

ತೇಜಸ್ಸಿನಿಂದ ಜ್ವಲಿಸುತ್ತಿರುವನೋ ಎಂಬಂತಿದ್ದ ಸೌಮಿತ್ರಿಯು ಈ ರೀತಿಯಲ್ಲಿ ಪರುಷವಚನವನ್ನಾಡಲು, ಚಂದ್ರಮುಖಿಯಾದ ತಾರೆಯು ಅವನನ್ನು ನೋಡಿ ಹೀಗೆಂದಳು. "ಲಕ್ಷ್ಮಣ, ನೀನು ಇಂತಹ ಮಾತುಗಳನ್ನಾಡಬಾರದು. ವಾನರೇಶ್ವರನು ಇಷ್ಟು ಕಠೋರವಚನಗಳಿಗೆ ಅರ್ಹನಲ್ಲ. ಅದರಲ್ಲಿಯೂ ನಿನ್ನ ಬಾಯಿಂದ ಈ ಮಾತನ್ನು ಕೇಳಲಾರನು (೧-೨). ಸುಗ್ರೀವನು ಎಂದಿಗೂ ಕೃತಘ್ನನಲ್ಲ, ವಂಚಕನೂ ಅಲ್ಲ, ಕ್ರೂರನೂ ಅಲ್ಲ. ಈ ಕಪೀಶ್ವರನು ಅನೃತವಾದಿಯೂ ಅಲ್ಲ, ಕುಟಿಲಬುದ್ಧಿಯೂ ಅಲ್ಲ. ಈ ವೀರನು ತನಗಾದ ಉಪಕಾರವನ್ನು ಮರೆತೂ ಇಲ್ಲ. ರಣರಂಗದಲ್ಲಿ ಇತರರಿಂದ ಅಶಕ್ಯವಾದ ಕಾರ್ಯವನ್ನು ಮಾಡಿ ಶ್ರೀರಾಮನು ಉಪಕಾರ ಮಾಡಿದ್ದಾನೆಂದು ಇವನಿಗೆ ಗೊತ್ತಿದೆ (೩-೪). ಶ್ರೀರಾಮನ ಅನುಗ್ರಹದಿಂದಲೇ ಸುಗ್ರೀವನಿಗೆ ಕೀರ್ತಿ ಲಭಿಸಿತು. ಶಾಶ್ವತವಾಗಿ ಕಪಿರಾಜ್ಯವು

**ಸುದುಃಖಂ ಶಯಿತಃ ಪೂರ್ವಂ ಪ್ರಾಪ್ಯೇದಂ ಸುಖಮುತ್ತಮಮ್ ।**
**ಪ್ರಾಪ್ತಕಾಲಂ ನ ಜಾನೀತೇ ವಿಶ್ವಾಮಿತ್ರೋ ಯಥಾ ಮುನಿಃ ॥ ೬**

**ಘೃತಾಚ್ಯಾಂ ಕಿಲ ಸಂಸಕ್ತೋ ದಶ ವರ್ಷಾಣಿ ಲಕ್ಷ್ಮಣ ।**
**ಅಹೋಽಮನ್ಯತ ಧರ್ಮಾತ್ಮಾ ವಿಶ್ವಾಮಿತ್ರೋ ಮಹಾಮುನಿಃ ॥ ೭**

**ಸ ಹಿ ಪ್ರಾಪ್ತಂ ನ ಜಾನೀತೇ ಕಾಲಂ ಕಾಲವಿದಾಂ ವರಃ ।**
**ವಿಶ್ವಾಮಿತ್ರೋ ಮಹಾತೇಜಾಃ ಕಿಂ ಪುನರ್ಯಃ ಪೃಥಗ್ಜನಃ ॥ ೮**

**ದೇಹಧರ್ಮಂ ಗತಸ್ಯಾಸ್ಯ ಪರಿಶ್ರಾಂತಸ್ಯ ಲಕ್ಷ್ಮಣ ।**
**ಅವಿತೃಪ್ತಸ್ಯ ಕಾಮೇಷು ಕಾಮಂ ಕ್ಷಂತುಮಿಹಾರ್ಹಸಿ ॥ ೯**

**ನ ಚ ರೋಷವಶಂ ತಾತ ಗಂತುಮರ್ಹಸಿ ಲಕ್ಷ್ಮಣ ।**
**ನಿಶ್ಚಯಾರ್ಥಮವಿಜ್ಞಾಯ ಸಹಸಾ ಪ್ರಾಕೃತೋ ಯಥಾ ॥ ೧೦**

---

ದೊರಕಿತು ರುಮೆಯು ಕೈಸೇರಿದಳು. ನಾನೂ ಲಭಿಸಿದೆನು. ಬಹುಕಾಲದವರೆಗೆ ಕಷ್ಟದಲ್ಲಿದ್ದು ಸುಖನಿದ್ರೆಯನ್ನೂ ಕಾಣದ ಈತನಿಗೆ ಈಗ ಉತ್ತಮಸುಖವು ಪ್ರಾಪ್ತವಾಗಿದೆ. ಸುಖದಲ್ಲಿ ಮೈಮರೆತು, ವಿಶ್ವಾಮಿತ್ರ ಮುನಿಗಳಂತೆ ಕಾಲೋಚಿತವಾದ ಕೃತ್ಯವನ್ನೇ ಅರಿಯದಿದ್ದಾನೆ (೫-೬) ಲಕ್ಷ್ಮಣ, ವಿಶ್ವಾಮಿತ್ರಮಹರ್ಷಿಗಳು ಘೃತಾಚಿಯಲ್ಲಿ * ಅನುರಕ್ತರಾಗಿ, ಹತ್ತುವರ್ಷ ಕಳೆದುಹೋದರೂ ಒಂದು ದಿನವಾಯಿತೆಂದು ತಿಳಿದುಕೊಂಡರಂತೆ! ಧರ್ಮಾತ್ಮರೂ ಕಾಲಜ್ಞರಲ್ಲಿ ಶ್ರೇಷ್ಠರೂ ಮಹಾತೇಜಸ್ವಿಗಳೂ ಆದ ವಿಶ್ವಾಮಿತ್ರಮಹರ್ಷಿಗಳೇ ತಮ್ಮ ಕರ್ತವ್ಯವನ್ನರಿಯದೆ ಮೈಮರೆತಾಗ, ಸಾಮಾನ್ಯಜನರ ಪಾಡೇನು ? (೭-೮). ಬಹುಕಾಲ ಬಳಲಿದ ಸುಗ್ರೀವನು ದೇಹಧರ್ಮದಲ್ಲಿ ತೊಡಗಿ, ಕಾಮಭೋಗದಲ್ಲಿ ತೃಪ್ತನಾಗದೆ ಸ್ವೈರವಾಗಿ ವರ್ತಿಸಿದ್ದಾನೆ. ಅವನ ವರ್ತನೆಯನ್ನು ನೀನು ಕ್ಷಮಿಸಬೇಕು. ಅಪ್ಪಾ-ಲಕ್ಷ್ಮಣ, ಸಾಮಾನ್ಯಮನುಷ್ಯನಂತೆ ನೀನು ದಿಟವನ್ನರಿಯದೆ ಥಟ್ಟನೆ

---

* ಬಾಲಕಾಂಡದಲ್ಲಿ ಮೇನಕೆಯ ವೃತ್ತಾಂತ ಬಂದಿದೆ. ಆದ್ದರಿಂದ ಘೃತಾಚಿಯಲ್ಲಿಯೂ ವಿಶ್ವಾಮಿತ್ರರು ಅನುರಕ್ತರಾಗಿದ್ದ ಇನ್ನೊಂದು ಕಥೆ ಇರಬಹುದೆಂದು ಕೆಲವರು ಊಹಿಸುತ್ತಾರೆ. ಮದ್ಯದ ಅಮಲಿನಲ್ಲಿದ್ದ ತಾರೆಯು ಬಾಯಿದಪ್ಪಿ ಹೀಗೆ ಹೇಳಿದ್ದಾಳೆಂದೂ ಇದು ಕಾವ್ಯಶೋಭೆಯೆಂದೂ ಹೇಳಬಹುದು.

ಸತ್ತ್ವಯುಕ್ತಾ ಹಿ ಪುರುಷಾಸ್ತ್ವದ್ವಿಧಾಃ ಪುರುಷರ್ಷಭ ।
ಅವಿಮೃಶ್ಯ ನ ರೋಷಸ್ಯ ಸಹಸಾ ಯಾಂತಿ ವಶ್ಯತಾಮ್ ॥ ೧೧

ಪ್ರಸಾದಯೇ ತ್ವಾಂ ಧರ್ಮಜ್ಞ ಸುಗ್ರೀವಾರ್ಥೇ ಸಮಾಹಿತಾ ।
ಮಹಾನ್ ರೋಷಸಮುತ್ಪನ್ನಃ ಸಂರಂಭಸ್ತ್ಯಜ್ಯತಾಮಯಮ್ ॥ ೧೨

ರುಮಾಂ ಮಾಂ ಕಪಿರಾಜ್ಯಂ ಚ ಧನಧಾನ್ಯವಸೂನಿ ಚ ।
ರಾಮಪ್ರಿಯಾರ್ಥಂ ಸುಗ್ರಿವಸ್ತ್ಯಜೇದಿತಿ ಮತಿರ್ಮಮ ॥ ೧೩

ಸಮಾನೇಷ್ಯತಿ ಸುಗ್ರೀವಃ ಸೀತಯಾ ಸಹ ರಾಘವಮ್ ।
ಶಶಾಂಕಮಿವ ರೋಹಿಣ್ಯಾ ನಿಹತ್ವಾ ರಾವಣಂ ರಣೇ ॥ ೧೪

ಶತಕೋಟಿಸಹಸ್ರಾಣಿ ಲಂಕಾಯಾಂ ಕಿಲ ರಕ್ಷಸಾಮ್ ।
ಅಯುತಾನಿ ಚ ಷಟ್ತ್ರಿಂಶತ್ಸಹಸ್ರಾಣಿ ಶತಾನಿ ಚ ॥ ೧೫

ಅಹತ್ವಾ ತಾಂಶ್ಚ ದುರ್ಧರ್ಷಾನ್ ರಾಕ್ಷಸಾನ್ ಕಾಮರೂಪಿಣಃ ।
ನ ಶಕ್ಯೋ ರಾವಣೋ ಹಂತುಂ ಯೇನ ಸಾ ಮೈಥಿಲೀ ಹೃತಾ ॥ ೧೬

---

ಕೋಪವಶನಾಗುವುದು ಸರಿಯಲ್ಲ (೯-೧೦). ಸತ್ತ್ವಶಾಲಿಗಳಾದ ನಿನ್ನಂತಹ ಪುರುಷರು, ಹೇ ಪುರುಷೋತ್ತಮ, ಯಾವುದನ್ನೂ ವಿಮರ್ಶಿಸದೆ ಇದ್ದಕ್ಕಿದ್ದಂತೆ ಸಿಟ್ಟಿಗೆ ಒಳಗಾಗಬಾರದು. ನೀನು ಧರ್ಮವನ್ನು ಬಲ್ಲವನು. ಸುಗ್ರೀವನಿಗೋಸ್ಕರ ಒಂದೇ ಮನಸ್ಸಿನಿಂದ ಬೇಡಿಕೊಳ್ಳುತ್ತೇನೆ; ಪ್ರಸನ್ನನಾಗು. ಸಿಟ್ಟಿನಿಂದಾದ ಈ ಮಹೋದ್ವೇಗವನ್ನು ಪರಿತ್ಯಜಿಸು (೧೧-೧೨). ಶ್ರೀರಾಮನಿಗೆ ಪ್ರಿಯವಾಗುವುದಾದರೆ, ಸುಗ್ರೀವನು ರುಮೆಯನ್ನೂ ನನ್ನನ್ನೂ ಕಪಿರಾಜ್ಯವನ್ನೂ ಧನಧಾನ್ಯರತ್ನಗಳನ್ನೂ ಸಹ ತ್ಯಜಿಸಲು ಸಿದ್ಧನೆಂದು ನಾನು ತಿಳಿದಿದ್ದೇನೆ. ಲಕ್ಷ್ಮಣ (ಇದನ್ನು ನಂಬು) : ಸುಗ್ರೀವನು ರಣಾಂಗಣದಲ್ಲಿ ರಾವಣನನ್ನು ಸಂಹರಿಸಿ ಸೀತಾದೇವಿಯನ್ನು ಶ್ರೀರಾಮನಿಗೆ ತಂದೊಪ್ಪಿಸುವನು. ರೋಹಿಣಿಯನ್ನು ಚಂದ್ರನೊಡನೆ ಸೇರಿಸುವಂತೆ ಸೇರಿಸುವನು (೧೩-೧೪). ರಾವಣನ ಲಂಕೆಯೊಳಗೆ ಕೋಟಿಕೋಟಿಸಂಖ್ಯೆಯಲ್ಲಿ * ರಾಕ್ಷಸರಿದ್ದಾರೆ. ಮಹಾಪರಾಕ್ರಮಿಗಳೂ ಕಾಮರೂಪಿಗಳೂ ಆದ ಆ ರಾಕ್ಷಸರನ್ನು ಕೊಲ್ಲದೆ, ರಾವಣನನ್ನು ಸಂಹರಿಸುವುದು ಶಕ್ಯವಿಲ್ಲ.

---

* ಶ್ಲೋಕದಲ್ಲಿ ಶ್ರುತವಾದ ಸಂಖ್ಯೆ : ಒಂದು ಲಕ್ಷಕೋಟಿ, ಮೂವತ್ತಾರು ದಶಸಹಸ್ರ, ಮೂವತ್ತಾರು ಸಹಸ್ರ ಮತ್ತು ಮೂವತ್ತಾರು ನೂರು.

ತೇ ನ ಶಕ್ಯಾ ರಣೇ ಹಂತುಮಸಹಾಯೇನ ಲಕ್ಷ್ಮಣ ।
ರಾವಣಃ ಕ್ರೂರಕರ್ಮಾ ಚ ಸುಗ್ರೀವೇಣ ವಿಶೇಷತಃ ॥ ೧೭

ಏವಮಾಖ್ಯಾತವಾನ್ ವಾಲೀ ಸ ಹ್ಯಭಿಜ್ಞೋ ಹರೀಶ್ವರಃ ।
ಆಗಮಸ್ತು ನ ಮೇ ವ್ಯಕ್ತಃ ಶ್ರವಣಾತ್ತದ್ಬ್ರವೀಮ್ಯಹಮ್ ॥ ೧೮

ತ್ವತ್ಸಹಾಯನಿಮಿತ್ತಂ ವೈ ಪ್ರೇಷಿತಾ ಹರಿಪುಂಗವಾಃ ।
ಆನೇತುಂ ವಾನರಾನ್ ಯುದ್ಧೇ ಸುಬಹೂನ್ ಹರಿಯೂಥಪಾನ್ ॥

ತಾಂಶ್ಚ ಪ್ರತೀಕ್ಷಮಾಣೋಽಯಂ ವಿಕ್ರಾಂತಾನ್ ಸುಮಹಾಬಲಾನ್ ।
ರಾಘವಸ್ಯಾರ್ಥಸಿದ್ಧ್ಯರ್ಥಂ ನ ನಿರ್ಯಾತಿ ಹರೀಶ್ವರಃ ॥ ೨೦

ಕೃತಾತ್ರ ಸಂಸ್ಥಾ ಸೌಮಿತ್ರೇ ಸುಗ್ರೀವೇಣ ಯಥಾ ಪುರಾ ।
ಅದ್ಯ ತೈರ್ವಾನರೈಃ ಸರ್ವೈರಾಗಂತವ್ಯಂ ಮಹಾಬಲೈಃ ॥ ೨೧

ಋಕ್ಷಕೋಟಿಸಹಸ್ರಾಣಿ ಗೋಲಾಂಗೂಲಶತಾನಿ ಚ ।
ಅದ್ಯ ತ್ವಾಮುಪಯಾಸ್ಯಂತಿ ಜಹಿ ಕೋಪಮರಿಂದಮ ॥ ೨೨

---

ರಾವಣನಲ್ಲವೆ ಮೈಥಿಲಿಯನ್ನಪಹರಿಸಿದವನು ?(೧೫-೧೭). ಆ ರಾಕ್ಷಸರನ್ನು ಯುದ್ಧದಲ್ಲಿ ಕೊಲ್ಲಲು ಸೇನಾಸಹಾಯವಿಲ್ಲದೆ ಸುಗ್ರೀವನೊಬ್ಬನಿಂದ ಸಾಧ್ಯವಾಗದು ಆದರಲ್ಲಿಯೂ ಕ್ರೂರಕರ್ಮಿಯಾದ ರಾವಣನನ್ನು ಕೊಲ್ಲುವುದು ಕಷ್ಟ. ಆ ರಾಕ್ಷಸರ ವಿಷಯವನ್ನು ವಾಲಿಯು ನನಗೆ ಹೇಳಿದ್ದನು. ಆ ಕಪೀಶ್ವರನಿಗೆ ಅವರ ಪೂರ್ವೋತ್ತರಗಳೆಲ್ಲವೂ ತಿಳಿದಿದ್ದವು. ಸ್ಪಷ್ಟವಾದ ವಿವರವು ನನಗೆ ತಿಳಿಯದು ಕೇಳಿದ ಮಾತನ್ನು ಹೇಳುತ್ತಿದ್ದೇನೆ (೧೭-೧೮). ನಿಮ್ಮ ಸಹಾಯಾರ್ಥವಾಗಿ ಸುಗ್ರೀವನು ಕಪಿನಾಯಕರನ್ನು ಕಳಿಸಿದ್ದಾನೆ. ಬಹುಸಂಖ್ಯೆಯಲ್ಲಿ ವಾನರರನ್ನೂ ವಾನರಸೇನಾನಿಗಳನ್ನೂ ಕರೆತರಲು ಅವರಿಗೆ ಆಜ್ಞಾಪಿಸಿದ್ದಾನೆ. ಈ ಕಪೀಶ್ವರನು ಶ್ರೀರಾಮನ ಕಾರ್ಯಸಿದ್ಧಿಗಾಗಿ ಪರಾಕ್ರಮಿಗಳಾದ ಕಪಿವೀರರ ಬರವನ್ನು ಕಾಯುತ್ತಿದ್ದಾನೆ ಅವರ ನಿರೀಕ್ಷಣೆಯಲ್ಲಿ ಹೊರಗೆ ಬರದಿದ್ದಾನೆ (೧೯-೨೦). ಸೌಮಿತ್ರಿ, ಸುಗ್ರೀವನು ಗೊತ್ತುಮಾಡಿದ ವ್ಯವಸ್ಥೆಯ ಪ್ರಕಾರ, ಕಪಿವೀರರೆಲ್ಲರೂ ಈ ದಿನವೇ ಇಲ್ಲಿಗೆ ಬರಬೇಕಾಗಿದೆ. ಪರಾಕ್ರಮಿಗಳಾದ ಭಲ್ಲೂಕಗಳೂ ಗೋಲಾಂಗೂಲಗಳೂ ಕಪಿಗಳೂ ಕೋಟಿಕೋಟಿಸಂಖ್ಯೆಯಲ್ಲಿ ಸೇವೆಗಾಗಿ ನಿನ್ನ ಆಗಮಿಸುವರು.

ಕೋಟ್ಯೋಽನೇಕಾಸ್ತು ಕಾಕುತ್ಸ್ಥ ಕಪೀನಾಂ ದೀಪ್ತತೇಜಸಾವ್ ॥

ತವ ಹಿ ಮುಖಮಿದಂ ನಿರೀಕ್ಷ್ಯ ಕೋಪಾತ್
ಕ್ಷತಜನಿಭೇ ನಯನೇ ನಿರೀಕ್ಷ್ಯಮಾಣಾಃ ।
ಹರಿವರವನಿತಾ ನ ಯಾಂತಿ ಶಾಂತಿಂ
ಪ್ರಥಮಭಯಸ್ಯ ಹಿ ಶಂಕಿತಾಃ ಸ್ಮ ಸರ್ವಾಃ ॥ ೨೩

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಪಂಚತ್ರಿಂಶಃ ಸರ್ಗಃ

---

## ಷಟ್‌ತ್ರಿಂಶಃ ಸರ್ಗಃ

### ಸುಗ್ರೀವಲಕ್ಷ್ಮಣಾನುರೋಧಃ

ಇತ್ಯುಕ್ತಸ್ತಾರಯಾ ವಾಕ್ಯಂ ಪ್ರಶ್ರಿತಂ ಧರ್ಮಸಂಹಿತಮ್ ।
ಮೃದುಸ್ವಭಾವಃ ಸೌಮಿತ್ರಿಃ ಪ್ರತಿಜಗ್ರಾಹ ತದ್ವಚಃ ॥ ೧

ತಸ್ಮಿನ್ ಪ್ರತಿಗೃಹೀತೇ ತು ವಾಕ್ಯೇ ಹರಿಗಣೇಶ್ವರಃ ।
ಲಕ್ಷ್ಮಣಾತ್ ಸುಮಹತ್ತ್ರಾಸಂ ವಸ್ತ್ರಂ ಕ್ಲಿನ್ನಮಿವಾತ್ಯಜತ್ ॥ ೨

---

ಕೋಪವನ್ನು ಬಿಡು (೨೧-೨೨). ಕಪಿರಾಜನ ಪತ್ನಿಯರಾದ ನಮ್ಮೆಲ್ಲರಿಗೂ ನಿನ್ನ ಮುಖವನ್ನು ನೋಡಿ ಮನಶ್ಶಾಂತಿಯು ಕಲಕಿಹೋಗಿದೆ ರೋಷದಿಂದ ರಕ್ತವಾದ ನಿನ್ನ ನೇತ್ರಗಳನ್ನೀಕ್ಷಿಸಿ ನಮ್ಮೆಲ್ಲರಿಗೂ ಹಿಂದಿನಸಲ ಆದಂತೆ ಏನಾಗಿಬಿಡುವುದೋ ಎಂಬ ಹೆದರಿಕೆ ಆವರಿಸಿದೆ" ಎಂದು ನುಡಿದಳು (೨೩).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಮೂವತ್ತೈದನೆಯ ಸರ್ಗ

---

## ಸರ್ಗ ೩೬

### ಸುಗ್ರೀವಲಕ್ಷ್ಮಣರು ಸ್ನೇಹಪೂರ್ವಕವಾಗಿ ಸಂಭಾಷಿಸುವುದು.

ಹೀಗೆ ತಾರೆಯು ವಿನಯಪೂರ್ವಕವಾಗಿ ಧರ್ಮಯುಕ್ತವಾದ ಮಾತನ್ನಾಡಲು, ಸೌಮಿತ್ರಿಗೆ ಅದು ಯುಕ್ತವಾಗಿ ತೋರಿತು ಅವನು ತಾರೆಯ ಮಾತನ್ನು ಅಂಗೀಕರಿಸಿ ಪ್ರಸನ್ನನಾದನು. ಆಗ ಕಪೀಶ್ವರನಿಗೆ

ತತಃ ಕಂಠಗತಂ ಮಾಲ್ಯಂ ಚಿತ್ರಂ ಬಹುಗುಣಂ ಮಹತ್ ।
ಚಿಚ್ಛೇದ ವಿಮದಶ್ಚಾಸೀತ್ ಸುಗ್ರೀವೋ ವಾನರೇಶ್ವರಃ ॥ ೩

ಸ ಲಕ್ಷ್ಮಣಂ ಭೀಮಬಲಂ ಸರ್ವವಾನರಸತ್ತಮಃ ।
ಅಬ್ರವೀತ್ ಪ್ರಶ್ರಿತಂ ವಾಕ್ಯಂ ಸುಗ್ರೀವಃ ಸಂಪ್ರಹರ್ಷಯನ್ ॥ ೪

ಪ್ರನಷ್ಟಾ ಶ್ರೀಶ್ಚ ಕೀರ್ತಿಶ್ಚ ಕಪಿರಾಜ್ಯಂ ಚ ಶಾಶ್ವತಮ್ ।
ರಾಮಪ್ರಸಾದಾತ್ ಸೌಮಿತ್ರೇ ಪುನಃ ಪ್ರಾಪ್ತಮಿದಂ ಮಯಾ ॥ ೫

ಕಃ ಶಕ್ತಸ್ತಸ್ಯ ದೇವಸ್ಯ ವಿಖ್ಯಾತಸ್ಯ ಸ್ವಕರ್ಮಣಾ ।
ತಾದೃಶಂ ವಿಕ್ರಮಂ ವೀರ ಪ್ರತಿಕರ್ತುಮರಿಂದಮ ॥ ೬

ಸೀತಾಂ ಪ್ರಾಪ್ಸ್ಯತಿ ಧರ್ಮಾತ್ಮಾ ವಧಿಷ್ಯತಿ ಚ ರಾವಣಮ್ ।
ಸಹಾಯಮಾತ್ರೇಣ ಮಯಾ ರಾಘವಃ ಸ್ವೇನ ತೇಜಸಾ ॥ ೭

ಸಹಾಯಕೃತ್ಯಂ ಕಿಂ ತಸ್ಯ ಯೇನ ಸಪ್ತ ಮಹಾದ್ರುಮಾಃ ।
ಶೈಲಶ್ಚ ವಸುಧಾ ಚೈವ ಬಾಣೇನೈಕೇನ ದಾರಿತಾಃ ॥ ೮

---

ಲಕ್ಷ್ಮಣನಿಂದಾದ ಭಯವು ಸರಿಯಿತು ಮೈಮೇಲೆ ಒದ್ದೆಯಬಟ್ಟೆಯಂತಿದ್ದ ದೊಡ್ಡ ಅಂಜಿಕೆಯೂ ದೂರವಾಯಿತು (೧-೨). ಆ ಸುಗ್ರೀವನು ತನ್ನ ಕೊರಳಲ್ಲಿದ್ದ ಚಿತ್ರವರ್ಣದ ದಿವ್ಯ ಪುಷ್ಪಮಾಲೆಯನ್ನು ಕಿತ್ತೆಸೆದನು. ಮದ್ಯದ ಅಮಲು ಇಳಿಯಿತು ಆ ವಾನರೋತ್ತಮನು ಭೀಮಬಲನಾದ ಲಕ್ಷ್ಮಣನನ್ನು ಸವಿನಯವಚನಗಳಿಂದ ಸಂತೋಷಪಡಿಸುತ್ತ ಇಂತೆಂದನು (೩-೪) : "ಸೌಮಿತ್ರಿ, ಶ್ರೀರಾಮನ ಅನುಗ್ರದಿಂದ ಇದೆಲ್ಲವೂ ನನಗೆ ಲಭಿಸಿದೆ. ಕೈದಪ್ಪಿ ಹೋದ ಐಶ್ವರ್ಯ, ಕೀರ್ತಿ, ಕಪಿರಾಜ್ಯ ಇವೆಲ್ಲವೂ ಶಾಶ್ವತವಾಗಿ ನನ್ನ ಕೈಸೇರಿದವು ತನ್ನ ಕೃತಿಯಿಂದ ಲೋಕವಿಖ್ಯಾತನಾಗಿರುವ ಆ ಪ್ರಭುವು ನನಗಾಗಿ ತೋರಿದ ಪರಾಕ್ರಮಕ್ಕೆ ತಕ್ಕ ಪ್ರತ್ಯುಪಕಾರವನ್ನು ಮಾಡಲು ಯಾರಿಗೆ ಸಾಧ್ಯವಾದೀತು ? (೫-೬). ಲಕ್ಷ್ಮಣ, ನಾನು ನೆಪಮಾತ್ರಕ್ಕೆ ಸಹಾಯಕನಾದರೆ ಸಾಕು ; ಧರ್ಮಾತ್ಮನಾದ ರಾಘವನು ತನ್ನ ತೇಜೋಬಲದಿಂದಲೇ ಸೀತಾದೇವಿಯನ್ನು ಪಡೆಯುವನು, ರಾವಣನನ್ನು ಸಂಹರಿಸುವನು (೭). ಯಾವ ವೀರನು ಒಂದೇ ಬಾಣದಿಂದ ಸಪ್ತಮಹಾಸಾಲವೃಕ್ಷಗಳನ್ನು ಭೇದಿಸಿ, ಬೆಟ್ಟವನ್ನು ಕೊರೆದು ಸೀಳಿದನೋ ಆ ಮಹಾಪುರುಷನಿಗೆ

ಧನುರ್ವಿಸ್ಫಾರಯಾಣಸ್ಯ ಯಸ್ಯ ಶಬ್ದೇನ ಲಕ್ಷ್ಮಣ ।
ಸಶೈಲಾ ಕಂಪಿತಾ ಭೂಮಿಃ ಸಹಾಯೈಸ್ತಸ್ಯ ಕಿಂ ನು ವೈ ॥ ೯

ಅನುಯಾತ್ರಾಂ ನರೇಂದ್ರಸ್ಯ ಕರಿಷ್ಯೇಽಹಂ ನರರ್ಷಭ ।
ಗಚ್ಛತೋ ರಾವಣಂ ಹಂತುಂ ವೈರಿಣಂ ಸಪುರಃಸರಮ್ ॥ ೧೦

ಯದಿ ಕಿಂಚಿದತಿಕ್ರಾಂತಂ ವಿಶ್ವಾಸಾತ್ ಪ್ರಣಯೇನ ವಾ ।
ಪ್ರೇಷ್ಯಸ್ಯ ಕ್ಷಮಿತವ್ಯಂ ಮೇ ನ ಕಶ್ಚಿನ್ನಾಪರಾಧ್ಯತಿ ॥ ೧೧

ಇತಿ ತಸ್ಯ ಬ್ರುವಾಣಸ್ಯ ಸುಗ್ರೀವಸ್ಯ ಮಹಾತ್ಮನಃ ।
ಅಭವಲ್ಲಕ್ಷ್ಮಣಃ ಪ್ರೀತಃ ಪ್ರೇಮ್ಣಾ ಚೈನಮುವಾಚ ಹ ॥ ೧೨

ಸರ್ವಥಾ ಹಿ ಮಮ ಭ್ರಾತಾ ಸನಾಥೋ ವಾನರೇಶ್ವರ ।
ತ್ವಯಾ ನಾಥೇನ ಸುಗ್ರೀವ ಪ್ರಶ್ರಿತೇನ ವಿಶೇಷತಃ ॥ ೧೩

ಯಸ್ತೇ ಪ್ರಭಾವಃ ಸುಗ್ರೀವ ಯಚ್ಚ ತೇ ಶೌಚಮಾರ್ಜವಮ್ ।
ಅರ್ಹಸ್ತ್ವಂ ಕಪಿರಾಜ್ಯಸ್ಯ ಶ್ರಿಯಂ ಭೋಕ್ತುಮನುತ್ತಮಾಮ್ ॥ ೧೪

---

ಯಾರ ಸಹಾಯದಿಂದ ಏನಾಗಬೇಕಾಗಿದೆ? (೮) ಯಾರ ಧನುಸ್ಸಿನ ಝಂಕಾರಶಬ್ದದಿಂದ ಪರ್ವತಸಹಿತವಾಗಿ ಭೂಮಂಡಲವೇ ನಡುಗಿ ಹೋಯಿತೋ ಆ ವೀರಾಗ್ರಣಿಗೆ, ಲಕ್ಷ್ಮಣ, ಸಹಾಯಕರಿಂದ ಏನಾಗ ಬೇಕಾಗಿದೆ? ವೈರಿಯಾದ ರಾವಣನನ್ನು ಅವನ ಪರಿವಾರಸಮೇತವಾಗಿ ವಧಿಸುವುದಕ್ಕಾಗಿ ಶ್ರೀರಾಮನು ವಿಜಯಯಾತ್ರೆಯನ್ನು ಕೈಗೊಳ್ಳುವನು ನಾನು ಆ ನರೇಂದ್ರನಿಗೆ ಹಿಮ್ಮೇಳವಾಗಿ ಹೋಗುವೆನು! (೯-೧೦). ಲಕ್ಷ್ಮಣ, ಶ್ರೀರಾಮನಲ್ಲಿ ನನಗಿದ್ದ ನಂಬಿಕೆಯಿಂದಲೋ ಸ್ನೇಹದ ಸಲಿಗೆ ಯಿಂದಲೋ ನಾನು ತಪ್ಪುಮಾಡಿದ್ದರೆ, ಈ ಭೃತ್ಯನನ್ನು ಕ್ಷಮಿಸಬೇಕು. ತಪ್ಪುಮಾಡದೆ ಇರತಕ್ಕವನು ಯಾರೂ ಇಲ್ಲ" ಎಂದನು. ಮಹಾಭಾಗನಾದ ಸುಗ್ರೀವನು ಹೀಗೆ ನುಡಿಯುತ್ತಿರಲಾಗಿ ಲಕ್ಷ್ಮಣನು ಸಂಪ್ರೀತನಾದನು (೧೧-೧೨). ಅವನು ಪ್ರೇಮದಿಂದ "ವಾನರೇಂದ್ರ-ಸುಗ್ರೀವ, ನೀನು ನಮಗೆ ವಿನೀತನಾದ ರಕ್ಷಕನಾಗಿರುವೆ! ಒಟ್ಟಿನಲ್ಲಿ ಅಣ್ಣನಿಗೆ ರಕ್ಷಕನೊಬ್ಬನು ದೊರಕಿದಂತಾಗಿದೆ. ನಿನ್ನ ಪ್ರಭಾವ, ನಿನ್ನ ಮನಶ್ಶುದ್ಧಿ, ನಿನ್ನ ಋಜು ಬುದ್ಧಿ—ಇವುಗಳಿಂದ ಸುಗ್ರೀವ, ನೀನು ವಾನರರಾಜ್ಯದ ಸರ್ವೋತ್ತಮ ಸಂಪತ್ತನ್ನು ಭೋಗಿಸಲು ಅರ್ಹನೇ ಹೌದು (೧೩-೧೪). ಪ್ರತಾಪಶಾಲಿ

ಸಹಾಯೇನ ಚ ಸುಗ್ರೀವ ತ್ವಯಾ ರಾಮಃ ಪ್ರತಾಪವಾನ್ ।
ವಧಿಷ್ಯತಿ ರಣೇ ಶತ್ರೂನಚಿರಾನ್ನಾತ್ರ ಸಂಶಯಃ ॥ ೧೫

ಧರ್ಮಜ್ಞಸ್ಯ ಕೃತಜ್ಞಸ್ಯ ಸಂಗ್ರಾಮೇಷ್ವನಿವರ್ತಿನಃ ।
ಉಪಪನ್ನಂ ಚ ಯುಕ್ತಂ ಚ ಸುಗ್ರೀವ ತವ ಭಾಷಿತಮ್ ॥ ೧೬

ದೋಷಜ್ಞಃ ಸತಿ ಸಾಮರ್ಥ್ಯೇ ಕೋಽನ್ಯೋ ಭಾಷಿತುಮರ್ಹತಿ ।
ವರ್ಜಯಿತ್ವಾ ಮಮ ಜ್ಯೇಷ್ಠಂ ತ್ವಾಂ ಚ ವಾನರಸತ್ತಮ ॥ ೧೭

ಸದೃಶಶ್ಚಾಸಿ ರಾಮಸ್ಯ ವಿಕ್ರಮೇಣ ಬಲೇನ ಚ ।
ಸಹಾಯೋ ದೈವತೈರ್ದತ್ತಶ್ಚಿರಾಯ ಹರಿಪುಂಗವ ॥ ೧೮

ಕಿಂ ತು ಶೀಘ್ರಮಿತೋ ವೀರ ನಿಷ್ಕ್ರಾಮ ತ್ವಂ ಮಯಾ ಸಹ ।
ಸಾಂತ್ವಯಸ್ವ ವಯಸ್ಯಂ ತ್ವಂ ಭಾರ್ಯಾಹರಣಕರ್ಶಿತಮ್ ॥ ೧೯

ಯಚ್ಚ ಶೋಕಾಭಿಭೂತಸ್ಯ ಶ್ರುತ್ವಾ ರಾಮಸ್ಯ ಭಾಷಿತಮ್ ।
ಮಯಾ ತ್ವಂ ಪರುಷಾಣ್ಯುಕ್ತಸ್ತಚ್ಚ ತ್ವಂ ಕ್ಷಂತುಮರ್ಹಸಿ ॥ ೨೦

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಷಟ್‌ತ್ರಿಂಶಃ ಸರ್ಗಃ

---

ಯಾದ ಶ್ರೀರಾಮನು ನಿನ್ನ ನೆರವಿನಿಂದ ನಿಸ್ಸಂದೇಹವಾಗಿ ನಿಖಿಲಶತ್ರುಗಳನ್ನೂ ನಾಶಮಾಡುವನು. ಧರ್ಮಜ್ಞನಿಗೂ ಕೃತಜ್ಞನಿಗೂ ಸಂಗ್ರಾಮಭೂಮಿಯಿಂದ ಹಿಂಜರಿಯದ ಧೀರನಿಗೂ ಯುಕ್ತವಾದ ನುಡಿ ನಿನ್ನದು (೧೫-೧೬). ಲೋಕೋತ್ತರವಾದ ಸಾಮರ್ಥ್ಯವಿದ್ದರೂ ತಮ್ಮ ತಪ್ಪನ್ನರಿತುಕೊಂಡು ಅದನ್ನು ಒಪ್ಪಿಕೊಳ್ಳುವವರು ಲೋಕದಲ್ಲಿ ಯಾರಿದ್ದಾರೆ? ವಾನರೋತ್ತಮ, ನನ್ನ ಅಣ್ಣನೊಬ್ಬ, ನೀನೊಬ್ಬ-ನಿಮ್ಮಿರ್ವರನ್ನು ಬಿಟ್ಟು ಇನ್ನು ಯಾರಿದ್ದಾರೆ? (೧೭) ಬಲಪರಾಕ್ರಮಗಳಲ್ಲಿ ನೀನು ಶ್ರೀರಾಮನಿಗೆ ಸಮಾನನಾಗಿದ್ದೀಯೆ. ಬಹುಕಾಲದಮೇಲೆ ದೇವತಾನುಗ್ರದಿಂದ ನಿನ್ನ ಸಹಾಯವು ನಮಗೆ ಲಭಿಸಿತು. ವಾನರೇಂದ್ರ, ಇನ್ನು ತಡಮಾಡದೆ ನನ್ನೊಡನೆ ಹೊರಡು. ಭಾರ್ಯಾಪಹಾರದಿಂದ ಶೋಕಸಂತಪ್ತನಾಗಿರುವ ನಿನ್ನ ಮಿತ್ರನನ್ನು ಸಂತೈಸು (೧೮-೧೯). ದುಃಖದಲ್ಲಿ ಮುಳುಗಿರುವ ಶ್ರೀರಾಮನ ದೀನೋಕ್ತಿಯನ್ನು ಕೇಳಿ ನನಗೆ ಸಂಕಟವಾದ್ದರಿಂದ, ಸುಗ್ರೀವ, ಏನೋ ಕಠೋರವಾದ ಮಾತುಗಳನ್ನು ಆಡಿಬಿಟ್ಟೆನು. ಅದನ್ನು ಮನಸ್ಸಿನಲ್ಲಿಡದೆ ಕ್ಷಮಿಸು" ಎಂದು ನುಡಿದನು (೨೦).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಮೂವತ್ತಾರನೆಯ ಸರ್ಗ

## ಸಪ್ತತ್ರಿಂಶಃ ಸರ್ಗಃ

### ಕಪಿಸೇನಾಸಮಾನಯನಮ್

ಏವಮುಕ್ತಸ್ತು ಸುಗ್ರೀವೋ ಲಕ್ಷ್ಮಣೇನ ಮಹಾತ್ಮನಾ ।
ಹನುಮಂತಂ ಸ್ಥಿತಂ ಪಾರ್ಶ್ವೇ ಸಚಿವಂ ತ್ವಿದಮಬ್ರವೀತ್ ॥ ೧

ಮಹೇಂದ್ರಹಿಮವದ್ವಿಂಧ್ಯಕೈಲಾಸಶಿಖರೇಷು ಚ ।
ಮಂದರೇ ಪಾಂಡುಶಿಖರೇ ಪಂಚಶೈಲೇಷು ಯೇ ಸ್ಥಿತಾಃ ॥ ೨

ತರುಣಾದಿತ್ಯವರ್ಣೇಷು ಭ್ರಾಜಮಾನೇಷು ಸರ್ವತಃ ।
ಪರ್ವತೇಷು ಸಮುದ್ರಾಂತೇ ಪಶ್ಚಿಮಾಯಾಂ ತು ಯೇ ದಿಶಿ ॥ ೩

ಆದಿತ್ಯಭವನೇ ಚೈವ ಗಿರೌ ಸಂಧ್ಯಾಭ್ರಸಂನಿಭೇ ।
ಪದ್ಮಾಚಲವನಂ ಭೀಮಾಃ ಸಂಶ್ರಿತಾ ಹರಿಪುಂಗವಾಃ ॥ ೪

ಅಂಜನಾಂಬುದಸಂಕಾಶಾಃ ಕುಂಜರಪ್ರತಿಮೌಜಸಃ ।
ಅಂಜನೇ ಪರ್ವತೇ ಚೈವ ಯೇ ವಸಂತಿ ಪ್ಲವಂಗಮಾಃ ॥ ೫

## ಸರ್ಗ ೩೭

### ಸುಗ್ರೀವನು ಸಮಸ್ತವಾನರಸೇನೆಯನ್ನು ಕರೆಸುವುದು.

ಮಹಾತ್ಮನಾದ ಲಕ್ಷ್ಮಣನು ಈ ಪ್ರಕಾರವಾಗಿ ನುಡಿಯಲು, ಸುಗ್ರೀವನು ಬಳಿಯಲ್ಲಿದ್ದ ಸಚಿವನಾದ ಹನುಮಂತನನ್ನು ನೋಡಿ ಹೀಗೆಂದನು : “ಆಂಜನೇಯ, ನನ್ನ ಅಧೀನದಲ್ಲಿರುವ ಸಕಲ ವಾನರಬಲ ವನ್ನೂ ಬರಮಾಡು. ಮಹೇಂದ್ರ, ಹಿಮವಂತ, ವಿಂಧ್ಯ, ಕೈಲಾಸ ಮತ್ತು ಬಿಳಿಯ ಶಿಖರಗಳಿಂದೊಪ್ಪುವ ಮಂದರ—ಈ ಐದು ಪರ್ವತಗಳಲ್ಲಿ ವಾಸಿಸುವ ಎಲ್ಲ ಕಪಿಗಳೂ ಆಗಮಿಸಲಿ (೧-೨). ಪಶ್ಚಿಮದಿಕ್ಕಿನ ಸಮುದ್ರತೀರದಲ್ಲಿ ಬಾಲಾರ್ಕವರ್ಣದಿಂದ ಪ್ರಕಾಶಿಸುವ ಪರ್ವತಗಳಲ್ಲಿಯೂ, ಸಂಜೆಯ ಮೋಡ ದಂತೆ ರಂಜಿಸುವ ಅಸ್ತಗಿರಿಯಲ್ಲಿರುವ ಪದ್ಮಾಚಲವನದಲ್ಲಿಯೂ ನೆಲೆಸಿರುವ ಸಕಲಕಪಿಗಳೂ ಬರತಕ್ಕದ್ದು (೩-೪). ಕಾಡಿಗೆಯಂತೆಯೂ ಮೇಘ ದಂತೆಯೂ ಕಪ್ಪುಬಣ್ಣದ ಕಪಿಗಳು ಅಂಜನಗಿರಿಯಲ್ಲಿದ್ದಾರೆ. ಅವರೆಲ್ಲರೂ

ಮಹಾಶೈಲಗುಹಾವಾಸಾ ವಾನರಾಃ ಕನಕಪ್ರಭಾಃ ।
ಮೇರುಪಾರ್ಶ್ವಗತಾಶ್ಚೈವ ಯೇ ಧೂಮ್ರಗಿರಿಸಂಶ್ರಿತಾಃ ॥ ೬

ತರುಣಾದಿತ್ಯವರ್ಣಾಶ್ಚ ಪರ್ವತೇ ಯೇ ಮಹಾರುಣೇ ।
ಪಿಬಂತೋ ಮಧು ಮೈರೇಯಂ ಭೀಮವೇಗಾಃ ಪ್ಲವಂಗಮಾಃ ॥ ೭

ವನೇಷು ಚ ಸುರಮ್ಯೇಷು ಸುಗಂಧಿಷು ಮಹತ್ಸು ಚ ।
ತಾಪಸಾನಾಂ ಚ ರಮ್ಯೇಷು ವನಾಂತೇಷು ಸಮಂತತಃ ॥ ೮

ತಾಂಸ್ತಾನ್ ಸಮಾನಯ ಕ್ಷಿಪ್ರಂ ಪೃಥಿವ್ಯಾಂ ಸರ್ವವಾನರಾನ್ ।
ಸಾಮದಾನಾದಿಭಿಃ ಸರ್ವೈರಾಶು ಪ್ರೇಷಯ ವಾನರಾನ್ ॥ ೯

ಪ್ರೇಷಿತಾಃ ಪ್ರಥಮಂ ಯೇ ಚ ಮಯಾ ದೂತಾ ಮಹಾಜವಾಃ ।
ತ್ವರಣಾರ್ಥಂ ತು ಭೂಯಸ್ತ್ವಂ ಹರೀನ್ ಸಂಪ್ರೇಷಯಾಪರಾನ್ ॥

ಯೇ ಪ್ರಸಕ್ತಾಶ್ಚ ಕಾಮೇಷು ದೀರ್ಘಸೂತ್ರಾಶ್ಚ ವಾನರಾಃ ।
ಇಹಾನಯಸ್ವ ತಾನ್ ಸರ್ವಾನ್ ಶೀಘ್ರಂ ತು ಮಮ ಶಾಸನಾತ್ ॥

---

ಆನೆಯಂತೆ ಬಲಶಾಲಿಗಳು. ಮೇರುಪರ್ವತದ ಪಾರ್ಶ್ವದಲ್ಲಿರುವ ಶಿಲಾನಿರ್ಮಿತಗುಹೆಗಳಲ್ಲಿ ಹೊಂಬಣ್ಣದ ಕಪಿಗಳಿದ್ದಾರೆ. ಧೂಮ್ರಗಿರಿಯಲ್ಲಿಯೂ ಬಹಳ ಮಂದಿ ವಾಸವಾಗಿದ್ದಾರೆ ಅವರೆಲ್ಲರೂ ಹೊರಟುಬರತಕ್ಕದ್ದು (೫-೬). ಮಹಾರುಣವೆಂಬ ಬೆಟ್ಟದಲ್ಲಿ ಬಾಲಸೂರ್ಯನಂತೆ ಮೈಬಣ್ಣವುಳ್ಳ ಕಪಿಗಳಿದ್ದಾರೆ. ಅವರು ಮೈರೇಯವೆಂಬ ಮದ್ಯವನ್ನೂ ಮಧುವನ್ನೂ ಕುಡಿದು ಪುಷ್ಟರಾಗಿ ವೇಗಶಾಲಿಗಳಾಗಿದ್ದಾರೆ. ಅಲ್ಲದೆ ತಪಸ್ವಿಗಳಿರುವ ಮಹಾರಣ್ಯಗಳಲ್ಲಿ ಹಲವರು ಇದ್ದಾರೆ. ಪರಿಮಳಯುಕ್ತವಾಗಿ ರಮಣೀಯವಾದ ಆ ವನಗಳಲ್ಲಿಯೇ ಅವರು ನೆಲೆಸಿದ್ದಾರೆ (೭-೮). ಹೀಗೆ ಪೃಥ್ವಿಯಲ್ಲಿರುವ ಸಮಸ್ತ ವಾನರರೂ ಕ್ಷಿಪ್ರದಲ್ಲಿ ಇಲ್ಲಿಗೆ ಬಂದು ಸೇರುವಂತೆ ಏರ್ಪಡಿಸು. ಅವರೆಲ್ಲರನ್ನೂ ಸಾಮದಾನಾದ್ಯುಪಾಯಗಳಿಂದ ಬರಮಾಡುವುದಕ್ಕಾಗಿ ಸಮರ್ಥರಾದ ವಾನರರನ್ನು ಕಳಿಸು. ಆ ವಾನರರನ್ನು ಕರೆಸುವುದಕ್ಕಾಗಿ ಶೀಘ್ರಗಾಮಿಗಳಾದ ದೂತರನ್ನು ಹಿಂದೆಯೇ ನಾನು ಕಳಿಸಿದ್ದೇನಷ್ಟೆ. ಅವರನ್ನು ತ್ವರೆಪಡಿಸುವುದಕ್ಕಾಗಿ ಇನ್ನೂ ಕೆಲವು ವಾನರರನ್ನು ನಿಯೋಜಿಸು! (೯-೧೦). ಕಾಮಸುಖದಲ್ಲಿ ಮುಳುಗಿ ಸೋಮಾರಿಗಳಾದ ವಾನರರನ್ನೂ

ಅಹೋಭಿರ್ದಶಭಿರ್ಯೇ ಹಿ ನಾಗಚ್ಛಂತಿ ಮಮಾಜ್ಞಯಾ ।
ಹಂತವ್ಯಾಸ್ತೇ ದುರಾತ್ಮಾನೋ ರಾಜಶಾಸನದೂಷಕಾಃ ॥ ೧೨

ಶತಾನ್ಯಥ ಸಹಸ್ರಾಣಾಂ ಕೋಟ್ಯಶ್ಚ ಮಮ ಶಾಸನಾತ್ ।
ಪ್ರಯಾಂತು ಕಪಿಸಿಂಹಾನಾಂ ದಿಶೋ ಮಮ ಮತೇ ಸ್ಥಿತಾಃ ॥ ೧೩

ಮೇಘಪರ್ವತಸಂಕಾಶಾಶ್ಛಾದಯಂತ ಇವಾಂಬರಮ್ ।
ಘೋರರೂಪಾಃ ಕಪಿಶ್ರೇಷ್ಠಾ ಯಾಂತು ಮಚ್ಛಾಸನಾದಿತಃ ॥ ೧೪

ತೇ ಗತಿಜ್ಞಾ ಗತಿಂ ಗತ್ವಾ ಪೃಥಿವ್ಯಾಂ ಸರ್ವವಾನರಾಃ ।
ಆನಯಂತು ಹರೀನ್ ಸರ್ವಾಂಸ್ತ್ವರಿತಾಃ ಶಾಸನಾನ್ಮಮ ॥ ೧೫

ತಸ್ಯ ವಾನರರಾಜಸ್ಯ ಶ್ರುತ್ವಾ ವಾಯುಸುತೋ ವಚಃ ।
ದಿಕ್ಷು ಸರ್ವಾಸು ವಿಕ್ರಾಂತಾನ್ ಪ್ರೇಷಯಾಮಾಸ ವಾನರಾನ್ ॥ ೧೬

ತೇ ಪದಂ ವಿಷ್ಣುವಿಕ್ರಾಂತಂ ಪತತ್ರಿಜ್ಯೋತಿರಧ್ವಗಾಃ ।
ಪ್ರಯಾತಾಃ ಪ್ರಹಿತಾ ರಾಜ್ಞಾ ಹರಯಸ್ತತ್ಕ್ಷಣೇನ ವೈ ॥ ೧೭

---

ಸಹ, ನನ್ನ ಆಜ್ಞೆಯಾಗಿದೆಯೆಂದು ತಿಳಿಸಿ ಬೇಗನೆ ಇಲ್ಲಿಗೆ ಬರುವಂತೆ ನಿಯಮಿಸು! ಇಂದಿಗೆ ಹತ್ತು ದಿನಗಳೊಳಗಾಗಿ ಯಾರು ಇಲ್ಲಿಗೆ ಬಂದು ಸೇರುವುದಿಲ್ಲವೋ, ಅವರು ರಾಜಾಜ್ಞೆಯನ್ನು ಮೀರಿದರೆಂದು ತಿಳಿಯತಕ್ಕದ್ದು. ಆ ದುರಾತ್ಮರಿಗೆ ಮರಣದಂಡನೆಯನ್ನು ವಿಧಿಸಲಾಗುವುದು. ಇದು ನನ್ನ ಆಜ್ಞೆ! (೧೧-೧೨). ಹನುಮಂತ, ಈಗ ನನ್ನ ಅಪ್ಪಣೆಯನ್ನನುಸರಿಸಿ ಕಪಿಸಿಂಹರೆನಿಸಿದ ದೂತರು ಸಾವಿರಾರು ಸಂಖ್ಯೆಯಲ್ಲಿ ಸಕಲ ದಿಕ್ಕುಗಳಿಗೂ ಹೋಗಲಿ ಘೋರಾಕೃತಿಯ ಕಪಿಶ್ರೇಷ್ಠರು ಮೇಘಮಂಡಲದಂತೆಯೂ ಪರ್ವತನಿವಹದಂತೆಯೂ ಅಂಬರವನ್ನು ತುಂಬುತ್ತ ವಿವಿಧ ದಿಕ್ಕುಗಳಿಗೆ ಹೊರಡಲಿ! (೧೩-೧೪). ಪೃಥಿವಿಯಲ್ಲಿರುವ ಸಮಸ್ತವಾನರರ ಸ್ಥಿತಿಗತಿಗಳನ್ನರಿತ ದೂತರೇ ಹೋಗಲಿ ಹೋಗಿ, ನನ್ನ ಆಜ್ಞೆಯಂತೆ ನಿಖಿಲ ವಾನರರನ್ನೂ ಕರೆತರಲಿ" ಎಂದು ನಿಯಮಿಸಿದನು (೧೫). ಕಪೀಂದ್ರನ ವಚನದಂತೆ ಆ ವಾಯುಪುತ್ರನು ಪರಾಕ್ರಮಿಗಳೂ ವೇಗಶಾಲಿಗಳೂ ಆದ ವಾನರರನ್ನು ಸಕಲ ದಿಕ್ಕುಗಳಿಗೂ ಹೋಗುವಂತೆ ನಿಯೋಜಿಸಿದನು. ರಾಜಾಜ್ಞೆಯಂತೆ ಪ್ರೇಷಿತರಾದ ಆ ವಾನರರು ಪಕ್ಷಿಗಳಂತೆಯೂ ನಕ್ಷತ್ರಾದಿ

ತೇ ಸಮುದ್ರೇಷು ಗಿರಿಷು ವನೇಷು ಚ ಸರಃಸು ಚ ।
ವಾನರಾ ವಾನರಾನ್ ಸರ್ವಾನ್ ರಾಮಹೇತೋರಚೋದಯನ್ ॥

ಮೃತ್ಯುಕಾಲೋಪಮಸ್ಯಾಜ್ಞಾಂ ಕಪಿರಾಜಸ್ಯ ವಾನರಾಃ ।
ಸುಗ್ರೀವಸ್ಯಾಯಯುಃ ಶ್ರುತ್ವಾ ಸುಗ್ರೀವಭಯದರ್ಶಿನಃ ॥ ೧೯

ತತಸ್ತೇಽಂಜನಸಂಕಾಶಾ ಗಿರೇಸ್ತಸ್ಮಾನ್ಮಹಾಜವಾಃ ।
ತಿಸ್ರಃ ಕೋಟ್ಯಃ ಪ್ಲವಂಗಾನಾಂ ನಿರ್ಯಯುರ್ಯತ್ರ ರಾಘವಃ ॥ ೨೦

ಅಸ್ತಂ ಗಚ್ಛತಿ ಯತ್ರಾರ್ಕಸ್ತಸ್ಮಿನ್ ಗಿರಿವರೇ ಸ್ಥಿತಾಃ ।
ತಪ್ತಹೇಮಮಹಾಭಾಸಸ್ತಸ್ಮಾತ್ ಕೋಟ್ಯೋ ದಶ ಚ್ಯುತಾಃ ॥

ಕೈಲಾಸಶಿಖರೇಭ್ಯಶ್ಚ ಸಿಂಹಕೇಸರವರ್ಚಸಾಮ್ ।
ತತಃ ಕೋಟಿಸಹಸ್ರಾಣಿ ವಾನರಾಣಾಮುಪಾಗಮನ್ ॥ ೨೨

ಫಲಮೂಲೇನ ಜೀವಂತೋ ಹಿಮವಂತಮುಪಾಶ್ರಿತಾಃ ।
ತೇಷಾಂ ಕೋಟಿಸಹಸ್ರಾಣಾಂ ಸಹಸ್ರಂ ಸಮವರ್ತತ ॥ ೨೩

---

ಜ್ಯೋತಿಗಳಂತೆಯೂ ಕೂಡಲೇ ಗಗನವನ್ನಡರಿ, ದಿಕ್ಕುದಿಕ್ಕುಗಳಿಗೆ ಹೊರಟರು (೧೬-೧೭). ಶ್ರೀರಾಮನ ಕಾರ್ಯಾರ್ಥವಾಗಿ ಹೊರಟ ಆ ಕಪಿವೀರರು ಸಮುದ್ರತೀರಗಳು, ಶೈಲಗಳು, ವನಗಳು, ಸರೋವರಗಳು ಮುಂತಾದ ಕಡೆಗಳಿಗೆ ಹೋಗಿ ಅಲ್ಲಿ ನೆಲೆಸಿದ್ದ ಕಪಿಗಳಿಗೆ ಸುಗ್ರೀವಾಜ್ಞೆಯನ್ನು ತಿಳಿಸಿ ಕೂಡಲೆ ಹೊರಟುಬರುವಂತೆ ಹೇಳಿದರು (೧೮). ಕಪಿರಾಜನಾದ ಸುಗ್ರೀವನು ಅಪರಾಧಿಗಳ ವಿಷಯದಲ್ಲಿ ಕಾಲಮೃತ್ಯುವಿನಂತೆ ವರ್ತಿಸುವನೆಂದು ಬಲ್ಲ ಆ ವಾನರರು, ಸುಗ್ರೀವಾಜ್ಞೆಯನ್ನು ಕೇಳಿ ಹೆದರಿ ಕೂಡಲೇ ಕಿಷ್ಕಿಂಧೆಯ ಕಡೆಗೆ ಹೊರಟುಬಂದರು (೧೯). ಅಂಜನಗಿರಿಯಲ್ಲಿ ನೆಲೆಸಿ, ಕಾಡಿಗೆಯಂತೆ ಕಪ್ಪುಬಣ್ಣದವರಾಗಿ, ಮಹಾವೇಗಶಾಲಿಗಳೆನಿಸಿದ ಮೂರು ಕೋಟಿ ಕಪಿಗಳು ಶ್ರೀರಾಮನಿದ್ದ ಸ್ಥಳಕ್ಕೆ ಹೊರಟರು. ಸೂರ್ಯನು ಅಸ್ತಂಗತನಾಗುವ ಅಸ್ತಾಚಲದಲ್ಲಿ ನೆಲೆಸಿದ ಸುವರ್ಣವರ್ಣರಾದ ಹತ್ತು ಕೋಟಿ ವಾನರರು ಕಿಷ್ಕಿಂಧೆಗೆ ಹೊರಟರು (೨೦-೨೧) ಕೈಲಾಸಶಿಖರಗಳಲ್ಲಿ ಸಿಂಹಕೇಸರಗಳಂತೆ ಮೈಬಣ್ಣವುಳ್ಳ ಸಾವಿರಕೋಟಿ ಕಪಿಗಳಿದ್ದರು. ಅವರೆಲ್ಲರೂ ಬಂದರು. ಹಿಮಾಲಯದಲ್ಲಿ ಫಲಮೂಲಗಳನ್ನು ಭಕ್ಷಿಸುತ್ತ

ಅಂಗಾರಕಸಮಾನಾನಾಂ ಭೀಮಾನಾಂ ಭೀಮಕರ್ಮಣಾಮ್ ।
ವಿಂಧ್ಯಾದ್ವಾನರಕೋಟೀನಾಂ ಸಹಸ್ರಾಣ್ಯಪತನ್ ದ್ರುತಮ್ ॥ ೨೪

ಕ್ಷೀರೋದವೇಲಾನಿಲಯಾಸ್ತಮಾಲವನವಾಸಿನಃ ।
ನಾರಿಕೇಲಾಶನಾಶ್ಚೈವ ತೇಷಾಂ ಸಂಖ್ಯಾ ನ ವಿದ್ಯತೇ ॥ ೨೫

ವನೇಭ್ಯೋ ಗಹ್ವರೇಭ್ಯಶ್ಚ ಸರಿದ್ಭ್ಯಶ್ಚ ಮಹೌಜಸಃ ।
ಅಗಚ್ಛದ್ವಾನರೀ ಸೇನಾ ಪಿಬಂತೀವ ದಿವಾಕರಮ್ ॥ ೨೬

ಯೇ ತು ತ್ವರಯಿತುಂ ಯಾತಾ ವಾನರಾಃ ಸರ್ವವಾನರಾನ್ ।
ತೇ ವೀರಾ ಹಿಮವಚ್ಛೈಲೇ ದದೃಶುಸ್ತಂ ಮಹಾದ್ರುಮಮ್ ॥ ೨೭

ತಸ್ಮಿನ್ ಗಿರಿವರೇ ರಮ್ಯೇ ಯಜ್ಞೋ ಮಾಹೇಶ್ವರಃ ಪುರಾ ।
ಸರ್ವದೇವಮನಸ್ತೋಷೋ ಬಭೌ ದಿವ್ಯೋ ಮನೋಹರಃ ॥ ೨೮

ಅನ್ನನಿಷ್ಯಂದಜಾತಾನಿ ಮೂಲಾನಿ ಚ ಫಲಾನಿ ಚ ।
ಅಮೃತಾಸ್ವಾದಕಲ್ಪಾನಿ ದದೃಶುಸ್ತತ್ರ ವಾನರಾಃ ॥ ೨೯

---

ವಾಸಿಸಿದ್ದ ಸಾವಿರಾರುಕೋಟಿ ವಾನರರು ಬಂದರು (೨೨-೨೩). ವಿಂಧ್ಯಾಚಲದಲ್ಲಿ ಸಾವಿರಕೋಟಿ ವಾನರರಿದ್ದರು. ಅವರು ಅಂಗಾರಕಗ್ರಹದಂತೆ ಕೆಂಪಾಗಿಯೂ ಭೀಮಕೃತ್ಯಗಳನ್ನು ನಡೆಸುವ ಸಾಹಸಿಗಳೂ ಆಗಿದ್ದರು. ಅವರು ಶೀಘ್ರದಲ್ಲಿ ಕಿಷ್ಕಿಂಧೆಗೆ ಆಗಮಿಸಿದರು (೨೪). ಇವರಲ್ಲದೆ ಕ್ಷೀರಸಮುದ್ರತೀರದಲ್ಲಿ ನೆಲೆಸಿದವರೂ, ತಮಾಲವನವೆಂಬ ಅರಣ್ಯದಲ್ಲಿದ್ದವರೂ, ನಾರಿಕೇಳವನದಲ್ಲಿ ತೆಂಗಿನಕಾಯಿಗಳನ್ನು ತಿನ್ನುತ್ತ ಬೆಳೆದವರೂ ಅಗಣಿತ ಸಂಖ್ಯೆಯಲ್ಲಿ ಬಂದರು. ಅವರನ್ನು ಎಣಿಸಲು ಶಕ್ಯವಾಗಲಿಲ್ಲ (೨೫). ಹಾಗೆಯೇ ವಿವಿಧವನಗಳಲ್ಲಿಯೂ ಗಿರಿಗಹ್ವರಗಳಲ್ಲಿಯೂ ನದೀತೀರಗಳಲ್ಲಿಯೂ ಇದ್ದ ಮಹಾಪರಾಕ್ರಮಿಗಳಾದ ಕಪಿಗಳು ಬಂದು ಸೇರಿದರು. ಆ ವಾನರ ಸೇನೆಯು ಆಕಾಶಮಾರ್ಗದಲ್ಲಿ ಬರುವಾಗ ಸೂರ್ಯನನ್ನೇ ನುಂಗಿಬಿಡುವುದೋ ಎಂಬಂತೆ ಕಾಣುತ್ತಿತ್ತು (೨೬). ವಾನರರನ್ನು ತ್ವರೆಪಡಿಸುವುದಕ್ಕಾಗಿ ಹೋಗಿದ್ದ ಕಪಿದೂತರು ಹಿಮಾಲಯದಲ್ಲಿ ಒಂದು ಮಹಾವೃಕ್ಷವನ್ನು ಕಂಡರು. ರಮ್ಯವಾದ ಆ ಪರ್ವತದಲ್ಲಿ ಒಂದುಸಲ ಸರ್ವದೇವತೆಗಳಿಗೂ ತೃಪ್ತಿಯನ್ನೀಯುವ ಅಶ್ವಮೇಧಯಾಗವು ನಡೆದಿತ್ತು. ಮಹೇಶ್ವರನೇ ಆ ಯಾಗದ ಅಧಿದೇವತೆ (೨೭-೨೮). ಆಗ ಚೆಲ್ಲಿದ ಹವಿಷ್ಯಾನ್ನದಿಂದ

ತದನ್ನಸಂಭವಂ ದಿವ್ಯಂ ಫಲಂ ಮೂಲಂ ಮನೋಹರಮ್ ।
ಯಃ ಕಶ್ಚಿತ್ ಸಕೃದಶ್ನಾತಿ ಮಾಸಂ ಭವತಿ ತರ್ಪಿತಃ ॥ ೩೦

ತಾನಿ ಮೂಲಾನಿ ದಿವ್ಯಾನಿ ಫಲಾನಿ ಚ ಫಲಾಶನಾಃ ।
ಔಷಧಾನಿ ಚ ದಿವ್ಯಾನಿ ಜಗೃಹುರ್ಹರಿಯೂಥಪಾಃ ॥ ೩೧

ತಸ್ಮಾಚ್ಚ ಯಜ್ಞಾಯತನಾತ್ ಪುಷ್ಪಾಣಿ ಸುರಭೀಣಿ ಚ ।
ಆನಿನ್ಯುರ್ವಾನರಾ ಗತ್ವಾ ಸುಗ್ರೀವಪ್ರಿಯಕಾರಣಾತ್ ॥ ೩೨

ತೇ ತು ಸರ್ವೇ ಹರಿವರಾಃ ಪೃಥಿವ್ಯಾಂ ಸರ್ವವಾನರಾನ್ ।
ಸಂಚೋದಯಿತ್ವಾ ತ್ವರಿತಾ ಯೂಥಾನಾಂ ಜಗ್ಮುರಗ್ರತಃ ॥ ೩೩

ತೇ ತು ತೇನ ಮುಹೂರ್ತೇನ ಯೂಥಪಾಃ ಶೀಘ್ರಗಾಮಿನಃ ।
ಕಿಷ್ಕಿಂಧಾಂ ತ್ವರಯಾ ಪ್ರಾಪ್ತಾಃ ಸುಗ್ರೀವೋ ಯತ್ರ ವಾನರಃ ॥ ೩೪

ತೇ ಗೃಹೀತ್ವೌಷಧೀಃ ಸರ್ವಾಃ ಫಲಂ ಮೂಲಂ ಚ ವಾನರಾಃ ।
ತಂ ಪ್ರತಿಗ್ರಾಹಯಾಮಾಸುರ್ವಚನಂ ಚೇದಮಬ್ರುವನ್ ॥ ೩೫

---

ಆ ಮಹಾವೃಕ್ಷವೂ ವಿವಿಧ ಮೂಲಿಕೆಗಳೂ ಬೆಳೆದಿದ್ದವು. ಅಮೃತದಂತೆ ಸವಿಯಾದ ಹಣ್ಣುಗಳು ಆ ವೃಕ್ಷದಲ್ಲಿದ್ದುದು ಕಪಿದೂತರ ಕಣ್ಣಿಗೆ ಬಿದ್ದಿತು. ಹವಿಷ್ಯಾನ್ನದ ಪರಿಣಾಮವಾಗಿ ಅಲ್ಲಿ ಬೆಳೆದ ಫಲಮೂಲಗಳೆಲ್ಲವೂ ದಿವ್ಯ ಮನೋಹರವಾಗಿದ್ದವು. ಯಾವನಾದರೂ ಅವುಗಳನ್ನು ಒಮ್ಮೆ ತಿಂದರೆ ಸಾಕು, ಒಂದು ತಿಂಗಳವರೆಗೆ ಹಸಿವು ಬಾಯಾರಿಕೆಗಳಿಲ್ಲದೆ ಅವನು ತೃಪ್ತನಾಗಿರುತ್ತಿದ್ದನು! (೨೯-೩೦) ಈ ಕಪಿನಾಯಕರು ದಿವ್ಯವಾದ ಆ ಫಲಮೂಲಗಳನ್ನೂ ಮೂಲಿಕೆಗಳನ್ನೂ ಯಥೇಷ್ಟವಾಗಿ ಸಂಗ್ರಹಿಸಿದರು. ಹಣ್ಣುಗಳನ್ನು ತಿಂದರು. ಯಜ್ಞಭೂಮಿಯಲ್ಲಿ ಬೆಳೆದಿದ್ದ ಪರಿಮಳಭರಿತ ಪುಷ್ಪಗಳನ್ನು ಕಿತ್ತುಕೊಂಡರು. ತಮ್ಮೊಡೆಯನಾದ ಸುಗ್ರೀವನಿಗೆ ಕೊಟ್ಟು ಸಂತೋಷಪಡಿಸಬೇಕೆಂದು ಅವೆಲ್ಲವನ್ನೂ ತೆಗೆದುಕೊಂಡು ಹೊರಟರು (೩೧-೩೨). ಆ ಕಪಿಶ್ರೇಷ್ಠರು ಭೂತಳದಲ್ಲಿದ್ದ ನಿಖಿಲವಾನರರಿಗೂ ಬರುವಂತೆ ಕರೆಕೊಟ್ಟು, ಆ ವಾನರಸೇನೆಯು ಬರುವುದಕ್ಕೆ ಮೊದಲೇ ತಾವು ಹೊರಟು ಬಂದರು. ಶೀಘ್ರಗಾಮಿಗಳಾದ ಆ ವೀರರು ಅತ್ಯಲ್ಪಕಾಲದಲ್ಲಿಯೇ ಸುಗ್ರೀವನಿದ್ದ ಕಿಷ್ಕಿಂಧೆಗೆ ಬಂದು ಸೇರಿದರು (೩೩-೩೪). ಅವರು ಹಿಮಾಲಯದಿಂದ ತಂದಿದ್ದ ದಿವ್ಯೌಷಧಿಗಳನ್ನೂ ಫಲಮೂಲಗಳನ್ನೂ

ಸರ್ವೇ ಪರಿಗತಾಃ ಶೈಲಾಃ ಸಮುದ್ರಾಶ್ಚ ವನಾನಿ ಚ ।
ಪೃಥಿವ್ಯಾಂ ವಾನರಾಃ ಸರ್ವೇ ಶಾಸನಾದುಪಯಾಂತಿ ತೇ ॥ ೩೬
ಏವಂ ಶ್ರುತ್ವಾ ತತೋ ಹೃಷ್ಟಃ ಸುಗ್ರೀವಃ ಪ್ಲವಗಾಧಿಪಃ ।
ಪ್ರತಿಜಗ್ರಾಹ ತತ್ ಪ್ರೀತಸ್ತೇಷಾಂ ಸರ್ವಮುಪಾಯನಮ್ ॥ ೩೭

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಸಪ್ತತ್ರಿಂಶಃ ಸರ್ಗಃ

---

## ಅಷ್ಟಾತ್ರಿಂಶಃ ಸರ್ಗಃ

### ರಾಮಸಮೀಪಗಮನಮ್

ಪ್ರತಿಗೃಹ್ಯ ಚ ತತ್ ಸರ್ವಮುಪಾಯನಮುಪಾಹೃತಮ್ ।
ವಾನರಾನ್ ಸಾಂತ್ವಯಿತ್ವಾ ಚ ಸರ್ವಾನೇವ ವ್ಯಸರ್ಜಯತ್ ॥ ೧
ವಿಸರ್ಜಯಿತ್ವಾ ಸ ಹರೀನ್ ಶೂರಾಂಸ್ತಾನ್ ಕೃತಕರ್ಮಣಃ ।
ಮೇನೇ ಕೃತಾರ್ಥಮಾತ್ಮಾನಂ ರಾಘವಂ ಚ ಮಹಾಬಲಮ್ ॥ ೨

---

ಸುಗ್ರೀವನಿಗೆ ಕಾಣಿಕೆಯಾಗಿ ಅರ್ಪಿಸಿ, "ಮಹಾರಾಜ, ಈ ಭೂತಳದಲ್ಲಿರುವ ಸಕಲ ಶೈಲಗಳನ್ನೂ ಸಮುದ್ರಾರಣ್ಯಗಳನ್ನೂ ಸುತ್ತಿಬಂದೆವು ನಿನ್ನ ಆಜ್ಞೆಯಂತೆ ಸಮಸ್ತವಾನರರೂ ಇಲ್ಲಿಗೆ ಬರುತ್ತಿದ್ದಾರೆ" ಎಂದು ಅರಿಕೆಮಾಡಿದರು (೩೫-೩೬). ಕಪೀಶ್ವರನಾದ ಸುಗ್ರೀವನು ದೂತರ ನುಡಿಯನ್ನು ಕೇಳಿ ಸಂತುಷ್ಟನಾದನು. ಅವರು ಅರ್ಪಿಸಿದ ಆ ಕಾಣಿಕೆಯನ್ನು ಹರ್ಷದಿಂದ ಸ್ವೀಕರಿಸಿದನು (೩೭).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಮೂವತ್ತೇಳನೆಯ ಸರ್ಗ

---

## ಸರ್ಗ ೩೮

### ಶ್ರೀರಾಮನ ಸಮೀಪಕ್ಕೆ ಸುಗ್ರೀವ ಲಕ್ಷ್ಮಣರ ಆಗಮನ.

ಸುಗ್ರೀವನು ವಾನರರರ್ಪಿಸಿದ ಕಾಣಿಕೆಯನ್ನು ಸ್ವೀಕರಿಸಿ, ಅವರೆಲ್ಲರನ್ನೂ ಒಳ್ಳೆಯ ಮಾತಿನಿಂದ ಸಮ್ಮಾನಿಸಿ ಕಳಿಸಿದನು. ತಮ್ಮ ಕಾರ್ಯವನ್ನು ನಿರ್ವಹಿಸಿ ಬಂದ ಆ ಕಪಿವೀರರನ್ನು ಸಮ್ಮಾನಿಸಿ ಕಳಿಸಿದಮೇಲೆ, ತನ್ನ

ಸ ಲಕ್ಷ್ಮಣೋ ಭೀಮಬಲಂ ಸರ್ವವಾನರಸತ್ತಮಮ್ ।
ಅಬ್ರವೀತ್ ಪ್ರಶ್ರಿತಂ ವಾಕ್ಯಂ ಸುಗ್ರೀವಂ ಸಂಪ್ರಹರ್ಷಯನ್ ॥ ೩

ಕಿಷ್ಕಿಂಧಾಯಾ ವಿನಿಷ್ಕ್ರಾಮ ಯದಿ ತೇ ಸೌಮ್ಯ ರೋಚತೇ ।
ತಸ್ಯ ತದ್ವಚನಂ ಶ್ರುತ್ವಾ ಲಕ್ಷ್ಮಣಸ್ಯ ಸುಭಾಷಿತಮ್ ॥ ೪

ಸುಗ್ರೀವಃ ಪರಮಪ್ರೀತೋ ವಾಕ್ಯಮೇತದುವಾಚ ಹ ।
ಏವಂ ಭವತು ಗಚ್ಛಾಮಃ ಸ್ಥೇಯಂ ತ್ವಚ್ಛಾಸನೇ ಮಯಾ ॥ ೫

ತಮೇವಮುಕ್ತ್ವಾ ಸುಗ್ರೀವೋ ಲಕ್ಷ್ಮಣಂ ಶುಭಲಕ್ಷಣಮ್ ।
ವಿಸರ್ಜಯಾಮಾಸ ತದಾ ತಾರಾಮನ್ಯಾಶ್ಚ ಯೋಷಿತಃ ॥ ೬

ಏಹೀತ್ಯುಚ್ಚೈರ್ಹರಿವರಾನ್ ಸುಗ್ರೀವಃ ಸಮುದಾಹರತ್ ।
ತಸ್ಯ ತದ್ವಚನಂ ಶ್ರುತ್ವಾ ಹರಯಃ ಶೀಘ್ರಮಾಯಯುಃ ॥ ೭

ಬದ್ಧಾಂಜಲಿಪುಟಾಃ ಸರ್ವೇ ಯೇ ಸ್ಯುಃ ಸ್ತ್ರೀದರ್ಶನಕ್ಷಮಾಃ ।
ತಾನುವಾಚ ತತಃ ಪ್ರಾಪ್ತಾನ್ ರಾಜಾರ್ಕಸದೃಶಪ್ರಭಃ ॥ ೮

ಉಪಸ್ಥಾಪಯತ ಕ್ಷಿಪ್ರಂ ಶಿಬಿಕಾಂ ಮಮ ವಾನರಾಃ ।
ಶ್ರುತ್ವಾ ತು ವಚನಂ ತಸ್ಯ ಹರಯಃ ಶೀಘ್ರವಿಕ್ರಮಾಃ ॥ ೯

---

ಮತ್ತು ಶ್ರೀರಾಮನ ಕಾರ್ಯವು ಸಿದ್ಧಿಸಿತೆಂದು ಸುಗ್ರೀವನ ಮನಸ್ಸಿಗೆ ನೆಮ್ಮದಿಯಾಯಿತು (೧-೨) ಆಗ ಲಕ್ಷ್ಮಣನು ವಾನರಶ್ರೇಷ್ಠನಾದ ಸುಗ್ರೀವನನ್ನು ಮೃದುವಚನಗಳಿಂದ ಸಂತೈಸುತ್ತ "ಸೌಮ್ಯ-ಸುಗ್ರೀವ, ನಿನಗೆ ಸಮ್ಮತವಾದರೆ ಈಗ ಶ್ರೀರಾಮನ ಬಳಿಗೆ ಹೋಗೋಣ ಕಿಷ್ಕಿಂಧೆಯಿಂದ ಹೊರಡು" ಎಂದನು ಲಕ್ಷ್ಮಣನ ಮಾತು ಸುಗ್ರೀವನಿಗೆ ಯುಕ್ತವೆನಿಸಿತು (೩-೪). ಅವನು ಸಂತುಷ್ಟನಾಗಿ "ಆಗಲಿ, ಹೋಗೋಣ. ನಿನ್ನ ಆಜ್ಞೆಯಂತೆ ನಾನು ನಡೆಯಬೇಕು" ಎಂದನು. ಅನಂತರ ತಾರೆಗೂ ಇತರ ಅಂತಃಪುರ ಸ್ತ್ರೀಯರಿಗೂ ಅನುಜ್ಞೆಯನ್ನಿತ್ತು ಕಳಿಸಿ, "ಯಾರಲ್ಲಿ? ಬನ್ನಿರಿ!" ಎಂದು ಕಪಿವೀರರನ್ನು ಗಟ್ಟಿಯಾಗಿ ಕೂಗಿ ಕರೆದನು. ಕೂಡಲೆ ಕೆಲವು ಕಪಿವೀರರು ಒಳಗೆ ಬಂದರು (೫-೭). ಅವರು ಅಂತಃಪುರ ಸ್ತ್ರೀಯರನ್ನು ನೋಡಲು ಅನುಮತಿಯನ್ನು ಪಡೆದವರಾಗಿದ್ದರು. ಕೈಮುಗಿದುಕೊಂಡು ಬಂದು ನಿಂತ ಆ ವಾನರರನ್ನು ನೋಡಿ, ಸೂರ್ಯನಂತೆ ವರ್ಚಸ್ವಿಯಾದ ಕಪಿರಾಜನು "ಎಲೈ ವಾನರರೆ, ಶೀಘ್ರವಾಗಿ ನನ್ನ ಪಲ್ಲಕ್ಕಿಯನ್ನು

ಸಮುಪಸ್ಥಾಪಯಾಮಾಸುಃ ಶಿಬಿಕಾಂ ಪ್ರಿಯದರ್ಶನಾಮ್ ।
ತಾಮುಪಸ್ಥಾಪಿತಾಂ ದೃಷ್ಟ್ವಾ ಶಿಬಿಕಾಂ ವಾನರಾಧಿಪಃ ॥ ೧೦
ಲಕ್ಷ್ಮಣಾರುಹ್ಯತಾಂ ಶೀಘ್ರಮಿತಿ ಸೌಮಿತ್ರಿಮಬ್ರವೀತ್ ।
ಇತ್ಯುಕ್ತ್ವಾ ಕಾಂಚನಂ ಯಾನಂ ಸುಗ್ರೀವಃ ಸೂರ್ಯಸಂನಿಭಮ್ ॥
ಬೃಹದ್ಭಿರ್ಹರಿಭಿರ್ಯುಕ್ತಮಾರುರೋಹ ಸಲಕ್ಷ್ಮಣಃ ।
ಪಾಂಡರೇಣಾತಪತ್ರೇಣ ಧ್ರಿಯಮಾಣೇನ ಮೂರ್ಧನಿ ॥ ೧೨
ಶುಕ್ಲೈಶ್ಚ ವಾಲವ್ಯಜನೈರ್ಧೂಯಮಾನೈಃ ಸಮಂತತಃ ।
ಶಂಖಭೇರೀನಿನಾದೈಶ್ಚ ವಂದಿಭಿಶ್ಚಾಭಿನಂದಿತಃ ॥ ೧೩
ನಿರ್ಯಯೌ ಪ್ರಾಪ್ಯ ಸುಗ್ರೀವೋ ರಾಜ್ಯಶ್ರಿಯಮನುತ್ತಮಾಮ್ ।
ಸ ವಾನರಶತೈಸ್ತೀಕ್ಷ್ಣೈರ್ಬಹುಭಿಃ ಶಸ್ತ್ರಪಾಣಿಭಿಃ ॥ ೧೪
ಪರಿಕೀರ್ಣೋ ಯಯೌ ತತ್ರ ಯತ್ರ ರಾಮೋ ವ್ಯವಸ್ಥಿತಃ ।
ಸ ತಂ ದೇಶಮನುಪ್ರಾಪ್ಯ ಶ್ರೇಷ್ಠಂ ರಾಮನಿಷೇವಿತಮ್ ॥ ೧೫
ಅವಾತರನ್ಮಹಾತೇಜಾಃ ಶಿಬಿಕಾಯಾಃ ಸಲಕ್ಷ್ಮಣಃ ।
ಆಸಾದ್ಯ ಚ ತತೋ ರಾಮಂ ಕೃತಾಂಜಲಿಪುಟೋಽಭವತ್ ॥ ೧೬

---

ತನ್ನಿರಿ ” ಎಂದು ಆಜ್ಞಾಪಿಸಿದನು (೮-೯) ಆ ಕ್ಷಣದಲ್ಲಿ ವಾನರರು ಬೇಗನೆ ಹೋಗಿ ಸುಂದರವಾದ ಒಂದು ಪಲ್ಲಕ್ಕಿಯನ್ನು ತಂದರು. ಅದನ್ನು ನೋಡಿ ಸುಗ್ರೀವನು “ ಲಕ್ಷ್ಮಣ, ಪಲ್ಲಕ್ಕಿಯನ್ನೇರು ” ಎಂದು ಹೇಳಿ, ಸೂರ್ಯನಂತೆ ಬೆಳಗುತ್ತಿದ್ದ ಸುವರ್ಣಮಯವಾದ ಆ ಪಲ್ಲಕ್ಕಿಯನ್ನು ಲಕ್ಷ್ಮಣನೊಡನೆ ಹತ್ತಿ ಕುಳಿತನು. ದೃಢಕಾಯರಾದ ವಾನರರು ಪಲ್ಲಕ್ಕಿಯನ್ನು ಹೊತ್ತರು. ಕೆಲವರು ಪಲ್ಲಕ್ಕಿಯಮೇಲೆ ಶ್ವೇತಚ್ಛತ್ರವನ್ನು ಹಿಡಿದರು (೧೦-೧೨). ಇಕ್ಕೆಲದಲ್ಲಿಯೂ ಬಿಳಿಯ ಚಾಮರಗಳನ್ನು ಬೀಸಿದರು. ಶಂಖ ಭೇರೀ ಧ್ವನಿಗಳು ಮೊಳಗಿದವು. ವಂದಿಗಳು ಹೊಗಳಿದರು. ಈ ರೀತಿಯಲ್ಲಿ ಸುಗ್ರೀವನು ಉತ್ತಮವಾದ ರಾಜವೈಭವದೊಡನೆ ಹೊರಟನು ಉಗ್ರ ಪರಾಕ್ರಮಿಗಳಾದ ನೂರಾರು ವಾನರರು ಶಸ್ತ್ರಗಳನ್ನು ಹಿಡಿದು ಮೈಗಾವಲಾಗಿ ಹೊರಟರು (೧೩-೧೪). ಶ್ರೀರಾಮನು ವಾಸವಾಗಿದ್ದ ಶ್ರೇಷ್ಠವಾದ ಮಾಲ್ಯವದ್ಗಿರಿಯ ಸಮೀಪಕ್ಕೆ ಸುಗ್ರೀವನು ಬಂದನು. ಅಲ್ಲಿ ಮಹಾತೇಜಸ್ವಿಯಾದ ಸುಗ್ರೀವನು ಲಕ್ಷ್ಮಣನೊಡನೆ ಪಲ್ಲಕ್ಕಿಯಿಂದಿಳಿದು,

ಕೃತಾಂಜಲೌ ಸ್ಥಿತೇ ತಸ್ಮಿನ್ ವಾನರಾಶ್ಚಾಭವಂಸ್ತಥಾ ।
ತಟಾಕಮಿವ ತದ್ದೃಷ್ಟ್ವಾ ರಾಮಃ ಕುಡ್ಮಲಪಂಕಜಮ್ ॥ ೧೭

ವಾನರಾಣಾಂ ಮಹತ್ ಸೈನ್ಯಂ ಸುಗ್ರೀವೇ ಪ್ರೀತಿಮಾನಭೂತ್ ।
ಪಾದಯೋಃ ಪತಿತಂ ಮೂರ್ಧ್ನಾ ತಮುತ್ಥಾಪ್ಯ ಹರೀಶ್ವರಮ್ ॥ ೧೮

ಪ್ರೇಮ್ಣಾ ಚ ಬಹುಮಾನಾಚ್ಚ ರಾಘವಃ ಪರಿಷಸ್ವಜೇ ।
ಪರಿಷ್ವಜ್ಯ ಚ ಧರ್ಮಾತ್ಮಾ ನಿಷೀದೇತಿ ತತೋಽಬ್ರವೀತ್ ॥ ೧೯

ತಂ ನಿಷಣ್ಣಂ ತತೋ ದೃಷ್ಟ್ವಾ ಕ್ಷಿತೌ ರಾಮೋಽಬ್ರವೀದ್ವಚಃ ।
ಧರ್ಮಮರ್ಥಂ ಚ ಕಾಮಂ ಚ ಕಾಲೇ ಯಸ್ತು ನಿಷೇವತೇ ॥ ೨೦

ವಿಭಜ್ಯ ಸತತಂ ವೀರ ಸ ರಾಜಾ ಹರಿಸತ್ತಮ ।
ಹಿತ್ವಾ ಧರ್ಮಂ ತಥಾರ್ಥಂ ಚ ಕಾಮಂ ಯಸ್ತು ನಿಷೇವತೇ ॥ ೨೧

ಸ ವೃಕ್ಷಾಗ್ರೇ ಯಥಾ ಸುಪ್ತಃ ಪತಿತಃ ಪ್ರತಿಬುಧ್ಯತೇ ।
ಅಮಿತ್ರಾಣಾಂ ವಧೇ ಯುಕ್ತೋ ಮಿತ್ರಾಣಾಂ ಸಂಗ್ರಹೇ ರತಃ ॥ ೨೨

---

ಶ್ರೀರಾಮನ ಬಳಿಗೆ ಬಂದು ಕೈಮುಗಿದು ನಿಂತುಕೊಂಡನು (೧೫-೧೬) ಪರಿವಾರದಲ್ಲಿದ್ದ ವಾನರರೆಲ್ಲರೂ ಬಂದು ಸುಗ್ರೀವನಂತೆಯೇ ಬದ್ಧಾಂಜಲಿಗಳಾಗಿ ನಿಂತರು. ಅವರೆಲ್ಲರೂ ಹೀಗೆ ಕೈಜೋಡಿಸಿ ನಿಂತಿರಲು, ಕಮಲದ ಮೊಗ್ಗುಗಳಿಂದ ತುಂಬಿದ ಸರೋವರದಂತೆ ಕಪಿಸಮೂಹವು ಕಾಣಿಸಿತು! (೧೭). ಆ ವಾನರಸೇನೆಯನ್ನು ನೋಡಿ ಶ್ರೀರಾಮನಿಗೆ ಸುಗ್ರೀವನಲ್ಲಿ ಪ್ರೀತಿಯುಂಟಾಯಿತು ಸುಗ್ರೀವನು ಶ್ರೀರಾಮನ ಪಾದಗಳಿಗೆ ತಲೆಬಾಗಿ ವಂದಿಸಿದನು. ಧರ್ಮಾತ್ಮನಾದ ಶ್ರೀರಾಮನು ಆ ಕಪೀಶ್ವರನನ್ನು ಪ್ರೇಮಾದರಗಳಿಂದ ಅಪ್ಪಿಕೊಂಡು "ಮಿತ್ರ, ಕುಳಿತುಕೊ" ಎಂದು ಹೇಳಿದನು (೧೮-೧೯). ಸುಗ್ರೀವನು ನೆಲದಮೇಲೆ ಕುಳಿತನು. ಆಗ ಶ್ರೀರಾಮನು "ಸುಗ್ರೀವ, ಧರ್ಮಾರ್ಥಕಾಮಗಳನ್ನು ಕಾಲೋಚಿತವಾಗಿ ವಿಂಗಡಿಸಿಕೊಂಡು ಯೋಗ್ಯ ರೀತಿಯಲ್ಲಿ ಸೇವಿಸತಕ್ಕವನು ರಾಜನೆನಿಸಿಕೊಳ್ಳಲು ಅರ್ಹನಾಗುತ್ತಾನೆ. ಧರ್ಮಾರ್ಥಗಳನ್ನು ತ್ಯಜಿಸಿ ಕಾಮದಲ್ಲಿ ಮುಳುಗಿದವನಿಗೆ ಕೆಟ್ಟಮೇಲೆ ಬುದ್ಧಿ ಬರುತ್ತದೆ ಮರದ ತುದಿಯಲ್ಲಿ ಮಲಗಿದವನಿಗೆ ಬಿದ್ದಮೇಲೆ ಎಚ್ಚರವಾಗುತ್ತದೆ! ರಾಜನು ಶತ್ರುಸಂಹಾರದಲ್ಲಿಯೂ ಮಿತ್ರಸಂಗ್ರಹದಲ್ಲಿಯೂ

ತ್ರಿವರ್ಗಫಲಭೋಕ್ತಾ ತು ರಾಜಾ ಧರ್ಮೇಣ ಯುಜ್ಯತೇ ।
ಉದ್ಯೋಗಸಮಯಸ್ತ್ವೇಷ ಪ್ರಾಪ್ತಃ ಶತ್ರುವಿನಾಶನ ॥ ೨೩

ಸಂಚಿಂತ್ಯತಾಂ ಹಿ ಪಿಂಗೇಶ ಹರಿಭಿಃ ಸಹ ಮಂತ್ರಿಭಿಃ ।
ಏವಮುಕ್ತಸ್ತು ಸುಗ್ರೀವೋ ರಾಮಂ ವಚನಮಬ್ರವೀತ್ ॥ ೨೪

ಪ್ರನಷ್ಟಾ ಶ್ರೀಶ್ಚ ಕೀರ್ತಿಶ್ಚ ಕಪಿರಾಜ್ಯಂ ಚ ಶಾಶ್ವತಮ್ ।
ತ್ವತ್ಪ್ರಸಾದಾನ್ಮಹಾಬಾಹೋ ಪುನಃ ಪ್ರಾಪ್ತಮಿದಂ ಮಯಾ ॥ ೨೫

ತವ ದೇವ ಪ್ರಸಾದಾಚ್ಚ ಭ್ರಾತುಶ್ಚ ಜಯತಾಂ ವರ ।
ಕೃತಂ ನ ಪ್ರತಿಕುರ್ಯಾದ್ಯಃ ಪುರುಷಾಣಾಂ ಸ ದೂಷಕಃ ॥ ೨೬

ಏತೇ ವಾನರಮುಖ್ಯಾಶ್ಚ ಶತಶಃ ಶತ್ರುಸೂದನ ।
ಪ್ರಾಪ್ತಾಶ್ಚಾದಾಯ ಬಲಿನಃ ಪೃಥಿವ್ಯಾಂ ಸರ್ವವಾನರಾನ್ ॥ ೨೭

ಋಕ್ಷಾಶ್ಚಾವಹಿತಾಃ ಶೂರಾ ಗೋಲಾಂಗೂಲಾಶ್ಚ ರಾಘವ ।
ಕಾಂತಾರವನದುರ್ಗಾಣಾಮಭಿಜ್ಞಾ ಘೋರದರ್ಶನಾಃ ॥ ೨೮

---

ನಿರತನಾಗಿರಬೇಕು (೨೦-೨೨). ಮತ್ತು ಧರ್ಮಾರ್ಥಕಾಮಗಳೆಂಬ ತ್ರಿವರ್ಗದ ಫಲವನ್ನು ಯುಕ್ತರೀತಿಯಲ್ಲಿ ಅನುಭವಿಸಬೇಕು. ಅವನು ಮಾತ್ರವೇ ರಾಜಧರ್ಮವನ್ನು ಚೆನ್ನಾಗಿ ನಿರ್ವಹಿಸತಕ್ಕವನು. ಶತ್ರುಸೂದನ-ಸುಗ್ರೀವ, ಈಗ ಉದ್ಯೋಗಕಾಲವು ಪ್ರಾಪ್ತವಾಗಿದೆ (೨೩). ವಾನರೇಂದ್ರ, ನಿನ್ನ ಸಚಿವರಾದ ವಾನರರೊಡನೆ ಮುಂದಿನ ಕರ್ತವ್ಯವನ್ನು ಕುರಿತು ಸಮಾಲೋಚಿಸು" ಎಂದು ನುಡಿದನು ಆಗ ಸುಗ್ರೀವನು ಶ್ರೀರಾಮನನ್ನು ನೋಡಿ ಇಂತೆಂದನು: "ಓ ಮಹಾಬಾಹು, ನನ್ನ ಕೈಬಿಟ್ಟುಹೋದ ಸಂಪತ್ತು, ಕೀರ್ತಿ, ಸ್ಥಿರವಾದ ವಾನರಾಧಿಪತ್ಯ—ಇವೆಲ್ಲವೂ ನಿನ್ನ ಅನುಗ್ರಹದಿಂದ ಪುನಃ ಲಭಿಸಿದವು (೨೪-೨೫). ನಿನ್ನ ಮತ್ತು ನಿನ್ನ ಅನುಜನ ಪ್ರಸಾದವೇ ಇದಕ್ಕೆ ಕಾರಣ. ಉಪಕಾರಕ್ಕೆ ಪ್ರತಿಯಾಗಿ ಉಪಕಾರವನ್ನು ಮಾಡದವನು ಪುರುಷಾಧಮನೇ ಸರಿ. ಹೇ ಶತ್ರುಸೂದನ, ನೂರಾರು ಮಂದಿ ಕಪಿನಾಯಕರು ಹೋಗಿ ಈ ಭೂಮಂಡಲದಲ್ಲಿರುವ ಬಲಶಾಲಿಗಳಾದ ಸಮಸ್ತ ಕಪಿವೀರರನ್ನೂ ಕರೆದು ಬಂದಿದ್ದಾರೆ (೨೬-೨೭). ವಿವಿಧ ಕಾಂತಾರಗಳನ್ನೂ ವನದುರ್ಗಗಳನ್ನೂ ಬಲ್ಲ ಘೋರಾಕಾರದ ಭಲ್ಲೂಕಗಳೂ

ದೇವಗಂಧರ್ವಪುತ್ರಾಶ್ಚ ವಾನರಾಃ ಕಾಮರೂಪಿಣಃ ।
ಸ್ವೈಃ ಸ್ವೈಃ ಪರಿವೃತಾಃ ಸೈನ್ಯೈರ್ವರ್ತಂತೇ ಪಥಿ ರಾಘವ ॥ ೨೯
ಶತೈಃ ಶತಸಹಸ್ರೈಶ್ಚ ಕೋಟಿಭಿಶ್ಚ ಪ್ಲವಂಗಮಾಃ ।
ಅಯುತೈಶ್ಚಾವೃತಾ ವೀರಾಃ ಶಂಕುಭಿಶ್ಚ ಪರಂತಪ ॥ ೩೦
ಅರ್ಬುದೈರರ್ಬುದಶತೈರ್ಮಧ್ಯೈಶ್ಚಾಂತ್ಯೈಶ್ಚ ವಾನರಾಃ ।
ಸಮುದ್ರೈಶ್ಚ ಪರಾರ್ಧೈಶ್ಚ ಹರಯೋ ಹರಿಯೂಥಪಾಃ ॥ ೩೧
ಆಗಮಿಷ್ಯಂತಿ ತೇ ರಾಜನ್ ಮಹೇಂದ್ರಸಮವಿಕ್ರಮಾಃ ।
ಮೇರುಮಂದರಸಂಕಾಶಾ ವಿಂಧ್ಯಮೇರುಕೃತಾಲಯಾಃ ॥ ೩೨
ತೇ ತ್ವಾಮಭಿಗಮಿಷ್ಯಂತಿ ರಾಕ್ಷಸಂ ಯೋ ಸಬಾಂಧವಮ್ ।
ನಿಹತ್ಯ ರಾವಣಂ ಸಂಖ್ಯೇ ಹ್ಯಾನಯಿಷ್ಯಂತಿ ಮೈಥಿಲೀಮ್ ॥ ೩೩

ತತಸ್ತಮುದ್ಯೋಗಮವೇಕ್ಷ್ಯ ಬುದ್ಧಿಮಾನ್
ಹರಿಪ್ರವೀರಸ್ಯ ನಿದೇಶವರ್ತಿನಃ ।

---

ಗೋಲಾಂಗೂಲಗಳೂ ಬರುತ್ತಿದ್ದಾರೆ. ಅವರೆಲ್ಲರೂ ಎಚ್ಚರಿಕೆಯಿಂದ ಸಂಚರಿಸ ತಕ್ಕವರೂ ಶೂರರೂ ಆಗಿದ್ದಾರೆ. ದೇವಗಂಧರ್ವಪುತ್ರರೂ ಕಾಮರೂಪಿಗಳೂ ಆದ ವಾನರರು ಬರುತ್ತಿದ್ದಾರೆ. ಅವರೆಲ್ಲರೂ ತಮ್ಮ ತಮ್ಮ ಸೇನೆಗಳೊಡನೆ ಹೊರಟು ಮಧ್ಯಮಾರ್ಗದಲ್ಲಿದ್ದಾರೆ (೨೮-೨೯) ರಘುನಾಥ, ಆ ವಾನರರ ಸಂಖ್ಯೆ ಅಸಂಖ್ಯವಾಗಿದೆ ನೂರು, ಲಕ್ಷ, ಕೋಟಿ, ಶಂಕು, ಅರ್ಬುದ, ಸಮುದ್ರ, ಪರಾರ್ಧಸಂಖ್ಯೆಗಳಲ್ಲಿ* ಆಗಮಿಸುತ್ತಿದ್ದಾರೆ! ಅವರಲ್ಲಿ ದೇವೇಂದ್ರನಿಗೆ ಸರಿದೂಗುವ ಪರಾಕ್ರಮಿಗಳಿದ್ದಾರೆ! ಮೇರುಮಂದರ ಶೈಲಗಳಂತೆ ಮಹಾಕಾಯರಿದ್ದಾರೆ! ವಿಂಧ್ಯ, ಮೇರು ಮುಂತಾದ ಗಿರಿಗಳಲ್ಲಿ ನೆಲೆಸಿದವರೆಲ್ಲರೂ ಬರುತ್ತಿದ್ದಾರೆ (೩೦-೩೨). ಶ್ರೀರಾಮ, ಆ ಕಪಿವೀರರು ರಾಕ್ಷಸಾಧಮನಾದ ರಾವಣನನ್ನು ಬಂಧುಬಾಂಧವಸಮೇತವಾಗಿ ರಣರಂಗದಲ್ಲಿ ಕೊಂದು, ಮೈಥಿಲಿಯನ್ನು ನಿನಗೆ ತಂದೊಪ್ಪಿಸುವರು!" ಎಂದನು (೩೩). ಹೀಗೆ ಕಪಿಶ್ರೇಷ್ಠನಾದ ಸುಗ್ರೀವನು ಆಜ್ಞಾನುವರ್ತಿಯಾಗಿ ಮುಂದಿನ ಕಾರ್ಯಭಾರದ ಪ್ರಯತ್ನವನ್ನು ನಡೆಸಿದ್ದಾನೆಂಬುದನ್ನು ಕೇಳಿ,

---

* ಅನುಬಂಧವನ್ನು ನೋಡಿ.

ಬಭೂವ ಹರ್ಷಾದ್ವಸುಧಾಧಿಪಾತ್ಮಜಃ
ಪ್ರಬುದ್ಧನೀಲೋತ್ಪಲತುಲ್ಯದರ್ಶನಃ ॥ ೩೪

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಅಷ್ಟಾತ್ರಿಂಶಃ ಸರ್ಗಃ

---

## ಏಕೋನಚತ್ವಾರಿಂಶಃ ಸರ್ಗಃ

### ಸೇನಾನಿವೇಶಃ

ಇತಿ ಬ್ರುವಾಣಂ ಸುಗ್ರೀವಂ ರಾಮೋ ಧರ್ಮಭೃತಾಂ ವರಃ ।
ಬಾಹುಭ್ಯಾಂ ಸಂಪರಿಷ್ವಜ್ಯ ಪ್ರತ್ಯುವಾಚ ಕೃತಾಂಜಲಿಮ್ ॥ ೧

ಯದಿಂದ್ರೋ ವರ್ಷತೇ ವರ್ಷಂ ನ ತಚ್ಚಿತ್ರಂ ಭವೇದ್ಭುವಿ ।
ಆದಿತ್ಯೋ ವಾ ಸಹಸ್ರಾಂಶುಃ ಕುರ್ಯಾದ್ವಿತಿಮಿರಂ ನಭಃ ॥ ೨

ಚಂದ್ರಮಾ ರಶ್ಮಿಭಿಃ ಕುರ್ಯಾತ್ ಪೃಥಿವೀಂ ಸೌಮ್ಯ ನಿರ್ಮಲಾಮ್ ।
ತ್ವದ್ವಿಧೋ ವಾಪಿ ಮಿತ್ರಾಣಾಂ ಪ್ರತಿಕುರ್ಯಾತ್ ಪರಂತಪ ॥ ೩

---

ಪ್ರಾಜ್ಞನಾದ ಶ್ರೀರಾಮನಿಗೆ ಹರ್ಷವಾಯಿತು. ಸಂಪ್ರೀತನಾದ ಆ ರಾಜ ಕುಮಾರನು ಅರಳಿದ ನೀಲೋತ್ಪಲದಂತೆ ಕಂಗೊಳಿಸಿದನು (೩೪)

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಮೂವತ್ತೆಂಟನೆಯ ಸರ್ಗ

---

## ಸರ್ಗ ೩೯

### ಕಪಿನಾಯಕರು ತಮ್ಮ ಸೇನೆಗಳನ್ನು ತೆಗೆದುಕೊಂಡುಬಂದು ಸೇರುವುದು.

ಈ ರೀತಿಯಲ್ಲಿ ಕೈಮುಗಿದು ಹೇಳುತ್ತಿದ್ದ ಸುಗ್ರೀವನನ್ನು ಧಾರ್ಮಿಕೋತ್ತಮನಾದ ಶ್ರೀರಾಮನು ತೋಳುಗಳಿಂದ ಅಪ್ಪಿಕೊಂಡು "ಮಿತ್ರ-ಸುಗ್ರೀವ, ಇಂದ್ರನು ಭೂಮಿಯಲ್ಲಿ ಮಳೆ ಸುರಿಸುವುದಾಗಲಿ, ಸಹಸ್ರ ಕಿರಣನಾದ ಸೂರ್ಯನು ಗಗನದಲ್ಲಿ ಕತ್ತಲೆಯನ್ನು ನೀಗಿಸುವುದಾಗಲಿ, ಆಶ್ಚರ್ಯವಲ್ಲ (೧-೨). ಚಂದ್ರನು ಕಿರಣಗಳಿಂದ ಜಗತ್ತನ್ನು ಬೆಳಗುವುದೂ

ಏವಂ ತ್ವಯಿ ನ ತಚ್ಚಿತ್ರಂ ಭವೇದ್ಯತ್ ಸೌಮ್ಯ ಶೋಭನಮ್ ।
ಜಾನಾಮ್ಯಹಂ ತ್ವಾಂ ಸುಗ್ರೀವ ಸತತಂ ಪ್ರಿಯವಾದಿನಮ್ ॥ ೪

ತ್ವತ್ಸನಾಥಃ ಸಖೇ ಸಂಖ್ಯೇ ಜೇತಾಸ್ಮಿ ಸಕಲಾನರೀನ್ ।
ತ್ವಮೇವ ಮೇ ಸುಹೃನ್ಮಿತ್ರಂ ಸಾಹಾಯ್ಯಂ ಕರ್ತುಮರ್ಹಸಿ ॥ ೫

ಜಹಾರಾತ್ಮವಿನಾಶಾಯ ವೈದೇಹೀಂ ರಾಕ್ಷಸಾಧಮಃ ।
ವಂಚಯಿತ್ವಾ ತು ಪೌಲೋಮೀಮನುಹ್ರಾದೋ ಯಥಾ ಶಚೀಮ್ ॥

ನಚಿರಾತ್ತಂ ಹನಿಷ್ಯಾಮಿ ರಾವಣಂ ನಿಶಿತೈಃ ಶರೈಃ ।
ಪೌಲೋಮ್ಯಾಃ ಪಿತರಂ ದೃಪ್ತಂ ಶತಕ್ರತುರಿವಾಹವೇ ॥ ೭

ಏತಸ್ಮಿನ್ನಂತರೇ ಚೈವ ರಜಃ ಸಮಭಿವರ್ತತ ।
ಉಷ್ಣಾಂ ತೀವ್ರಾಂ ಸಹಸ್ರಾಂಶೋಶ್ಛಾದಯದ್ಗಗನೇ ಪ್ರಭಾಮ್ ॥ ೮

---

ಚಿತ್ರವಲ್ಲ. ಸೌಮ್ಯ, ನಿನ್ನಂತಹ ವೀರನು ಮಿತ್ರರಿಗೆ ಉಪಕಾರಮಾಡುವುದರಲ್ಲಿ ಆಶ್ಚರ್ಯವೇನಿದೆ? ಸುಗ್ರೀವ, ನೀನು ಗುಣಶಾಲಿಯೆಂಬುದನ್ನೂ ಸತತವೂ ಪ್ರಿಯವಾದಿಯೆಂಬುದನ್ನೂ ನಾನು ಬಲ್ಲೆ (೩-೪) ವಯಸ್ಯ, ನಿನ್ನ ಸಹಾಯದಿಂದ ಸಕಲ ಶತ್ರುಗಳನ್ನೂ ರಣದಲ್ಲಿ ನಾನು ಜಯಿಸಬಲ್ಲೆ. ನೀನೇ ನನಗೆ ಸದ್ಭಾವನೆಯುಳ್ಳ ಗೆಳೆಯನಾಗಿದ್ದೀಯೆ. ನೀನೇ ನನಗೆ ನೆರವನ್ನು ನೀಡಬಲ್ಲೆ. ಆ ರಾಕ್ಷಸಾಧಮನು ತನ್ನ ವಿನಾಶಕ್ಕಾಗಿಯೇ ವೈದೇಹಿಯನ್ನು ಅಪಹರಿಸಿದ್ದಾನೆ! ಅನುಹ್ರಾದನು ಪುಲೋಮಪುತ್ರಿಯಾದ ಶಚಿಯನ್ನು ವಂಚಿಸಿ ಒಯ್ದಂತೆ ಕದ್ದುಕೊಂಡುಹೋಗಿದ್ದಾನೆ (೫-೬). ಉದ್ಧತನಾದ ರಾವಣನನ್ನು ಶೀಘ್ರದಲ್ಲಿಯೇ ನಿಶಿತಾಸ್ತ್ರಗಳಿಂದ ಕೊಲ್ಲುವೆನು. ಶಚಿಯ ತಂದೆಯಾದ ಸೊಕ್ಕಿದ ಪುಲೋಮನನ್ನು ದೇವೇಂದ್ರನು ಸಂಹರಿಸಿದಂತೆ ಸಂಹರಿಸುವೆನು * " ಎಂದು ನುಡಿದನು (೭) ಅಷ್ಟರಲ್ಲಿ ತೀವ್ರವಾದ ಸೂರ್ಯಪ್ರಭೆಯನ್ನು ಮಾಸುವಂತೆ ರಜೋರಾಶಿಯು ಗಗನವನ್ನಡರಿತು.

---

* ಪುಲೋಮನ ಮಗಳಾದ ಶಚೀದೇವಿಯನ್ನು ಇಂದ್ರನಿಗೆ ಮದುವೆಮಾಡಿಕೊಡಬೇಕೆಂದು ನಿಶ್ಚಯವಾಗಿತ್ತು. ಅಷ್ಟರಲ್ಲಿ ಅನುಹ್ರಾದನೆಂಬ ದೈತ್ಯನು ಪುಲೋಮನೊಡನೆ ಸಂಚುಮಾಡಿ ಶಚಿಯನ್ನಪಹರಿಸಿದನು. ಆಗ ಕ್ರುದ್ಧನಾದ ಇಂದ್ರನು ಪುಲೋಮ ಅನುಹ್ರಾದರಿಬ್ಬರನ್ನೂ ಕೊಂದು ಶಚಿಯನ್ನು ಬಿಡಿಸಿಕೊಂಡು ಬಂದನೆಂದು ಕಥೆ ಇದೆ.

ದಿಶಃ ಪರ್ಯಾಕುಲಾಶ್ಚಾಸನ್ ರಜಸಾ ತೇನ ಮೂರ್ಛಿತಾ ।
ಚಚಾಲ ಚ ಮಹೀ ಸರ್ವಾ ಸಶೈಲವನಕಾನನಾ ॥ ೯

ತತೋ ನಗೇಂದ್ರಸಂಕಾಶೈಸ್ತೀಕ್ಷ್ಣದಂಷ್ಟ್ರೈರ್ಮಹಾಬಲೈಃ ।
ಕೃತ್ಸ್ನಾ ಸಂಛಾದಿತಾ ಭೂಮಿರಸಂಖ್ಯೇಯೈಃ ಪ್ಲವಂಗಮೈಃ ॥ ೧೦

ನಿಮೇಷಾಂತರಮಾತ್ರೇಣ ತತಸ್ತೈರ್ಹರಿಯೂಥಪೈಃ ।
ಕೋಟೀಶತಪರೀವಾರೈಃ ಕಾಮರೂಪಿಭಿರಾವೃತಾ ॥ ೧೧

ನಾದೇಯೈಃ ಪಾರ್ವತೇಯೈಶ್ಚ ಸಾಮುದ್ರೈಶ್ಚ ಮಹಾಬಲೈಃ ।
ಹರಿಭಿರ್ಮೇಘನಿರ್ಹ್ರಾದೈರನ್ಯೈಶ್ಚ ವನಚಾರಿಭಿಃ ॥ ೧೨

ತರುಣಾದಿತ್ಯವರ್ಣೈಶ್ಚ ಶಶಿಗೌರೈಶ್ಚ ವಾನರೈಃ ।
ಪದ್ಮಕೇಸರವರ್ಣೈಶ್ಚ ಶ್ವೇತೈರ್ಮೇರುಕೃತಾಲಯೈಃ ॥ ೧೩

ಕೋಟೀಸಹಸ್ರೈರ್ದಶಭಿಃ ಶ್ರೀಮಾನ್ ಪರಿವೃತಸ್ತದಾ ।
ವೀರಃ ಶತವಲಿರ್ನಾಮ ವಾನರಃ ಪ್ರತ್ಯದೃಶ್ಯತ ॥ ೧೪

---

ಧೂಳಿಯಿಂದ ದಿಕ್ಕುಗಳು ಮಲಿನವಾದವು. ಪರ್ವತಾರಣ್ಯಸಹಿತವಾದ ಭೂಮಿಯು ನಡುಗಿದಂತಾಯಿತು ಸ್ವಲ್ಪಕಾಲದಲ್ಲಿಯೇ ಪರ್ವತಾಕಾರರೂ ತೀಕ್ಷ್ಣದಂಷ್ಟ್ರರೂ ಮಹಾಬಲರೂ ಆದ ಲೆಕ್ಕವಿಲ್ಲದಷ್ಟು ವಾನರರು ಬಂದು ಅಲ್ಲಿಯ ಸಮಸ್ತ ಪ್ರದೇಶವನ್ನೂ ಆವರಿಸಿಬಿಟ್ಟರು! (೮-೧೦). ಒಂದು ನಿಮಿಷಮಾತ್ರದಲ್ಲಿ ಕಾಮರೂಪಿಗಳಾದ ಕಪಿನಾಯಕರು ಕೋಟಿಗಟ್ಟಲೆ ಕಪಿಪರಿವಾರದೊಡನೆ ಬಂದು ವ್ಯಾಪಿಸಿಬಿಟ್ಟರು. ಅವರಲ್ಲಿ ಕೆಲವರು ನದೀತೀರವಾಸಿಗಳು. ಕೆಲವರು ಪರ್ವತವಾಸಿಗಳು. ಕೆಲವರು ಸಮುದ್ರತೀರದಲ್ಲಿದ್ದವರು. ಕೆಲವರು ವನದಲ್ಲಿ ನೆಲೆಸಿದವರು. ಬಲಾಢ್ಯರಾದ ಅವರೆಲ್ಲರೂ ಮೋಡದಂತೆ ಗುಡುಗುತ್ತ ಬಂದರು (೧೧-೧೨) ಆ ವಾನರರಲ್ಲಿ ಕೆಲವರು ಬಾಲಸೂರ್ಯನಂತೆ ಹೊಂಬಣ್ಣದವರಾಗಿದ್ದರೆ, ಕೆಲವರು ಚಂದ್ರನಂತೆ ಗೌರವರ್ಣದವರು. ಕೆಲವರು ಪದ್ಮಕೇಸರದಂತೆ ಎಳೆಗೆಂಪಿನವರಾದರೆ, ಕೆಲವರು ಬಿಳಿಯಬಣ್ಣದವರು. ಆಗ ಶತಬಲಿಯೆಂಬ ಕಪಿವೀರನು ಮೇರುವಾಸಿಗಳಾದ ಹತ್ತುಸಾವಿರ ಕೋಟಿ ಸಂಖ್ಯೆಯ ಕಪಿಗಳೊಡನೆ ಬಂದು ಕಾಣಿಸಿಕೊಂಡನು

ತತಃ ಕಾಂಚನಶೈಲಾಭಸ್ತಾರಾಯಾ ವೀರ್ಯವಾನ್ ಪಿತಾ ।
ಅನೇಕೈರ್ದಶಸಾಹಸ್ರೈಃ ಕೋಟಿಭಿಃ ಪ್ರತ್ಯದೃಶ್ಯತ ॥ ೧೫

ತಥಾಪರೇಣ ಕೋಟೀನಾಂ ಸಹಸ್ರೇಣ ಸಮನ್ವಿತಃ ।
ಪಿತಾ ರುಮಾಯಾಃ ಸಂಪ್ರಾಪ್ತಃ ಸುಗ್ರೀವಶ್ವಶುರೋ ವಿಭುಃ ॥ ೧೬

ಪದ್ಮಕೇಸರಸಂಕಾಶಸ್ತರುಣಾರ್ಕನಿಭಾನನಃ ।
ಬುದ್ಧಿಮಾನ್ ವಾನರಶ್ರೇಷ್ಠಃ ಸರ್ವವಾನರಸತ್ತಮಃ ॥ ೧೭

ಅನೀಕೈರ್ಬಹುಸಾಹಸ್ರೈರ್ವಾನರಾಣಾಂ ಸಮನ್ವಿತಃ ।
ಪಿತಾ ಹನುಮತಃ ಶ್ರೀಮಾನ್ ಕೇಸರೀ ಪ್ರತ್ಯದೃಶ್ಯತ ॥ ೧೮

ಗೋಲಾಂಗೂಲಮಹಾರಾಜೋ ಗವಾಕ್ಷೋ ಭೀಮವಿಕ್ರಮಃ ।
ವೃತಃ ಕೋಟಿಸಹಸ್ರೇಣ ವಾನರಾಣಾಮದೃಶ್ಯತ ॥ ೧೯

ಋಕ್ಷಾಣಾಂ ಭೀಮವೇಗಾನಾಂ ಧೂಮ್ರಃ ಶತ್ರುನಿಬರ್ಹಣಃ ।
ವೃತಃ ಕೋಟಿಸಹಸ್ರಾಭ್ಯಾಂ ದ್ವಾಭ್ಯಾಂ ಸಮಭಿವರ್ತತ ॥ ೨೦

ಮಹಾಚಲನಿಭೈರ್ಘೋರೈಃ ಪನಸೋ ನಾಮ ಯೂಥಪಃ ।
ಆಜಗಾಮ ಮಹಾವೀರ್ಯಸ್ತಿಸೃಭಿಃ ಕೋಟಿಭಿರ್ವೃತಃ ॥ ೨೧

---

(೧೫-೧೮) ಸುವರ್ಣಶೈಲದಂತಿದ್ದ, ತಾರೆಯ ತಂದೆಯಾದ ಸುಷೇಣನೆಂಬ ವೀರನು ಹತ್ತುಸಾವಿರಕೋಟಿ ವಾನರರೊಡನೆ ಬಂದು ನಿಂತನು ಸುಗ್ರೀವನ ಮಾವನೂ ರುಮೆಯ ತಂದೆಯೂ ಆದ ತಾರನು ಸಾವಿರಕೋಟಿ ಸೈನ್ಯದೊಡನೆ ಬಂದನು (೧೫-೧೬). ಅನಂತರ ಹನುಮಂತನ ತಂದೆಯೂ ಸಕಲ ವಾನರ ಶ್ರೇಷ್ಠನೂ ಆದ ಕೇಸರಿಯು ಅನೇಕ ಸಾವಿರ ಸಂಖ್ಯೆಯಲ್ಲಿ ಕಪಿಸೇನೆಯನ್ನು ತಂದು ಕಾಣಿಸಿಕೊಂಡನು ಕೇಸರಿಯಾದರೋ ಪದ್ಮಕೇಸರದಂತೆ ಹೊಂಬಣ್ಣವುಳ್ಳವನಾಗಿ ಬಾಲಸೂರ್ಯನಂತಿರುವ ಮುಖದಿಂದ ವಿರಾಜಿತನಾಗಿದ್ದನು. ಆ ಕಪಿಶ್ರೇಷ್ಠನು ಬಹಳ ಬುದ್ಧಿಶಾಲಿ (೧೭-೧೮). ಆಮೇಲೆ ಗೋಲಾಂಗೂಲಗಳಿಗೆ ರಾಜನೂ ಭೀಮವಿಕ್ರಮನೂ ಆದ ಗವಾಕ್ಷನು ಸಾವಿರಕೋಟಿ ವಾನರರಿಂದ ಪರಿವೃತನಾಗಿ ಗೋಚರಿಸಿದನು. ಶತ್ರುಧ್ವಂಸಕನಾದ ಧೂಮ್ರನು ಎರಡು ಸಾವಿರಕೋಟಿ ಭಲ್ಲೂಕವೀರರೊಡನೆ ಬಂದು ಸೇರಿದನು (೧೯-೨೦) ಮಹಾವೀರ್ಯವುಳ್ಳ ಪನಸನೆಂಬ

ನೀಲಾಂಜನಚಯಾಕಾರೋ ನೀಲೋ ನಾಮಾಥ ಯೂಥಪಃ ।
ಅದೃಶ್ಯತ ಮಹಾಕಾಯಃ ಕೋಟಿಭಿರ್ದಶಭಿರ್ವೃತಃ ॥ ೨೨

ತತಃ ಕಾಂಚನಶೈಲಾಭೋ ಗವಯೋ ನಾಮ ಯೂಥಪಃ ।
ಆಜಗಾಮ ಮಹಾವೀರ್ಯಃ ಕೋಟಿಭಿಃ ಪಂಚಭಿರ್ವೃತಃ ॥ ೨೩

ದರೀಮುಖಶ್ಚ ಬಲವಾನ್ ಯೂಥಪೋಽಭ್ಯಾಯಯೌ ತದಾ ।
ವೃತಃ ಕೋಟಿಸಹಸ್ರೇಣ ಸುಗ್ರೀವಂ ಸಮುಪಸ್ಥಿತಃ ॥ ೨೪

ಮೈಂದಶ್ಚ ದ್ವಿವಿದಶ್ಚೋಭಾವಶ್ವಿಪುತ್ರೌ ಮಹಾಬಲೌ ।
ಕೋಟಿಕೋಟಿಸಹಸ್ರೇಣ ವಾನರಾಣಾಮದೃಶ್ಯತ ॥ ೨೫

ಗಜಶ್ಚ ಬಲವಾನ್ ವೀರಃ ಕೋಟಿಭಿಸ್ತಿಸೃಭಿರ್ವೃತಃ ।
ಆಜಗಾಮ ಮಹಾತೇಜಾಃ ಸುಗ್ರೀವಸ್ಯ ಸಮೀಪತಃ ॥ ೨೬

ಋಕ್ಷರಾಜೋ ಮಹಾತೇಜಾ ಜಾಂಬವಾನ್ನಾಮ ನಾಮತಃ ।
ಕೋಟಿಭಿರ್ದಶಭಿಃ ಪ್ರಾಪ್ತಃ ಸುಗ್ರೀವಸ್ಯ ವಶೇ ಸ್ಥಿತಃ ॥ ೨೭

---

ಸೇನಾಪತಿಯು ಪರ್ವತಾಕೃತಿಗಳೂ ಭಯಂಕರರೂ ಆದ ಮೂರುಕೋಟಿ ಕಪಿಗಳಿಂದ ಯುಕ್ತನಾಗಿ ಬಂದನು. ಆಮೇಲೆ ಕಪ್ಪುಕಾಡಿಗೆಯ ರಾಶಿಯಂತೆ ಗೋಚರಿಸುತ್ತಿದ್ದ ನೀಲನೆಂಬ ಭೀಮಕಾಯನಾದ ಸೇನಾಪತಿಯು ಹತ್ತುಕೋಟಿ ಸೈನಿಕರೊಡನೆ ಬಂದು ಸೇರಿದನು (೨೧-೨೨). ಅನಂತರ ಕನಕಶೈಲದಂತೆ ವಿರಾಜಿಸುತ್ತಿದ್ದ ಮಹಾಪರಾಕ್ರಮಿಯಾದ ಗವಯನು ಐದು ಕೋಟಿ ವಾನರಸೇನೆಯೊಡನೆ ಆಗಮಿಸಿದನು ಬಲಾಢ್ಯನಾದ ದರೀಮುಖನು ಒಂದು ಸಾವಿರಕೋಟಿ ಕಪಿಗಳೊಡನೆ ಸುಗ್ರೀವನ ಸಮೀಪದಲ್ಲಿ ಉಪಸ್ಥಿತನಾದನು (೨೩-೨೪). ಅಶ್ವಿನೀದೇವತೆಗಳ ಪುತ್ರರೂ ಮಹಾಶೂರರೂ ಆದ ಮೈಂದ, ದ್ವಿವಿದ ಎಂಬ ಇಬ್ಬರು ಸಾವಿರಾರುಕೋಟಿ ವಾನರ ಬಲವನ್ನು ತೆಗೆದುಕೊಂಡುಬಂದರು. ಶೂರಾಗ್ರೇಸರನಾದ ಗಜನು ಮೂರು ಕೋಟಿ ಸೈನಿಕರಿಂದ ಪರಿವೃತನಾಗಿ ಸುಗ್ರೀವನ ಬಳಿಗೆ ಬಂದನು (೨೫-೨೬) ಭಲ್ಲೂಕರಾಜನೂ ಮಹಾತೇಜಸ್ವಿಯೂ ಆದ ಜಾಂಬವಂತನು ಹತ್ತುಕೋಟಿ ಭಲ್ಲೂಕ ಸೈನ್ಯದೊಡನೆ ಆಗಮಿಸಿ ಸುಗ್ರೀವನ ವಶದಲ್ಲಿ ಕಾರ್ಯೋನ್ಮುಖ

ರುಮಣ್ವಾನ್ನಾಮ ವಿಕ್ರಾಂತೋ ವಾನರೋ ವಾನರೇಶ್ವರಮ್ ।
ಆಯಯೌ ಬಲವಾಂಸ್ತೂರ್ಣಂ ಕೋಟೀಶತಸಮಾವೃತಃ ॥ ೨೮

ತತಃ ಕೋಟಿಸಹಸ್ರಾಣಾಂ ಸಹಸ್ರೇಣ ಶತೇನ ಚ ।
ಪೃಷ್ಠತೋಽನುಗತಃ ಪ್ರಾಪ್ತೋ ಹರಿಭಿರ್ಗಂಧಮಾದನಃ ॥ ೨೯

ತತಃ ಪದ್ಮಸಹಸ್ರೇಣ ವೃತಃ ಶಂಕುಶತೇನ ಚ ।
ಯುವರಾಜೋಽಂಗದಃ ಪ್ರಾಪ್ತಃ ಪಿತೃತುಲ್ಯಪರಾಕ್ರಮಃ ॥ ೩೦

ತತಸ್ತಾರಾದ್ಯುತಿಸ್ತಾರೋ ಹರಿರ್ಭೀಮಪರಾಕ್ರಮಃ ।
ಪಂಚಭಿರ್ಹರಿಕೋಟೀಭಿರ್ದೂರತಃ ಪ್ರತ್ಯದೃಶ್ಯತ ॥ ೩೧

ಇಂದ್ರಜಾನುಃ ಕಪಿರ್ವೀರೋ ಯೂಥಪಃ ಪ್ರತ್ಯದೃಶ್ಯತ ।
ಏಕಾದಶಾನಾಂ ಕೋಟೀನಾಮೀಶ್ವರಸ್ತೈಶ್ಚ ಸಂವೃತಃ ॥ ೩೨

ತತೋ ರಂಭಸ್ತ್ವನುಪ್ರಾಪ್ತಸ್ತರುಣಾದಿತ್ಯಸಂನಿಭಃ ।
ಅಯುತೇನಾವೃತಶ್ಚೈವ ಸಹಸ್ರೇಣ ಶತೇನ ಚ ॥ ೩೩

---

ನಾದನು. ವೀರಾಗ್ರೇಸರನಾದ ರುಮಣ್ವಂತನೆಂಬ ವಾನರನು ನೂರು ಕೋಟಿ ವಾನರ ಸೇನೆಯೊಡನೆ ವಾನರೇಂದ್ರನಾದ ಸುಗ್ರೀವನ ಹತ್ತಿರ ಉಪಸ್ಥಿತನಾದನು (೨೭-೨೮). ಆಮೇಲೆ ಗಂಧಮಾದನನು ಬಂದನು. ಅವನನ್ನು ಹಿಂಬಾಲಿಸಿ ಹನ್ನೊಂದು ಲಕ್ಷಕೋಟಿ ಸೈನಿಕರು ಬಂದರು. ಯುವರಾಜನಾದ ಅಂಗದನು ತಂದೆಯಾದ ವಾಲಿಗೆ ಸಮಾನವಾದ ಪರಾಕ್ರಮವುಳ್ಳವನು. ಅವನು ಸಾವಿರ ಪದ್ಮ ಮತ್ತು ನೂರು ಶಂಖ ಪರಿಮಿತವಾದ ಅಪಾರ ಸೇನೆಯೊಡನೆ ಆಗಮಿಸಿದನು (೨೯-೩೦) ಅನಂತರ ನಕ್ಷತ್ರದಂತೆ ವಿರಾಜಿಸುತ್ತಿದ್ದ ಭೀಮಪರಾಕ್ರಮನಾದ ತಾರ* ಎಂಬವನು ಐದು ಕೋಟಿ ವಾನರರೊಂದಿಗೆ ಬಂದು ಕಾಣಿಸಿಕೊಂಡನು. ಹನ್ನೊಂದು ಕೋಟಿ ಕಪಿಗಳಿಗೆ ನಾಯಕನಾದ ಇಂದ್ರಜಾನುವೆಂಬ ಸೇನಾಪತಿಯು ತನ್ನ ಸೇನೆಯೊಂದಿಗೆ ಉಪಸ್ಥಿತನಾದನು (೩೧-೩೨). ಆಮೇಲೆ ಬಾಲಾದಿತ್ಯ ನಂತೆ ಬೆಳಗುತ್ತಿದ್ದ ರಂಭನೆಂಬ ವೀರನು ನೂರು ಕೋಟಿ ಸೈನಿಕರೊಂದಿಗೆ

---

* ಇವನು ಹಿಂದೆ ಹೇಳಿದ ರುಮೆಯ ತಂದೆಯಾದ ತಾರನಲ್ಲ.

ತತೋ ಯೂಥಪತಿರ್ವೀರೋ ದುರ್ಮುಖೋ ನಾಮ ವಾನರಃ ।
ಪ್ರತ್ಯದೃಶ್ಯತ ಕೋಟಿಭ್ಯಾಂ ದ್ವಾಭ್ಯಾಂ ಪರಿವೃತೋ ಬಲೀ ॥ ೩೪

ಕೈಲಾಸಶಿಖರಾಕಾರೈರ್ವಾನರೈರ್ಭೀಮವಿಕ್ರಮೈಃ ।
ವೃತಃ ಕೋಟಿಸಹಸ್ರೇಣ ಹನುಮಾನ್ ಪ್ರತ್ಯದೃಶ್ಯತ ॥ ೩೫

ನಲಶ್ಚಾಪಿ ಮಹಾವೀರ್ಯಃ ಸಂವೃತೋ ದ್ರುಮವಾಸಿಭಿಃ ।
ಕೋಟೀಶತೇನ ಸಂಪ್ರಾಪ್ತಃ ಸಹಸ್ರೇಣ ಶತೇನ ಚ ॥ ೩೬

ತತೋ ದಧಿಮುಖಃ ಶ್ರೀಮಾನ್ ಕೋಟಿಭಿರ್ದಶಭಿರ್ವೃತಃ ।
ಸಂಪ್ರಾಪ್ತೋಽಭಿಮತಸ್ತಸ್ಯ ಸುಗ್ರೀವಸ್ಯ ಮಹಾತ್ಮನಃ ॥ ೩೭

ಶರಭಃ ಕುಮುದೋ ವಹ್ನಿರ್ವಾನರೋ ರಂಹ ಏವ ಚ ।
ಏತೇ ಚಾನ್ಯೇ ಚ ಬಹವೋ ವಾನರಾಃ ಕಾಮರೂಪಿಣಃ ॥ ೩೮

ಆವೃತ್ಯ ಪೃಥಿವೀಂ ಸರ್ವಾಂ ಪರ್ವತಾಂಶ್ಚ ವನಾನಿ ಚ ।
ಯೂಥಪಾಃ ಸಮನುಪ್ರಾಪ್ತಾಸ್ತೇಷಾಂ ಸಂಖ್ಯಾ ನ ವಿದ್ಯತೇ ॥ ೩೯

ಆಗತಾಶ್ಚ ನಿವಿಷ್ಟಾಶ್ಚ ಪೃಥಿವ್ಯಾಂ ಸರ್ವವಾನರಾಃ ।
ಆಪ್ಲವಂತಃ ಪ್ಲವಂತಶ್ಚ ಗರ್ಜಂತಶ್ಚ ಪ್ಲವಂಗಮಾಃ ॥ ೪೦

---

ಬಂದನು. ಬಲಶಾಲಿಯಾದ ದುರ್ಮುಖನೆಂಬ ಸೇನಾಧ್ಯಕ್ಷನು ಎರಡು ಕೋಟಿ ವಾನರರಿಂದ ಪರಿವೃತನಾಗಿ ಆಗಮಿಸಿದನು (೩೩-೩೪). ಹನುಮಂತನು ಕೈಲಾಸಶಿಖರದಂತೆ ಉನ್ನತಕಾಯರೂ ಭೀಮವಿಕ್ರಮರೂ ಆದ ಸಾವಿರ ಕೋಟಿ ವಾನರ ಸೇನೆಯೊಡನೆ ಬಂದನು. ಮಹಾವೀರ್ಯನಾದ ನಳನು ನೂರು ಕೋಟಿ ಮತ್ತು ಒಂದು ಲಕ್ಷ ಕಪಿಗಳೊಡನೆ ಪರಿವೃತನಾಗಿ ಬಂದನು (೩೫-೩೬). ಮಹಾತ್ಮನಾದ ಸುಗ್ರೀವನಿಗೆ ಪ್ರೀತಿಪಾತ್ರನಾದ ದಧಿಮುಖನು ಹತ್ತುಕೋಟಿ ವಾನರರೊಡನೆ ಉಪಸ್ಥಿತನಾದನು. ಹೀಗೆಯೇ ಶರಭ, ಕುಮುದ, ವಹ್ನಿ, ರಂಹ ಮುಂತಾದ ಕಾಮರೂಪಿಗಳಾದ ಕಪಿವೀರರು ಬಂದು ಅಲ್ಲಿಯ ಸಮಸ್ತ ಭೂಮಿಯನ್ನೂ ಪರ್ವತಾರಣ್ಯಗಳನ್ನೂ ವ್ಯಾಪಿಸಿ ನಿಂತರು. ಅವರ ಸಂಖ್ಯೆಯನ್ನು ಹೇಳಲು ಸಾಧ್ಯವಿಲ್ಲವಾಯಿತು (೩೭-೩೯). ಪೃಥಿವಿಯಲ್ಲಿದ್ದ ಸಕಲ ವಾನರರೂ ಅಲ್ಲಿಗೆ ಬಂದು ಸಮಾವೇಶ ಗೊಂಡರು. ಅವರೆಲ್ಲರೂ ಹಾರುತ್ತ, ಕುಪ್ಪಳಿಸುತ್ತ, ಗರ್ಜಿಸುತ್ತ ಬಂದು

ಅಭ್ಯವರ್ತಂತ ಸುಗ್ರೀವಂ ಸೂರ್ಯಮಭ್ರಗಣಾ ಇವ ।
ಕುರ್ವಾಣಾ ಬಹುಶಬ್ದಾಂಶ್ಚ ಪ್ರಹೃಷ್ಟಾ ಬಾಹುಶಾಲಿನಃ ॥ ೪೧

ಶಿರೋಭಿರ್ವಾನರೇಂದ್ರಾಯ ಸುಗ್ರೀವಾಯ ನ್ಯವೇದಯನ್ ।
ಅಪರೇ ವಾನರಶ್ರೇಷ್ಠಾಃ ಸಂಗಮ್ಯ ಚ ಯಥೋಚಿತವತ್ ॥ ೪೨

ಸುಗ್ರೀವೇಣ ಸಮಾಗಮ್ಯ ಸ್ಥಿತಾಃ ಪ್ರಾಂಜಲಯಸ್ತದಾ ।
ಸುಗ್ರೀವಸ್ತ್ವರಿತೋ ರಾಮೇ ಸರ್ವಾಂಸ್ತಾನ್ ವಾನರರ್ಷಭಾನ್ ॥

ನಿವೇದಯಿತ್ವಾ ಧರ್ಮಜ್ಞಃ ಸ್ಥಿತಃ ಪ್ರಾಂಜಲಿರಬ್ರವೀತ್ ॥

ಯಥಾಸುಖಂ ಪರ್ವತನಿರ್ಝರೇಷು
ವನೇಷು ಸರ್ವೇಷು ಚ ವಾನರೇಂದ್ರಾಃ ।
ನಿವೇಶಯಿತ್ವಾ ವಿಧಿವದ್ಬಲಾನಿ
ಬಲಂ ಬಲಜ್ಞಃ ಪ್ರತಿಪತ್ತುಮೀಷ್ಟೇ ॥ ೪೪

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಏಕೋನಚತ್ವಾರಿಂಶಃ ಸರ್ಗಃ

---

ಸುಗ್ರೀವನ ಸುತ್ತಲೂ ನೆರೆದರು. ಸೂರ್ಯನ ಸುತ್ತಲೂ ಮೋಡಗಳು ಕವಿಯುವಂತೆ ಕವಿದರು. ಆ ವೀರರು ಹರ್ಷೋದ್ರೇಕದಿಂದ ಕೋಲಾಹಲ ಮಾಡಿದರು (೪೦–೪೧). ಅವರೆಲ್ಲರೂ ವಾನರೇಂದ್ರನಾದ ಸುಗ್ರೀವನಿಗೆ ತಲೆಬಾಗಿ ವಂದಿಸಿದರು. ಸೇನಾನಿಗಳಾದ ಕೆಲವು ವಾನರಮುಖ್ಯರು ಸುಗ್ರೀವನನ್ನು ಯಥೋಚಿತವಾಗಿ ಸಂದರ್ಶಿಸಿ ಕೈಮುಗಿದು ತಮ್ಮ ಆಗಮನ ವೃತ್ತಾಂತವನ್ನು ನಿವೇದಿಸಿದರು. ಧರ್ಮಜ್ಞನಾದ ಸುಗ್ರೀವನು ತ್ವರೆಯಿಂದ ಹೋಗಿ ಆ ಕಪಿನಾಯಕರೆಲ್ಲರನ್ನೂ ಶ್ರೀರಾಮನಿಗೆ ಕೈಮುಗಿದು ಪರಿಚಯ ಮಾಡಿಸಿಕೊಟ್ಟನು (೪೨–೪೩). ಆನಂತರ ಸುಗ್ರೀವನು ಸೇನಾಪತಿಗಳನ್ನು ನೋಡಿ "ಎಲೈ ವಾನರೋತ್ತಮರೆ, ನಿಮ್ಮ ಸೇನೆಗಳನ್ನು ಗಿರಿನದೀತೀರಗಳಲ್ಲಿಯೂ ವನಗಳಲ್ಲಿಯೂ ಯಥಾನುಕೂಲವಾಗಿ ಬಿಡಾರಮಾಡಿಸಿರಿ" ಎಂದು ಆದೇಶವನ್ನಿತ್ತನು. ಆ ಸುಗ್ರೀವನು ಕಪಿಸೇನೆಯ ಬಲವೆಷ್ಟೆಂಬುದನ್ನು ತಿಳಿಯಲುದ್ದೇಶಿಸಿದನು (೪೪).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಮೂವತ್ತೊಂಬತ್ತನೆಯ ಸರ್ಗ

## ಚತ್ವಾರಿಂಶಃ ಸರ್ಗಃ

### ಪ್ರಾಚೀಪ್ರೇಷಣಮ್

ಅಥ ರಾಜಾ ಸಮೃದ್ಧಾರ್ಥಃ ಸುಗ್ರೀವಃ ಪ್ಲವಗಾಧಿಪಃ ।
ಉವಾಚ ನರಶಾರ್ದೂಲಂ ರಾಮಂ ಪರಬಲಾರ್ದನಮ್ ॥ ೧

ಆಗತಾ ವಿನಿವಿಷ್ಟಾಶ್ಚ ಬಲಿನಃ ಕಾಮರೂಪಿಣಃ ।
ವಾನರಾ ವಾರಣೇಂದ್ರಾಭಾ ಯೇ ಮದ್ವಿಷಯವಾಸಿನಃ ॥ ೨

ತ ಇಮೇ ಬಹುವಿಕ್ರಾಂತೈರ್ಹರಿಭಿರ್ಭೀಮವಿಕ್ರಮೈಃ ।
ಆಗತಾ ವಾನರಾ ಘೋರಾ ದೈತ್ಯದಾನವಸಂನಿಭಾಃ ॥ ೩

ಖ್ಯಾತಕರ್ಮಾಪದಾನಾಶ್ಚ ಬಲವಂತೋ ಜಿತಕ್ಲಮಾಃ ।
ಪರಾಕ್ರಮೇಷು ವಿಖ್ಯಾತಾ ವ್ಯವಸಾಯೇಷು ಚೋತ್ತಮಾಃ ॥ ೪

### ಸರ್ಗ ೪೦

ಸುಗ್ರೀವನು ಸೀತಾನ್ವೇಷಣಕ್ಕಾಗಿ ವಿನತನೆಂಬ ಸೇನಾಪತಿಯನ್ನು ಪೂರ್ವದಿಕ್ಕಿಗೆ ಕಳಿಸುವುದು.

ಹೀಗೆ ವಾನರೇಂದ್ರನಾದ ಸುಗ್ರೀವನು ಸಮೃದ್ಧವಾಗಿ ಸೇನಾಬಲವನ್ನು ಸಂಗ್ರಹಿಸಿ, ಪರಂತಪನಾದ ಶ್ರೀರಾಮನನ್ನು ಕುರಿತು " ಶ್ರೀರಾಮ, ಬಲಶಾಲಿಗಳಾದ ವಾನರರೆಲ್ಲರೂ ಬಂದು ಬಿಡಾರ ಹೂಡಿದ್ದಾರೆ. ಇವರೆಲ್ಲರೂ ನನ್ನ ರಾಜ್ಯದಲ್ಲಿರತಕ್ಕವರು. ಆನೆಗಳಂತೆ ಮಹಾಕಾಯರಾದ ಇವರು ಕಾಮರೂಪಿಗಳು (೧-೨). ಈ ಸೇನಾನಿಗಳು ಭೀಮವಿಕ್ರಮರೂ ಶೂರರೂ ಆದ ಕಪಿಗಳನ್ನೊಡಗೂಡಿ ಬಂದಿದ್ದಾರೆ. ಈ ವಾನರರೆಲ್ಲರೂ ದೈತ್ಯದಾನವರಂತೆ ಭೀಕರಕಾರ್ಯವನ್ನು ಮಾಡಲು ಸಮರ್ಥರು. ಹಿಂದೆ ಅನೇಕ ಬಾರಿ ಮಹಾಕಾರ್ಯಗಳನ್ನು ನಡೆಸಿ ವಿಖ್ಯಾತರಾಗಿದ್ದಾರೆ. ಶ್ರಮವನ್ನೇ ಇವರು ಗಣಿಸುವುದಿಲ್ಲ. ಸಾಹಸಕೃತ್ಯಗಳಲ್ಲಿಯೂ ಕಾರ್ಯನಿಶ್ಚಯದಲ್ಲಿಯೂ ಹೆಸರು

ಪೃಥಿವ್ಯಂಬುಚರಾ ರಾಮ ನಾನಾನಗನಿವಾಸಿನಃ ।
ಕೋಟ್ಯಗ್ರಶ ಇಮೇ ಪ್ರಾಪ್ತಾ ವಾನರಾಸ್ತವ ಕಿಂಕರಾಃ ॥ ೫

ನಿದೇಶವರ್ತಿನಃ ಸರ್ವೇ ಸರ್ವೇ ಗುರುಹಿತೇ ರತಾಃ ।
ಅಭಿಪ್ರೇತಮನುಷ್ಠಾತುಂ ತವ ಶಕ್ಷ್ಯಂತ್ಯರಿಂದಮ ॥ ೬

ತ ಇಮೇ ಬಹುಸಾಹಸ್ರೈರನೀಕೈರ್ಭೀಮವಿಕ್ರಮೈಃ ।
ಯನ್ಮನ್ಯಸೇ ನರವ್ಯಾಘ್ರ ಪ್ರಾಪ್ತಕಾಲಂ ತದುಚ್ಯತಾಮ್ ॥ ೭

ತ್ವತ್ಸೈನ್ಯಂ ತ್ವದ್ವಶೇ ಯುಕ್ತಮಾಜ್ಞಾಪಯಿತುಮರ್ಹಸಿ ।
ಕಾಮಮೇಷಾಮಿದಂ ಕಾರ್ಯಂ ವಿದಿತಂ ಮಮ ತತ್ತ್ವತಃ ॥ ೮

ತಥಾಪಿ ತು ಯಥಾತತ್ತ್ವಮಾಜ್ಞಾಪಯಿತುಮರ್ಹಸಿ ।
ತಥಾ ಬ್ರುವಾಣಂ ಸುಗ್ರೀವಂ ರಾಮೋ ದಶರಥಾತ್ಮಜಃ ॥ ೯

ಬಾಹುಭ್ಯಾಂ ಸಂಪರಿಷ್ವಜ್ಯ ಇದಂ ವಚನಮಬ್ರವೀತ್ ।
ಜ್ಞಾಯತಾಂ ಮಮ ವೈದೇಹೀ ಯದಿ ಜೀವತಿ ವಾ ನ ವಾ ॥ ೧೦

---

ಪಡೆದವರು (೩-೪). ಶ್ರೀರಾಮ, ಈ ವಾನರರು ಭೂಮಾರ್ಗ ಜಲಮಾರ್ಗಗಳಲ್ಲಿ ತಡೆಯಿಲ್ಲದೆ ಸಂಚರಿಸಬಲ್ಲರು. ವಿವಿಧ ಪರ್ವತವಾಸಿಗಳಾದ ಇವರು ಕೋಟಿಗಟ್ಟಲೆ ಬಂದು ಸೇರಿದ್ದಾರೆ. ಎಲ್ಲರೂ ನಿನ್ನ ಕಿಂಕರರೆಂದು ತಿಳಿ. ಸರ್ವರೂ ಆಜ್ಞೆಗೆ ವಿಧೇಯರಾಗಿ ನಡೆಯುತ್ತಾರೆ. ಸರ್ವರೂ ಸ್ವಾಮಿಕಾರ್ಯದಲ್ಲಿ ನಿರತರು. ನಿನ್ನ ಇಷ್ಟದಂತೆ ಕಾರ್ಯವನ್ನು ನೆರವೇರಿಸಲು ಇವರು ಶಕ್ತರು (೫-೬). ಹೇ ಪುರುಷೋತ್ತಮ, ಮಹಾಪರಾಕ್ರಮಿಗಳಾದ ಅನೇಕ ಸಹಸ್ರ ಸೈನಿಕರೊಡನೆ ಈ ಸೇನಾಪತಿಗಳು ಬಂದಿದ್ದಾರೆ. ನಿನಗೆ ಯಾವುದು ಕಾಲೋಚಿತವಾದ ಕರ್ತವ್ಯವೆಂದು ತೋರುವುದೋ ಅದನ್ನು ತಿಳಿಸು. ಈ ಸೇನೆಯೆಲ್ಲವೂ ನಿನ್ನದು. ನಿನಗೆ ಅಧೀನವಾಗಿ ನಡೆಯುತ್ತದೆ. ಇವರಿಗೆ ಆಜ್ಞೆಯನ್ನು ಕೊಡು. ಈ ವಾನರರು ಈಗ ಏನು ಮಾಡಬೇಕೆಂಬುದನ್ನು ನಾನೇನೋ ನಿರ್ಧರಿಸಿಕೊಂಡಿದ್ದೇನೆ (೭-೮). ಆದರೂ ಯಾವುದು ಸರಿಯೆಂಬುದನ್ನು ಗೊತ್ತುಮಾಡಿ ನೀನೇ ಆಜ್ಞೆಯನ್ನು ಕೊಡು" ಎಂದು ನಿವೇದಿಸಿದನು. ಆಗ ದಶರಥನಂದನನು ಸುಗ್ರೀವನನ್ನು ಎರಡು ಕೈಗಳಿಂದಲೂ ಅಪ್ಪಿಕೊಂಡು "ವಾನರೇಂದ್ರ, ನನ್ನ ಸೀತೆಯು ಬದುಕಿರು

ಸ ಚ ದೇಶೋ ಮಹಾಪ್ರಾಜ್ಞ ಯಸ್ಮಿನ್ ವಸತಿ ರಾವಣಃ ।
ಅಧಿಗಮ್ಯ ತು ವೈದೇಹೀಂ ನಿಲಯಂ ರಾವಣಸ್ಯ ಚ ॥ ೧೧

ಪ್ರಾಪ್ತಕಾಲಂ ವಿಧಾಸ್ಯಾಮಿ ತಸ್ಮಿನ್ ಕಾಲೇ ಸಹ ತ್ವಯಾ ।
ನಾಹಮಸ್ಮಿನ್ ಪ್ರಭುಃ ಕಾರ್ಯೇ ವಾನರೇಶ ನ ಲಕ್ಷ್ಮಣಃ ॥ ೧೨

ತ್ವಮಸ್ಯ ಹೇತುಃ ಕಾರ್ಯಸ್ಯ ಪ್ರಭುಶ್ಚ ಪ್ಲವಗೇಶ್ವರ ।
ತ್ವಮೇವಾಜ್ಞಾಪಯ ವಿಭೋ ಮಮ ಕಾರ್ಯವಿನಿಶ್ಚಯಮ್ ॥ ೧೩

ತ್ವಂ ಹಿ ಜಾನಾಸಿ ಯತ್ ಕಾರ್ಯಂ ಮಮ ವೀರ ನ ಸಂಶಯಃ ।
ಸುಹೃದ್ದ್ವಿತೀಯೋ ವಿಕ್ರಾಂತಃ ಪ್ರಾಜ್ಞಃ ಕಾಲವಿಶೇಷವಿತ್ ॥ ೧೪

ಭವಾನಸ್ಮದ್ಧಿತೇ ಯುಕ್ತಃ ಸುಕೃತಾರ್ಥೋಽರ್ಥವಿತ್ತಮಃ ।
ಏವಮುಕ್ತಸ್ತು ಸುಗ್ರೀವೋ ವಿನತಂ ನಾಮ ಯೂಥಪಮ್ ॥ ೧೫

ಅಬ್ರವೀದ್ರಾಮಸಾಂನಿಧ್ಯೇ ಲಕ್ಷ್ಮಣಸ್ಯ ಚ ಧೀಮತಃ ।
ಶೈಲಾಭಂ ಮೇಘನಿರ್ಘೋಷಮೂರ್ಜಿತಂ ಪ್ಲವಗೇಶ್ವರಃ ॥ ೧೬

---

ವಳೋ ಇಲ್ಲವೋ ಎಂದು ಮೊದಲು ತಿಳಿದುಕೊ (೯–೧೦). ರಾವಣನಿರುವ ಸ್ಥಳವಾವುದೆಂದು ತಿಳಿಯಬೇಕಾಗಿದೆ. ಸೀತೆಯು ಬದುಕಿರುವಳೆಂದೂ ರಾವಣ ನಿರುವ ಸ್ಥಳವಾವುದೆಂದೂ ಗೊತ್ತಾದ ಮೇಲೆ, ಸಮಯೋಚಿತವಾದ ಕಾರ್ಯವನ್ನು ಕೈಗೊಳ್ಳುವೆನು. ನಿನ್ನ ಸಹಾಯದಿಂದ ಅದನ್ನು ನಡೆಸು ವೆನು. ಸುಗ್ರೀವ, ಈ ಹುಡುಕುವ ಕಾರ್ಯದಲ್ಲಿ ನಾನಾಗಲಿ ಲಕ್ಷ್ಮಣ ನಾಗಲಿ ನಿಯಾಮಕರಲ್ಲ (೧೧–೧೨). ಈ ವಿಷಯವು ನಿನ್ನಿಂದಾಗಬೇಕು. ನೀನೇ ಇದಕ್ಕೆ ಪ್ರಭು. ಆದ್ದರಿಂದ, ವಾನರೇಶ್ವರ, ಪ್ರಭುವಾದ ನೀನೇ ಕರ್ತವ್ಯವೇನೆಂದು ವಾನರರಿಗೆ ಆಜ್ಞಾಪಿಸು. ಮುಂದಿನ ಕಾರ್ಯವಿಧಾನವು ನಿನಗೆ ಚೆನ್ನಾಗಿ ತಿಳಿದಿದೆ. ಎಲೈ ಶೂರಾಗ್ರೇಸರ, ನಿನಗೆ ಬಹುಮಂದಿ ಮಿತ್ರರ ಸಹಾಯವಿದೆ. ಸ್ವತಃ ಪರಾಕ್ರಮಿಯೂ ಪ್ರಾಜ್ಞನೂ ಕಾಲವಿಶೇಷ ವನ್ನು ಬಲ್ಲವನೂ ಆಗಿದ್ದೀಯೆ (೧೩–೧೪). ನಮ್ಮ ಹಿತದಲ್ಲಿ ನಿರತನೂ ಅನೇಕ ಕಾರ್ಯಗಳನ್ನು ಸಾಧಿಸಿದವನೂ ಆಗಿದ್ದೀಯೆ. ಮಿತ್ರ, ರಾಜನೀತಿಜ್ಞ ರಲ್ಲಿ ಶ್ರೇಷ್ಠನಾದವನು ನೀನು" ಎಂದು ಹೇಳಿದನು. ಆಗ ಸುಗ್ರೀವನು ಪರ್ವತಾಕಾರನೂ ಮೇಘದಂತೆ ಗರ್ಜಿಸತಕ್ಕವನೂ ದೃಢಕಾಯನೂ ಆದ

**ಸೋಮಸೂರ್ಯಾತ್ಮಜೈಃ ಸಾರ್ಧಂ ವಾನರೈರ್ವಾನರೋತ್ತಮ ।**
**ದೇಶಕಾಲನಯೈರ್ಯುಕ್ತಃ ಕಾರ್ಯಾಕಾರ್ಯವಿನಿಶ್ಚಯೇ ॥ ೧೭**

**ವೃತಃ ಶತಸಹಸ್ರೇಣ ವಾನರಾಣಾಂ ತರಸ್ವಿನಾಮ್ ।**
**ಅಧಿಗಚ್ಛ ದಿಶಂ ಪೂರ್ವಾಂ ಸಶೈಲವನಕಾನನಾಮ್ ॥ ೧೮**

**ತತ್ರ ಸೀತಾಂ ಚ ವೈದೇಹೀಂ ನಿಲಯಂ ರಾವಣಸ್ಯ ಚ ।**
**ಮಾರ್ಗಧ್ವಂ ಗಿರಿಶೃಂಗೇಷು ವನೇಷು ಚ ನದೀಷು ಚ ॥ ೧೯**

**ನದೀಂ ಭಾಗೀರಥೀಂ ರಮ್ಯಾಂ ಸರಯೂಂ ಕೌಶಿಕೀಂ ತಥಾ ।**
**ಕಾಲಿಂದೀಂ ಯಮುನಾಂ ರಮ್ಯಾಂ ಯಾಮುನಂ ಚ ಮಹಾಗಿರಿಮ್**

**ಸರಸ್ವತೀಂ ಚ ಸಿಂಧುಂ ಚ ಶೋಣಂ ಮಣಿನಿಭೋದಕಮ್ ।**
**ಮಹೀಂ ಕಾಲಮಹೀಂ ಚೈವ ಶೈಲಕಾನನಶೋಭಿತಾಮ್ ॥ ೨೦**

---

ವಿನತನೆಂಬ ಸೇನಾನಿಯನ್ನು ಬರಮಾಡಿಕೊಂಡು, ಶ್ರೀರಾಮಲಕ್ಷ್ಮಣರೆದುರಿಗೆ ಈ ಪ್ರಕಾರವಾಗಿ ಆಜ್ಞೆಯನ್ನಿತ್ತನು (೧೫-೧೬) : "ಎಲೈ ವಾನರೋತ್ತಮ, ನೀನು ವೇಗಶಾಲಿಗಳಾದ ಒಂದು ಲಕ್ಷ ವಾನರರನ್ನು ಕರೆದುಕೊಂಡು ಪೂರ್ವ ದಿಕ್ಕಿಗೆ* ಹೋಗತಕ್ಕದ್ದು ಆ ವಾನರರು ಸೂರ್ಯಚಂದ್ರವಂಶದಲ್ಲಿ ಜನಿಸಿದ ವೀರರಾಗಿರಲಿ. ನೀನು ದೇಶ ಕಾಲ ನೀತಿಗಳನ್ನನುಸರಿಸಿ ಕಾರ್ಯಾಕಾರ್ಯಗಳನ್ನು ನಿರ್ಣಯಿಸುವುದರಲ್ಲಿ ದಕ್ಷತೆಯಿಂದ ವರ್ತಿಸು. ಪೂರ್ವದಿಕ್ಕಿನಲ್ಲಿರುವ ಶೈಲಗಳನ್ನೂ ಅರಣ್ಯಗಳನ್ನೂ ಶೋಧಿಸಬೇಕು (೧೭-೧೮) ಆ ಪ್ರಾಂತದಲ್ಲಿ ಜನಕಪುತ್ರಿಯಾದ ಸೀತಾದೇವಿಯನ್ನೂ ರಾವಣನ ವಾಸಸ್ಥಾನವನ್ನೂ ಕಂಡುಹಿಡಿಯಬೇಕು. ಗಿರಿಶೃಂಗಗಳಲ್ಲಿಯೂ ವನಗಳಲ್ಲಿಯೂ ನದೀತೀರಗಳಲ್ಲಿಯೂ ಬಿಡದೆ ಅನ್ವೇಷಿಸತಕ್ಕದ್ದು. ಗಂಗಾ, ಸರಯೂ, ಕೌಶಿಕೀ, ಕಾಳಿಂದಿಯೆಂದು ಪ್ರಸಿದ್ಧವಾದ ಯಮುನಾ, ಯಮುನೆಯು ಹುಟ್ಟುವ ಯಾಮುನಪರ್ವತ—ಇವುಗಳಿಗೆ ಹೋಗಿ ಹುಡುಕಿರಿ (೧೯-೨೦). ಸರಸ್ವತೀ, ಸಿಂಧು, ಮಣಿಯಂತೆ ಸ್ವಚ್ಛವಾದ

* ಈ ಪ್ರಕರಣದಲ್ಲಿ ಪೂರ್ವಾದಿ ದಿಗ್ವಿಭಾಗವು ಹಿಮಾಲಯ ಮತ್ತು ವಿಂಧ್ಯಗಿರಿಗಳ ನಡುವೆ ಇದ್ದ ಆರ್ಯಾವರ್ತದಿಂದ ಎಂದು ತಿಳಿಯಬೇಕು. ಇದು ಕಿಷ್ಕಿಂಧೆಯನ್ನಪೇಕ್ಷಿಸಿ ಹೇಳಿದ ದಿಗ್ವಿಭಾಗವಲ್ಲ.

ಬ್ರಹ್ಮಮಾಲಾನ್ ವಿದೇಹಾಂಶ್ಚ ಮಾಲವಾನ್ ಕಾಶಿಕೋಸಲಾನ್ ।
ಮಾಗಧಾಂಶ್ಚ ಮಹಾಗ್ರಾಮಾನ್ ಪುಂಡ್ರಾನ್ ವಂಗಾಂಸ್ತಥೈವ ಚ ॥

ಪತ್ತನಂ ಕೋಶಕಾರಾಣಾಂ ಭೂಮಿಂ ಚ ರಜತಾಕರಾಮ್ ।
ಸರ್ವಮೇತದ್ವಿಚೇತವ್ಯಂ ಮಾರ್ಗಯದ್ಭಿಸ್ತತಸ್ತತಃ ॥ ೨೩

ರಾಮಸ್ಯ ದಯಿತಾಂ ಭಾರ್ಯಾಂ ಸೀತಾಂ ದಶರಥಸ್ನುಷಾಮ್ ।
ಸಮುದ್ರಮವಗಾಢಾಂಶ್ಚ ಪರ್ವತಾನ್ ಪತ್ತನಾನಿ ಚ ॥ ೨೪

ಮಂದರಸ್ಯ ಚ ಯೇ ಕೋಟಿಂ ಸಂಶ್ರಿತಾಃ ಕೇಚಿದಾಯತಾಮ್ ।
ಕರ್ಣಪ್ರಾವರಣಾಶ್ಚೈವ ತಥಾ ಚಾಪ್ಯೋಷ್ಠಕರ್ಣಕಾಃ ॥ ೨೫

ಘೋರಾ ಲೋಹಮುಖಾಶ್ಚೈವ ಜವನಾಶ್ಚೈಕಪಾದಕಾಃ ।
ಅಕ್ಷಯಾ ಬಲವಂತಶ್ಚ ಪುರುಷಾಃ ಪುರುಷಾದಕಾಃ ॥ ೨೬

---

ಜಲವುಳ್ಳ ಶೋಣ, ಶೈಲಕಾನನಶೋಭಿತವಾದ ಮಹೀ, ಕಾಲಮಹೀ ಎಂಬ ನದಿಗಳ ತೀರಕ್ಕೆ ಹೋಗಿ ಸೀತಾದೇವಿಯನ್ನು ಅನ್ವೇಷಿಸಿರಿ. ಅಲ್ಲದೆ ಬ್ರಹ್ಮಮಾಲ, ವಿದೇಹ, ಮಾಳವ, ಕಾಶಿ, ಕೋಸಲ, ದೊಡ್ಡದೊಡ್ಡ ಗ್ರಾಮಗಳಿರುವ ಮಗಧ, ಪುಂಡ್ರ ಮತ್ತು ವಂಗದೇಶಗಳಿಗೂ ನೀವು ಹೋಗಬೇಕು (೨೧-೨೨). ಎಲೈ ವಾನರರೆ, ನೀವು ಕೋಶಕಾರರೆಂಬ ಅರಸರ ರಾಜಧಾನಿಗೂ ಅದರ ಸಮೀಪದಲ್ಲಿ ಬೆಳ್ಳಿಯ ಗಣಿಗಳಿರುವ ರಾಜ್ಯಕ್ಕೂ ಹೋಗತಕ್ಕದ್ದು ಅಲ್ಲಲ್ಲಿ ಅರಸುತ್ತ ಈ ಪ್ರದೇಶಗಳೆಲ್ಲವನ್ನೂ ಸರಿಯಾಗಿ ಶೋಧಿಸತಕ್ಕದ್ದು (೨೩). ಶ್ರೀರಾಮನ ಪ್ರಿಯಪತ್ನಿಯೂ ದಶರಥಮಹಾರಾಜನ ಸೊಸೆಯೂ ಆದ ಸೀತಾದೇವಿಯು ಎಲ್ಲಿರುವಳೆಂದು ಗೊತ್ತುಮಾಡಬೇಕಾಗಿದೆ. ಸಮುದ್ರದೊಳಗೆ ಚಾಚಿಕೊಂಡಿರುವ ಪರ್ವತಗಳಲ್ಲಿಯೂ ನಗರಗಳಲ್ಲಿಯೂ ನೀವು ಆ ದೇವಿಯನ್ನು ಹುಡುಕಬೇಕು (೨೪). ಕಪಿವೀರರೆ, ಮಂದರಪರ್ವತದ ವಿಶಾಲವಾದ ಶಿಖರದಲ್ಲಿ ಘೋರಾಕೃತಿಯ ಜನರಿದ್ದಾರೆ. ಅವರ ಕಿವಿಗಳು ಹೊದಿಕೆಯಂತೆ ದೊಡ್ಡದಾಗಿ ಜೋತಾಡುತ್ತವೆ! ಕೆಲವರ ಕಿವಿಗಳು ತುಟಿಯವರೆಗೆ ಲಂಬಿಸಿರುತ್ತವೆ! ಕಬ್ಬಿಣದಂತೆ ಕಠಿನೆಯ ಒರಟು ಮುಖದವರು ಕೆಲವರು. ಅತಿವೇಗವಾಗಿ ಓಡಬಲ್ಲ ಒಕ್ಕಾಲಿನವರು ಕೆಲವರು! ಮನೆಮಾರುಗಳಿಲ್ಲದೆ ಅಲೆಯುವ ಬಲಾಢ್ಯರಾದ ನರಭಕ್ಷಕರು

ಕಿರಾತಾಸ್ತೀಕ್ಷ್ಣಚೂಡಾಶ್ಚ ಹೇಮಾಂಗಾಃ ಪ್ರಿಯದರ್ಶನಾಃ ।
ಆಮಮೀನಾಶನಾಸ್ತತ್ರ ಕಿರಾತಾ ದ್ವೀಪವಾಸಿನಃ ॥ ೨೭

ಅಂತರ್ಜಲಚರಾ ಘೋರಾ ನರವ್ಯಾಘ್ರಾ ಇತಿ ಶ್ರುತಾಃ ।
ಏತೇಷಾಮಾಲಯಾಃ ಸರ್ವೇ ವಿಚೇಯಾಃ ಕಾನನೌಕಸಃ ॥ ೨೮

ಗಿರಿಭಿರ್ಯೇ ಚ ಗಮ್ಯಂತೇ ಪ್ಲವನೇನ ಪ್ಲವೇನ ಚ ।
ಯತ್ನವಂತೋ ಯವದ್ವೀಪಂ ಸಪ್ತರಾಜ್ಯೋಪಶೋಭಿತಮ್ ॥ ೨೯

ಸುವರ್ಣರೂಪ್ಯಕಂ ಚೈವ ಸುವರ್ಣಾಕರಮಂಡಿತಮ್ ।
ಯವದ್ವೀಪಮತಿಕ್ರಮ್ಯ ಶಿಶಿರೋ ನಾಮ ಪರ್ವತಃ ॥ ೩೦

ದಿವಂ ಸ್ಪೃಶತಿ ಶೃಂಗೇಣ ದೇವದಾನವಸೇವಿತಃ ।
ಏತೇಷಾಂ ಗಿರಿದುರ್ಗೇಷು ಪ್ರಪಾತೇಷು ವನೇಷು ಚ ॥ ೩೧

ಮಾರ್ಗಧ್ವಂ ಸಹಿತಾಃ ಸರ್ವೇ ರಾಮಪತ್ನೀಂ ಯಶಸ್ವಿನೀಮ್ ।
ತತೋ ರಕ್ತಜಲಂ ಶೋಣಮಗಾಧಂ ಶೀಘ್ರಗಾಹಿನಮ್ ॥ ೩೨

---

ಕೆಲವರಿದ್ದಾರೆ! (೨೫-೨೬). ಅಲ್ಲಿರುವ ದ್ವೀಪಗಳಲ್ಲಿ ಒರಟುಕೂದಲಿನ ಕಿರಾತರಿದ್ದಾರೆ. ಅವರ ದೇಹವು ಚಿನ್ನದಂತೆ ಹೊಂಬಣ್ಣವಾಗಿದೆ. ಆ ಕಿರಾತರು ಹಸಿಯ ಮೀನುಗಳನ್ನು ತಿನ್ನುತ್ತಾರೆ! ಅಲ್ಲದೆ ನೀರಿನಲ್ಲಿ ಸಂಚರಿಸತಕ್ಕ ನರವ್ಯಾಘ್ರರೆಂಬ ಭೀಕರಜನರು ಅಲ್ಲಿ ವಾಸವಾಗಿದ್ದಾರೆ. ಎಲೈ ವಾನರರೆ, ಅವರ ವಾಸಸ್ಥಾನಗಳನ್ನು ನೀವು ಸರಿಯಾಗಿ ಹುಡುಕಬೇಕು (೨೭-೨೮). ಅನಂತರ ನೀವು ಪ್ರಯಾಸದಿಂದ ಯವದ್ವೀಪಕ್ಕೆ ಹೋಗಬೇಕು. ಆ ದ್ವೀಪವು ಏಳು ಖಂಡಗಳಾಗಿ ವಿಭಾಗಿಸಲ್ಪಟ್ಟಿದೆ. ಆ ದ್ವೀಪಕ್ಕೆ ಹೋಗಬೇಕಾದರೆ ಕೆಲವು ಕಡೆ ಪರ್ವತಗಳಿಂದ ಪರ್ವತಗಳಿಗೆ ದಾಟಿಯೂ, ಕೆಲವು ಕಡೆ ಹಾರಿಯೂ, ಕೆಲವು ಕಡೆ ತೆಪ್ಪಗಳ ಮೂಲಕವೂ ಹೋಗಬೇಕಾಗುತ್ತದೆ (೨೯). ಆ ಯವದ್ವೀಪದ ಸಮೀಪದಲ್ಲಿ ಚಿನ್ನಕ್ಕೆ ಆಕರವೆನಿಸಿದ ಸುವರ್ಣ ದ್ವೀಪವಿದೆ. ಯವದ್ವೀಪವನ್ನು ದಾಟಿದಮೇಲೆ ಶಿಶಿರವೆಂಬ ಪರ್ವತವು ಸಿಗುತ್ತದೆ ಅದರ ಶೃಂಗವು ಸ್ವರ್ಗವನ್ನು ಮುಟ್ಟುವಷ್ಟು ಉನ್ನತವಾಗಿದೆ. ಅದರಲ್ಲಿ ದೇವದಾನವರು ವಾಸವಾಗಿದ್ದಾರೆ. ಅವುಗಳ ಗಿರಿದುರ್ಗಗಳಲ್ಲಿಯೂ ಕಂದಕಗಳಲ್ಲಿಯೂ ವನಗಳಲ್ಲಿಯೂ ಸೀತಾದೇವಿಯನ್ನು ಹುಡುಕಿರಿ (೩೦-೩೧). ಶ್ರೀರಾಮನ ಪತ್ನಿಯಾದ ಆ ದೇವಿಯು ಎಲ್ಲಿರುವಳೆಂದು

ಗತ್ವಾ ಪಾರಂ ಸಮುದ್ರಸ್ಯ ಸಿದ್ಧಚಾರಣಸೇವಿತಮ್ ।
ತಸ್ಯ ತೀರ್ಥೇಷು ರಮ್ಯೇಷು ವಿಚಿತ್ರೇಷು ವನೇಷು ಚ ॥ ೩೩

ರಾವಣಃ ಸಹ ವೈದೇಹ್ಯಾ ಮಾರ್ಗಿತವ್ಯಸ್ತತಸ್ತತಃ ।
ಪರ್ವತಪ್ರಭವಾ ನದ್ಯಃ ಸುರಮ್ಯಾ ಬಹುನಿಷ್ಕುಟಾಃ ॥ ೩೪

ಮಾರ್ಗಿತವ್ಯಾ ದರೀಮಂತಃ ಪರ್ವತಾಶ್ಚ ವನಾನಿ ಚ ।
ತತಃ ಸಮುದ್ರದ್ವೀಪಾಂಶ್ಚ ಸುಭೀಮಾನ್ ದ್ರಷ್ಟುಮರ್ಹಥ ॥ ೩೫

ಊರ್ಮಿಮಂತಂ ಮಹಾರೌದ್ರಂ ಕ್ರೋಶಂತಮನಿಲೋದ್ಧತಮ್ ।
ತತ್ರಾಸುರಾ ಮಹಾಕಾಯಾಶ್ಛಾಯಾಂ ಗೃಹ್ಣಂತಿ ನಿತ್ಯಶಃ ॥ ೩೬

ಬ್ರಹ್ಮಣಾ ಸಮನುಜ್ಞಾತಾ ದೀರ್ಘಕಾಲಂ ಬುಭುಕ್ಷಿತಾಃ ।
ತಂ ಕಾಲಮೇಘಪ್ರತಿಮಂ ಮಹೋರಗನಿಷೇವಿತಮ್ ॥ ೩೭

ಅಭಿಗಮ್ಯ ಮಹಾನಾದಂ ತೀರ್ಥೇನೈವ ಮಹೋದಧಿಮ್ ।
ತತೋ ರಕ್ತಜಲಂ ಭೀಮಂ ಲೋಹಿತಂ ನಾಮ ಸಾಗರಮ್ ॥ ೩೮

---

ಕಂಡುಹಿಡಿಯಿರಿ. ಆ ಸಮುದ್ರದ ಪಾರವನ್ನು ಸೇರಿದರೆ, ಶೀಘ್ರವಾಗಿ ಹರಿಯುವ ಅಗಾಧವಾದ ಕೆಂಪುನೀರಿನ ಶೋಣನದವನ್ನು ಕಾಣುವಿರಿ. ಅದರಲ್ಲಿ ಇಳಿಯುವ ಪ್ರದೇಶಗಳಲ್ಲಿಯೂ ವಿಚಿತ್ರವಾದ ತೀರವನಗಳಲ್ಲಿಯೂ ವೈದೇಹಿಯನ್ನೂ ರಾವಣನನ್ನೂ ಹುಡುಕಿರಿ (೩೨-೩೩). ಮುಂದೆ ಗಿರಿಗಳಿಂದ ಹರಿಯುವ ರಮ್ಯವಾದ ನದಿಗಳಿವೆ. ಅವುಗಳ ತೀರಗಳಲ್ಲಿ ಪುಷ್ಪಕಾನನಗಳಿವೆ. ದರಿಗಳು, ವನಗಳು ಮೊದಲಾದವನ್ನು ಬಿಡದೆ ಅನ್ವೇಷಿಸಬೇಕು. ಆಮೇಲೆ ಸಮುದ್ರದಲ್ಲಿ ಕಾಣುವ ದೊಡ್ಡ ದೊಡ್ಡ ದ್ವೀಪಗಳಿಗೆ ಹೋಗಿರಿ. ಅಲ್ಲಿರುವ ಸಮುದ್ರವು ಬಿರುಗಾಳಿಯಿಂದೆದ್ದ ಅಲೆಗಳ ಹೊಡೆತದಿಂದ ರೌದ್ರವಾಗಿರುತ್ತದೆ. ಎಲೈ ವಾನರರೆ, ಅಲ್ಲಿ ಮಹಾಕಾಯರಾದ ಅಸುರರಿದ್ದಾರೆ. ಅವರು ಪ್ರಾಣಿಗಳ ಛಾಯೆಯನ್ನು ಹಿಡಿದು ಆ ಪ್ರಾಣಿಗಳನ್ನು ಎಳೆದುಕೊಳ್ಳುತ್ತಾರೆ (೩೪-೩೬) ಇದಕ್ಕೆ ಬ್ರಹ್ಮನು ಅನುಮತಿಯನ್ನಿತ್ತಿದ್ದಾನೆ. ಆ ರಾಕ್ಷಸರು ದೀರ್ಘಕಾಲದಿಂದ ಬುಭುಕ್ಷಿತರಾಗಿರುತ್ತಾರೆ. ಪ್ರಳಯಕಾಲದ ಮೇಘದಂತೆ ಭೀಕರವಾಗಿಯೂ ಮಹಾಸರ್ಪಗಳಿಗೆ ಬೀಡಾಗಿಯೂ ಸದಾ ಅಬ್ಬರಿಸುತ್ತಿರುವ ಆ ಮಹಾಸಾಗರವನ್ನು ನೀವು ಉಪಾಯದಿಂದ ದಾಟಬೇಕು. ಅನಂತರ ರಕ್ತಜಲಭರಿತವಾದ ಲೋಹಿತ

ಗತಾ ದ್ರಕ್ಷ್ಯಥ ತಾಂ ಚೈವ ಬೃಹತೀಂ ಕೂಟಶಾಲ್ಮಲೀಮ್ ।
ಗೃಹಂ ಚ ವೈನತೇಯಸ್ಯ ನಾನಾರತ್ನವಿಭೂಷಿತಮ್ ॥ ३೯

ತತ್ರ ಕೈಲಾಸಸಂಕಾಶಂ ವಿಹಿತಂ ವಿಶ್ವಕರ್ಮಣಾ ।
ತತ್ರ ಶೈಲನಿಭಾ ಭೀಮಾ ಮಂದೇಹಾ ನಾಮ ರಾಕ್ಷಸಾಃ ॥ ४೦

ಶೈಲಶೃಂಗೇಷು ಲಂಬಂತೇ ನಾನಾರೂಪಾ ಭಯಾವಹಾಃ ।
ತೇ ಪತಂತಿ ಜಲೇ ನಿತ್ಯಂ ಸೂರ್ಯಸ್ಯೋದಯನಂ ಪ್ರತಿ ॥ ४೧

ನಿಹತಾ ಬ್ರಹ್ಮತೇಜೋಭಿರಹನ್ಯಹನಿ ರಾಕ್ಷಸಾಃ ।
ಅಭಿತಪ್ತಾಶ್ಚ ಸೂರ್ಯೇಣ ಲಂಬಂತೇ ಸ್ಮ ಪುನಃ ಪುನಃ ॥ ४२

ತತಃ ಪಾಂಡರಮೇಘಾಭಂ ಕ್ಷೀರೋದಂ ನಾಮ ಸಾಗರಮ್ ।
ಗತಾ ದ್ರಕ್ಷ್ಯಥ ದುರ್ಧರ್ಷಾ ಮುಕ್ತಾಹಾರಮಿವ ಕ್ಷಿತೇಃ ॥ ४३

ತಸ್ಯ ಮಧ್ಯೇ ಮಹಾನ್ ಶ್ವೇತ ಋಷಭೋ ನಾಮ ಪರ್ವತಃ ।
ದಿವ್ಯಗಂಧೈಃ ಕುಸುಮಿತೈ ರಾಜತೈಶ್ಚ ನಗೈರ್ವೃತಃ ॥ ४४

---

ಸಮುದ್ರವನ್ನು ಕಾಣುವಿರಿ (३೭-३೮). ಎಲೈ ಕಪಿವೀರರೆ, ಅಲ್ಲಿ ನೀವು ಬೃಹದಾಕಾರದ ಒಂದು ಬೂರುಗದ ಮರವನ್ನು ನೋಡುವಿರಿ. ಅಲ್ಲದೆ ನಾನಾರತ್ನಭೂಷಿತವಾದ ಗರುಡನ ಗೃಹವನ್ನೂ ನೋಡುವಿರಿ! ಕೈಲಾಸ ಶಿಖರದಂತಿರುವ ಆ ಗೃಹವನ್ನು ವಿಶ್ವಕರ್ಮನು ನಿರ್ಮಿಸಿದ್ದಾನೆ. ಆ ಸಮುದ್ರ ತೀರದಲ್ಲಿ ಮಂದೇಹರೆಂಬ ಪರ್ವತಾಕಾರದ ಘೋರರಾಕ್ಷಸರಿದ್ದಾರೆ (३೯-४೦). ಅವರು ನಾನಾವಿಚಿತ್ರರೂಪಗಳನ್ನು ಧರಿಸಿ ಗಿರಿಶೃಂಗಗಳಲ್ಲಿ ಅಧೋಮುಖರಾಗಿ ಕಾದಿರುತ್ತಾರೆ. ಅವರು ಸೂರ್ಯೋದಯಕಾಲಕ್ಕೆ ಸರಿಯಾಗಿ ಸೂರ್ಯನನ್ನು ಅಡ್ಡಗಟ್ಟಿ, ದ್ವಿಜರು ಜಪಿಸುವ ಗಾಯತ್ರೀ ಮಂತ್ರಗಳ ಮಹಿಮೆಯಿಂದಲೂ ಸೂರ್ಯನ ಪ್ರಕಾಶದಿಂದಲೂ ಹತರಾಗಿ ಸಮುದ್ರಜಲದಲ್ಲಿ ಬೀಳುವರು. ಪುನಃ ಮೇಲೆದ್ದು ಪರ್ವತಶಿಖರಗಳನ್ನೇರಿ ಅಧೋಮುಖರಾಗಿ ಕಾದಿರುವರು (४೧-४२). ಅಲ್ಲಿಂದ ಮುಂದೆ ಹೋದರೆ, ಎಲೈ ವೀರರೆ, ಕ್ಷೀರಸಾಗರವು ನಿಮಗೆ ಗೋಚರಿಸುವುದು. ಅದು ಬಿಳಿಯ ಮೋಡದಂತೆ ಹರಡಿರುವುದು. ಆ ಸಾಗರವು (ತರಂಗಮಾಲೆಗಳಿಂದ) ಭೂದೇವಿಯ ಮುಕ್ತಾಹಾರದಂತೆ ಕಂಗೊಳಿಸುವುದು. ಅದರ ಮಧ್ಯದಲ್ಲಿ

ಸರಶ್ಚ ರಾಜತೈಃ ಪದ್ಮೈರ್ಜ್ವಲಿತೈರ್ಹೇಮಕೇಸರೈಃ ।
ನಾಮ್ನಾ ಸುದರ್ಶನಂ ನಾಮ ರಾಜಹಂಸೈಃ ಸಮಾಕುಲಮ್ ॥ ೪೫

ವಿಬುಧಾಶ್ಚಾರಣಾ ಯಕ್ಷಾಃ ಕಿಂನರಾಃ ಸಾಪ್ಸರೋಗಣಾಃ ।
ಹೃಷ್ಟಾಃ ಸಮಭಿಗಚ್ಛಂತಿ ನಲಿನೀಂ ತಾಂ ರಿರಂಸವಃ ॥ ೪೬

ಕ್ಷೀರೋದಂ ಸಮತಿಕ್ರಮ್ಯ ತತೋ ದ್ರಕ್ಷ್ಯಥ ವಾನರಾಃ ।
ಜಲೋದಂ ಸಾಗರಶ್ರೇಷ್ಠಂ ಸರ್ವಭೂತಭಯಾವಹಮ್ ॥ ೪೭

ತತ್ರ ತತ್ ಕೋಪಜಂ ತೇಜಃ ಕೃತಂ ಹಯಮುಖಂ ಮಹತ್ ।
ಅಸ್ಯಾಹುಸ್ತನ್ಮಹಾವೇಗಮೋದನಂ ಸಚರಾಚರಮ್ ॥ ೪೮

ತತ್ರ ವಿಕ್ರೋಶತಾಂ ನಾದೋ ಭೂತಾನಾಂ ಸಾಗರೌಕಸಾಮ್ ।
ಶ್ರೂಯತೇ ಚ ಸಮರ್ಥಾನಾಂ ದೃಷ್ಟ್ವಾ ತದ್ವಡವಾಮುಖಮ್ ॥

ಸ್ವಾದೂದಸ್ಯೋತ್ತರೇ ದೇಶೇ ಯೋಜನಾನಿ ತ್ರಯೋದಶ ।
ಜಾತರೂಪಶಿಲೋ ನಾಮ ಮಹಾನ್ ಕನಕಪರ್ವತಃ ॥ ೫೦

---

ಋಷಭವೆಂಬ ಶ್ವೇತಪರ್ವತವಿದೆ. ಅದರ ಸುತ್ತಲೂ ಬೆಳ್ಳಿಯ ಬೆಟ್ಟಗಳಿವೆ. ಆ ಬೆಟ್ಟಗಳು ದಿವ್ಯಪರಿಮಳವನ್ನು ಬೀರುವ ಹೂಗಳಿಂದ ತುಂಬಿವೆ (೪೩-೪೪) ಅಲ್ಲಿ ಸುದರ್ಶನವೆಂಬ ಒಂದು ಸರೋವರವಿದೆ. ಅದರಲ್ಲಿ ಕನಕಕೇಸರಗಳಿಂದ ವಿರಾಜಿಸುವ ಬೆಳ್ಳಿಯ ತಾವರೆಗಳು ಕಂಗೊಳಿಸುವುವು. ಆ ಸರೋವರವು ರಾಜಹಂಸಗಳಿಂದ ರಾಜಿಸುತ್ತಿರುವುದು. ದೇವ, ಚಾರಣ, ಯಕ್ಷ, ಕಿನ್ನರರು ಅಪ್ಸರಃಸ್ತ್ರೀಯರೊಡನೆ ವಿಹರಿಸುವುದಕ್ಕಾಗಿ ಆ ಕಮಲ ಸರೋವರಕ್ಕೆ ಆಗಮಿಸುತ್ತಾರೆ (೪೫-೪೬) ಆ ಕ್ಷೀರಸಾಗರವನ್ನು ದಾಟಿ ಹೋದಮೇಲೆ ಶುದ್ಧ ಜಲಪೂರ್ಣವಾದ ಭೀಕರ ಸಮುದ್ರವು ಕಂಡುಬರುತ್ತದೆ. ಅದರಲ್ಲಿ ಔರ್ವನೆಂಬ ಬ್ರಹ್ಮರ್ಷಿಯ ಕೋಪಾನಲದಿಂದ ಜನಿಸಿದ ಹಯಮುಖವೆಂಬ ಬಡಬಾಗ್ನಿ ಇದೆ. ಸ್ಥಾವರಜಂಗಮಾತ್ಮಕವಾದ ಈ ಜಗತ್ತಿನೊಡನೆ ಮಹಾವೇಗದ ಸಮುದ್ರಜಲವು ಪ್ರಳಯಕಾಲದಲ್ಲಿ ಆ ತೇಜಸ್ಸಿಗೆ ಆಹಾರವಾಗುವುದೆಂದು ಬಲ್ಲವರು ಹೇಳುತ್ತಾರೆ (೪೭-೪೮). ಬಲಶಾಲಿಗಳಾದ ಜಲಚರಗಳೂ ಸಹ ಆ ಬಡಬಾಗ್ನಿಯನ್ನು ಕಂಡು ಅರಚಿಕೊಳ್ಳುತ್ತವೆ. ಆ ಧ್ವನಿಯನ್ನು ನೀವು ಕೇಳಬಹುದು! ಸ್ವಾದೂದಕಸಮುದ್ರದ ಉತ್ತರ

ತತ್ರ ಚಂದ್ರಪ್ರತೀಕಾಶಂ ಪನ್ನಗಂ ಧರಣೀಧರಮ್ ।
ಪದ್ಮಪತ್ರವಿಶಾಲಾಕ್ಷಂ ತತೋ ದ್ರಕ್ಷ್ಯಥ ವಾನರಾಃ ॥ ೫೧

ಆಸೀನಂ ಪರ್ವತಸ್ಯಾಗ್ರೇ ಸರ್ವಭೂತನಮಸ್ಕೃತಮ್ ।
ಸಹಸ್ರಶಿರಸಂ ದೇವಮನಂತಂ ನೀಲವಾಸಸಮ್ ॥ ೫೨

ತ್ರಿಶಿರಾಃ ಕಾಂಚನಃ ಕೇತುಸ್ತಾಲಸ್ತಸ್ಯ ಮಹಾತ್ಮನಃ ।
ಸ್ಥಾಪಿತಃ ಪರ್ವತಸ್ಯಾಗ್ರೇ ವಿರಾಜತಿ ಸವೇದಿಕಃ ॥ ೫೩

ಪೂರ್ವಸ್ಯಾಂ ದಿಶಿ ನಿರ್ಮಾಣಂ ಕೃತಂ ತತ್ ತ್ರಿದಶೇಶ್ವರೈಃ ।
ತತಃ ಪರಂ ಹೇಮಮಯಃ ಶ್ರೀಮಾನುದಯಪರ್ವತಃ ॥ ೫೪

ತಸ್ಯ ಕೋಟಿರ್ದಿವಂ ಸ್ಪೃಷ್ಟ್ವಾ ಶತಯೋಜನಮಾಯತಾ ।
ಜಾತರೂಪಮಯೀ ದಿವ್ಯಾ ವಿರಾಜತಿ ಸವೇದಿಕಾ ॥ ೫೫

ಸಾಲೈಸ್ತಾಲೈಸ್ತಮಾಲೈಶ್ಚ ಕರ್ಣಿಕಾರೈಶ್ಚ ಪುಷ್ಪಿತೈಃ ।
ಜಾತರೂಪಮಯೈರ್ದಿವ್ಯೈಃ ಶೋಭತೇ ಸೂರ್ಯಸಂನಿಭೈಃ ॥ ೫೬

---

ದಿಕ್ಕಿನಲ್ಲಿ ಜಾತರೂಪಶಿಲವೆಂಬ ದೊಡ್ಡ ಸುವರ್ಣಪರ್ವತವಿದೆ. ಅದು ಹದಿಮೂರು ಯೋಜನಗಳವರೆಗೆ ವ್ಯಾಪಿಸಿದೆ (೪೯-೫೦). ಎಲೈ ವಾನರರೆ, ಆ ಪರ್ವತಾಗ್ರದಲ್ಲಿ ಸಹಸ್ರಫಣಾಮಂಡಲಮಂಡಿತನಾದ ಅನಂತದೇವನನ್ನು ನೀವು ಕಾಣಬಹುದು. ಭೂಮಿಯನ್ನು ಹೊತ್ತಿರುವ ಆ ಮಹಾನಾಗನು ಚಂದ್ರನಂತೆ ಶುಭ್ರವರ್ಣನಾಗಿ ಪದ್ಮದಳಾಯತಾಕ್ಷನಾಗಿರುವನು. ನೀಲ ವಸ್ತ್ರಧಾರಿಯಾಗಿ ಸರ್ವಭೂತವಂದಿತನಾಗಿರುವನು (೫೧-೫೨). ಆ ಮಹಾತ್ಮನಿಗೆ ಕನಕಮಯವಾದ ತಾಳವೃಕ್ಷವೇ ಧ್ವಜವಾಗಿರುತ್ತದೆ. ಮೂರು ಶಿಖರಗಳುಳ್ಳ ಆ ಧ್ವಜವು ವೇದಿಕೆಯೊಡನೆ ಆ ಪರ್ವತಾಗ್ರದಲ್ಲಿ ಸ್ಥಾಪಿತವಾಗಿದೆ. ದೇವತೆಗಳಿಗೆ ಪ್ರಭುಗಳಾದ ತ್ರಿಮೂರ್ತಿಗಳು ಅದನ್ನು ಪೂರ್ವದಿಕ್ಕಿನ ಎಲ್ಲೆಯೆಂದು ನಿರ್ಮಿಸಿದ್ದಾರೆ. ಅಲ್ಲಿಂದ ಮುಂದೆ ಹೇಮಮಯವಾದ ಉದಯಶೈಲವು ಗೋಚರಿಸುತ್ತದೆ (೫೩-೫೪). ಅದರ ಅಗ್ರಭಾಗವು ಸ್ವರ್ಗವನ್ನು ಮುಟ್ಟುತ್ತದೆ. ಆ ಶೈಲವು ನೂರುಯೋಜನ ವಿಸ್ತಾರವಾಗಿದೆ. ಆ ದಿವ್ಯಶೈಲವು ವೇದಿಕೆಯೊಡನೆ ವಿರಾಜಿಸುತ್ತಿದೆ. ಅದರಲ್ಲಿ ಸಾಲ, ತಾಲ, ತಮಾಲ, ಕರ್ಣಿಕಾರ ಮೊದಲಾದ ಸುವರ್ಣತರುಗಳು ಅರಳಿ ಸೂರ್ಯನಂತೆ

ತತ್ರ ಯೋಜನವಿಸ್ತಾರಮುಚ್ಛ್ರಿತಂ ದಶಯೋಜನಮ್ ।
ಶೃಂಗಂ ಸೌಮನಸಂ ನಾಮ ಜಾತರೂಪಮಯಂ ಧ್ರುವಮ್ ॥ ೫೭
ತತ್ರ ಪೂರ್ವಂ ಪದಂ ಕೃತ್ವಾ ಪುರಾ ವಿಷ್ಣುಸ್ತ್ರಿವಿಕ್ರಮೇ ।
ದ್ವಿತೀಯಂ ಶಿಖರೇ ಮೇರೋಶ್ಚಕಾರ ಪುರುಷೋತ್ತಮಃ ॥ ೫೮
ಉತ್ತರೇಣ ಪರಿಕ್ರಮ್ಯ ಜಂಬೂದ್ವೀಪಂ ದಿವಾಕರಃ ।
ದೃಶ್ಯೋ ಭವತಿ ಭೂಯಿಷ್ಠಂ ಶಿಖರಂ ತನ್ಮಹೋಚ್ಛ್ರಯಮ್ ॥ ೫೯
ತತ್ರ ವೈಖಾನಸಾ ನಾಮ ವಾಲಖಿಲ್ಯಾ ಮಹರ್ಷಯಃ ।
ಪ್ರಕಾಶಮಾನಾ ದೃಶ್ಯಂತೇ ಸೂರ್ಯವರ್ಣಾಸ್ತಪಸ್ವಿನಃ ॥ ೬೦
ಅಯಂ ಸುದರ್ಶನೋ ದ್ವೀಪಃ ಪುರೋ ಯಸ್ಯ ಪ್ರಕಾಶತೇ ।
ಯಸ್ಮಿಂಸ್ತೇಜಶ್ಚ ಚಕ್ಷುಶ್ಚ ಸರ್ವಪ್ರಾಣಭೃತಾಮಪಿ ॥ ೬೧
ಶೈಲಸ್ಯ ತಸ್ಯ ಶೃಂಗೇಷು ಕಂದರೇಷು ವನೇಷು ಚ ।
ರಾವಣಃ ಸಹ ವೈದೇಹ್ಯಾ ಮಾರ್ಗಿತವ್ಯಸ್ತತಸ್ತತಃ ॥ ೬೨

---

ಬೆಳಗುತ್ತಿವೆ (೫೫-೫೬). ಆ ಪರ್ವತದಲ್ಲಿ ಒಂದು ಯೋಜನವಿಸ್ತಾರವೂ ಹತ್ತು ಯೋಜನ ಔನ್ನತ್ಯವೂ ಇರುವ ಸೌಮನಸವೆಂಬ ಶಿಖರವು ಶೋಭಿಸುತ್ತಿದೆ. ಹಿಂದೆ ಮಹಾವಿಷ್ಣುವು ವಾಮನಾವತಾರವನ್ನು ಧರಿಸಿದಾಗ ಮೂರು ಹೆಜ್ಜೆಗಳನ್ನಿಟ್ಟನಷ್ಟೆ. ಆಗ ಪುರುಷೋತ್ತಮನು ಸೌಮನಸಶೃಂಗದಲ್ಲಿ ಮೊದಲನೆಯ ಹೆಜ್ಜೆಯನ್ನಿಟ್ಟು, ಎರಡನೆಯ ಹೆಜ್ಜೆಯನ್ನು ಮೇರುಗಿರಿಯ ಶೃಂಗದಲ್ಲಿಟ್ಟನು (೫೭-೫೮). ಸೂರ್ಯನು ಅಸ್ತಮಯಾನಂತರ ಜಂಬೂದ್ವೀಪದ ಉತ್ತರದಲ್ಲಿ ಸುತ್ತಿಬರುವನು. ಆಮೇಲೆ ಅತ್ಯುನ್ನತವಾದ ಆ ಸೌಮನಸಶೃಂಗವನ್ನು ಸೇರಿ ಜಂಬೂದ್ವೀಪದಲ್ಲಿರುವ ನಮಗೆ ಗೋಚರಿಸುವನು. ಆ ಶಿಖರದಲ್ಲಿ ವೈಖಾನಸ ಮತ್ತು ವಾಲಖಿಲ್ಯರೆಂಬ ಮಹರ್ಷಿಗಳು ಸೂರ್ಯನಂತೆ ಬೆಳಗುತ್ತ ತಪಸ್ಸನ್ನಾಚರಿಸುತ್ತಿದ್ದಾರೆ (೫೯-೬೦). ಉದಯ ಪರ್ವತದ ಪಕ್ಕದಲ್ಲಿ ಸುದರ್ಶನವೆಂಬ ದ್ವೀಪವಿದೆ. ಅದರಲ್ಲಿ ಸೂರ್ಯನು ಉದಿತನಾಗಲು ಸಕಲಪ್ರಾಣಿಗಳಿಗೂ ತೇಜಃಸಂಬಂಧವುಂಟಾಗಿ ನೇತ್ರವು ವಿಷಯವನ್ನು ಗ್ರಹಿಸಲು ಸಮರ್ಥವಾಗುತ್ತದೆ. ಎಲೈ ವಾನರವೀರರೆ, ನೀವು ಉದಯಶೈಲದ ಶಿಖರಗಳಲ್ಲಿಯೂ ಕಂದರಗಳಲ್ಲಿಯೂ ವನಗಳಲ್ಲಿಯೂ

ಕಾಂಚನಸ್ಯ ಚ ಶೈಲಸ್ಯ ಸೂರ್ಯಸ್ಯ ಚ ಮಹಾತ್ಮನಃ ।
ಆವಿಷ್ಟಾ ತೇಜಸಾ ಸಂಧ್ಯಾ ಪೂರ್ವಾ ರಕ್ತಾ ಪ್ರಕಾಶತೇ ॥ ೬೩

ಪೂರ್ವಮೇತತ್ ಕೃತಂ ದ್ವಾರಂ ಪೃಥಿವ್ಯಾ ಭುವನಸ್ಯ ಚ ।
ಸೂರ್ಯಸ್ಯೋದಯನಂ ಚೈವ ಪೂರ್ವಾ ಹ್ಯೇಷಾ ದಿಗುಚ್ಯತೇ ॥ ೬೪

ತಸ್ಯ ಶೈಲಸ್ಯ ಪೃಷ್ಠೇಷು ನಿರ್ಝರೇಷು ಗುಹಾಸು ಚ ।
ರಾವಣಃ ಸಹ ವೈದೇಹ್ಯಾ ಮಾರ್ಗಿತವ್ಯಸ್ತತಸ್ತತಃ ॥ ೬೫

ತತಃ ಪರಮಗಮ್ಯಾ ಸ್ಯಾದ್ದಿಕ್ಪೂರ್ವಾ ತ್ರಿದಶಾವೃತಾ ।
ರಹಿತಾ ಚಂದ್ರಸೂರ್ಯಾಭ್ಯಾಮದೃಶ್ಯಾ ತಿಮಿರಾವೃತಾ ॥ ೬೬

ಶೈಲೇಷು ತೇಷು ಸರ್ವೇಷು ಕಂದರೇಷು ವನೇಷು ಚ ।
ಯೇ ಚ ನೋಕ್ತಾ ಮಯಾ ದೇಶಾ ವಿಚೇಯಾ ತೇಷು ಜಾನಕೀ ॥

ಏತಾವದ್ವಾನರೈಃ ಶಕ್ಯಂ ಗಂತುಂ ವಾನರಪುಂಗವಾಃ ।
ಅಭಾಸ್ಕರಮಮರ್ಯಾದಂ ನ ಜಾನೀಮಸ್ತತಃ ಪರಮ್ ॥ ೬೮

---

ರಾವಣನನ್ನೂ ವೈದೇಹಿಯನ್ನೂ ಹುಡುಕತಕ್ಕದ್ದು (೬೧-೬೨). ಕಾಂಚನಮಯವಾದ ಉದಯಶೈಲ ಮತ್ತು ಮಹಾತ್ಮನಾದ ಸೂರ್ಯ–ಇವರಿಬ್ಬರ ತೇಜಸ್ಸಿನಿಂದ ಸಮ್ಮಿಶ್ರವಾದ್ದರಿಂದ ಪ್ರಾತಃಕಾಲದಲ್ಲಿ ಪೂರ್ವದಿಕ್ಕು ರಕ್ತವರ್ಣವಾಗಿ ಶೋಭಿಸುತ್ತದೆ. ಈ ಸ್ಥಳವು ಇತರ ಲೋಕಗಳಿಂದ ಭೂಮಿಗೆ ಬರಲು ದ್ವಾರವಾಗಿಯೂ ಸೂರ್ಯೋದಯಕ್ಕೆ ಸ್ಥಾನವಾಗಿಯೂ ಇದೆ. ಪೂರ್ವದಲ್ಲಿ (ಮೊದಲು) ನಿರ್ಮಿಸಲ್ಪಟ್ಟುದರಿಂದ ಪೂರ್ವದಿಕ್ಕು ಎಂದು ಹೆಸರು ಬಂದಿದೆ (೬೩-೬೪). ಆ ಪರ್ವತದ ಪೃಷ್ಠಭಾಗಗಳಲ್ಲಿಯೂ ಗಿರಿನದೀಗುಹೆಗಳಲ್ಲಿಯೂ ನೀವು ರಾವಣನನ್ನೂ ವೈದೇಹಿಯನ್ನೂ ಹುಡುಕಬೇಕು. ಅದರ ಆಚೆಗೆ ಪೂರ್ವದಿಕ್ಕು ದೇವತೆಗಳಿಗೆ ಮಾತ್ರ ಗಮ್ಯವಾದದ್ದು. ಅಲ್ಲಿಗೆ ನೀವು ಹೋಗಲಾರಿರಿ. ಆ ಸ್ಥಳದಲ್ಲಿ ಚಂದ್ರ-ಸೂರ್ಯರ ಪ್ರಕಾಶವಿಲ್ಲ. ಬರಿಯ ಕತ್ತಲೆಯು ವ್ಯಾಪಿಸಿಕೊಂಡಿದೆ (೬೫-೬೬). ವಾನರರೆ, ದಾರಿಯಲ್ಲಿ ಸಿಕ್ಕುವ ನಾನಾ ಶೈಲ-ಕಂದರ-ವನಗಳನ್ನು ನಾನು ಪ್ರಸ್ತಾವಿಸಿಲ್ಲ. ಅಲ್ಲಿಯೂ ನೀವು ಜಾನಕಿಯನ್ನು ಅನ್ವೇಷಿಸತಕ್ಕದ್ದು. ಈ ರೀತಿಯಲ್ಲಿ ಉದಯಪರ್ವತದವರೆಗೆ ವಾನರರು ಹೋಗಲು ಸಾಧ್ಯವಿದೆ. ಅದರ ಆಚೆಗೆ ಸೂರ್ಯಪ್ರಕಾಶವಿಲ್ಲ.

ಅಧಿಗಮ್ಯ ತು ವೈದೇಹೀಂ ನಿಲಯಂ ರಾವಣಸ್ಯ ಚ ।
ಮಾಸೇ ಪೂರ್ಣೇ ನಿವರ್ತಧ್ವಮುದಯಂ ಪ್ರಾಪ್ಯ ಪರ್ವತಮ್ ॥

ಊರ್ಧ್ವಂ ಮಾಸಾನ್ನ ವಸ್ತವ್ಯಂ ವಸನ್ ವಧ್ಯೋ ಭವೇನ್ಮಮ ।
ಸಿದ್ಧಾರ್ಥಾಃ ಸಂನಿವರ್ತಧ್ವಮಧಿಗಮ್ಯ ಚ ಮೈಥಿಲೀಮ್ ॥ ೭೦

ಮಹೇಂದ್ರಕಾಂತಾಂ ವನಷಂಡಮಂಡಿತಾಂ
ದಿಶಂ ಚರಿತ್ವಾ ನಿಪುಣೇನ ವಾನರಾಃ ।
ಅವಾಪ್ಯ ಸೀತಾಂ ರಘುವಂಶಜಪ್ರಿಯಾಂ
ತತೋ ನಿವೃತ್ತಾಃ ಸುಖಿನೋ ಭವಿಷ್ಯಥ ॥ ೭೧

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಚತ್ವಾರಿಂಶಃ ಸರ್ಗಃ



ನಿರವಧಿಕವಾದ ಆ ಪ್ರದೇಶದ ವಿಷಯ ನಮಗೆ ತಿಳಿಯದು! (೬೭–೬೮). ಆದ್ದರಿಂದ ಉದಯಪರ್ವತದವರೆಗೆ ನೀವು ಹೋಗಿ ವೈದೇಹಿಯಾಗಲಿ ರಾವಣನಾಗಲಿ ಇರುವ ಸ್ಥಳವನ್ನು ತಿಳಿದು, ಒಂದು ತಿಂಗಳು ಮುಗಿಯುವುದರೊಳಗೆ ಹಿಂದಿರುಗಿ ಬನ್ನಿರಿ. ಒಂದು ತಿಂಗಳಾದಮೇಲೆ ಅಲ್ಲೆಲ್ಲಿಯೂ ನೀವು ಇರಕೂಡದು. ಅವಧಿಯು ಮುಗಿದಮೇಲೆ ಯಾವನಾದರೂ ಬಾರದೆ ಉಳಿದರೆ, ಅವನನ್ನು ಮರಣದಂಡನೆಗೆ ಒಳಪಡಿಸುವೆನು! ಮೈಥಿಲಿಯನ್ನು ಕಂಡು, ಹೋದಕಾರ್ಯವನ್ನು ಸಾಧಿಸಿಕೊಂಡು ಬನ್ನಿರಿ (೬೯–೭೦). ಎಲೈ ವಾನರರೆ, ಮಹೇಂದ್ರನಿಗೆ ಪ್ರಿಯವಾಗಿಯೂ ವನಷಂಡಮಂಡಿತವಾಗಿಯೂ ಇರುವ ಪೂರ್ವದಿಕ್ಕಿನಲ್ಲಿ ಸೀತಾದೇವಿಯನ್ನು ಸರಿಯಾಗಿ ಅರಸಿರಿ. ಈ ರಘುಕುಲತಿಲಕನ ಪತ್ನಿಯನ್ನು ನೀವು ಕಂಡುಬಂದಿರಾದರೆ, ಮುಂದೆ ಸೌಖ್ಯದಿಂದ ಬಾಳುವಿರಿ" ಎಂದು ತಿಳಿಸಿದನು (೭೧).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ನಲವತ್ತನೆಯ ಸರ್ಗ



## ಏಕಚತ್ವಾರಿಂಶಃ ಸರ್ಗಃ

### ದಕ್ಷಿಣಾಪ್ರೇಷಣಮ್

ತತಃ ಪ್ರಸ್ಥಾಪ್ಯ ಸುಗ್ರೀವಸ್ತನ್ಮಹದ್ವಾನರಂ ಬಲಮ್ ।
ದಕ್ಷಿಣಾಂ ಪ್ರೇಷಯಾಮಾಸ ವಾನರಾನಭಿಲಕ್ಷಿತಾನ್ ॥ ೧

ನೀಲಮಗ್ನಿಸುತಂ ಚೈವ ಹನುಮಂತಂ ಚ ವಾನರಮ್ ।
ಪಿತಾಮಹಸುತಂ ಚೈವ ಜಾಂಬವಂತಂ ಮಹಾಬಲಮ್ ॥ ೨

ಸುಹೋತ್ರಂ ಚ ಶರಾರಿಂ ಚ ಶರಗುಲ್ಮಂ ತಥೈವ ಚ ।
ಗಜಂ ಗವಾಕ್ಷಂ ಗವಯಂ ಸುಷೇಣಮೃಷಭಂ ತಥಾ ॥ ೩

ಮೈಂದಂ ಚ ದ್ವಿವಿದಂ ಚೈವ ವಿಜಯಂ ಗಂಧಮಾದನಮ್ ।
ಉಲ್ಕಾಮುಖಮಸಂಗಂ ಚ ಹುತಾಶನಸುತಾವುಭೌ ॥ ೪

ಅಂಗದಪ್ರಮುಖಾನ್ ವೀರಾನ್ ವೀರಃ ಕಪಿಗಣೇಶ್ವರಃ ।
ವೇಗವಿಕ್ರಮಸಂಪನ್ನಾನ್ ಸಂದಿದೇಶ ವಿಶೇಷವಿತ್ ॥ ೫

## ಸರ್ಗ ೪೧

**ಸುಗ್ರೀವನು ನೀಲ, ಹನುಮಂತ ಮೊದಲಾದವರನ್ನು ದಕ್ಷಿಣದಿಕ್ಕಿಗೆ ಕಳಿಸುವುದು.**

ಹೀಗೆ ಸುಗ್ರೀವನು ಆ ದೊಡ್ಡ ವಾನರಬಲವನ್ನು ಪೂರ್ವ ದಿಕ್ಕಿಗೆ ಕಳಿಸಿ, ಕಾರ್ಯಸಮರ್ಥರೆಂದು ನಿರ್ಣೀತರಾದ ಕೆಲವು ವಾನರರನ್ನು ದಕ್ಷಿಣಾಭಿಮುಖವಾಗಿ ಕಳಿಸಿದನು. ಅಗ್ನಿಪುತ್ರನಾದ ನೀಲ, ಹನುಮಂತ ಮತ್ತು ಬ್ರಹ್ಮಪುತ್ರನೂ ಮಹಾಬಲನೂ ಆದ ಜಾಂಬವಂತರನ್ನು ದಕ್ಷಿಣಕ್ಕೆ ಕಳಿಸಿದನು (೧-೨). ಸುಹೋತ್ರ, ಶರಾರಿ, ಶರಗುಲ್ಮ, ಗಜ, ಗವಾಕ್ಷ, ಗವಯ, ಸುಷೇಣ*, ಋಷಭ, ಮೈಂದ, ದ್ವಿವಿದ, ವಿಜಯ, ಗಂಧಮಾದನ, ಅಗ್ನಿಪುತ್ರರಾದ ಉಲ್ಕಾಮುಖ ಮತ್ತು ಅಸಂಗರೆಂಬವರನ್ನೂ ಅವರೊಡನೆ ಕಳಿಸಿದನು (೩-೪). ವಾನರೇಂದ್ರನೂ ವಾನರರ ಯೋಗ್ಯತೆಯನ್ನು

---

* ಈ ಸುಷೇಣನು ತಾರೆಯ ತಂದೆಯಾದ ಸುಷೇಣನಲ್ಲ. ತಾರೆಯ ತಂದೆಯ ಪ್ರಸ್ತಾವ ಮುಂದಿನ ಸರ್ಗದಲ್ಲಿ ಬರುತ್ತದೆ.

ತೇಷಾಮಗ್ರೇಸರಂ ಚೈವ ಮಹಾಬಲಮಥಾಂಗದಮ್ ।
ವಿಧಾಯ ಹರಿವೀರಾಣಾಮಾದಿಶದ್ದಕ್ಷಿಣಾಂ ದಿಶಮ್ ॥ ೬

ಯೇ ಕೇಚನ ಸಮುದ್ದೇಶಾಸ್ತಸ್ಯಾಂ ದಿಶಿ ಸುದುರ್ಗಮಾಃ ।
ಕಪೀಶಃ ಕಪಿಮುಖ್ಯಾನಾಂ ಸ ತೇಷಾಂ ತಾನುದಾಹರತ್ ॥ ೭

ಸಹಸ್ರಶಿರಸಂ ವಿಂಧ್ಯಂ ನಾನಾದ್ರುಮಲತಾಯುತಮ್ ।
ನರ್ಮದಾಂ ಚ ನದೀಂ ದುರ್ಗಾಂ ಮಹೋರಗನಿಷೇವಿತಾಮ್ ॥ ೮

ತತೋ ಗೋದಾವರೀಂ ರಮ್ಯಾಂ ಕೃಷ್ಣವೇಣೀಂ ಮಹಾನದೀಮ್ ।
ವರದಾಂ ಚ ಮಹಾಭಾಗಾಂ ಮಹೋರಗನಿಷೇವಿತಾಮ್ ॥ ೯

ಮೇಖಲಾನುತ್ಕಲಾಂಶ್ಚೈವ ದಶಾರ್ಣನಗರಾಣ್ಯಪಿ ।
ಅಶ್ವವಂತೀಮವಂತೀಂ ಚ ಸರ್ವಮೇವಾನುಪಶ್ಯತ ॥ ೧೦

ವಿದರ್ಭಾನೃಷ್ಟಿಕಾಂಶ್ಚೈವ ರಮ್ಯಾನ್ ಮಹಿಷಕಾನಪಿ ।
ತಥಾ ವಂಗಾನ್ ಕಲಿಂಗಾಂಶ್ಚ ಕೌಶಿಕಾಂಶ್ಚ ಸಮಂತತಃ ॥ ೧೧

---

ಬಲ್ಲವನೂ ಆದ ಸುಗ್ರೀವನು ವೇಗವಿಕ್ರಮಸಂಪನ್ನರಾದ ಅಂಗದನೇ ಮೊದಲಾದ ವೀರರನ್ನು ಈ ರೀತಿಯಾಗಿ ದಕ್ಷಿಣದಿಕ್ಕಿಗೆ ಹೋಗುವಂತೆ ನಿಯಮಿಸಿ, ಮಹಾಪರಾಕ್ರಮಿಯಾದ ಅಂಗದನನ್ನು ಆ ಸೇನೆಗೆ ಅಧಿಪತಿಯನ್ನಾಗಿ ಗೊತ್ತುಮಾಡಿದನು (೫-೬). ಆ ಕಪೀಂದ್ರನು ದಕ್ಷಿಣದಿಕ್ಕಿನಲ್ಲಿ ದುರ್ಗಮವಾದ ಕೆಲವು ಪ್ರದೇಶಗಳನ್ನು ಅಂಗದನೇ ಮೊದಲಾದ ಕಪಿನಾಯಕರಿಗೆ ವಿವರಿಸುತ್ತ ಹೀಗೆಂದನು (೭): "ಎಲೈ ವಾನರರೆ, ನೀವು ಸಹಸ್ರಶಿಖರಗಳಿಂದಲೂ ನಾನಾವೃಕ್ಷಲತೆಗಳಿಂದಲೂ ಪರಿವೃತವಾದ ವಿಂಧ್ಯಗಿರಿಯನ್ನೂ ಮಹಾಸರ್ಪಗಳಿಗೆ ನೆಲೆಯಾಗಿ ದುರ್ಗಮವಾಗಿರುವ ನರ್ಮದಾನದಿಯನ್ನೂ ದಾಟಿ ದಕ್ಷಿಣಕ್ಕೆ ಬರಬೇಕು. ಅನಂತರ ರಮ್ಯವಾದ ಗೋದಾವರಿ, ಮಹಾನದಿಯಾದ ಕೃಷ್ಣವೇಣಿ, ಪೂಜ್ಯವೂ ಮಹಾಸರ್ಪಗಳಿಗೆ ಆಶ್ರಯವೂ ಆದ ವರದಾನದಿಗಳು ಸಿಗುತ್ತವೆ (೮-೯). ಅಲ್ಲದೆ ಮೇಖಲ, ಉತ್ಕಲ, ದಶಾರ್ಣದೇಶಗಳೂ, ಅಶ್ವವಂತಿ ಅವಂತೀನಗರಗಳೂ ಕಾಣುತ್ತವೆ. ಆ ಪ್ರದೇಶಗಳಲ್ಲಿ ವೈದೇಹಿಯನ್ನು ಹುಡುಕಿರಿ. ವಿದರ್ಭ, ಋಷ್ಟಿಕ, ರಮ್ಯವಾದ ಮಾಹಿಷಕದೇಶ, ವಂಗ, ಕಲಿಂಗ, ಕೌಶಿಕ ಮೊದಲಾದ ಪ್ರಾಂತ

ಅನ್ವೀಕ್ಷ್ಯ ದಂಡಕಾರಣ್ಯಂ ಸಪರ್ವತನದೀಗುಹಮ್ ।
ನದೀಂ ಗೋದಾವರೀಂ ಚೈವ ಸರ್ವಮೇವಾನುಪಶ್ಯತ ॥ ೧೨

ತಥೈವಾಂಧ್ರಾಂಶ್ಚ ಪುಂಡ್ರಾಂಶ್ಚ ಚೋಲಾನ್ಪಾಂಡ್ಯಾನ್ ಸಕೇರಲಾನ್
ಅಯೋಮುಖಶ್ಚ ಗಂತವ್ಯಃ ಪರ್ವತೋ ಧಾತುಮಂಡಿತಃ ॥ ೧೩

ವಿಚಿತ್ರಶಿಖರಃ ಶ್ರೀಮಾಂಶ್ಚಿತ್ರಪುಷ್ಪಿತಕಾನನಃ ।
ಸಚಂದನವನೋದ್ದೇಶೋ ಮಾರ್ಗಿತವ್ಯೋ ಮಹಾಗಿರಿಃ ॥ ೧೪

ತತಸ್ತಾಮಾಪಗಾಂ ದಿವ್ಯಾಂ ಪ್ರಸನ್ನಸಲಿಲಾಂ ಶಿವಾಮ್ ।
ತತ್ರ ದ್ರಕ್ಷ್ಯಥ ಕಾವೇರೀಂ ವಿಹೃತಾಮಪ್ಸರೋಗಣೈಃ ॥ ೧೫

ತಸ್ಯಾಸೀನಂ ನಗಸ್ಯಾಗ್ರೇ ಮಲಯಸ್ಯ ಮಹೌಜಸಮ್ ।
ದ್ರಕ್ಷ್ಯಥಾದಿತ್ಯಸಂಕಾಶಮಗಸ್ತ್ಯಮೃಷಿಸತ್ತಮಮ್ ॥ ೧೬

ತತಸ್ತೇನಾಭ್ಯನುಜ್ಞಾತಾಃ ಪ್ರಸನ್ನೇನ ಮಹಾತ್ಮನಾ ।
ತಾಮ್ರಪರ್ಣೀಂ ಗ್ರಾಹಜುಷ್ಟಾಂ ತರಿಷ್ಯಥ ಮಹಾನದೀಮ್ ॥ ೧೭

---

ಗಳನ್ನು ಅನ್ವೇಷಿಸಿರಿ (೧೦-೧೧). ದಂಡಕಾರಣ್ಯದಲ್ಲಿರುವ ಪರ್ವತ ನದೀ ಗುಹೆಗಳನ್ನೂ ಗೋದಾವರೀನದಿಯ ಪ್ರಾಂತವನ್ನೂ ಸರಿಯಾಗಿ ಶೋಧಿಸಿರಿ. ಹಾಗೆಯೇ ಆಂಧ್ರ, ಪುಂಡ್ರ, ಚೋಳ, ಪಾಂಡ್ಯ, ಕೇರಳ ರಾಜ್ಯಗಳನ್ನು ಹುಡುಕಬೇಕು ಅನಂತರ ವಿವಿಧ ಧಾತುಮಂಡಿತವಾದ ಅಯೋಮುಖವೆಂಬ* ಪರ್ವತಕ್ಕೆ ಹೋಗಿರಿ (೧೨-೧೩). ಆ ಪರ್ವತವು ವಿವಿಧವರ್ಣದ ಶಿಖರ ಗಳಿಂದ ರಮ್ಯವಾಗಿದೆ. ಅದರ ಕಾನನದಲ್ಲಿ ಚಿತ್ರವರ್ಣದ ಹೂಗಳು ಅರಳಿರು ತ್ತಿವೆ ಸುತ್ತಲೂ ಚಂದನವೃಕ್ಷಗಳ ವನವಿದೆ ಆ ಮಹಾಗಿರಿಯನ್ನು ಶೋಧಿಸಿರಿ. ಎಲೈ ವಾನರರೆ, ಅನಂತರ ನೀವು ತಿಳಿನೀರಿನಿಂದ ಶೋಭಿಸುವ ದಿವ್ಯವಾದ ಕಾವೇರೀನದಿಯನ್ನು ಕಾಣುವಿರಿ ಆ ಪುಣ್ಯನದಿಯಲ್ಲಿ ಅಪ್ಸರೆಯರು ವಿಹರಿಸುವರು (೧೪-೧೫) ಅದರ ಸಮೀಪದಲ್ಲಿರುವ ಮಲಯಪರ್ವತದ ಶಿಖರದಲ್ಲಿ ವಾಸವಾಗಿರುವ ಅಗಸ್ತ್ಯಮಹರ್ಷಿಗಳನ್ನು ನೋಡಬಹುದು. ಆ ಮಹಾತೇಜಸ್ವಿಗಳು ಸೂರ್ಯನಂತೆ ಪ್ರಕಾಶಿಸುತ್ತಾರೆ. (ಅವರನ್ನು ವಂದಿಸಿ) ಪ್ರಸನ್ನರಾದ ಆ ಮಹಾತ್ಮರಿಂದ ಅನುಜ್ಞೆಯನ್ನು

---

* ಅಯೋಮುಖವೆಂದರೆ ಸಹ್ಯಾದ್ರಿಯೆಂದು ಕೆಲವರೂ ಮಲಯಗಿರಿಯೆಂದು ಕೆಲವರೂ ಹೇಳಿದ್ದಾರೆ.

ಸಾ ಚಂದನವನೈರ್ದಿವ್ಯೈಃ ಪ್ರಚ್ಛನ್ನದ್ವೀಪಶಾಲಿನೀ ।
ಕಾಂತೇವ ಯುವತಿಃ ಕಾಂತಂ ಸಮುದ್ರಮವಗಾಹತೇ ॥ ೧೮

ತತೋ ಹೇಮಮಯಂ ದಿವ್ಯಂ ಮುಕ್ತಾಮಣಿವಿಭೂಷಿತಮ್ ।
ಯುಕ್ತಂ ಕವಾಟಂ ಪಾಂಡ್ಯಾನಾಂ ಗತಾ ದ್ರಕ್ಷ್ಯಥ ವಾನರಾಃ ॥ ೧೯

ತತಃ ಸಮುದ್ರಮಾಸಾದ್ಯ ಸಂಪ್ರಧಾರ್ಯಾರ್ಥನಿಶ್ಚಯಮ್ ।
ಅಗಸ್ತ್ಯೇನಾಂತರೇ ತತ್ರ ಸಾಗರೇ ವಿನಿವೇಶಿತಃ ॥ ೨೦

ಚಿತ್ರಸಾನುನಗಃ ಶ್ರೀಮಾನ್ ಮಹೇಂದ್ರಃ ಪರ್ವತೋತ್ತಮಃ ।
ಜಾತರೂಪಮಯಃ ಶ್ರೀಮಾನವಗಾಢೋ ಮಹಾರ್ಣವಮ್ ॥ ೨೧

ನಾನಾವಿಧೈರ್ನಗೈಃ ಫುಲ್ಲೈರ್ಲತಾಭಿಶ್ಚೋಪಶೋಭಿತಮ್ ।
ದೇವರ್ಷಿಯಕ್ಷಪ್ರವರೈರಪ್ಸರೋಭಿಶ್ಚ ಸೇವಿತಮ್ ॥ ೨೨

ಸಿದ್ಧಚಾರಣಸಂಘೈಶ್ಚ ಪ್ರಕೀರ್ಣಂ ಸುಮನೋಹರಮ್ ।
ತಮುಪೈತಿ ಸಹಸ್ರಾಕ್ಷಃ ಸದಾ ಪರ್ವಸು ಪರ್ವಸು ॥ ೨೩

---

ಪಡೆದು ಮುಂದೆ ಹೊರಟರೆ ತಾಮ್ರಪರ್ಣಿಯೆಂಬ ಮಹಾನದಿಯನ್ನು ಕಾಣುವಿರಿ. ಮೊಸಳೆಗಳಿಂದ ತುಂಬಿದ ಆ ನದಿಯನ್ನು ದಾಟಿಹೋಗಿರಿ (೧೬ ೧೭). ಎಲೈ ವಾನರರೆ, ದಿವ್ಯ ಚಂದನವೃಕ್ಷಗಳಿಂದ ಆಚ್ಛಾದಿತ ದ್ವೀಪಗಳುಳ್ಳ ಆ ತಾಮ್ರಪರ್ಣಿಯು ಕಾಂತನ ಬಳಿಗೆ ಚಂದನಲಿಪ್ತಳಾದ ತರುಣಿಯು ಹೋಗುವಂತೆ, ಸಮುದ್ರರಾಜನ ಕಡೆಗೆ ನಾಗುತ್ತಿರುವಳು ! (೧೮). ಅನಂತರ ಮುಂದೆ ಹೋದರೆ, ಪಾಂಡ್ಯರಾಜರ ನಗರದ್ವಾರ ಕವಾಟವು ನಿಮಗೆ ಗೋಚರಿಸುವುದು ದಿವ್ಯವಾದ ಆ ಕವಾಟವು ಸುವರ್ಣ ಮಯವಾಗಿ ಮುಕ್ತಾಮಣಿಗಳಿಂದ ವಿಭೂಷಿತವಾಗಿರುತ್ತದೆ ಅಲ್ಲಿಂದ ಮುಂದೆ ನಿಮಗೆ ಸಮುದ್ರವು ಸಿಗುವುದು ಅಲ್ಲಿಗೆ ಹೋಗಿ ಮುಂದಿನ ಕರ್ತವ್ಯವನ್ನು ನಿಶ್ಚಯಿಸಿರಿ ಆ ಸಮುದ್ರದ ಪಾರ್ಶ್ವದಲ್ಲಿ ಮಹೇಂದ್ರವೆಂಬ ಪರ್ವತವನ್ನು ಅಗಸ್ತ್ಯರು ಸ್ಥಾಪಿಸಿದ್ದಾರೆ (೧೯–೨೦) ಅದರ ತಪ್ಪಲಿನಲ್ಲಿ ಚಿತ್ರವರ್ಣದ ವೃಕ್ಷಗಳಿವೆ ಸುವರ್ಣಮಯವಾದ ಆ ಶೈಲವು ಸಮುದ್ರದೊಳಗೆ ಚಾಚಿಕೊಂಡಿದೆ ಬಗೆಬಗೆಯ ಲತಾವೃಕ್ಷಗಳು ಆ ಶೈಲದಲ್ಲಿ ಅರಳಿ ನಿಂತಿರುತ್ತವೆ ದೇವತೆಗಳೂ. ಋಷಿಗಳೂ, ಯಕ್ಷರೂ, ಅಪ್ಸರೆಯರೂ ಅಲ್ಲಿ ಸಂಚರಿಸುತ್ತಾರೆ (೨೧–೨೨) ಸಿದ್ಧಚಾರಣರು ನೆರೆದಿರುತ್ತಾರೆ.

ದ್ವೀಪಸ್ತಸ್ಯಾಪರೇ ಪಾರೇ ಶತಯೋಜನವಿಸ್ತೃತಃ ।
ಅಗಮ್ಯೋ ಮಾನುಷೈರ್ದೀಪ್ತಸ್ತಂ ಮಾರ್ಗಧ್ವಂ ಸಮಂತತಃ ॥ ೨೪

ತತ್ರ ಸರ್ವಾತ್ಮನಾ ಸೀತಾ ಮಾರ್ಗಿತವ್ಯಾ ವಿಶೇಷತಃ ।
ಸ ಹಿ ದೇಶಸ್ತು ವಧ್ಯಸ್ಯ ರಾವಣಸ್ಯ ದುರಾತ್ಮನಃ ॥ ೨೫

ರಾಕ್ಷಸಾಧಿಪತೇರ್ವಾಸಃ ಸಹಸ್ರಾಕ್ಷಸಮದ್ಯುತೇಃ ।
ದಕ್ಷಿಣಸ್ಯ ಸಮುದ್ರಸ್ಯ ಮಧ್ಯೇ ತಸ್ಯ ತು ರಾಕ್ಷಸೀ ॥ ೨೬

ಅಂಗಾರಕೇತಿ ವಿಖ್ಯಾತಾ ಛಾಯಾಮಾಕ್ಷಿಪ್ಯ ಭೋಜನೀ ।
ಏವಂ ನಿಃಸಂಶಯಾನ್ ಕೃತ್ವಾ ಸಂಶಯಾನ್ನಷ್ಟಸಂಶಯಾಃ ॥ ೨೭

ಮೃಗಯಧ್ವಂ ನರೇಂದ್ರಸ್ಯ ಪತ್ನೀಮಮಿತತೇಜಸಃ ।
ತಮತಿಕ್ರಮ್ಯ ಲಕ್ಷ್ಮೀವಾನ್ ಸಮುದ್ರೇ ಶತಯೋಜನೇ ॥ ೨೮

ಗಿರಿಃ ಪುಷ್ಪಿತಕೋ ನಾಮ ಸಿದ್ಧಚಾರಣಸೇವಿತಃ ।
ಚಂದ್ರಸೂರ್ಯಾಂಶುಸಂಕಾಶಃ ಸಾಗರಾಂಬುಸಮಾವೃತಃ ॥ ೨೯

---

ಮಹೇಂದ್ರನು ಪ್ರತಿಯೊಂದು ಪರ್ವಕಾಲದಲ್ಲಿಯೂ (ಸಮುದ್ರಸ್ನಾನಕ್ಕಾಗಿ) ಅಲ್ಲಿಗೆ ಆಗಮಿಸುತ್ತಾನೆ. (ಆ ಪ್ರದೇಶದಲ್ಲಿ ವೈದೇಹಿಯನ್ನು ಹುಡುಕಿರಿ) ಎಲೈ ಕಪಿವೀರರೆ, ಆ ಸಮುದ್ರದ ಆಚೆಯ ತೀರದಲ್ಲಿ ಶತಯೋಜನ ವಿಸ್ತೀರ್ಣವಾದ ಒಂದು ದ್ವೀಪ ಉಂಟು. ಅಲ್ಲಿಗೆ ಮನುಷ್ಯರು ಹೋಗಲು ಶಕ್ಯವಿಲ್ಲ. ಆ ದ್ವೀಪದಲ್ಲಿ ನೀವು ವೈದೇಹಿಯನ್ನು ಸರಿಯಾಗಿ ಅನ್ವೇಷಿಸಿರಿ! (೨೩-೨೪). ಆ ದ್ವೀಪದಲ್ಲಿ ಒಂದು ಸ್ಥಳವನ್ನೂ ಬಿಡದಂತೆ ನೀವು ಸೀತಾದೇವಿಯನ್ನು ಹುಡುಕತಕ್ಕದ್ದು. ಕಪಿವೀರರೆ, ದುರಾತ್ಮನೂ ವಧಾರ್ಹನೂ ಆದ ರಾವಣನು ವಾಸವಾಗಿರುವ ಸ್ಥಳವೇ ಅದು! ದೇವೇಂದ್ರನಂತೆ ಪರಾಕ್ರಮಿಯಾದ ಆ ರಾಕ್ಷಸೇಶ್ವರನು ಅಲ್ಲಿ ವಾಸಿಸುತ್ತಾನೆ! ದಕ್ಷಿಣಸಮುದ್ರದ ಮಧ್ಯದಲ್ಲಿ ಒಬ್ಬ ರಾಕ್ಷಸಿ ಇದ್ದಾಳೆ (೨೫-೨೬) ಅವಳ ಹೆಸರು ಅಂಗಾರಕೆ. ಆ ರಾಕ್ಷಸಿಯು ಪ್ರಾಣಿಗಳ ನೆರಳನ್ನು ಹಿಡಿದೆಳೆದು ಆ ಪ್ರಾಣಿಗಳನ್ನು ಭಕ್ಷಿಸುತ್ತಾಳೆ! ಎಲೈ ವೀರಾಧಿವೀರರೆ, ನೀವು ಆ ದ್ವೀಪದಲ್ಲಿ ನಿಮ್ಮ ಸಂಶಯವು ತೀರುವವರೆಗೂ ಹುಡುಕಿ ಹುಡುಕಿ ನೋಡಿರಿ! ರಾಜೇಂದ್ರನಾದ ಶ್ರೀರಾಮನ ಪತ್ನಿಯನ್ನು ನಿಮಗೆ ನಿಸ್ಸಂದೇಹವಾಗುವವರೆಗೂ ಅನ್ವೇಷಿಸಿರಿ! (೨೭-೨೮). ಲಂಕಾದ್ವೀಪದಿಂದ ನೂರುಯೋಜನ ದೂರದಲ್ಲಿ ಪುಷ್ಪಿತಕ

ಭ್ರಾಜತೇ ವಿಪುಲೈಃ ಶೃಂಗೈರಂಬರಂ ವಿಲಿಖನ್ನಿವ ।
ತಸ್ಯೈಕಂ ಕಾಂಚನಂ ಶೃಂಗಂ ಸೇವತೇ ಯಂ ದಿವಾಕರಃ ॥ ೩೦

ಶ್ವೇತಂ ರಾಜತಶೃಂಗಂ ಚ ಸೇವತೇ ಯಂ ನಿಶಾಕರಃ ।
ನ ತಂ ಕೃತಘ್ನಾಃ ಪಶ್ಯಂತಿ ನ ನೃಶಂಸಾ ನ ನಾಸ್ತಿಕಾಃ ॥ ೩೧

ಪ್ರಣಮ್ಯ ಶಿರಸಾ ಶೈಲಂ ತಂ ವಿಮಾರ್ಗತ ವಾನರಾಃ ।
ತಮತಿಕ್ರಮ್ಯ ದುರ್ಧರ್ಷಾಃ ಸೂರ್ಯವಾನ್ನಾಮ ಪರ್ವತಃ ॥ ೩೨

ಅಧ್ವನಾ ದುರ್ವಿಗಾಹೇನ ಯೋಜನಾನಿ ಚತುರ್ದಶ ।
ತತಸ್ತಮಪ್ಯತಿಕ್ರಮ್ಯ ವೈದ್ಯುತೋ ನಾಮ ಪರ್ವತಃ ॥ ೩೩

ಸರ್ವಕಾಮಫಲೈರ್ವೃಕ್ಷೈಃ ಸರ್ವಕಾಲಮನೋಹರೈಃ ।
ತತ್ರ ಭುಕ್ತ್ವಾ ವರಾರ್ಹಾಣಿ ಮೂಲಾನಿ ಚ ಫಲಾನಿ ಚ ॥ ೩೪

---

ವೆಂಬ ಗಿರಿಯು ಸಮುದ್ರಮಧ್ಯದಲ್ಲಿದೆ ಸಿದ್ಧಚಾರಣಸಂಸೇವಿತವಾದ ಆ ಗಿರಿಯು ಸೂರ್ಯ ಮತ್ತು ಚಂದ್ರನ ಕಿರಣಗಳಿಂದ ಪ್ರಕಾಶಿಸುತ್ತದೆ. ಅದರ ಸುತ್ತಲೂ ಸಮುದ್ರಜಲವು ಆವೃತವಾಗಿದೆ (೨೯). ಆ ಶೈಲವು ತನ್ನ ಉನ್ನತ ಶಿಖರಗಳಿಂದ ಗಗನವನ್ನು ಕೊರೆಯುತ್ತಿದೆಯೋ ಎಂಬಂತೆ ಕಾಣುವುದು. ಪುಷ್ಪಿತಕಗಿರಿಯ ಕನಕಮಯ ಶಿಖರಕ್ಕೆ ಸೂರ್ಯನೂ ರಜತಮಯ ಶಿಖರಕ್ಕೆ ಚಂದ್ರನೂ ಬರುತ್ತಾರೆ. ಕೃತಘ್ನರಿಗೂ ಘಾತುಕರಿಗೂ ನಾಸ್ತಿಕರಿಗೂ ಆ ಪರ್ವತವು ಗೋಚರಿಸುವುದಿಲ್ಲ (೩೦-೩೧). ಎಲೈ ವಾನರರೆ, ನೀವು ಆ ಪರ್ವತಕ್ಕೆ ಪ್ರಣಾಮವನ್ನರ್ಪಿಸಿ ಅದರಲ್ಲಿ ಸೀತಾದೇವಿಯನ್ನು ಹುಡುಕಿರಿ. ಅಲ್ಲಿಂದ ಮುಂದೆ ಸೂರ್ಯವಾನ್ ಎಂಬ ಪರ್ವತವಿದೆ. ದುರ್ಗಮವಾದ ದಾರಿಯಿಂದ ಅಲ್ಲಿಗೆ ಹೋಗಬೇಕಾಗುವುದು. ಪುಷ್ಪಿತಕ ಗಿರಿಯಿಂದ ಹದಿನಾಲ್ಕು ಯೋಜನಗಳ ದೂರದಲ್ಲಿ ಆ ಪರ್ವತವಿದೆ. ಅದನ್ನು ದಾಟಿ ಮುಂದೆ ಹೋದರೆ ವೈದ್ಯುತವೆಂಬ ಶೈಲವು ಗೋಚರಿಸುವುದು (೩೨-೩೩). ಅದು ಬೇಕುಬೇಕಾದ ಹಣ್ಣುಗಳನ್ನು ಕೊಡುವ ಸರ್ವಕಾಲದಲ್ಲಿಯೂ ಮನೋಹರವಾದ ವೃಕ್ಷಗಳಿಂದ ಶೋಭಿಸುತ್ತಿರುವುದು ವಾನರರೆ,

ಮಧೂನಿ ಪೀತ್ವಾ ಮುಖ್ಯಾನಿ ಪರಂ ಗಚ್ಛತ ವಾನರಾಃ ।
ತತ್ರ ನೇತ್ರಮನಃಕಾಂತಃ ಕುಂಜರೋ ನಾಮ ಪರ್ವತಃ ॥ ೩೫

ಅಗಸ್ತ್ಯಭವನಂ ಯತ್ರ ನಿರ್ಮಿತಂ ವಿಶ್ವಕರ್ಮಣಾ ।
ತತ್ರ ಯೋಜನವಿಸ್ತಾರಮುಚ್ಛ್ರಿತಂ ದಶಯೋಜನಮ್ ॥ ೩೬

ಶರಣಂ ಕಾಂಚನಂ ದಿವ್ಯಂ ನಾನಾರತ್ನವಿಭೂಷಿತಮ್ ।
ತತ್ರ ಭೋಗವತೀ ನಾಮ ಸರ್ಪಾಣಾಮಾಲಯಃ ಪುರೀ ॥ ೩೭

ವಿಶಾಲಕಕ್ಷ್ಯಾ ದುರ್ಧರ್ಷಾ ಸರ್ವತಃ ಪರಿರಕ್ಷಿತಾ ।
ರಕ್ಷಿತಾ ಪನ್ನಗೈರ್ಘೋರೈಸ್ತೀಕ್ಷ್ಣದಂಷ್ಟ್ರೈರ್ಮಹಾವಿಷೈಃ ॥ ೩೮

ಸರ್ಪರಾಜೋ ಮಹಾಪ್ರಾಜ್ಞೋ ಯಸ್ಯಾಂ ವಸತಿ ವಾಸುಕಿಃ ।
ನಿರ್ಯಾಯ ಮಾರ್ಗಿತವ್ಯಾ ಚ ಸಾ ಚ ಭೋಗವತೀ ಪುರೀ ॥ ೩೯

ತತ್ರ ಚಾನಂತರಾ ದೇಶಾ ಯೇ ಕೇಚನ ಸುಸಂವೃತಾಃ ।
ತಂ ಚ ದೇಶಮತಿಕ್ರಮ್ಯ ಮಹಾನೃಷಭಸಂಸ್ಥಿತಃ ॥ ೪೦

---

ಆ ಬೆಟ್ಟದಲ್ಲಿ ಉತ್ತಮವಾದ ಫಲಮೂಲಗಳನ್ನು ತಿಂದು ಪ್ರಶಸ್ತವಾದ ಮಧುವನ್ನು ಕುಡಿದು ಮುಂದಕ್ಕೆ ಹೋಗಿರಿ! ಆಮೇಲೆ ನಿಮಗೆ ಕುಂಜರ ವೆಂಬ ಪರ್ವತವು ಕಾಣಿಸುವುದು ಅದನ್ನು ಕಂಡು ನಿಮ್ಮ ಕಣ್ಣಿಗೂ ಮನಸ್ಸಿಗೂ ಆನಂದವಾಗುವುದು! (೩೪-೩೫) ಅಲ್ಲಿ ಅಗಸ್ತ್ಯಮುನಿ ಗಳಿಗೋಸ್ಕರವಾಗಿ ವಿಶ್ವಕರ್ಮನು ಒಂದು ಭವನವನ್ನು ನಿರ್ಮಿಸಿದ್ದಾನೆ ಅದು ಒಂದುಯೋಜನ ಅಗಲವಾಗಿಯೂ ಹತ್ತುಯೋಜನ ಉದ್ದವಾಗಿಯೂ ಇದೆ. ಆ ದಿವ್ಯಭವನವು ಸುವರ್ಣದಿಂದಲೂ ನಾನಾರತ್ನಗಳಿಂದಲೂ ಅಲಂಕೃತವಾಗಿದೆ. ಅಲ್ಲದೆ ಕುಂಜರಪರ್ವತದ ಒಂದು ಪಾರ್ಶ್ವದಲ್ಲಿ ಸರ್ಪಗಳು ವಾಸವಾಗಿರುವ ಭೋಗವತಿಯೆಂಬ ಪುರವಿದೆ (೩೬-೩೭). ವಿಶಾಲಗೃಹ ಪಂಕ್ತಿಯುಳ್ಳ ಆ ನಗರಕ್ಕೆ ಸುತ್ತಲೂ ಬಲವಾದ ಕಾವಲಿದೆ. ತೀಕ್ಷ್ಣದಂಷ್ಟ್ರ ಗಳೂ ಮಹಾವಿಷಗಳೂ ಆದ ಸರ್ಪಗಳು ಅದನ್ನು ರಕ್ಷಿಸುತ್ತಿವೆ ಮಹಾ ಪ್ರಾಜ್ಞನಾದ ವಾಸುಕಿಯೆಂಬ ಸರ್ಪರಾಜನು ಅಲ್ಲಿ ವಾಸವಾಗಿದ್ದಾನೆ. ನೀವು ಭೋಗವತಿಗೆ ಹೋಗಿ ಅದರಲ್ಲಿ ವೈದೇಹಿಯನ್ನು ಅರಸತಕ್ಕದ್ದು (೩೮-೩೯). ಅದಕ್ಕೆ ಸಮೀಪದಲ್ಲಿ ಅನೇಕ ರಹಸ್ಯಪ್ರದೇಶಗಳಿವೆ. ಅವುಗಳ

ಸರ್ವರತ್ನಮಯಃ ಶ್ರೀಮಾನೃಷಭೋ ನಾಮ ಪರ್ವತಃ ।
ಗೋಶೀರ್ಷಕಂ ಪದ್ಮಕಂ ಚ ಹರಿಶ್ಯಾಮಂ ಚ ಚಂದನಮ್ ॥ ೪೧

ದಿವ್ಯಮುತ್ಪದ್ಯತೇ ಯತ್ರ ತಚ್ಚೈವಾಗ್ನಿಸಮಪ್ರಭಮ್ ।
ನ ತು ತಚ್ಚಂದನಂ ದೃಷ್ಟ್ವಾ ಸ್ಪ್ರಷ್ಟವ್ಯಂ ಚ ಕದಾಚನ ॥ ೪೨

ರೋಹಿತಾ ನಾಮ ಗಂಧರ್ವಾ ಘೋರಾ ರಕ್ಷಂತಿ ತದ್ವನಮ್ ।
ತತ್ರ ಗಂಧರ್ವಪತಯಃ ಪಂಚ ಸೂರ್ಯಸಮಪ್ರಭಾಃ ॥ ೪೩

ಶೈಲೂಷೋ ಗ್ರಾಮಣೀಃ ಶಿಗ್ರುಃ ಶುಭ್ರೋ ಬಭ್ರುಸ್ತಥೈವ ಚ ।
ರವಿಸೋಮಾಗ್ನಿವಪುಷಾಂ ನಿವಾಸಃ ಪುಣ್ಯಕರ್ಮಣಾಮ್ ॥ ೪೪

ಅಂತೇ ಪೃಥಿವ್ಯಾ ದುರ್ಧರ್ಷಾಸ್ತತ್ರ ಸ್ವರ್ಗಜಿತಃ ಸ್ಥಿತಾಃ ।
ತತಃ ಪರಂ ನ ವಃ ಸೇವ್ಯಃ ಪಿತೃಲೋಕಃ ಸುದಾರುಣಃ ॥ ೪೫

ರಾಜಧಾನೀ ಯಮಸ್ಯೈಷಾ ಕಷ್ಟೇನ ತಮಸಾ ವೃತಾ ।
ಏತಾವದೇವ ಯುಷ್ಮಾಭಿರ್ವೀರಾ ವಾನರಪುಂಗವಾಃ ॥ ೪೬

---

ನ್ನೆಲ್ಲಾ ನೀವು ಹುಡುಕಬೇಕು. ಅಲ್ಲಿಂದ ಮುಂದೆ ಹೋದರೆ, ವೃಷಭಾಕಾರವಾದ ಋಷಭವೆಂಬ ಒಂದು ಪರ್ವತವು ಕಾಣಿಸುತ್ತದೆ. ಸರ್ವರತ್ನಮಯವಾದ ಆ ಪರ್ವತದಲ್ಲಿ ಗೋಶೀರ್ಷಕ, ಪದ್ಮಕ ಮತ್ತು ಹರಿಶ್ಯಾಮವೆಂಬ ದಿವ್ಯವಾದ ಚಂದನವೃಕ್ಷಗಳು ಬೆಳೆಯುತ್ತವೆ. ಅವು ಅಗ್ನಿಯಂತೆ ಬೆಳಗುತ್ತವೆ. ವಾನರರೆ, ನೀವು ಮಾತ್ರ ಆ ಚಂದನವೃಕ್ಷಗಳನ್ನು ಮುಟ್ಟಕೂಡದು! (೪೧-೪೨) ಘೋರಾಕಾರರಾದ ರೋಹಿತರೆಂಬ ಗಂಧರ್ವರು ಆ ವನವನ್ನು ರಕ್ಷಿಸುತ್ತಿದ್ದಾರೆ. ಆ ಪರ್ವತದಲ್ಲಿ ಶೈಲೂಷ, ಗ್ರಾಮಣಿ, ಶಿಗ್ರು, ಶುಭ್ರ ಮತ್ತು ಬಭ್ರುವೆಂಬ ಸೂರ್ಯಸಮಾನತೇಜಸ್ಕರಾದ ಐವರು ಗಂಧರ್ವಪತಿಗಳಿದ್ದಾರೆ. ಸೂರ್ಯಚಂದ್ರಾಗ್ನಿಗಳಂತೆ ತೇಜೋಮಯವಾದ ಶರೀರವುಳ್ಳ ಪುಣ್ಯಶಾಲಿಗಳ ವಾಸಸ್ಥಳವದು (೪೩-೪೪). ಪೃಥಿವಿಯ ಅಂತ್ಯಭಾಗವಾದ ಆ ಸ್ಥಳದಲ್ಲಿ ತಮ್ಮ ಪುಣ್ಯಕರ್ಮದಿಂದ ಸ್ವರ್ಗವನ್ನು ಪಡೆದ ಮಹಾತ್ಮರು ಇದ್ದಾರೆ. ಅಲ್ಲಿಂದ ಮುಂದೆ ನೀವು ಹೋಗತಕ್ಕದ್ದಲ್ಲ. ಅಲ್ಲಿ ಭೀಕರವಾದ ಪಿತೃಲೋಕವಿದೆ. ಅದು ಯಮನ ರಾಜಧಾನಿ. ಗಾಢಾಂಧಕಾರವು ಅಲ್ಲಿ ವ್ಯಾಪಿಸಿರುತ್ತದೆ. ಆದ್ದರಿಂದ, ವಾನರವೀರರೆ, ನೀವು ಋಷಭ

**ಶಕ್ಯಂ ವಿಚೇತುಂ ಗಂತುಂ ವಾ ನಾತೋ ಗತಿಮತಾಂ ಗತಿಃ ।**
**ಸರ್ವಮೇತತ್ ಸಮಾಲೋಕ್ಯ ಯಚ್ಚಾನ್ಯದಪಿ ದೃಶ್ಯತೇ ॥ ೪೭**
**ಗತಿಂ ವಿದಿತ್ವಾ ವೈದೇಹ್ಯಾಃ ಸಂನಿವರ್ತಿತುಮರ್ಹಥ ।**
**ಯಸ್ತು ಮಾಸಾನ್ನಿವೃತ್ತೋಽಗ್ರೇ ದೃಷ್ಟ್ವಾ ಸೀತೇತಿ ವಕ್ಷ್ಯತಿ ॥ ೪೮**
**ಮತ್ತುಲ್ಯವಿಭವೋ ಭೋಗೈಃ ಸುಖಂ ಸ ವಿಹರಿಷ್ಯತಿ ।**
**ತತಃ ಪ್ರಿಯತರೋ ನಾಸ್ತಿ ಮಮ ಪ್ರಾಣಾದ್ವಿಶೇಷತಃ ॥ ೪೯**
**ಕೃತಾಪರಾಧೋ ಬಹುಶೋ ಮಮ ಬಂಧುರ್ಭವಿಷ್ಯತಿ ॥**

**ಅಮಿತಬಲಪರಾಕ್ರಮಾ ಭವಂತೋ**
**ವಿಪುಲಗುಣೇಷು ಕುಲೇಷು ಚ ಪ್ರಸೂತಾಃ ।**
**ಮನುಜಪತಿಸುತಾಂ ಯಥಾ ಲಭಧ್ವಂ**
**ತದಧಿಗುಣಂ ಪುರುಷಾರ್ಥಮಾರಭಧ್ವಮ್ ॥ ೫೦**

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಏಕಚತ್ವಾರಿಂಶಃ ಸರ್ಗಃ

---

ಪರ್ವತದವರೆಗೆ ಮಾತ್ರ ಹೋಗಬಹುದು (೪೫-೪೬). ಭೂಲೋಕದ ಜನರಿಗೆ ಮುಂದೆ ಹೋಗಲೂ ಸಾಧ್ಯವಿಲ್ಲ. ಹುಡುಕುವುದಂತೂ ದೂರ ಉಳಿಯಿತು. ಇದುವರೆಗೆ ನಾನು ಹೇಳಿದ ಸ್ಥಳಗಳನ್ನೂ ಮಧ್ಯದಲ್ಲಿ ಗೋಚರಿಸುವ ಇತರ ಸ್ಥಳಗಳನ್ನೂ ಶೋಧಿಸಿ ಸೀತಾದೇವಿಯನ್ನು ಅರಸ ತಕ್ಕದ್ದು (೪೭). ಅನಂತರ ಹಿಂದಿರುಗಿ ಬನ್ನಿರಿ ನಿಮ್ಮಲ್ಲಿ ಯಾವನು ಒಂದು ತಿಂಗಳೊಳಗಾಗಿ ಹಿಂದಿರುಗಿ ಬಂದು, 'ಸೀತಾದೇವಿಯನ್ನು ಕಂಡೆನು!' ಎಂದು ಹೇಳುವನೋ ಅವನು ನನಗೆ ಸಮಾನವಾದ ವೈಭವವನ್ನು ಪಡೆಯುವನು! ಮುಂದೆ ಅವನು ಸೌಖ್ಯದಿಂದ ವಿಹರಿಸುತ್ತಿರುವನು! ಎಲೈ ವಾನರರೆ, ಅವನಿಗಿಂತ ನನಗೆ ಪ್ರಿಯನಾದ ಇನ್ನೊಬ್ಬನಿರಲಾರನು! ನನ್ನ ಪ್ರಾಣಕ್ಕಿಂತಲೂ ಅವನು ಪ್ರಿಯತರನೆಂದು ತಿಳಿಯುತ್ತೇನೆ! ಅವನು ಯಾವ ಅಪರಾಧವನ್ನು ಎಷ್ಟುಸಲ ಮಾಡಿದರೂ ನನ್ನ ಬಂಧುವೆಂದು ಆದರಿಸುವೆನು! (೪೮-೪೯). ವಾನರವೀರರೆ, ನೀವು ಅತ್ಯಂತ ಬಲಾಢ್ಯರು; ಮಹಾಪರಾಕ್ರಮಿಗಳು; ಶೌರ್ಯಧೈರ್ಯಾದಿ ಗುಣಗಳಿಗೆ ಹೆಸರಾದ ಸತ್ಕುಲದಲ್ಲಿ ಜನಿಸಿದವರು ರಾಜಕುಮಾರಿಯಾದ ಜಾನಕಿಯು ಲಭಿಸುವುದಕ್ಕೆ ಬೇಕಾದ ಪುರಷಪ್ರಯತ್ನವೆಲ್ಲವನ್ನೂ ನೀವು ಮಾಡಬೇಕು" ಎಂದು ಹೇಳಿದನು (೫೦).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ನಲವತ್ತೊಂದನೆಯ ಸರ್ಗ

## ದ್ವಿಚತ್ವಾರಿಂಶಃ ಸರ್ಗಃ

### ಪ್ರತೀಚೀಪ್ರೇಷಣಮ್

ಅಥ ಪ್ರಸ್ಥಾಪ್ಯ ಸುಗ್ರೀವಸ್ತಾನ್ ಹರೀನ್ ದಕ್ಷಿಣಾಂ ದಿಶಮ್ ।
ಅಬ್ರವೀನ್ಮೇಘಸಂಕಾಶಂ ಸುಷೇಣಂ ನಾಮ ಯೂಥಪಮ್ ॥ ೧

ತಾರಾಯಾಃ ಪಿತರಂ ರಾಜಾ ಶ್ವಶುರಂ ಭೀಮವಿಕ್ರಮಮ್ ।
ಅಬ್ರವೀತ್ ಪ್ರಾಂಜಲಿರ್ವಾಕ್ಯಮಭಿಗಮ್ಯ ಪ್ರಣಮ್ಯ ಚ ॥ ೨

ಮಹರ್ಷಿಪುತ್ರಂ ಮಾರೀಚಮರ್ಚಿಷ್ಮಂತಂ ಮಹಾಕಪಿಮ್ ।
ವೃತಂ ಕಪಿವರೈಃ ಶೂರೈರ್ಮಹೇಂದ್ರಸದೃಶದ್ಯುತಿಮ್ ॥ ೩

ಬುದ್ಧಿವಿಕ್ರಮಸಂಪನ್ನಂ ವೈನತೇಯಸಮದ್ಯುತಿಮ್ ।
ಮರೀಚಿಪುತ್ರಾನ್ ಮಾರೀಚಾನರ್ಚಿರ್ಮಾಲಾನ್ ಮಹಾಬಲಾನ್ ॥

ಋಷಿಪುತ್ರಾಂಶ್ಚ ತಾನ್ ಸರ್ವಾನ್ ಪ್ರತೀಚೀಮಾದಿಶದ್ದಿಶಮ್ ।
ದ್ವಾಭ್ಯಾಂ ಶತಸಹಸ್ರಾಭ್ಯಾಂ ಕಪೀನಾಂ ಕಪಿಸತ್ತಮಾಃ ॥ ೪

### ಸರ್ಗ ೪೨

ಸುಷೇಣಾದಿ ವಾನರರನ್ನು ಸುಗ್ರೀವನು ಪಶ್ಚಿಮದಿಕ್ಕಿಗೆ ಕಳಿಸುವುದು.

ಈ ರೀತಿಯಾಗಿ ಸುಗ್ರೀವನು ಹನುಮದಾದಿ ವಾನರರಿಗೆ ದಕ್ಷಿಣಾಭಿಮುಖವಾಗಿ ಹೋಗಬೇಕೆಂದು ತಿಳಿಸಿ, ಮೇಘಸಂಕಾಶನಾದ ಸುಷೇಣನೆಂಬ ಸೇನಾಪತಿಯನ್ನು ನೋಡಿದನು ಭೀಮಪರಾಕ್ರಮಿಯಾದ ಸುಷೇಣನು ತಾರೆಯ ತಂದೆ ಸುಗ್ರೀವನ ಮಾವ ಸುಗ್ರೀವನು ಅವನ ಬಳಿಗೆ ಹೋಗಿ ನಮಸ್ಕರಿಸಿ ಕೈಮುಗಿದುಕೊಂಡು ಮಾತಾಡಿದನು (೧-೨). ಸಮೀಪದಲ್ಲಿ ಮರೀಚಿಮಹರ್ಷಿಯ ಪುತ್ರನಾದ ಮಾರೀಚನೆಂಬ ಕಪಿನಾಯಕನು ಕಪಿವೀರರಿಂದ ಪರಿವೃತನಾಗಿ ನಿಂತಿದ್ದನು ಅವನು ದೇವೇಂದ್ರನಂತೆ ತೇಜಸ್ವಿ ಬುದ್ಧಿಪರಾಕ್ರಮಗಳಲ್ಲಿ ಮಿಗಿಲಾದವನು. ವೈನತೇಯನಂತೆ ವೇಗಶಾಲಿ ಆತನ ಬಳಿಯಲ್ಲಿ ಮರೀಚಿಪುತ್ರರಾದ ಇನ್ನೂ ಅನೇಕ ಕಪಿವೀರರು ನಿಂತಿದ್ದರು. ಅವರೆಲ್ಲರೂ ಮಹಾಬಲರೂ ತೇಜಸ್ವಿಗಳೂ ಆಗಿದ್ದರು (೩-೪) ಋಷಿಪುತ್ರರಾದ ಅವರೆಲ್ಲರೂ ಪಶ್ಚಿಮದಿಕ್ಕಿಗೆ ಹೋಗಬೇಕೆಂದು ಸುಗ್ರೀವನು

ಸುಷೇಣಪ್ರಮುಖಾ ಯೂಯಂ ವೈದೇಹೀಂ ಪರಿಮಾರ್ಗತ ।
ಸುರಾಷ್ಟ್ರಾನ್ ಸಹಬಾಹ್ಲೀಕಾನ್ ಶೂರಾನ್ ಭೀಮಾಂಸ್ತಥೈವ ಚ ॥

ಸ್ಫೀತಾನ್ ಜನಪದಾನ್ ರಮ್ಯಾನ್ ವಿಪುಲಾನಿ ಪುರಾಣಿ ಚ ।
ಪುಂನಾಗಗಹನಂ ಕುಕ್ಷಿಂ ವಕುಲೋದ್ದಾಲಕಾಕುಲಮ್ ॥ ೬

ತಥಾ ಕೇತಕಷಂಡಾಂಶ್ಚ ಮಾರ್ಗಧ್ವಂ ಹರಿಯೂಥಪಾಃ ।
ಪ್ರತ್ಯಕ್ಸ್ರೋತೋಗಮಾಶ್ಚೈವ ನದ್ಯಃ ಶೀತಜಲಾಃ ಶಿವಾಃ ॥ ೮

ತಾಪಸಾನಾಮರಣ್ಯಾನಿ ಕಾಂತಾರಾ ಗಿರಯಶ್ಚ ಯೇ ।
ತತಃ ಸ್ಥಲೀಂ ಮರುಪ್ರಾಯಾಮತ್ಯುಚ್ಚಶಿರಸಃ ಶಿಲಾಃ ॥ ೯

ಗಿರಿಜಾಲಾವೃತಾಂ ದುರ್ಗಾಂ ಮಾರ್ಗಧ್ವಂ ಪಶ್ಚಿಮಾಂ ದಿಶಮ್ ।
ತತಃ ಪಶ್ಚಿಮಮಾಸಾದ್ಯ ಸಮುದ್ರಂ ದ್ರಷ್ಟುಮರ್ಹಥ ॥ ೧೦

---

ಗೊತ್ತುಮಾಡಿದನು ಆತನು ಆ ಕಪಿವೀರರನ್ನು ಕುರಿತು ಹೀಗೆಂದನು : "ಎಲೈ ವಾನರೋತ್ತಮರೆ, ನೀವೆಲ್ಲರೂ ಪೂಜ್ಯನಾದ ಸುಷೇಣನನ್ನು ಮುಂದಿಟ್ಟುಕೊಂಡು ವೈದೇಹಿಯನ್ನು ಹುಡುಕಬೇಕು. ನಿಮ್ಮೊಡನೆ ಎರಡು ಲಕ್ಷ ವಾನರಸೇನೆಯು ಹೋಗಲಿ ಸುರಾಷ್ಟ್ರ, ಬಾಹ್ಲೀಕ, ಶೂರ, ಭೀಮಾದಿ ದೇಶಗಳಿಗೆ ಹೋಗಿರಿ (೫ ೬) ವಿಶಾಲವೂ ರಮ್ಯವೂ ಆದ ಆ ದೇಶಗಳನ್ನೂ ವಿವಿಧ ನಗರಗಳನ್ನೂ ಹುಡುಕಿರಿ ಪುನ್ನಾಗ, ಬಕುಲ ಮತ್ತು ಉದ್ದಾಲಕ ವೃಕ್ಷಗಳಿಂದ ತುಂಬಿದ ಕುಕ್ಷಿದೇಶಕ್ಕೆ ನೀವು ಹೋಗಬೇಕು. ಎಲೈ ವಾನರರೆ, ಕೇದಗೆಯ ಗಿಡಗಳ ವನವನ್ನೂ ನೀವು ಅರಸಬೇಕು. ಅಲ್ಲದೆ ಆ ಪ್ರಾಂತದಲ್ಲಿ ಪಶ್ಚಿಮಾಭಿಮುಖವಾಗಿ ಹರಿಯುವ ಶೀತಲಜಲವುಳ್ಳ ಪವಿತ್ರನದಿಗಳನ್ನೂ ಹುಡುಕಿ ನೋಡಬೇಕು (೭-೮) ಅಲ್ಲದೆ ಋಷಿಗಳ ತಪೋವನಗಳನ್ನೂ ಅರಣ್ಯಗಳನ್ನೂ ಗಿರಿಗಳನ್ನೂ ಸುತ್ತಬೇಕು. ಅಲ್ಲಿ ನಿರ್ಜಲವಾದ ಮರುಭೂಮಿಯುಂಟು. ಅತ್ಯುನ್ನತವಾದ ಶಿಲೆಗಳೂ ಪರ್ವತಗಳೂ ಪರ್ವತಪಂಕ್ತಿಗಳಿರುವ ದುರ್ಗಮಪ್ರದೇಶಗಳೂ ಇವೆ ಈ ಬಗೆಯಾದ ಪಶ್ಚಿಮದಿಕ್ಕಿನಲ್ಲಿ ಸೀತಾದೇವಿಯನ್ನು ನೀವು ಅರಸತಕ್ಕದ್ದು. ಅನಂತರ ನಿಮಗೆ

ತಿಮಿನಕ್ರಾಯುತಜಲಮಕ್ಷೋಭ್ಯಮಥ ವಾನರಾಃ ।
ತತಃ ಕೇತಕಷಂಡೇಷು ತಮಾಲಗಹನೇಷು ಚ ॥ ೧೧

ಕಪಯೋ ವಿಹರಿಷ್ಯಂತಿ ನಾರಿಕೇಲವನೇಷು ಚ ।
ತತ್ರ ಸೀತಾಂ ಚ ಮಾರ್ಗಧ್ವಂ ನಿಲಯಂ ರಾವಣಸ್ಯ ಚ ॥ ೧೨

ವೇಲಾತಟನಿವಿಷ್ಟೇಷು ಪರ್ವತೇಷು ವನೇಷು ಚ ।
ಮುರಚೀಪತ್ತನಂ ಚೈವ ರಮ್ಯಂ ಚೈವ ಜಟೀಪುರಮ್ ॥ ೧೩

ಅವಂತೀಮಂಗಲೇಪಾಂ ಚ ತಥಾ ಚಾಲಕ್ಷಿತಂ ವನಮ್ ।
ರಾಷ್ಟ್ರಾಣಿ ಚ ವಿಶಾಲಾನಿ ಪತ್ತನಾನಿ ತತಸ್ತತಃ ॥ ೧೪

ಸಿಂಧುಸಾಗರಯೋಶ್ಚೈವ ಸಂಗಮೇ ತತ್ರ ಪರ್ವತಃ ।
ಮಹಾನ್ ಹೇಮಗಿರಿರ್ನಾಮ ಶತಶೃಂಗೋ ಮಹಾದ್ರುಮಃ ॥ ೧೫

ತಸ್ಯ ಪ್ರಸ್ಥೇಷು ರಮ್ಯೇಷು ಸಿಂಹಾಃ ಪಕ್ಷಗಮಾಃ ಸ್ಥಿತಾಃ ।
ತಿಮಿಮತ್ಸ್ಯಗಜಾಂಶ್ಚೈವ ನೀಡಾನ್ಯಾರೋಪಯಂತಿ ತೇ ॥ ೧೬

---

ಪಶ್ಚಿಮಸಮುದ್ರವು ಗೋಚರಿಸುತ್ತದೆ (೯-೧೦). ಆ ಸಮುದ್ರದಲ್ಲಿ ತಿಮಿಗಳೆಂಬ ಮಹಾಮತ್ಸ್ಯಗಳೂ ಮೊಸಳೆಗಳೂ ಅಸಂಖ್ಯವಾಗಿವೆ. ಆ ಸಮುದ್ರವು ಅಕ್ಷೋಭ್ಯವಾದುದು ಅದರ ತೀರದಲ್ಲಿ ಕೇದಗೆಯ ವನ, ತಮಾಲತರುಪಂಕ್ತಿ ಮತ್ತು ತೆಂಗಿನತೋಟಗಳಿವೆ ಅಲ್ಲಿ ನೀವು ವಿನೋದವಾಗಿ ವಿಹರಿಸಬಹುದು. ಅಲ್ಲಿ ನೀವು ರಾವಣನ ವಾಸಸ್ಥಾನವಿದೆಯೋ ಎಂದು ಪರಿಶೀಲಿಸಿ ಸೀತಾದೇವಿಯನ್ನು ಹುಡುಕಬೇಕು (೧೧-೧೨). ಸಮುದ್ರತೀರದಲ್ಲಿರುವ ಪರ್ವತಾರಣ್ಯಗಳನ್ನು ಶೋಧಿಸಿರಿ. ಅಲ್ಲಿರುವ ಮುರಚೀಪಟ್ಟಣವನ್ನೂ ರಮ್ಯವಾದ ಜಟೀಪುರವನ್ನೂ ಪ್ರವೇಶಿಸಿ ಅವಂತೀ, ಅಂಗಲೇಪಾ ಎಂಬ ನಗರಗಳಿಗೆ ಹೋಗಿರಿ. ಸಮೀಪದಲ್ಲಿ ಆಲಕ್ಷಿತವೆಂಬ ವನವಿದೆ. ಆ ವನದಲ್ಲಿ ಸುತ್ತಿ ಅದರ ಮುಂದಿರುವ ವಿವಿಧ ರಾಷ್ಟ್ರಗಳನ್ನೂ ನಗರಗಳನ್ನೂ ಅನ್ವೇಷಿಸಿರಿ (೧೩-೧೪). ಸಿಂಧುವೆಂಬ ನದಿಯು ಸಾಗರವನ್ನು ಸೇರುವ ಸಂಗಮಸ್ಥಳದಲ್ಲಿ ಹೇಮಗಿರಿಯೆಂಬ ದೊಡ್ಡ ಬೆಟ್ಟವಿದೆ. ನೂರುಶೃಂಗಗಳಿರುವ ಆ ಬೆಟ್ಟದಲ್ಲಿ ದೊಡ್ಡ ದೊಡ್ಡ ಮರಗಳಿವೆ. ಆ ಬೆಟ್ಟದ ತಪ್ಪಲುಗಳಲ್ಲಿ ಸಿಂಹಗಳೆಂಬ ಒಂದು ಜಾತಿಯ ಪಕ್ಷಿಗಳಿವೆ. ಅವು ತಿಮಿ

ತಾನಿ ನೀಡಾನಿ ಸಿಂಹಾನಾಂ ಗಿರಿಶೃಂಗಗತಾಶ್ಚ ಯೇ ।
ದೃಪ್ತಾಸ್ತೃಪ್ತಾಶ್ಚ ಮಾತಂಗಾಸ್ತೋಯದಸ್ವನನಿಃಸ್ವನಾಃ ॥ ೧೭
ವಿಚರಂತಿ ವಿಶಾಲೇಽಸ್ಮಿಂಸ್ತೋಯಪೂರ್ಣೇ ಸಮಂತತಃ ।
ತಸ್ಯ ಶೃಂಗಂ ದಿವಸ್ಪರ್ಶಂ ಕಾಂಚನಂ ಚಿತ್ರಪಾದಪಮ್ ॥ ೧೮
ಸರ್ವಮಾಶು ವಿಚೇತವ್ಯಂ ಕಪಿಭಿಃ ಕಾಮರೂಪಿಭಿಃ ।
ಕೋಟಿಂ ತತ್ರ ಸಮುದ್ರೇ ತು ಕಾಂಚನೀಂ ಶತಯೋಜನಾಮ್ ॥
ದುರ್ದರ್ಶಾಂ ಪಾರಿಯಾತ್ರಸ್ಯ ಗತಾ ದ್ರಕ್ಷ್ಯಥ ವಾನರಾಃ ।
ಕೋಟ್ಯಸ್ತತ್ರ ಚತುರ್ವಿಂಶದ್ಗಂಧರ್ವಾಣಾಂ ತರಸ್ವಿನಾಮ್ ॥ ೨೦
ವಸಂತ್ಯಗ್ನಿನಿಕಾಶಾನಾಂ ಮಹತಾಂ ಕಾಮರೂಪಿಣಾಮ್ ।
ಪಾವಕಾರ್ಚಿಃಪ್ರತೀಕಾಶಾಃ ಸಮವೇತಾಃ ಸಹಸ್ರಶಃ ॥ ೨೧
ನಾತ್ಯಾಸಾದಯಿತವ್ಯಾಸ್ತೇ ವಾನರೈರ್ಭೀಮವಿಕ್ರಮೈಃ ।
ನಾದೇಯಂ ಚ ಫಲಂ ತಸ್ಮಾದ್ದೇಶಾತ್ ಕಿಂಚಿತ್ ಪ್ಲವಂಗಮೈಃ ॥

---

ಮೊದಲಾದ ಮಹಾಮತ್ಸ್ಯಗಳನ್ನೂ ಆನೆಗಳನ್ನೂ (ಆಹಾರಾರ್ಥವಾಗಿ) ತಮ್ಮ ಗೂಡುಗಳಿಗೆ ಹೊತ್ತುಕೊಂಡುಹೋಗುತ್ತವೆ! (೧೫-೧೬). ಸಿಂಹಪಕ್ಷಿಗಳಿರುವ ಆ ಗೂಡುಗಳ ಬಳಿಯಲ್ಲಿ ಜಲಸಮೃದ್ಧಿಯಿರುವುದರಿಂದ ಆನೆಗಳು ನೀರನ್ನು ಕುಡಿದು ತೃಪ್ತಿಹೊಂದುತ್ತವೆ ಅನಂತರ ಸೊಕ್ಕಿನಿಂದ ಮೋಡಗಳಂತೆ ಘೀಂಕರಿಸುತ್ತ ಅಲ್ಲಿ ಅಲೆದಾಡುತ್ತವೆ! ಆ ಹೇಮಗಿರಿಯ ಹೇಮಮಯವಾದ ಪ್ರತಿಯೊಂದು ಶಿಖರವೂ ವಿವಿಧವರ್ಣದ ವೃಕ್ಷಗಳಿಂದ ಪೂರ್ಣವಾಗಿ ಗಗನಕ್ಕೆ ಚಾಚಿಕೊಂಡಿದೆ (೧೭-೧೮). ಕಾಮರೂಪಿಗಳಾದ ನೀವು ಆ ಶಿಖರಗಳಲ್ಲಿ ಚೆನ್ನಾಗಿ ಹುಡುಕಿ ನೋಡಬೇಕು. ಪಶ್ಚಿಮ ಸಮುದ್ರದ ನಡುವೆ ಪಾರಿಯಾತ್ರವೆಂಬ ಪರ್ವತವಿದೆ ತೇಜೋವಿಶೇಷದಿಂದ ದುರ್ದರ್ಶವಾದ ಅದರ ಕಾಂಚನಶಿಖರವು ಶತಯೋಜನ ವಿಸ್ತಾರವಾಗಿದೆ. ಆ ಶಿಖರದಲ್ಲಿ ಬಲಶಾಲಿಗಳಾದ ಇಪ್ಪತ್ತುನಾಲ್ಕುಕೋಟಿ ಗಂಧರ್ವರು ವಾಸಿಸುತ್ತಾರೆ (೧೯-೨೦). ಅವರು ಅಗ್ನಿಯಂತೆ ತೇಜೋವಿಶಿಷ್ಟರೂ ಕಾಮರೂಪಿಗಳೂ ಆಗಿದ್ದಾರೆ. ಬೆಂಕಿಯ ಕಿಡಿಗಳಂತಿರುವ ಆ ಗಂಧರ್ವರು ಸಾವಿರಾರು ಸಂಖ್ಯೆಯಲ್ಲಿ ಗುಂಪು ಗುಂಪಾಗಿ ಸಂಚರಿಸುವರು. ಎಲೈ

ದುರಾಸದಾ ಹಿ ತೇ ವೀರಾಃ ಸತ್ತ್ವವಂತೋ ಮಹಾಬಲಾಃ ।
ಫಲಮೂಲಾನಿ ತೇ ತತ್ರ ರಕ್ಷಂತೇ ಭೀಮವಿಕ್ರಮಾಃ ॥ ೨೩

ತತ್ರ ಯತ್ನಶ್ಚ ಕರ್ತವ್ಯೋ ಮಾರ್ಗಿತವ್ಯಾ ಚ ಜಾನಕೀ ।
ನ ಹಿ ತೇಭ್ಯೋ ಭಯಂ ಕಿಂಚಿತ್ ಕಪಿತ್ವಮನುವರ್ತತಾಮ್ ॥ ೨೪

ತತ್ರ ವೈದೂರ್ಯವರ್ಣಾಭೋ ವಜ್ರಸಂಸ್ಥಾನಸಂಸ್ಥಿತಃ ।
ನಾನಾದ್ರುಮಲತಾಕೀರ್ಣೋ ವಜ್ರೋ ನಾಮ ಮಹಾಗಿರಿಃ ॥ ೨೫

ಶ್ರೀಮಾನ್ ಸಮುದಿತಸ್ತತ್ರ ಯೋಜನಾನಾಂ ಶತಂ ಸಮಮ್ ।
ಗುಹಾಸ್ತತ್ರ ವಿಚೇತವ್ಯಾಃ ಪ್ರಯತ್ನೇನ ಪ್ಲವಂಗಮಾಃ ॥ ೨೬

ಚತುರ್ಭಾಗೇ ಸಮುದ್ರಸ್ಯ ಚಕ್ರವಾನ್ನಾಮ ಪರ್ವತಃ ।
ತತ್ರ ಚಕ್ರಂ ಸಹಸ್ರಾರಂ ನಿರ್ಮಿತಂ ವಿಶ್ವಕರ್ಮಣಾ ॥ ೨೭

ತತ್ರ ಪಂಚಜನಂ ಹತ್ವಾ ಹಯಗ್ರೀವಂ ಚ ದಾನವಮ್ ।
ಆಜಹಾರ ತತಶ್ಚಕ್ರಂ ಶಂಖಂ ಚ ಪುರುಷೋತ್ತಮಃ ॥ ೨೮

---

ವಾನರರೆ, ಅಲ್ಲಿರುವ ಹಣ್ಣನ್ನು ಮಾತ್ರ ನೀವು ಕೀಳಬಾರದು ಭೀಮ ಪರಾಕ್ರಮಿಗಳಾದ ಗಂಧರ್ವರು ಅಲ್ಲಿರುವ ಫಲಮೂಲಗಳನ್ನು ರಕ್ಷಿಸುತ್ತಾರೆ. ಅವರೊಡನೆ ಹೋರಾಡಲು ಶಕ್ಯವಿಲ್ಲ (೨೧-೨೩). ಆ ಪರ್ವತದಲ್ಲಿ ನೀವು ಜಾನಕಿಯನ್ನು ಅರಸಬೇಕು ಸಾಮಾನ್ಯ ಕಪಿಗಳಂತೆ ನೀವು ವರ್ತಿಸುತ್ತಿದ್ದರೆ, ಆ ಗಂಧರ್ವರಿಂದ ನಿಮಗೆ ಅಂಜಿಕೆಯೇನೂ ಇಲ್ಲ ಅಲ್ಲಿಂದ ಮುಂದೆ ಹೋದರೆ ವಜ್ರವೆಂಬ ಇನ್ನೊಂದು ಪರ್ವತವು ಸಿಕ್ಕುವುದು ಅದರ ಬಣ್ಣ ವೈಡೂರ್ಯದಂತೆ ಹೊಳೆಯುತ್ತದೆ. ಆ ಬೆಟ್ಟವು ವಜ್ರದಂತೆ ಗಟ್ಟಿಯಾದ ಶಿಲೆಗಳಿಂದ ತುಂಬಿದೆ. ಬೇಕಾದಷ್ಟು ಮರಬಳ್ಳಿಗಳು ಬೆಳೆದಿವೆ (೨೪-೨೫). ಅದು ಸರಿಯಾಗಿ ನೂರುಯೋಜನದವರೆಗೆ ಹಬ್ಬಿದೆ ವಾನರರೆ, ಅಲ್ಲಿರುವ ಗುಹೆಗಳನ್ನು ನೀವು ಚೆನ್ನಾಗಿ ಶೋಧಿಸಬೇಕು. ಪಶ್ಚಿಮ ಸಮುದ್ರದ ನಾಲ್ಕನೆಯ ಒಂದು ಭಾಗದಷ್ಟು ಪ್ರದೇಶವನ್ನು ದಾಟಿದಮೇಲೆ ಚಕ್ರವಂತವೆಂಬ ಒಂದು ಪರ್ವತವಿದೆ. ಅಲ್ಲಿ ವಿಶ್ವಕರ್ಮನು ಸಾವಿರ ಹಲ್ಲುಗಳಿರುವ ಚಕ್ರವನ್ನು ನಿರ್ಮಿಸಿ ಇಟ್ಟಿದ್ದನು (೨೬-೨೭). ಆ ಪರ್ವತದಲ್ಲಿ ಹಿಂದೆ ಮಹಾವಿಷ್ಣುವು ಪಂಚಜನ ಮತ್ತು ಹಯಗ್ರೀವರೆಂಬ ದಾನವರನ್ನು

ತಸ್ಯ ಸಾನುಷು ಚಿತ್ರೇಷು ವಿಶಾಲಾಸು ಗುಹಾಸು ಚ ।
ರಾವಣಃ ಸಹ ವೈದೇಹ್ಯಾ ಮಾರ್ಗಿತವ್ಯಸ್ತತಸ್ತತಃ ॥ ೨೯

ಯೋಜನಾನಿ ಚತುಃಷಷ್ಟಿರ್ವರಾಹೋ ನಾಮ ಪರ್ವತಃ ।
ಸುವರ್ಣಶೃಂಗಃ ಸುಶ್ರೀಮಾನಗಾಧೇ ವರುಣಾಲಯೇ ॥ ೩೦

ತತ್ರ ಪ್ರಾಗ್ಜ್ಯೋತಿಷಂ ನಾಮ ಜಾತರೂಪಮಯಂ ಪುರಮ್ ।
ಯಸ್ಮಿನ್ ವಸತಿ ದುಷ್ಟಾತ್ಮಾ ನರಕೋ ನಾಮ ದಾನವಃ ॥ ೩೧

ತತ್ರ ಸಾನುಷು ಚಿತ್ರೇಷು ವಿಶಾಲಾಸು ಗುಹಾಸು ಚ ।
ರಾವಣಃ ಸಹ ವೈದೇಹ್ಯಾ ಮಾರ್ಗಿತವ್ಯಸ್ತತಸ್ತತಃ ॥ ೩೨

ತಮತಿಕ್ರಮ್ಯ ಶೈಲೇಂದ್ರಂ ಕಾಂಚನಾಂತರನಿರ್ದರಃ ।
ಪರ್ವತಃ ಸರ್ವಸೌವರ್ಣೋ ಧಾರಾಪ್ರಸ್ರವಣಾಯುತಃ ॥ ೩೩

ತಂ ಗಜಾಶ್ಚ ವರಾಹಾಶ್ಚ ಸಿಂಹಾ ವ್ಯಾಘ್ರಾಶ್ಚ ಸರ್ವತಃ ।
ಅಭಿಗರ್ಜಂತಿ ಸತತಂ ತೇನ ಶಬ್ದೇನ ದರ್ಪಿತಾಃ ॥ ೩೪

---

ಸಂಹರಿಸಿದನು. ಆಮೇಲೆ (ಪಂಚಜನಾಸ್ಥಿ ನಿರ್ಮಿತವಾದ) ಶಂಖವನ್ನೂ (ಹಯಗ್ರೀವನಿಂದ ರಕ್ಷಿತವಾದ) ಚಕ್ರವನ್ನೂ ತಂದನು (೨೮). ಚಕ್ರವಂತ ವೆಂಬ ಆ ಪರ್ವತದ ಚಿತ್ರವಿಚಿತ್ರಗಳಾದ ತಪ್ಪಲುಗಳಲ್ಲಿಯೂ ವಿಶಾಲವಾದ ಗುಹೆಗಳಲ್ಲಿಯೂ ರಾವಣನನ್ನೂ ವೈದೇಹಿಯನ್ನೂ ನೀವು ಅನ್ವೇಷಿಸ ತಕ್ಕದ್ದು ಅಲ್ಲಿಗೆ ಅರುವತ್ತುನಾಲ್ಕುಯೋಜನ ದೂರದಲ್ಲಿ ವರಾಹವೆಂಬ ಪರ್ವತ ಉಂಟು. ಅದು ಅಗಾಧವಾದ ಸಮುದ್ರದಲ್ಲಿ ಕನಕಶಿಖರಯುಕ್ತ ವಾಗಿ ವಿರಾಜಿಸುತ್ತಿದೆ (೨೯-೩೦). ಆ ವರಾಹಪರ್ವತದಲ್ಲಿ ಪ್ರಾಗ್ಜ್ಯೋತಿಷ ವೆಂಬ ಸುವರ್ಣಮಯವಾದ ನಗರವಿದೆ ದುಷ್ಟಾತ್ಮನಾದ ನರಕನೆಂಬ ದಾನವನು ಅಲ್ಲಿ ವಾಸಿಸುತ್ತಿದ್ದಾನೆ. ಆ ಬೆಟ್ಟದ ತಪ್ಪಲುಗಳಲ್ಲಿಯೂ ವಿಶಾಲಗುಹೆಗಳಲ್ಲಿಯೂ ನೀವು ರಾವಣನನ್ನೂ ವೈದೇಹಿಯನ್ನೂ ಹುಡುಕ ಬೇಕು (೩೧-೩೨). ಆ ಬೆಟ್ಟವನ್ನು ದಾಟಿಹೋದರೆ ಸುವರ್ಣಮಯವಾದ ಗುಹೆಗಳಿರುವ ಇನ್ನೊಂದು ಪರ್ವತವು ಗೋಚರಿಸುವುದು. ಅದರಲ್ಲಿ ಗಿರಿ ನದಿಗಳು ಧಾರಾಕಾರವಾಗಿ ಹರಿಯುತ್ತಿರುವುವು. ಆ ಪರ್ವತದಲ್ಲಿ ಕಾಡಾನೆ ಗಳು, ಹಂದಿಗಳು, ಸಿಂಹಗಳು, ಹುಲಿಗಳು ಗರ್ಜಿಸುತ್ತ ಸಂಚರಿಸುತ್ತವೆ.

ಯಸ್ಮಿನ್ ಹರಿಹಯಃ ಶ್ರೀಮಾನ್ ಮಹೇಂದ್ರಃ ಪಾಕಶಾಸನಃ ।
ಅಭಿಷಿಕ್ತಃ ಸುರೈಃ ರಾಜಾ ಮೇಘವಾನ್ನಾಮ ಪರ್ವತಃ ॥ ೩೫

ತಮತಿಕ್ರಮ್ಯ ಶೈಲೇಂದ್ರಂ ಮಹೇಂದ್ರಪರಿಪಾಲಿತಮ್ ।
ಷಷ್ಟಿಂ ಗಿರಿಸಹಸ್ರಾಣಿ ಕಾಂಚನಾನಿ ಗಮಿಷ್ಯಥ ॥ ೩೬

ತರುಣಾದಿತ್ಯವರ್ಣಾನಿ ಭ್ರಾಜಮಾನಾನಿ ಸರ್ವತಃ ।
ಜಾತರೂಪಮಯೈರ್ವೃಕ್ಷೈಃ ಶೋಭಿತಾನಿ ಸುಪುಷ್ಪಿತೈಃ ॥ ೩೭

ತೇಷಾಂ ಮಧ್ಯೇ ಸ್ಥಿತೋ ರಾಜಾ ಮೇರುರುತ್ತರಪರ್ವತಃ ।
ಆದಿತ್ಯೇನ ಪ್ರಸನ್ನೇನ ಶೈಲೋ ದತ್ತವರಃ ಪುರಾ ॥ ೩೮

ತೇನೈವಮುಕ್ತಃ ಶೈಲೇಂದ್ರಃ ಸರ್ವ ಏವ ತ್ವದಾಶ್ರಯಾಃ ।
ಮತ್ಪ್ರಸಾದಾದ್ಭವಿಷ್ಯಂತಿ ದಿವಾ ರಾತ್ರೌ ಚ ಕಾಂಚನಾಃ ॥ ೩೯

ತ್ವಯಿ ಯೇ ಚಾಪಿ ವತ್ಸ್ಯಂತಿ ದೇವಗಂಧರ್ವದಾನವಾಃ ।
ತೇ ಭವಿಷ್ಯಂತಿ ರಕ್ತಾಶ್ಚ ಪ್ರಭಯಾ ಕಾಂಚನಪ್ರಭಾಃ ॥ ೪೦

---

ಅನ್ಯೋನ್ಯವಾಗಿ ಗರ್ಜನೆಗಳನ್ನು ಕೇಳಿ ದರ್ಪದಿಂದ ಮತ್ತೆ ಮತ್ತೆ ಗರ್ಜಿಸುತ್ತವೆ! (೩೩-೩೪). ಅಲ್ಲಿಯೇ ದೇವತೆಗಳು ಹಸಿರುಬಣ್ಣದ ಕುದುರೆಗಳಿಂದ ಯುಕ್ತನೂ ಪಾಕಶಾಸನನೂ ಆದ ಮಹೇಂದ್ರನಿಗೆ ಪಟ್ಟಾಭಿಷೇಕಮಾಡಿದರು. ಆ ಪರ್ವತಕ್ಕೆ ಮೇಘವಾನ್ ಎಂದು ಹೆಸರಿದೆ. ದೇವೇಂದ್ರರಕ್ಷಿತವಾದ ಆ ಪರ್ವತವನ್ನು ದಾಟಿಹೋದರೆ, ನಿಮಗೆ ಇನ್ನೊಂದು ಪರ್ವತಶ್ರೇಣಿಯು ಗೋಚರಿಸುವುದು ಆ ಶ್ರೇಣಿಯಲ್ಲಿ ಅರುವತ್ತುಸಾವಿರ ಸುವರ್ಣಶೈಲಗಳಿವೆ (೩೫-೩೬). ಅವು ಬಾಲಸೂರ್ಯನಂತೆ ಕಂಗೊಳಿಸುತ್ತವೆ. ಕನಕಮಯವಾದ ಪುಷ್ಪಿತವೃಕ್ಷಗಳಿಂದ ಅವು ಶೋಭಿಸುತ್ತವೆ. ಎಲೈ ವಾನರರೆ, ಆ ಪರ್ವತಶ್ರೇಣಿಯ ಮಧ್ಯದಲ್ಲಿ ಉತ್ತರಪರ್ವತವೆನಿಸಿ ಪರ್ವತರಾಜನಾದ ಮೇರುಶೈಲವು ಕಂಗೊಳಿಸುತ್ತದೆ. ಒಮ್ಮೆ ಪ್ರಸನ್ನನಾದ ಸೂರ್ಯನು ಆ ಶೈಲಕ್ಕೆ ವರವನ್ನು ಕರುಣಿಸಿದನು (೩೭-೩೮) ಸೂರ್ಯನು "ಎಲೈ ಮೇರುವೆ, ನಿನ್ನ ಸುತ್ತಲೂ ಇರುವ ಈ ಪರ್ವತಗಳೆಲ್ಲವೂ ನನ್ನ ಅನುಗ್ರಹದಿಂದ ಅಹೋರಾತ್ರದಲ್ಲಿಯೂ ಕಾಂಚನಪ್ರಭೆಯಿಂದ ವಿರಾಜಿಸಲಿ! ನಿನ್ನಲ್ಲಿ ನೆಲೆಸಿರುವ ಸಕಲ ದೇವ ದಾನವ ಗಂಧರ್ವರೂ ಸುವರ್ಣಪ್ರಭೆಯಿಂದ ಬೆಳಗಲಿ!"

ವಿಶ್ವೇ ದೇವಾಶ್ಚ ಮರುತೋ ವಸವಶ್ಚ ದಿವೌಕಸಃ ।
ಆಗಮ್ಯ ಪಶ್ಚಿಮಾಂ ಸಂಧ್ಯಾಂ ಮೇರುಮುತ್ತರಪರ್ವತಮ್ ॥ ೪೧

ಆದಿತ್ಯಮುಪತಿಷ್ಠಂತಿ ತೈಶ್ಚ ಸೂರ್ಯೋಽಭಿಪೂಜಿತಃ ।
ಅದೃಶ್ಯಃ ಸರ್ವಭೂತಾನಾಮಸ್ತಂ ಗಚ್ಛತಿ ಪರ್ವತಮ್ ॥ ೪೨

ಯೋಜನಾನಾಂ ಸಹಸ್ರಾಣಿ ದಶ ತಾನಿ ದಿವಾಕರಃ ।
ಮುಹೂರ್ತಾರ್ಧೇನ ತಂ ಶೀಘ್ರಮಭಿಯಾತಿ ಶಿಲೋಚ್ಚಯಮ್ ॥

ಶೃಂಗೇ ತಸ್ಯ ಮಹದ್ದಿವ್ಯಂ ಭವನಂ ಸೂರ್ಯಸಂನಿಭಮ್ ।
ಪ್ರಾಸಾದಗಣಸಂಬಾಧಂ ವಿಹಿತಂ ವಿಶ್ವಕರ್ಮಣಾ ॥ ೪೪

ಶೋಭಿತಂ ತರುಭಿಶ್ಚಿತ್ರೈರ್ನಾನಾಪಕ್ಷಿಸಮಾಕುಲೈಃ ।
ನಿಕೇತಂ ಪಾಶಹಸ್ತಸ್ಯ ವರುಣಸ್ಯ ಮಹಾತ್ಮನಃ ॥ ೪೫

ಅಂತರಾ ಮೇರುಮಸ್ತಂ ಚ ತಾಲೋ ದಶಶಿರಾ ಮಹಾನ್ ।
ಜಾತರೂಪಮಯಃ ಶ್ರೀಮಾನ್ ಭ್ರಾಜತೇ ಚಿತ್ರವೇದಿಕಃ ॥ ೪೬

---

ಎಂದು ವರವನ್ನು ಕೊಟ್ಟಿದ್ದಾನೆ (೩೯–೪೦) ವಿಶ್ವೇದೇವತೆಗಳೂ ಸಪ್ತ ಮರುತ್ತುಗಳೂ ಅಷ್ಟವಸುಗಳೂ ಇತರ ದೇವತೆಗಳೂ ಆ ಪರ್ವತಕ್ಕೆ ಬಂದು ಸಾಯಂಕಾಲದಲ್ಲಿ ಸೂರ್ಯೋಪಸ್ಥಾನವನ್ನು ಮಾಡುತ್ತಾರೆ ಅವರಿಂದ ಪೂಜಿತನಾದ ಸೂರ್ಯನು ಅಸ್ತಗಿರಿಯನ್ನು ಸೇರಿ ಸಮಸ್ತಪ್ರಾಣಿಗಳಿಗೂ ಅದೃಶ್ಯನಾಗುವನು (೪೧–೪೨) ಮೇರುಪರ್ವತದಿಂದ ಅಸ್ತಾಚಲವು ಹತ್ತು ಸಾವಿರ ಯೋಜನಗಳ ದೂರದಲ್ಲಿದೆ. ಸೂರ್ಯನು ಒಂದೇ ಗಳಿಗೆಯಲ್ಲಿ ಆ ದೂರವನ್ನು ಅತಿಕ್ರಮಿಸಿ ಅಸ್ತಾಚಲವನ್ನು ಸೇರುವನು ಮೇರುಪರ್ವತದ ಶಿಖರದಲ್ಲಿ ವಿಶ್ವಕರ್ಮನಿಂದ ನಿರ್ಮಿತವಾದ ವಿವಿಧ ಪ್ರಾಸಾದಗಳಿಂದ ಶೋಭಿಸುವ ಒಂದು ದಿವ್ಯಭವನವಿದೆ (೪೩–೪೪) ಅದರ ಸುತ್ತಲೂ ವಿವಿಧ ಪಕ್ಷಿಗಳಿಂದ ಸಮಾಕುಲವಾದ ಚಿತ್ರವರ್ಣದ ವೃಕ್ಷಗಳಿವೆ ಆ ಭವನವು ಪಾಶಹಸ್ತನೂ ಮಹಾತ್ಮನೂ ಆದ ವರುಣನ ವಾಸಸ್ಥಾನ ಎಲೈ ಕಪಿನಾಯಕರೆ, ಮೇರುವಿಗೂ ಅಸ್ತಾಚಲಕ್ಕೂ ನಡುವೆ ಒಂದು ಮಹಾತಾಳ ವೃಕ್ಷವಿದೆ. ಅದಕ್ಕೆ ಹತ್ತು ಸ್ಕಂಧಗಳಿವೆ ಸುವರ್ಣಮಯವಾದ ಆ ವೃಕ್ಷವು

ತೇಷು ಸರ್ವೇಷು ದುರ್ಗೇಷು ಸರಃಸು ಚ ಸರಿತ್ಸು ಚ ।
ರಾವಣಃ ಸಹ ವೈದೇಹ್ಯಾ ಮಾರ್ಗಿತವ್ಯಸ್ತತಸ್ತತಃ ॥ ೪೭

ಯತ್ರ ತಿಷ್ಠತಿ ಧರ್ಮಾತ್ಮಾ ತಪಸಾ ಸ್ವೇನ ಭಾವಿತಃ ।
ಮೇರುಸಾವರ್ಣಿರಿತ್ಯೇವ ಖ್ಯಾತೋ ವೈ ಬ್ರಹ್ಮಣಾ ಸಮಃ ॥ ೪೮

ಪ್ರಷ್ಟವ್ಯೋ ಮೇರುಸಾವರ್ಣಿರ್ಮಹರ್ಷಿಃ ಸೂರ್ಯಸಂನಿಭಃ ।
ಪ್ರಣಮ್ಯ ಶಿರಸಾ ಭೂಮೌ ಪ್ರವೃತ್ತಿಂ ಮೈಥಿಲೀಂ ಪ್ರತಿ ॥ ೪೯

ಏತಾವಜ್ಜೀವಲೋಕಸ್ಯ ಭಾಸ್ಕರೋ ರಜನೀಕ್ಷಯೇ ।
ಕೃತ್ವಾ ವಿತಿಮಿರಂ ಸರ್ವಮಸ್ತಂ ಗಚ್ಛತಿ ಪರ್ವತಮ್ ॥ ೫೦

ಏತಾವದ್ವಾನರೈಃ ಶಕ್ಯಂ ಗಂತುಂ ವಾನರಪುಂಗವಾಃ ।
ಅಭಾಸ್ಕರಮಮರ್ಯಾದಂ ನ ಜಾನೀಮಸ್ತತಃ ಪರಮ್ ॥ ೫೧

ಅಧಿಗಮ್ಯ ತು ವೈದೇಹೀಂ ನಿಲಯಂ ರಾವಣಸ್ಯ ಚ ।
ಅಸ್ತಂ ಪರ್ವತಮಾಸಾದ್ಯ ಪೂರ್ಣೇ ಮಾಸೇ ನಿವರ್ತತ ॥ ೫೨

---

ಚಿತ್ರವಿಚಿತ್ರಗಳಾದ ವೇದಿಕೆಗಳಿಂದ ವಿರಾಜಿಸುತ್ತಿದೆ (೪೫-೪೬). ಈ ಸ್ಥಳಗಳಲ್ಲಿಯೂ ಮಧ್ಯದಲ್ಲಿ ಸಿಗುವ ನಾನಾದುರ್ಗಗಳಲ್ಲಿಯೂ ಸರೋವರ ನದಿಗಳಲ್ಲಿಯೂ ನೀವು ರಾವಣನನ್ನೂ ವೈದೇಹಿಯನ್ನೂ ಅರಸತಕ್ಕದ್ದು. ಮೇರುಪರ್ವತದಲ್ಲಿ ಮೇರುಸಾವರ್ಣಿಯೆಂಬ ಧರ್ಮಾತ್ಮನು ತಪೋಮಹಿಮೆಯಿಂದ ಪ್ರಕಾಶಿಸುತ್ತಿದ್ದಾನೆ. ಅವನು ಮಹಿಮೆಯಲ್ಲಿ ಬ್ರಹ್ಮದೇವನಿಗೆ ಸಮಾನನಾಗಿದ್ದಾನೆ (೪೭-೪೮). ನೀವು ಆ ಮಹರ್ಷಿಯನ್ನು ಕಂಡೊಡನೆ ಭೂಮಿಯಲ್ಲಿ ಅಡ್ಡಬಿದ್ದು ನಮಸ್ಕರಿಸಿ, ಮೈಥಿಲಿಯ ವೃತ್ತಾಂತವನ್ನು ಕೇಳಿರಿ. ಸೂರ್ಯನು (ಪ್ರಾತಃಕಾಲದಲ್ಲಿ ಉದಯಿಸಿದಮೇಲೆ) ಈ ಅಸ್ತಾಚಲದವರೆಗಿರುವ ಜೀವಲೋಕವನ್ನು ಬೆಳಗಿಸಿ ಕತ್ತಲೆಯನ್ನು ಹೋಗಲಾಡಿಸಿ ಸಾಯಂಕಾಲದಲ್ಲಿ ಈ ಅಸ್ತಾಚಲವನ್ನು ಸೇರುತ್ತಾನೆ (೪೯-೫೦) ಎಲೈ ವಾನರವೀರರೆ, ಅಲ್ಲಿಯವರೆಗೆ ವಾನರರು ಹೋಗಲು ಸಾಧ್ಯವಿದೆ. ಅದರ ಮುಂದೆ ಸೂರ್ಯನ ಬೆಳಕಿಲ್ಲ ವಿಶ್ವದ ಎಲ್ಲೆ ಗೊತ್ತಿಲ್ಲ! ಅಲ್ಲಿ ಏನಿದೆಯೋ ನಮಗೆ ತಿಳಿಯದು! (೫೧) ನೀವು ಅಸ್ತಪರ್ವತದವರೆಗೆ ಹೋಗಿ ವೈದೇಹಿಯನ್ನೂ ರಾವಣನ ನೆಲೆಯನ್ನೂ ಕಂಡುಬರಬೇಕು.

ಊರ್ಧ್ವಂ ಮಾಸಾನ್ನ ವಸ್ತವ್ಯಂ ವಸನ್ ವಧ್ಯೋ ಭವೇನ್ಮಮ ।
ಸಹೈವ ಶೂರೋ ಯುಷ್ಮಾಭಿಃ ಶ್ವಶುರೋ ಮೇ ಗಮಿಷ್ಯತಿ ॥ ೫೩

ಶ್ರೋತವ್ಯಂ ಸರ್ವಮೇತಸ್ಯ ಭವದ್ಭಿರ್ದಿಷ್ಟಕಾರಿಭಿಃ ।
ಗುರುರೇಷ ಮಹಾಬಾಹುಃ ಶ್ವಶುರೋ ಮೇ ಮಹಾಬಲಃ ॥ ೫೪

ಭವಂತಶ್ಚಾಪಿ ವಿಕ್ರಾಂತಾಃ ಪ್ರಮಾಣಂ ಸರ್ವಕರ್ಮಸು ।
ಪ್ರಮಾಣಮೇನಂ ಸಂಸ್ಥಾಪ್ಯ ಪಶ್ಯಧ್ವಂ ಪಶ್ಚಿಮಾಂ ದಿಶಮ್ ॥ ೫೫

ದೃಷ್ಟಾಯಾಂ ತು ನರೇಂದ್ರಸ್ಯ ಪತ್ನ್ಯಾಮಮಿತತೇಜಸಃ ।
ಕೃತಕೃತ್ಯಾ ಭವಿಷ್ಯಾಮಃ ಕೃತಸ್ಯ ಪ್ರತಿಕರ್ಮಣಾ ॥ ೫೬

ಅತೋಽನ್ಯದಪಿ ಯತ್ಕಿಂಚಿತ್ ಕಾರ್ಯಸ್ಯಾಸ್ಯ ಹಿತಂ ಭವೇತ್ ।
ಸಂಪ್ರಧಾರ್ಯ ಭವದ್ಭಿಶ್ಚ ದೇಶಕಾಲಾರ್ಥಸಂಹಿತಮ್ ॥ ೫೭

---

ಒಂದು ತಿಂಗಳು ಪೂರ್ಣವಾಗುವುದರಲ್ಲಿ ಹಿಂದಕ್ಕೆ ಬನ್ನಿರಿ. ಒಂದು ತಿಂಗಳಾದಮೇಲೆ ಯಾರೂ ಬರದೆ ಇರಕೂಡದು! ಯಾವನಾದರೂ ಹಿಂದುಳಿದರೆ ಅವನಿಗೆ ಮರಣದಂಡನೆಯನ್ನು ವಿಧಿಸುವೆನು! ನನ್ನ ಮಾವನಾದ ಸುಷೇಣನು ನಿಮ್ಮೊಡನೆ ಬರುವನು (೫೨-೫೩). ನೀವು ಈತನ ಆಜ್ಞೆಗೆ ವಿಧೇಯರಾಗಿ ಇವನು ಹೇಳಿದಂತೆ ಕೇಳತಕ್ಕದ್ದು. ಮಹಾಪರಾಕ್ರಮಿಯಾದ ಸುಷೇಣನು ನನಗೆ ಶ್ವಶುರನಾಗಿ ನನಗೂ ಪೂಜ್ಯನಾಗಿದ್ದಾನೆ. ನೀವೂ ಸಹ ಮಹಾವೀರರಾಗಿದ್ದೀರಿ. ಕರ್ತವ್ಯಾಕರ್ತವ್ಯಗಳನ್ನು ನಿರ್ಣಯಿಸುವುದರಲ್ಲಿ ಪ್ರವೀಣರಾಗಿದ್ದೀರಿ. ಆದರೂ ಸುಷೇಣನನ್ನು ಮುಖ್ಯನಿರ್ಣಾಯಕನೆಂದು ತಿಳಿದು ಪಶ್ಚಿಮದಿಕ್ಕನ್ನು ಶೋಧಿಸಿರಿ (೫೪-೫೫). ಎಲೈ ಕಪಿವೀರರೆ, ಮಹಾತೇಜಸ್ವಿಯಾದ ಈ ರಾಜಪುತ್ರನ ಪತ್ನಿಯನ್ನು ಹುಡುಕಿಕೊಟ್ಟರೆ, ನಾವೇ ಧನ್ಯರಾಗುತ್ತೇವೆ. ಉಪಕಾರಕ್ಕೆ ಪ್ರತಿಯಾಗಿ ಒಂದು ಉಪಕಾರವನ್ನು ಮಾಡಿದವರಾಗುತ್ತೇವೆ. ಈಗ ನಾನು ಹೇಳಿರುವ ಸ್ಥಳಗಳಲ್ಲಿ ಹುಡುಕುವುದಲ್ಲದೆ, ಮುಂದೆ ದೇಶಕಾಲೋಚಿತವಾಗಿ ಯಾವುದು ಯುಕ್ತವೆನಿಸುವುದೋ ಅದನ್ನು ಆಯಾ ಸಂದರ್ಭದಲ್ಲಿ ನೀವೇ ನಿರ್ಣಯಿಸಿಕೊಳ್ಳಿರಿ" ಎಂದು

ತತಃ ಸುಷೇಣಪ್ರಮುಖಾಃ ಪ್ಲವಂಗಮಾಃ
ಸುಗ್ರೀವವಾಕ್ಯಂ ನಿಪುಣಂ ನಿಶಮ್ಯ ।
ಆಮಂತ್ರ್ಯ ಸರ್ವೇ ಪ್ಲವಗಾಧಿಪಂ ತೇ
ಜಗ್ಮುರ್ದಿಶಂ ತಾಂ ವರುಣಾಭಿಗುಪ್ತಾಮ್ ॥ ೫೮

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ದ್ವಿಚತ್ವಾರಿಂಶಃ ಸರ್ಗಃ

---

## ತ್ರಿಚತ್ವಾರಿಂಶಃ ಸರ್ಗಃ

### ಉದೀಚೀಪ್ರೇಷಣಮ್

ತತಃ ಸಂದಿಶ್ಯ ಸುಗ್ರೀವಃ ಶ್ವಶುರಂ ಪಶ್ಚಿಮಾಂ ದಿಶಮ್ ।
ವೀರಂ ಶತವಲಿಂ ನಾಮ ವಾನರಂ ವಾನರರ್ಷಭಃ ॥ ೧

ಉವಾಚ ರಾಜಾ ಧರ್ಮಜ್ಞಃ ಸರ್ವವಾನರಸತ್ತಮಮ್ ।
ವಾಕ್ಯಮಾತ್ಮಹಿತಂ ಚೈವ ರಾಮಸ್ಯ ಚ ಹಿತಂ ತಥಾ ॥ ೨

---

ಹೇಳಿದನು (೫೬-೫೭). ಸುಷೇಣನೇ ಮೊದಲಾದ ಆ ಕಪಿವೀರರು ಸುಗ್ರೀವನ ಆಜ್ಞೆಯನ್ನು ಸರಿಯಾಗಿ ಆಲಿಸಿ ತಿಳಿದುಕೊಂಡರು. ಅನಂತರ ಆ ಕಪಿರಾಜನ ಅನುಜ್ಞೆಯನ್ನು ಪಡೆದು ವರುಣಪಾಲಿತವಾದ ಪಶ್ಚಿಮದಿಕ್ಕಿಗೆ ಪ್ರಯಾಣ ಮಾಡಿದರು (೫೮).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ನಲವತ್ತೆರಡನೆಯ ಸರ್ಗ

---

## ಸರ್ಗ ೪೩

### ಶತಬಲಿ ಮೊದಲಾದ ವಾನರರನ್ನು ಸುಗ್ರೀವನು ಉತ್ತರದಿಕ್ಕಿಗೆ ಕಳಿಸುವುದು.

ಧರ್ಮಜ್ಞನೂ ಕಪಿರಾಜನೂ ಆದ ಸುಗ್ರೀವನು ತನ್ನ ಮಾವನಾದ ಸುಷೇಣನನ್ನು ಪಶ್ಚಿಮಕ್ಕೆ ಕಳಿಸಿ, ವಾನರೋತ್ತಮನಾದ ಶತಬಲಿಯೆಂಬ ವೀರನನ್ನು ಕರೆದು, ತನಗೂ ಶ್ರೀರಾಮನಿಗೂ ಹಿತಕರವಾದ ವಚನವನ್ನು

ವೃತಃ ಶತಸಹಸ್ರೇಣ ತ್ವದ್ವಿಧಾನಾಂ ವನೌಕಸಾಮ್ ।
ವೈವಸ್ವತಸುತೈಃ ಸಾರ್ಧಂ ಪ್ರತಿಷ್ಠಸ್ವ ಸ್ವಮಂತ್ರಿಭಿಃ ॥ ೩

ದಿಶಂ ಹ್ಯುದೀಚೀಂ ವಿಕ್ರಾಂತಾಂ ಹಿಮಶೈಲಾವತಂಸಕಾಮ್ ।
ಸರ್ವತಃ ಪರಿಮಾರ್ಗಧ್ವಂ ರಾಮಪತ್ನೀಮನಿಂದಿತಾಮ್ ॥ ೪

ಅಸ್ಮಿನ್ ಕಾರ್ಯೇ ವಿನಿರ್ವೃತ್ತೇ ಕೃತೇ ದಾಶರಥೇಃ ಪ್ರಿಯೇ ।
ಋಣಾನ್ಮುಕ್ತಾ ಭವಿಷ್ಯಾಮಃ ಕೃತಾರ್ಥಾರ್ಥವಿದಾಂ ವರಾಃ ॥ ೫

ಕೃತಂ ಹಿ ಪ್ರಿಯಮಸ್ಮಾಕಂ ರಾಘವೇಣ ಮಹಾತ್ಮನಾ ।
ತಸ್ಯ ಚೇತ್ ಪ್ರತಿಕಾರೋಽಸ್ತಿ ಸಫಲಂ ಜೀವಿತಂ ಭವೇತ್ ॥ ೬

ಅರ್ಥಿನಃ ಕಾರ್ಯನಿರ್ವೃತ್ತಿಮಕರ್ತುರಪಿ ಯಶ್ಚರೇತ್ ।
ತಸ್ಯ ಸ್ಯಾತ್ ಸಫಲಂ ಜನ್ಮ ಕಿಂ ಪುನಃ ಪೂರ್ವಕಾರಿಣಃ ॥ ೭

---

ಹೇಳಿದನು (೧–೨). ಅವನು ಶತಬಲಿಯನ್ನು ನೋಡಿ ಹೀಗೆಂದನು: " ವಾನರೋತ್ತಮ, ನಿನ್ನಂತೆ ವೀರರಾದ ಒಂದು ಲಕ್ಷ ಕಪಿಗಳ ಸೇನೆಯಿಂದ ಪರಿವೃತನಾಗಿ ನೀನು ಹೊರಡಬೇಕು. ಯಮಸುತರಾದ ನಿನ್ನ ಮಂತ್ರಿಗಳೂ ನಿನ್ನೊಡನೆ ಹೊರಡಲಿ. ನಿನಗೆ ತಿರುಗಾಡಿ ಪರಿಚಿತವಾಗಿಯೂ ಹಿಮಾಲಯ ಭೂಷಿತವಾಗಿಯೂ ಇರುವ ಉತ್ತರದಿಕ್ಕಿಗೆ ನೀವು ಹೋಗತಕ್ಕದ್ದು. ಪತಿವ್ರತೆಯಾದ ಶ್ರೀರಾಮಪತ್ನಿಯನ್ನು ಎಲ್ಲೆಡೆಯೂ ಹುಡುಕತಕ್ಕದ್ದು (೩–೪). ಎಲೈ ಕಾರ್ಯಜ್ಞರೆ, ದಶರಥಾತ್ಮಜನಿಗೆ ಪ್ರಿಯವಾದ ಈ ಕಾರ್ಯವನ್ನು ಸಾಧಿಸಿದಮೇಲೆ, ನಾವು ಋಣಮುಕ್ತರಾಗಿ ಕೃತಾರ್ಥರಾಗುವೆವು.* ಮಹಾತ್ಮನಾದ ಈ ರಘುನಾಥನು ನಮಗೆ ಪ್ರಿಯವಾದ ಕಾರ್ಯವನ್ನು ಸಾಧಿಸಿಕೊಟ್ಟಿರುವನಲ್ಲವೆ? ಅದಕ್ಕೆ ನಾವು ಪ್ರತ್ಯುಪಕಾರವನ್ನು ಮಾಡಿದರೆ ತಾನೆ ನಮ್ಮ ಜೀವಿತವು ಸಾರ್ಥಕವಾದೀತು? (೫–೬). ಕಾರ್ಯಾರ್ಥಿಯಾಗಿ ನಮ್ಮ ಬಳಿಗೆ ಬಂದವನು ಮೊದಲು ಉಪಕಾರವನ್ನು ಮಾಡಿರದಿದ್ದರೂ ಅವನ ಕಾರ್ಯವನ್ನು ಯಾವನು ನೆರವೇರಿಸಿಕೊಡುವನೋ, ಅವನು ಹುಟ್ಟಿದ್ದು ಸಾರ್ಥಕವಾಗುತ್ತದೆ. ಹೀಗಿರುವಾಗ ಮೊದಲು ಉಪಕಾರವನ್ನು

* ಮೂಲದಲ್ಲಿ 'ಕೃತಾರ್ಥಾರ್ಥವಿದಾಂ' ಎಂದಿದೆ. 'ಕೃತಾರ್ಥಾಃ ಅರ್ಥವಿದಾಂ' ಎಂದು ಪದವಿಭಾಗವನ್ನು ಮಾಡಿಕೊಳ್ಳಬೇಕು. ಸಂಧಿಯು ಆರ್ಷ.

*

ಏತಾಂ ಬುದ್ಧಿಂ ಸಮಾಸ್ಥಾಯ ದೃಶ್ಯತೇ ಜಾನಕೀ ಯಥಾ ।
ತಥಾ ಭವದ್ಭಿಃ ಕರ್ತವ್ಯಮಸ್ಮತ್ಪ್ರಿಯಹಿತೈಷಿಭಿಃ ॥ ೮

ಅಯಂ ಹಿ ಸರ್ವಭೂತಾನಾಂ ಮಾನ್ಯಸ್ತು ನರಸತ್ತಮಃ ।
ಅಸ್ಮಾಸು ಚಾಗತಪ್ರೀತೀ ರಾಮಃ ಪರಪುರಂಜಯಃ ॥ ೯

ಇಮಾನಿ ವನದುರ್ಗಾಣಿ ನದ್ಯಃ ಶೈಲಾಂತರಾಣಿ ಚ ।
ಭವಂತಃ ಪರಿಮಾರ್ಗಂತು ಬುದ್ಧಿವಿಕ್ರಮಸಂಪದಾ ॥ ೧೦

ತತ್ರ ಮ್ಲೇಚ್ಛಾನ್ ಪುಲಿಂದಾಂಶ್ಚ ಶೂರಸೇನಾಂಸ್ತಥೈವ ಚ ।
ಪ್ರಸ್ಥಲಾನ್ ಭರತಾಂಶ್ಚೈವ ಕುರೂಂಶ್ಚ ಸಹ ಮದ್ರಕೈಃ ॥ ೧೧

ಕಾಂಬೋಜಾನ್ ಯವನಾಂಶ್ಚೈವ ಶಕಾನಾರಟ್ಟಕಾನಪಿ ।
ಬಾಹ್ಲೀಕಾನ್ಋಷಿಕಾಂಶ್ಚೈವ ಪೌರವಾನಥ ಟಂಕಣಾನ್ ॥ ೧೨

ಚೀನಾನ್ ಪರಮಚೀನಾಂಶ್ಚ ನೀಹಾರಾಂಶ್ಚ ಪುನಃ ಪುನಃ ।
ಅನ್ವಿಷ್ಯ ದರದಾಂಶ್ಚೈವ ಹಿಮವಂತಂ ವಿಚಿನ್ವಥ ॥ ೧೩

---

ಮಾಡಿದವನ ಕಾರ್ಯವನ್ನು ಈಡೇರಿಸಿಕೊಟ್ಟರೆ, ಹೇಳತಕ್ಕದ್ದೇನು ? (೭). ನಮಗೆ ಹಿತವನ್ನು ಬಯಸತಕ್ಕ ನೀವು ಈ ಕೃತಜ್ಞತಾಬುದ್ಧಿಯನ್ನಿಟ್ಟು ಕೊಂಡು ಕಾರ್ಯತತ್ಪರರಾಗಿರಿ. ಜಾನಕಿಯನ್ನು ಸರ್ವಥಾ ನೀವು ಕಾಣು ವುದಕ್ಕೆ ಪ್ರಯತ್ನಮಾಡಿರಿ. ಶ್ರೀರಾಮನಾದರೋ ಸಮಸ್ತಪ್ರಾಣಿಗಳಿಗೂ ಸಮ್ಮಾನ್ಯನಾದ ಪುರುಷೋತ್ತಮನಾಗಿದ್ದಾನೆ. ಈ ವೀರಾಗ್ರಣಿಯು ನಮ್ಮಲ್ಲಿ ವಿಶೇಷವಾದ ಪ್ರೀತಿಯನ್ನಿಟ್ಟಿದ್ದಾನೆ (೮-೯). ವನದುರ್ಗಗಳನ್ನೂ ನದಿ ಗಳನ್ನೂ ವಿವಿಧ ಗಿರಿಗಳನ್ನೂ ನೀವು ನಿಮ್ಮ ಬುದ್ಧಿಪರಾಕ್ರಮಗಳನ್ನುಪ ಯೋಗಿಸಿ ಹುಡುಕಿರಿ. ಉತ್ತರದಿಕ್ಕಿನಲ್ಲಿ ಮ್ಲೇಚ್ಛ, ಪುಲಿಂದ, ಶೂರಸೇನ, ಪ್ರಸ್ಥಲ, ಭರತ, ಕುರು, ಮದ್ರದೇಶಗಳನ್ನು ಹೊಕ್ಕು ಜಾನಕಿಯನ್ನು ಅನ್ವೇಷಿಸಿರಿ (೧೦-೧೧). ಅಲ್ಲದೆ ಕಾಂಬೋಜ, ಯವನ, ಶಕ, ಆರಟ್ಟಕ, ಬಾಹ್ಲೀಕ, ಋಷಿಕ, ಪೌರವ, ಟಂಕಣ, ಚೀನ, ಪರಮಚೀನ, ನೀಹಾರ, ದರದ ರಾಜ್ಯಗಳಲ್ಲಿ ಹುಡುಕಿ ಹಿಮಾಲಯಪರ್ವತದಲ್ಲಿಯೂ ವೈದೇಹಿಯನ್ನು

ಲೋಧ್ರಪದ್ಮಕಷಂಡೇಷು ದೇವದಾರುವನೇಷು ಚ ।
ರಾವಣಃ ಸಹ ವೈದೇಹ್ಯಾ ಮಾರ್ಗಿತವ್ಯಸ್ತತಸ್ತತಃ ॥ ೧೪

ತತಃ ಸೋಮಾಶ್ರಮಂ ಗತ್ವಾ ದೇವಗಂಧರ್ವಸೇವಿತಮ್ ।
ಕಾಲಂ ನಾಮ ಮಹಾಸಾನುಂ ಪರ್ವತಂ ತಂ ಗಮಿಷ್ಯಥ ॥ ೧೫

ಮಹತ್ಸು ತಸ್ಯ ಶೃಂಗೇಷು ನಿರ್ದರೇಷು ಗುಹಾಸು ಚ ।
ವಿಚಿನುಧ್ವಂ ಮಹಾಭಾಗಾಂ ರಾಮಪತ್ನೀಮನಿಂದಿತಾಮ್ ॥ ೧೬

ತಮತಿಕ್ರಮ್ಯ ಶೈಲೇಂದ್ರಂ ಹೇಮಗರ್ಭಂ ಮಹಾಗಿರಿಮ್ ।
ತತಃ ಸುದರ್ಶನಂ ನಾಮ ಗಂತುಮರ್ಹಥ ಪರ್ವತಮ್ ॥ ೧೭

ತತೋ ದೇವಸಖೋ ನಾಮ ಪರ್ವತಃ ಪತಗಾಲಯಃ ।
ನಾನಾಪಕ್ಷಿಗಣಾಕೀರ್ಣೋ ವಿವಿಧದ್ರುಮಭೂಷಿತಃ ॥ ೧೮

ತಸ್ಯ ಕಾನನಷಂಡೇಷು ನಿರ್ಝರೇಷು ಗುಹಾಸು ಚ ।
ರಾವಣಃ ಸಹ ವೈದೇಹ್ಯಾ ಮಾರ್ಗಿತವ್ಯಸ್ತತಸ್ತತಃ ॥ ೧೯

---

ಅನ್ವೇಷಿಸತಕ್ಕದ್ದು (೧೨-೧೩). ಅಲ್ಲಿರುವ ಲೋಧ್ರಕ, ಪದ್ಮಕ, ದೇವದಾರು ಮುಂತಾದ ಮರಗಳ ತೋಪುಗಳಲ್ಲಿಯೂ ರಾವಣನಾಗಲಿ ವೈದೇಹಿಯಾಗಲಿ ಇರುವರೆ ಎಂದು ಪರಿಶೋಧಿಸಬೇಕು ಆಮೇಲೆ ಸೋಮಾಶ್ರಮಕ್ಕೆ ಹೋಗಿ ಕಾಲವೆಂಬ ಪರ್ವತವನ್ನು ಸೇರುವಿರಿ. ಅದು ದೊಡ್ಡ ತಪ್ಪಲು ಗಳಿಂದ ಯುಕ್ತವಾಗಿ ದೇವಗಂಧರ್ವರಿಂದ ಸೇವಿತವಾಗಿದೆ (೧೪-೧೫). ಕಾಲಪರ್ವತದ ದೊಡ್ಡ ದೊಡ್ಡ ಶಿಖರಗಳಲ್ಲಿಯೂ ಕೊರಕಲು ಮತ್ತು ಗುಹೆಗಳಲ್ಲಿಯೂ ಸುತ್ತಿ ಮಹಾಭಾಗೆಯೂ ಸಾಧ್ವಿಯೂ ಆದ ಸೀತಾದೇವಿ ಯನ್ನು ಹುಡುಕಬೇಕು ಸುವರ್ಣಯುಕ್ತನಾದ ಆ ಗಿರಿರಾಜನನ್ನು ಶೋಧಿಸಿದಮೇಲೆ, ವಾನರನಾಯಕರೆ, ನೀವು ಸುದರ್ಶನವೆಂಬ ಪರ್ವತಕ್ಕೆ ಹೋಗಿರಿ (೧೬-೧೭). ಅದಕ್ಕೆ ಮುಂದೆ ಹೋದರೆ ದೇವಸಖವೆಂಬ ಪರ್ವತವು ಗೋಚರಿಸುವುದು. ನಾನಾಜಾತಿಯ ಮರಗಳಿಂದ ಶೋಭಿಸುವ ಆ ಬೆಟ್ಟವು ನಾನಾಪಕ್ಷಿಗಳಿಗೆ ನಿವಾಸಸ್ಥಾನವಾಗಿದೆ. ಆ ದೇವಸಖವೆಂಬ ಶೈಲದ ವನಷಂಡ, ನಿರ್ಝರ, ಗುಹೆಗಳಲ್ಲಿ ರಾವಣನನ್ನೂ ವೈದೇಹಿಯನ್ನೂ ಅರಸ

ತಮತಿಕ್ರಮ್ಯ ಚಾಕಾಶಂ ಸರ್ವತಃ ಶತಯೋಜನಮ್ ।
ಅಪರ್ವತನದೀವೃಕ್ಷಂ ಸರ್ವಸತ್ತ್ವವಿವರ್ಜಿತಮ್ ॥ ೨೦

ತಂ ತು ಶೀಘ್ರಮತಿಕ್ರಮ್ಯ ಕಾಂತಾರಂ ರೋಮಹರ್ಷಣಮ್ ।
ಕೈಲಾಸಂ ಪಾಂಡರಂ ಶೈಲಂ ಪ್ರಾಪ್ಯ ಹೃಷ್ಟಾ ಭವಿಷ್ಯಥ ॥ ೨೧

ತತ್ರ ಪಾಂಡರಮೇಘಾಭಂ ಜಾಂಬೂನದಪರಿಷ್ಕೃತಮ್ ।
ಕುಬೇರಭವನಂ ರಮ್ಯಂ ನಿರ್ಮಿತಂ ವಿಶ್ವಕರ್ಮಣಾ ॥ ೨೨

ವಿಶಾಲಾ ನಲಿನೀ ಯತ್ರ ಪ್ರಭೂತಕಮಲೋತ್ಪಲಾ ।
ಹಂಸಕಾರಂಡವಾಕೀರ್ಣಾ ಹ್ಯಪ್ಸರೋಗಣಸೇವಿತಾ ॥ ೨೩

ತತ್ರ ವೈಶ್ರವಣೋ ರಾಜಾ ಸರ್ವಭೂತನಮಸ್ಕೃತಃ ।
ಧನದೋ ರಮತೇ ಶ್ರೀಮಾನ್ ಗುಹ್ಯಕೈಃ ಸಹ ಯಕ್ಷರಾಟ್ ॥ ೨೪

ತಸ್ಯ ಚಂದ್ರನಿಕಾಶೇಷು ಪರ್ವತೇಷು ಗುಹಾಸು ಚ ।
ರಾವಣಃ ಸಹ ವೈದೇಹ್ಯಾ ಮಾರ್ಗಿತವ್ಯಸ್ತತಸ್ತತಃ ॥ ೨೫

---

ಬೇಕು (೧೮-೧೯). ಎಲೈ ವಾನರರೆ, ಆ ಶೈಲವನ್ನು ದಾಟಿದಮೇಲೆ ಒಂದು ದೊಡ್ಡ ಬಯಲುಭೂಮಿಯು ಗೋಚರಿಸುವುದು. ಅದು ನೂರುಯೋಜನ ಉದ್ದವಾಗಿ ನೂರುಯೋಜನ ಅಗಲವಾಗಿದೆ. ಅಲ್ಲಿ ಒಂದು ಬೆಟ್ಟವೂ ಇಲ್ಲ, ನದಿಯಿಲ್ಲ, ಮರವೂ ಇಲ್ಲ! ಯಾವ ಪ್ರಾಣಿಯೂ ಅಲ್ಲಿ ವಾಸವಾಗಿಲ್ಲ! ಮೈನವಿರೇಳಿಸುವ ಆ ಮರಳುಗಾಡನ್ನು ನೀವು ದಾಟಿದಮೇಲೆ ಶುಭ್ರವರ್ಣದ ಕೈಲಾಸಪರ್ವತವು ನಿಮಗೆ ಕಾಣುತ್ತದೆ. ಆಗ ನಿಮಗೆ ಹರ್ಷವಾಗುವುದು! (೨೦-೨೧). ಕೈಲಾಸದಲ್ಲಿ ವಿಶ್ವಕರ್ಮನಿಂದ ನಿರ್ಮಿತವಾದ ಕುಬೇರನ ಭವನವಿದೆ. ಬಿಳಿಯ ಮೋಡದಂತಿರುವ ಆ ರಮ್ಯಸೌಧವು ಚಿನ್ನದಿಂದ ಅಲಂಕೃತವಾಗಿದೆ. ಆ ಭವನದಲ್ಲಿ ದೊಡ್ಡದಾದ ಒಂದು ಪುಷ್ಕರಿಣಿ ಇದೆ. ಅದರಲ್ಲಿ ತಾವರೆಗಳೂ ನೈದಿಲೆಗಳೂ ನಳನಳಿಸುತ್ತವೆ; ಹಂಸ ಕಾರಂಡವಗಳು ನಲಿಯುತ್ತವೆ; ಅಪ್ಸರೆಯರು ಕ್ರೀಡಿಸುತ್ತಾರೆ (೨೨-೨೩). ಆ ಭವನದಲ್ಲಿ, ವಾನರರೆ, ವಿಶ್ರವಸ್ಸಿನ ಪುತ್ರನೂ ಸರ್ವಭೂತವಂದಿತನೂ ಯಕ್ಷರಾಜನೂ ಆದ ಕುಬೇರನು ಯಕ್ಷರೊಡನೆ ವಾಸಮಾಡುತ್ತಾನೆ. ಚಂದ್ರನಂತೆ ಶುಭ್ರವಾಗಿ ಬೆಳಗುವ ಕೈಲಾಸದ ಸುತ್ತಲೂ ಇರುವ ವಿವಿಧ ಶೈಲಗಳಲ್ಲಿಯೂ

ಕ್ರೌಂಚಂ ತು ಗಿರಿಮಾಸಾದ್ಯ ಬಿಲಂ ತಸ್ಯ ಸುದುರ್ಗಮಮ್ ।
ಅಪ್ರಮತ್ತೈಃ ಪ್ರವೇಷ್ಟವ್ಯಂ ದುಷ್ಪ್ರವೇಶಂ ಹಿ ತತ್ ಸ್ಮೃತಮ್ ॥

ವಸಂತಿ ಹಿ ಮಹಾತ್ಮಾನಸ್ತತ್ರ ಸೂರ್ಯಸಮಪ್ರಭಾಃ ।
ದೇವೈರಪ್ಯರ್ಚಿತಾಃ ಸಮ್ಯಗ್ದಿವ್ಯರೂಪಾ ಮಹರ್ಷಯಃ ॥ ೨೭

ಕ್ರೌಂಚಸ್ಯ ತು ಗುಹಾಶ್ಚಾನ್ಯಾಃ ಸಾನೂನಿ ಶಿಖರಾಣಿ ಚ ।
ನಿರ್ದರಾಶ್ಚ ನಿತಂಬಾಶ್ಚ ವಿಚೇತವ್ಯಾಸ್ತತಸ್ತತಃ ॥ ೨೮

ಕ್ರೌಂಚಸ್ಯ ಶಿಖರಂ ಚಾಪಿ ನಿರೀಕ್ಷ್ಯ ಚ ತತಸ್ತತಃ ।
ಅವೃಕ್ಷಂ ಕಾಮಶೈಲಂ ಚ ಮಾನಸಂ ವಿಹಗಾಲಯಮ್ ॥ ೨೯

ನ ಗತಿಸ್ತತ್ರ ಭೂತಾನಾಂ ದೇವದಾನವರಕ್ಷಸಾಮ್ ।
ಸ ಚ ಸರ್ವೈರ್ವಿಚೇತವ್ಯಃ ಸಸಾನುಪ್ರಸ್ಥಭೂಧರಃ ॥ ೩೦

---

ಗುಹೆಗಳಲ್ಲಿಯೂ ರಾವಣನನ್ನೂ ಜಾನಕಿಯನ್ನೂ ನೀವು ಹುಡುಕ ತಕ್ಕದ್ದು (೨೪-೨೫). ತರುವಾಯ ನೀವು ಕ್ರೌಂಚಪರ್ವತವನ್ನು ಸೇರಬೇಕು. ಅದರಲ್ಲಿ ದುರ್ಗಮವಾದ (ಸ್ಕಂಧಶಕ್ತಿನಿರ್ಮಿತವಾದ) ಒಂದು ಬಿಲವುಂಟು ನೀವು ಬಹಳ ಎಚ್ಚರಿಕೆಯಿಂದ ಆ ಬಿಲವನ್ನು ಪ್ರವೇಶಿಸಬೇಕು. ಅದರಲ್ಲಿ ಹೋಗುವುದು ಬಹಳ ಕಠಿಣವಾದ ಕಾರ್ಯ (೨೬). ಆ ಕ್ರೌಂಚಗುಹೆಯಲ್ಲಿ ದಿವ್ಯರೂಪಧಾರಿಗಳಾದ ಮಹರ್ಷಿಗಳಿದ್ದಾರೆ. ಸೂರ್ಯನಂತೆ ಪ್ರಜ್ವಲಿಸುವ ಆ ಮಹಾತ್ಮರನ್ನು ದೇವತೆಗಳೂ ಸಹ ಪೂಜಿಸುತ್ತಾರೆ. ಕಪಿವೀರರೆ, ಕ್ರೌಂಚಗಿರಿಯಲ್ಲಿ ಇನ್ನೂ ಅನೇಕ ಗುಹೆಗಳಿವೆ. ನೀವು ಅವುಗಳನ್ನೂ ತಪ್ಪಲುಗಳನ್ನೂ ಶಿಖರಗಳನ್ನೂ ಕಂದಕಗಳನ್ನೂ ಸಮೀಪದ ಶೈಲಗಳನ್ನೂ ಸರಿಯಾಗಿ ಅರಸಬೇಕು (೨೭-೨೮). ಕ್ರೌಂಚಪರ್ವತದ ಪ್ರಧಾನಶಿಖರ ವನ್ನು ಹುಡುಕಿ ವೃಕ್ಷರಹಿತವಾದ ಕಾಮಶೈಲವನ್ನು ನೋಡಿ ಹಕ್ಕಿಗಳಿಗೆ ಆಶ್ರಯಸ್ಥಾನವಾದ ಮಾನಸಪರ್ವತವನ್ನು ಅರಸಬೇಕು. ಆ ಮಾನಸ ಪರ್ವತಕ್ಕೆ ಸಾಮಾನ್ಯರು ಪ್ರವೇಶಿಸಲಾರರು. ದೇವದಾನವರಾಕ್ಷಸರಿಗೆ ಸಹ ಅದು ದುರ್ಗಮವಾಗಿದೆ. ಅದರ ಸಾನುಗಳನ್ನೂ ಸಮೀಪದಲ್ಲಿರುವ ತಿಟ್ಟು ಗಳನ್ನೂ ಅರಸಿ, ಬಳಿಯಲ್ಲಿರುವ ಶೈಲಗಳನ್ನೂ ಅರಸಬೇಕು (೨೯-೩೦).

ಕ್ರೌಂಚಂ ಗಿರಿಮತಿಕ್ರಮ್ಯ ಮೈನಾಕೋ ನಾಮ ಪರ್ವತಃ ।
ಮಯಸ್ಯ ಭವನಂ ಯತ್ರ ದಾನವಸ್ಯ ಸ್ವಯಂ ಕೃತಮ್ ॥ ೩೦

ಮೈನಾಕಸ್ತು ವಿಚೇತವ್ಯಃ ಸಸಾನುಪ್ರಸ್ಥಕಂದರಃ ।
ಸ್ತ್ರೀಣಾಮಶ್ವಮುಖೀನಾಂ ಚ ನಿಕೇತಾಸ್ತತ್ರ ತತ್ರ ತು ॥ ೩೧

ತಂ ದೇಶಂ ಸಮತಿಕ್ರಮ್ಯ ಆಶ್ರಮಂ ಸಿದ್ಧಸೇವಿತಮ್ ।
ಸಿದ್ಧಾ ವೈಖಾನಸಾಸ್ತತ್ರ ವಾಲಖಿಲ್ಯಾಶ್ಚ ತಾಪಸಾಃ ॥ ೩೨

ವಂದ್ಯಾಸ್ತೇ ತು ತಪಃಸಿದ್ಧಾಸ್ತಾಪಸಾ ವೀತಕಲ್ಮಷಾಃ ।
ಪ್ರಷ್ಟವ್ಯಾ ಚಾಪಿ ಸೀತಾಯಾಃ ಪ್ರವೃತ್ತಿರ್ವಿನಯಾನ್ವಿತೈಃ ॥ ೩೪

ಹೇಮಪುಷ್ಕರಸಂಛನ್ನಂ ತಸ್ಮಿನ್ ವೈಖಾನಸಂ ಸರಃ ।
ತರುಣಾದಿತ್ಯಸಂಕಾಶೈರ್ಹಂಸೈರ್ವಿಚರಿತಂ ಶುಭೈಃ ॥ ೩೫

ಔಪವಾಹ್ಯಃ ಕುಬೇರಸ್ಯ ಸಾರ್ವಭೌಮ ಇತಿ ಸ್ಮೃತಃ ।
ಗಜಃ ಪರ್ಯೇತಿ ತಂ ದೇಶಂ ಸದಾ ಸಹ ಕರೇಣುಭಿಃ ॥ ೩೬

---

ಕ್ರೌಂಚಗಿರಿಯನ್ನು ದಾಟಿಹೋದರೆ ಮೈನಾಕವೆಂಬ* ಪರ್ವತವು ಗೋಚರಿಸುವುದು. ಅದರಲ್ಲಿ ಮಯನೆಂಬ ದಾನವನು ಒಂದು ಭವನವನ್ನು ಕಟ್ಟಿಕೊಂಡಿದ್ದಾನೆ. ಆ ಮೈನಾಕದ ಸಾನು, ಮಧ್ಯಪ್ರದೇಶ, ಗುಹೆಗಳನ್ನು ಅನ್ವೇಷಿಸಿರಿ. ಅಲ್ಲಲ್ಲಿ ಕಿನ್ನರಿಯರು ವಾಸವಾಗಿದ್ದಾರೆ (೩೧-೩೨). ಆ ಬೆಟ್ಟವನ್ನು ದಾಟಿಹೋದರೆ ಸಿದ್ಧಸೇವಿತವಾದ ಒಂದು ಪುಣ್ಯಾಶ್ರಮವು ಕಾಣುತ್ತದೆ ಸಿದ್ಧರೂ ವೈಖಾನಸರೂ ವಾಲಖಿಲ್ಯರೂ ಅಲ್ಲಿ ನೆಲೆಸಿದ್ದಾರೆ ತಮ್ಮ ತಪೋಬಲದಿಂದ ಅವರು ಅಣಿಮಾದಿಸಿದ್ಧಿಗಳನ್ನು ಪಡೆದಿದ್ದಾರೆ. ಪಾಪರಹಿತರಾದ ಆ ತಪಸ್ವಿಗಳನ್ನು ನೀವು ವಿನಯದಿಂದ ವಂದಿಸಿ ಸೀತಾದೇವಿಯ ವೃತ್ತಾಂತವನ್ನು ಕೇಳಿರಿ (೩೩-೩೪). ಅಲ್ಲಿ ವೈಖಾನಸರು ಸ್ನಾನ ಮಾಡುವ ಒಂದು ಸರೋವರವಿದೆ. ಚಿನ್ನದ ಕಮಲಗಳು ಅದರಲ್ಲಿ ತುಂಬಿವೆ. ಬಾಲಸೂರ್ಯನಂತೆ ರಂಜಿಸುವ ಉತ್ತಮ ಹಂಸಪಕ್ಷಿಗಳು ಕ್ರೀಡಿಸುತ್ತಿವೆ. ಕುಬೇರನ ವಾಹನವಾದ ಸಾರ್ವಭೌಮವೆಂಬ ಆನೆಯು ಹೆಣ್ಣಾನೆಗಳೊಡನೆ

---

* ಇದು ಸಮುದ್ರದಲ್ಲಿದ್ದ ಮೈನಾಕಗಿರಿಯಲ್ಲ.

ತತ್ ಸರಃ ಸಮತಿಕ್ರಮ್ಯ ನಷ್ಟಚಂದ್ರದಿವಾಕರಮ್ ।
ಅನಕ್ಷತ್ರಗಣಂ ವ್ಯೋಮ ನಿಷ್ಪಯೋದಮನಾದಿತಮ್ ॥ ೩೭

ಗಭಸ್ತಿಭಿರಿವಾರ್ಕಸ್ಯ ಸ ತು ದೇಶಃ ಪ್ರಕಾಶತೇ ।
ವಿಶ್ರಾಮ್ಯದ್ಭಿಸ್ತಪಃಸಿದ್ಧೈರ್ದೇವಕಲ್ಪೈಃ ಸ್ವಯಂಪ್ರಭೈಃ ॥ ೩೮

ತಂ ತು ದೇಶಮತಿಕ್ರಮ್ಯ ಶೈಲೋದಾ ನಾಮ ನಿಮ್ನಗಾ ।
ಉಭಯೋಸ್ತೀರಯೋಸ್ತಸ್ಯಾಃ ಕೀಚಕಾ ನಾಮ ವೇಣವಃ ॥ ೩೯

ತೇ ನಯಂತಿ ಪರಂ ತೀರಂ ಸಿದ್ಧಾನ್ ಪ್ರತ್ಯಾನಯಂತಿ ಚ ।
ಉತ್ತರಾಃ ಕುರವಸ್ತತ್ರ ಕೃತಪುಣ್ಯಪ್ರತಿಶ್ರಯಾಃ ॥ ೪೦

ತತಃ ಕಾಂಚನಪದ್ಮಾಭಿಃ ಪದ್ಮಿನೀಭಿಃ ಕೃತೋದಕಾಃ ।
ನೀಲವೈಡೂರ್ಯಪತ್ರಾಢ್ಯಾ ನದ್ಯಸ್ತತ್ರ ಸಹಸ್ರಶಃ ॥ ೪೧

ರಕ್ತೋತ್ಪಲವನೈಶ್ಚಾತ್ರ ಮಂಡಿತಾಶ್ಚ ಹಿರಣ್ಮಯೈಃ ।
ತರುಣಾದಿತ್ಯಸದೃಶೈರ್ಭಾಂತಿ ತತ್ರ ಜಲಾಶಯಾಃ ॥ ೪೨

ಆ ಪ್ರದೇಶಕ್ಕೆ ಬರುತ್ತದೆ (೩೫-೩೬). ಆ ವೈಖಾನಸರೋವರವನ್ನು ಅತಿಕ್ರಮಿಸಿ ಹೋದಮೇಲೆ ಇನ್ನೊಂದು ಬಯಲುಪ್ರದೇಶವು ಕಂಡುಬರುತ್ತದೆ. ನಿಶ್ಶಬ್ದವಾಗಿರುವ ಆ ಸ್ಥಳದಲ್ಲಿ ಸೂರ್ಯಚಂದ್ರರಾಗಲಿ ನಕ್ಷತ್ರಗಣಗಳಾಗಲಿ ಕಾಣಿಸುವುದಿಲ್ಲ! ಏಕೆಂದರೆ, ಸೂರ್ಯಕಾಂತಿಯಂತಿರುವ ಮಹರ್ಷಿಗಳ ದೇಹಕಾಂತಿಯಿಂದ ಆ ಸ್ಥಳವು ಪ್ರಜ್ವಲಿಸುತ್ತದೆ. ದೇವಸಮಾನರೂ ಸ್ವಯಂಪ್ರಭರೂ ಆದ ತಪಸ್ವಿಗಳು ಅಲ್ಲಿ ವಿಶ್ರಮಿಸಿಕೊಂಡಿದ್ದಾರೆ (೩೭-೩೮). ಅಲ್ಲಿಂದ ಮುಂದೆ ಹೋದರೆ ಶೈಲೋದೆಯೆಂಬ ಒಂದು ನದಿಯು ಸಿಗುತ್ತದೆ. ಅದರ ಉಭಯ ತೀರಗಳಲ್ಲಿಯೂ ಕೀಚಕಗಳೆಂಬ ಬಿದಿರುಗಳು ಬೆಳೆಯುತ್ತವೆ. (ಆ ಬಿದಿರಿನ ಮೆಳೆಗಳು ಹೆಣೆದಿಟ್ಟಂತೆ ದಟ್ಟವಾಗಿ ಹರಡಿರುವುದರಿಂದ) ಅವು ಸಿದ್ಧಪುರುಷರನ್ನು ನದಿಯ ಒಂದು ದಂಡೆಯಿಂದ ಇನ್ನೊಂದು ದಂಡೆಗೆ ಸಾಗಿಸುತ್ತವೆ. ಶೈಲೋದೆಯ ಆಚೆಯ ದಡದಲ್ಲಿ ಪುಣ್ಯಾತ್ಮರಿಗೆ ವಾಸಸ್ಥಾನವಾದ ಉತ್ತರಕುರುದೇಶವಿದೆ (೩೯-೪೦) ಅಲ್ಲಿ ಸುವರ್ಣಕಮಲ ಗಳಿಂದಲೂ ನೀಲವೈಡೂರ್ಯವತ್ರಗಳಿಂದಲೂ ವಿರಾಜಿಸುವ ತಾವರೆಯ ಬಳ್ಳಿಗಳಿರುವ ಸಾವಿರಾರು ನದಿಗಳಿವೆ. ಬಾಲಸೂರ್ಯನಂತೆ ಬೆಳಗುವ

ಮಹಾರ್ಹಮಣಿಪತ್ರೈಶ್ಚ ಕಾಂಚನಪ್ರಭಕೇಸರೈಃ ।
ನೀಲೋತ್ಪಲವನೈಶ್ಚಿತ್ರೈಃ ಸ ದೇಶಃ ಸರ್ವತೋ ವೃತಃ ॥ ೪೩

ನಿಸ್ತುಲಾಭಿಶ್ಚ ಮುಕ್ತಾಭಿರ್ಮಣಿಭಿಶ್ಚ ಮಹಾಧನೈಃ ।
ಉದ್ಭೂತಪುಲಿನಾಸ್ತತ್ರ ಜಾತರೂಪೈಶ್ಚ ನಿಮ್ನಗಾಃ ॥ ೪೪

ಸರ್ವರತ್ನಮಯೈಶ್ಚಿತ್ರೈರವಗಾಢಾ ನಗೋತ್ತಮೈಃ ।
ಜಾತರೂಪಮಯೈಶ್ಚಾಪಿ ಹುತಾಶನಸಮಪ್ರಭೈಃ ॥ ೪೫

ನಿತ್ಯಪುಷ್ಪಫಲಾಸ್ತತ್ರ ನಗಾಃ ಪತ್ರರಥಾಕುಲಾಃ ।
ದಿವ್ಯಗಂಧರಸಸ್ಪರ್ಶಾ ಸರ್ವಕಾಮಾನ್ ಸ್ರವಂತಿ ಚ ॥ ೪೬

ನಾನಾಕಾರಾಣಿ ವಾಸಾಂಸಿ ಫಲಂತ್ಯನ್ಯೇ ನಗೋತ್ತಮಾಃ ।
ಮುಕ್ತಾವೈದೂರ್ಯಚಿತ್ರಾಣಿ ಭೂಷಣಾನಿ ತಥೈವ ಚ ॥ ೪೭

ಸ್ತ್ರೀಣಾಂ ಚಾಪ್ಯನುರೂಪಾಣಿ ಪುರುಷಾಣಾಂ ತಥೈವ ಚ ।
ಸರ್ವರ್ತುಸುಖಸೇವ್ಯಾನಿ ಫಲಂತ್ಯನ್ಯೇ ನಗೋತ್ತಮಾಃ ॥ ೪೮

---

ರಕ್ತೋತ್ಪಲಗಳಿಂದ ಮಂಡಿತವಾದ ಜಲಾಶಯಗಳು ಉತ್ತರಕುರುದೇಶದಲ್ಲಿ ರಂಜಿಸುತ್ತಿವೆ (೪೧-೪೨). ಅಲ್ಲದೆ ಚಿತ್ರಾಕಾರದ ನೀಲೋತ್ಪಲವನಗಳು ಹೇರಳವಾಗಿವೆ ಆ ಪುಷ್ಪಗಳ ಕೇಸರಗಳು ಚಿನ್ನದ ಪ್ರಭೆಯನ್ನು ಬೀರುತ್ತವೆ. ಗಿಡದ ಎಲೆಗಳು ನೀಲಮಣಿಗಳಂತಿವೆ. ವಾನರರೆ, ನದೀತೀರದಲ್ಲಿರುವ ಮರಳುದಿಣ್ಣೆಗಳಲ್ಲಿ ದುಂಡನೆಯ ಮುತ್ತುಗಳೂ ಬೆಲೆಬಾಳುವ ಇತರ ರತ್ನಗಳೂ ಚಿನ್ನದ ಪುಡಿಗಳೂ ಹರಡಿರುತ್ತವೆ! (೪೩-೪೪). ನದಿಗಳ ಮಧ್ಯದಲ್ಲಿರುವ ಬೆಟ್ಟಗಳು ಸಮಸ್ತರತ್ನಗಳಿಂದಲೂ ಚಿನ್ನದಿಂದಲೂ ಅಲಂಕೃತವಾಗಿ ಬೆಂಕಿಯಂತೆ ಕಂಗೊಳಿಸುತ್ತವೆ! ಉತ್ತರಕುರುದೇಶದ ಮರಗಳಲ್ಲಿ ಹಣ್ಣುಹೂಗಳು ಸರ್ವದಾ ತುಂಬಿರುತ್ತವೆ. ಹಕ್ಕಿಗಳು ಮುತ್ತಿಕೊಂಡಿರುತ್ತವೆ. ಆ ಮರಗಳು ದಿವ್ಯಪರಿಮಳವನ್ನು ಬೀರುತ್ತ ದಿವ್ಯರಸವನ್ನು ಸುರಿಸುತ್ತವೆ. ಅವುಗಳ ಸ್ಪರ್ಶವೇ ಆನಂದಕರವಾಗಿರುತ್ತದೆ! ಆ ವೃಕ್ಷಗಳು ಬೇಡುವವರ ಕೋರಿಕೆಗಳನ್ನು ಈಡೇರಿಸುತ್ತವೆ! (೪೫-೪೬). ಕೆಲವು ವೃಕ್ಷಗಳು ವಿವಿಧಾಕೃತಿಯ ವಸ್ತ್ರಗಳನ್ನೂ ಮುತ್ತುವೈಡೂರ್ಯಗಳಿಂದ ವಿಚಿತ್ರವಾದ ಒಡವೆಗಳನ್ನೂ ಉತ್ಪಾದಿಸುತ್ತವೆ! ಅವು ಸ್ತ್ರೀಯರಿಗೂ ಪುರುಷರಿಗೂ ಅನುರೂಪವಾದವುಗಳಾಗಿರುತ್ತವೆ. ಕೆಲವು ವೃಕ್ಷಗಳು ಸಕಲ ಋತು

ಮಹಾರ್ಹಾಣಿ ಚ ಚಿತ್ರಾಣಿ ಹೈಮಾನ್ಯನ್ಯೇ ನಗೋತ್ತಮಾಃ ।
ಶಯನಾನಿ ಪ್ರಸೂಯಂತೇ ಚಿತ್ರಾಸ್ತರಣವಂತಿ ಚ ॥ ೪೯

ಮನಃಕಾಂತಾನಿ ಮಾಲ್ಯಾನಿ ಫಲಂತ್ಯತ್ರಾಪರೇ ದ್ರುಮಾಃ ।
ಪಾನಾನಿ ಚ ಮಹಾರ್ಹಾಣಿ ಭಕ್ಷ್ಯಾಣಿ ವಿವಿಧಾನಿ ಚ ॥ ೫೦

ಸ್ತ್ರಿಯಶ್ಚ ಗುಣಸಂಪನ್ನಾ ರೂಪಯೌವನಲಕ್ಷಿತಾಃ ।
ಗಂಧರ್ವಾಃ ಕಿಂನರಾಃ ಸಿದ್ಧಾ ನಾಗಾ ವಿದ್ಯಾಧರಾಸ್ತಥಾ ॥ ೫೧

ರಮಂತೇ ಸಹಿತಾಸ್ತತ್ರ ನಾರೀಭಿರ್ಭಾಸ್ಕರಪ್ರಭಾಃ ।
ಸರ್ವೇ ಸುಕೃತಕರ್ಮಾಣಃ ಸರ್ವೇ ರತಿಪರಾಯಣಾಃ ॥ ೫೨

ಸರ್ವೇ ಕಾಮಾರ್ಥಸಹಿತಾ ವಸಂತಿ ಸಹಯೋಷಿತಃ ।
ಗೀತವಾದಿತ್ರನಿರ್ಘೋಷಃ ಸೋತ್ಕೃಷ್ಟಹಸಿತಸ್ವನಃ ॥ ೫೩

ಶ್ರೂಯತೇ ಸತತಂ ತತ್ರ ಸರ್ವಭೂತಮನೋಹರಃ ।
ತತ್ರ ನಾಮುದಿತಃ ಕಶ್ಚಿನ್ನಾಸ್ತಿ ಕಶ್ಚಿದಸತ್ಪ್ರಿಯಃ ॥ ೫೪

---

ಗಳಲ್ಲಿಯೂ ಹಿತಕರವಾದ ವಸ್ತುಗಳನ್ನು ಫಲಿಸುತ್ತವೆ (೪೭-೪೮). ಹಲವಾರು ಉತ್ತಮ ವೃಕ್ಷಗಳು ಬೆಲೆಬಾಳುವ ಚಿತ್ರವಿಚಿತ್ರಗಳಾದ ಆಭರಣಗಳನ್ನು ಕೊಡುತ್ತವೆ. ವಿಚಿತ್ರಾಸ್ತರಣಗಳಿರುವ ಶಯನಗಳನ್ನು ಒದಗಿಸುವ ವೃಕ್ಷಗಳೂ ಉಂಟು. ವಾನರವೀರರೆ, ಉತ್ತರಕುರುದೇಶದಲ್ಲಿರುವ ಇನ್ನು ಕೆಲವು ವೃಕ್ಷಗಳು ರಮಣೀಯವಾದ ಪುಷ್ಪಮಾಲೆಗಳನ್ನೂ ಶ್ರೇಷ್ಠವಾದ ಭಕ್ಷ್ಯಪಾನೀಯಗಳನ್ನೂ ಒದಗಿಸುತ್ತವೆ (೪೯-೫೦) ಅಲ್ಲಿರುವ ನಾರಿಯರು ರೂಪಯೌವನಸಂಪನ್ನರೂ ಗುಣಶಾಲಿಗಳೂ ಆಗಿದ್ದಾರೆ. ಸೂರ್ಯನಂತೆ ಪ್ರಕಾಶಿಸುವ ಗಂಧರ್ವ, ಕಿನ್ನರ, ಸಿದ್ಧ, ನಾಗ, ವಿದ್ಯಾಧರ ಮೊದಲಾದವರು ತಮ್ಮ ಪತ್ನಿಯರೊಂದಿಗೆ ಅಲ್ಲಿ ವಿಹರಿಸುತ್ತಾರೆ. ಅವರೆಲ್ಲರೂ ಪುಣ್ಯಕರ್ಮಗಳನ್ನು ಆಚರಿಸಿದವರು. ಎಲ್ಲರೂ ಕ್ರೀಡಾನಿರತರು (೫೧-೫೨).* ಅವರೆಲ್ಲರೂ ಇಷ್ಟಾರ್ಥಗಳನ್ನು ಪಡೆದು ಸ್ತ್ರೀಸಹಿತರಾಗಿ ನೆಲೆಸಿದ್ದಾರೆ. ಆ ಪ್ರದೇಶದಲ್ಲಿ ಗೀತವಾದ್ಯಗಳ ಘೋಷವೂ ಉತ್ಕೃಷ್ಟವಾದ ನಗುವಿನ ಶಬ್ದವೂ ಮನೋಹರವಾಗಿ ಕೇಳಿಸುತ್ತಲೇ ಇರುವುದು ಅಲ್ಲಿ ಸಂತೋಷ

---

* ಈ ಪ್ರಕರಣದ ಕೆಲವು ಶ್ಲೋಕಗಳು ಪ್ರಕ್ಷಿಪ್ತವೆಂದು ಕತಕವ್ಯಾಖ್ಯಾನದಲ್ಲಿ ಬರೆದಿದೆ.

ಅಹನ್ಯಹನಿ ವರ್ಧಂತೇ ಗುಣಾಸ್ತತ್ರ ಮನೋರಮಾಃ ।
ಸಮತಿಕ್ರಮ್ಯ ತಂ ದೇಶಮುತ್ತರಃ ಪಯಸಾಂ ನಿಧಿಃ ॥ ೫೫

ತತ್ರ ಸೋಮಗಿರಿರ್ನಾಮ ಮಧ್ಯೇ ಹೇಮಮಯೋ ಮಹಾನ್ ।
ಇಂದ್ರಲೋಕಗತಾ ಯೇ ಚ ಬ್ರಹ್ಮಲೋಕಗತಾಶ್ಚ ಯೇ ॥ ೫೬

ದೇವಾಸ್ತಂ ಸಮವೇಕ್ಷಂತೇ ಗಿರಿರಾಜಂ ದಿವಂ ಗತಾಃ ।
ಸ ತು ದೇಶೋ ವಿಸೂರ್ಯೋಽಪಿ ತಸ್ಯ ಭಾಸಾ ಪ್ರಕಾಶತೇ ॥ ೫೭

ಸೂರ್ಯಲಕ್ಷ್ಮ್ಯಾಭಿವಿಜ್ಞೇಯಸ್ತಪತೇವ ವಿವಸ್ವತಾ ।
ಭಗವಾನಪಿ ವಿಶ್ವಾತ್ಮಾ ಶಂಭುರೇಕಾದಶಾತ್ಮಕಃ ॥ ೫೮

ಬ್ರಹ್ಮಾ ವಸತಿ ದೇವೇಶೋ ಬ್ರಹ್ಮರ್ಷಿಪರಿವಾರಿತಃ ।
ನ ಕಥಂಚನ ಗಂತವ್ಯಂ ಕುರೂಣಾಮುತ್ತರೇಣ ವಃ ॥ ೫೯

ಅನ್ಯೇಷಾಮಪಿ ಭೂತಾನಾಂ ನಾತಿಕ್ರಾಮತಿ ವೈ ಗತಿಃ ।
ಸ ಹಿ ಸೋಮಗಿರಿರ್ನಾಮ ದೇವಾನಾಮಪಿ ದುರ್ಗಮಃ ॥ ೬೦

---

ದಿಂದ ನಲಿಯುದವನಿಲ್ಲ; ಪ್ರಿಯೆಯಿಂದ ರಹಿತನಾದವನಿಲ್ಲ! (೫೩-೫೪). ಅಲ್ಲಿದ್ದವರಿಗೆ ಪ್ರತಿದಿನವೂ ಸೌಖ್ಯಾದಿಗಳು ಹೆಚ್ಚುತ್ತಲೇ ಇರುವುವು. ನೀವು ಆ ಪ್ರದೇಶವನ್ನು ದಾಟಿ ಮುಂದೆ ಹೋದರೆ ಉತ್ತರಸಮುದ್ರವು ಸಿಗುವುದು. ಆ ಸಮುದ್ರದ ನಡುವೆ ಸೋಮಗಿರಿಯೆಂಬ ಸುವರ್ಣಪರ್ವತವಿರುವುದು. ಇಂದ್ರಲೋಕದಲ್ಲಿಯೂ ಬ್ರಹ್ಮಲೋಕದಲ್ಲಿಯೂ ಇರುವ ದೇವತೆಗಳು ಮಾತ್ರ ಆ ಪರ್ವತವನ್ನು ನೋಡಬಲ್ಲರು (೫೫-೫೬). ಆ ಪ್ರದೇಶದಲ್ಲಿ ಸೂರ್ಯನಿಲ್ಲದಿದ್ದರೂ ಸೋಮಗಿರಿಯ ಕಾಂತಿಯಿಂದಲೇ ಪ್ರಕಾಶವು ಹರಡಿರುತ್ತದೆ. ಸೂರ್ಯನು ಪ್ರಜ್ವಲಿಸುವ ಸ್ಥಳದಲ್ಲಿರುವಂತೆ ಬೆಳಕು ವ್ಯಾಪಿಸಿರುತ್ತದೆ. ಆ ಸೋಮಗಿರಿಯಲ್ಲಿ ವಿಶ್ವಾತ್ಮನಾದ ಮಹಾವಿಷ್ಣುವೂ ಏಕಾದಶಾತ್ಮಕನಾದ ಪರಮೇಶ್ವರನೂ ದೇವೇಶ್ವರನಾದ ಬ್ರಹ್ಮನೂ ಮಹರ್ಷಿಗಳಿಂದ ಪರಿವೃತರಾಗಿ ವಾಸಮಾಡುತ್ತಾರೆ. ಎಲೈ ವಾನರೋತ್ತಮರೆ, ನೀವು ಉತ್ತರಕುರುದೇಶದ ಆಚೆಗೆ ಮಾತ್ರ ಎಂದಿಗೂ ಹೋಗಬೇಡಿರಿ (೫೭-೫೯). ನೀವು ಮಾತ್ರವೇ ಅಲ್ಲ, ಇತರರಿಗೂ ಅಲ್ಲಿಗೆ ಹೋಗಲು ಶಕ್ಯವಿಲ್ಲ. ಸೋಮಗಿರಿಯು ದೇವತೆ

ತಮಾಲೋಕ್ಯ ತತಃ ಕ್ಷಿಪ್ರಮುಪಾವರ್ತಿತುಮರ್ಹಥ ।
ಏತಾವದ್ವಾನರೈಃ ಶಕ್ಯಂ ಗಂತುಂ ವಾನರಪುಂಗವಾಃ ॥ ೬೧

ಅಭಾಸ್ಕರಮಮರ್ಯಾದಂ ನ ಜಾನೀಮಸ್ತತಃ ಪರಮ್ ।
ಸರ್ವಮೇತದ್ವಿಚೇತವ್ಯಂ ಯನ್ಮಯಾ ಪರಿಕೀರ್ತಿತಮ್ ॥ ೬೨

ಯದನ್ಯದಪಿ ನೋಕ್ತಂ ಚ ತತ್ರಾಪಿ ಕ್ರಿಯತಾಂ ಮತಿಃ ॥

ತತಃ ಕೃತಂ ದಾಶರಥೇರ್ಮಹತ್ ಪ್ರಿಯಂ
ಮಹತ್ತರಂ ಚಾಪಿ ತತೋ ಮಮ ಪ್ರಿಯಮ್ ।
ಕೃತಂ ಭವಿಷ್ಯತ್ಯನಿಲಾನಲೋಪಮಾ
ವಿದೇಹಜಾದರ್ಶನಜೇನ ಕರ್ಮಣಾ ॥ ೬೩

ತತಃ ಕೃತಾರ್ಥಾಃ ಸಹಿತಾಃ ಸಬಾಂಧವಾ
ಮಯಾರ್ಚಿತಾಃ ಸರ್ವಗುಣೈರ್ಮನೋರಮೈಃ ।

---

ಗಳಿಗೆ ಸಹ ದುರ್ಗಮವಾದ ಪ್ರದೇಶ. ನೀವು ಆ ಪರ್ವತವನ್ನು ಕಣ್ಣಿಂದ ನೋಡಿ ಬೇಗನೆ ಹಿಂದಿರುಗಿಬಿಡಬೇಕು. ಅಲ್ಲಿಯವರೆಗೆ ಮಾತ್ರವೇ ವಾನರ ವೀರರಾದ ನಿಮಗೆ ಹೋಗಲು ಸಾಧ್ಯವಿದೆ (೬೦-೬೧). ಅಲ್ಲಿಂದ ಮುಂದೆ ಸೂರ್ಯನಿಲ್ಲ, ಜಗತ್ತಿನ ಪಾರವಿಲ್ಲ! ವಸ್ತುತಃ ಮುಂದೆ ಏನಿದೆಯೆಂಬುದು ನಮಗೆ ತಿಳಿಯದು! ಇದುವರೆಗೆ ನಾನು ತಿಳಿಸಿರುವ ಸ್ಥಳಗಳನ್ನೂ ಆ ದಿಕ್ಕಿನಲ್ಲಿ ತಿಳಿಸದೆ ಬಿಟ್ಟಿರಬಹುದಾದ ಸ್ಥಳಗಳನ್ನೂ ನೀವು ಚೆನ್ನಾಗಿ ಪರಿಶೋಧಿಸಲು ಪ್ರಯತ್ನಮಾಡಿರಿ (೬೨). ವಾನರೋತ್ತಮರೆ, ನೀವೆಲ್ಲರೂ ಅಗ್ನಿಯಂತೆ ತೇಜಸ್ವಿಗಳು. ವಾಯುವಿನಂತೆ ವೇಗಶಾಲಿಗಳು. ನೀವು ಜಾನಕಿಯನ್ನು ಹುಡುಕಿ ಕಾರ್ಯವನ್ನು ಸಾಧಿಸಿದರೆ, ಈ ದಶರಥಾತ್ಮಜನಿಗೆ ಪರಮಸಂತೋಷವಾಗುವುದು ಅದಕ್ಕಿಂತಲೂ ಹೆಚ್ಚಾಗಿ ನನಗೆ ಆನಂದ ವಾಗುವುದು! (೬೩). ಈ ರೀತಿಯಲ್ಲಿ ನೀವು ಕೃತಕೃತ್ಯರಾಗಿ ಬಂದರೆ ನೀವೂ ನಿಮ್ಮ ಬಂಧುಗಳೂ ನನ್ನ ಮನ್ನಣೆಗೆ ಪಾತ್ರರಾಗುತ್ತೀರಿ ನಿಮಗೆ ಪ್ರಿಯವಾದ ಸಕಲವಸ್ತುಗಳನ್ನೂ ಕೊಟ್ಟು ಸಮ್ಮಾನಿಸುವೆನು. ನಿಮ್ಮ ಶತ್ರುಗಳನ್ನು ಅಡಗಿಸಿ ಇತರ ಜೀವಿಗಳನ್ನೂ ಪೋಷಿಸುತ್ತ ನಿಮ್ಮ ಕಾಂತೆಯ

ಚರಿಷ್ಯಥೋರ್ವೀಂ ಪ್ರತಿಶಾಂತಶತ್ರವಃ
ಸಹಪ್ರಿಯಾಃ ಭೂತಧರಾಃ ಪ್ಲವಂಗಮಾಃ ॥ ೬೪

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ತ್ರಿಚತ್ವಾರಿಂಶಃ ಸರ್ಗಃ

---

## ಚತುಶ್ಚತ್ವಾರಿಂಶಃ ಸರ್ಗಃ

### ಹನೂಮತ್ಸಂದೇಶಃ

ವಿಶೇಷೇಣ ತು ಸುಗ್ರೀವೋ ಹನುಮತ್ಯರ್ಥಮುಕ್ತವಾನ್ ।
ಸ ಹಿ ತಸ್ಮಿನ್ ಹರಿಶ್ರೇಷ್ಠೇ ನಿಶ್ಚಿತಾರ್ಥೋಽರ್ಥಸಾಧನೇ ॥ ೧

ಅಬ್ರವೀಚ್ಚ ಹನೂಮಂತಂ ವಿಕ್ರಾಂತಮನಿಲಾತ್ಮಜಮ್ ।
ಸುಗ್ರೀವಃ ಪರಮಪ್ರೀತಃ ಪ್ರಭುಃ ಸರ್ವವನೌಕಸಾಮ್ ॥ ೨

ನ ಭೂಮೌ ನಾಂತರಿಕ್ಷೇ ವಾ ನಾಂಬರೇ ನಾಮರಾಲಯೇ ।
ನಾಪ್ಸು ವಾ ಗತಿಸಂಗಂ ತೇ ಪಶ್ಯಾಮಿ ಹರಿಪುಂಗವ ॥ ೩

---

ರೊಂದಿಗೆ ನೀವು ಭೂಮಿಯಲ್ಲಿ ಯಥೇಷ್ಟವಾಗಿ ಸುತ್ತಿಕೊಂಡಿರಬಹುದು" ಎಂದು ಹೇಳಿದನು (೬೪)

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ನಲವತ್ತುಮೂರನೆಯ ಸರ್ಗ

---

## ಸರ್ಗ ೪೪

### ಸುಗ್ರೀವನು ಹನುಮಂತನಿಗೆ ವಿಶೇಷವಾದ ಸಂದೇಶವನ್ನೀಯುವುದು. ಶ್ರೀರಾಮನು ತನ್ನ ಅಂಗುಲೀಯಕವನ್ನು ಕೊಡುವುದು.

ಸುಗ್ರೀವನು ಹನುಮಂತನಿಗೆ ಒಂದು ವಿಶೇಷವಾದ ಸಂದೇಶವನ್ನಿತ್ತನು. ಕಾರ್ಯವನ್ನು ಸಾಧಿಸಿದರೆ ಆ ವಾನರೋತ್ತಮನೇ ಸಾಧಿಸುವನೆಂದು ಸುಗ್ರೀವನು ನಿಶ್ಚಯಿಸಿಕೊಂಡಿದ್ದನು. ಆದ್ದರಿಂದ ಕಪೀಶ್ವರನಾದ ಸುಗ್ರೀವನು ವಾಯುತನಯನೂ ಪರಾಕ್ರಮಿಯೂ ಆದ ಹನುಮಂತನನ್ನು ಕರೆದು ಹೀಗೆಂದನು (೧-೨) : " ವಾನರೋತ್ತಮ, ನಿನ್ನ ಗತಿವೇಗಕ್ಕೆ ತಡೆ

ಸಾಸುರಾಃ ಸಹಗಂಧರ್ವಾಃ ಸನಾಗನರದೇವತಾಃ ।
ವಿದಿತಾಃ ಸರ್ವಲೋಕಾಸ್ತೇ ಸಸಾಗರಧರಾಧರಾಃ ॥ ೪

ಗತಿರ್ವೇಗಶ್ಚ ತೇಜಶ್ಚ ಲಾಘವಂ ಚ ಮಹಾಕಪೇ ।
ಪಿತುಸ್ತೇ ಸದೃಶಂ ವೀರ ಮಾರುತಸ್ಯ ಮಹಾತ್ಮನಃ ॥ ೫

ತೇಜಸಾ ವಾಪಿ ತೇ ಭೂತಂ ಸಮಂ ಭುವಿ ನ ವಿದ್ಯತೇ ।
ತದ್ಯಥಾ ಲಭ್ಯತೇ ಸೀತಾ ತತ್ತ್ವಮೇವೋಪಪಾದಯ ॥ ೬

ತ್ವಯ್ಯೇವ ಹನುಮನ್ನಸ್ತಿ ಬಲಂ ಬುದ್ಧಿಃ ಪರಾಕ್ರಮಃ ।
ದೇಶಕಾಲಾನುವೃತ್ತಿಶ್ಚ ನಯಶ್ಚ ನಯಪಂಡಿತ ॥ ೭

ತತಃ ಕಾರ್ಯಸಮಾಸಂಗಮವಗಮ್ಯ ಹನೂಮತಿ ।
ವಿದಿತ್ವಾ ಹನುಮಂತಂ ಚ ಚಿಂತಯಾಮಾಸ ರಾಘವಃ ॥ ೮

---

ಯೆಂಬುದೇ ಇಲ್ಲ. ಭೂವ್ಯ್ಯಂತರಿಕ್ಷಗಳಲ್ಲಾಗಲಿ ಭೂಮಿಗೆ ಅತಿದೂರದ ಅಂಬರಮಾರ್ಗದಲ್ಲಾಗಲಿ ನೀನು ನಿರಾತಂಕವಾಗಿ ಸಂಚರಿಸಬಲ್ಲೆ. ದೇವ ಲೋಕಕ್ಕಾದರೂ ಹೋಗಬಲ್ಲೆ. ಜಲಮಾರ್ಗದಲ್ಲಾದರೂ ನೀನು ತಡೆಯಿಲ್ಲದೆ ಸಾಗಬಲ್ಲೆ (೩) ಅಸುರಗಂಧರ್ವಲೋಕಗಳು ನಿನಗೆ ವಿದಿತ; ನಾಗನರಲೋಕ ಗಳು ಪರಿಚಿತ; ದೇವಲೋಕವೂ ಸಹ ನಿನಗೆ ಹೊಸದಲ್ಲ! ಸಾಗರಭೂಧರ ಗಳ ಸಹಿತವಾಗಿ ಸಮಸ್ತಲೋಕಗಳನ್ನೂ ನೀನು ಬಲ್ಲೆ! ಎಲೈ ಮಹಾಕಪಿಯೆ, ನಿನ್ನ ಗಮನಶಕ್ತಿ, ನಿನ್ನ ವೇಗ, ನಿನ್ನ ತೇಜಸ್ಸು, ನಿನ್ನ ಚಟುವಟಿಕೆ– ಇವೆಲ್ಲವೂ, ವೀರಾಗ್ರಣಿ, ಮಹಾತ್ಮನಾದ ನಿನ್ನ ತಂದೆ ವಾಯುದೇವನ ಅದ್ಭುತಗುಣಗಳಂತಿವೆ (೪–೫). ಪರಾಕ್ರಮದಲ್ಲಿ ನಿನಗೆ ಸಮಾನನಾದ ಇನ್ನೊಬ್ಬನು ಈ ಪ್ರಪಂಚದಲ್ಲಿಲ್ಲ. ಆದ್ದರಿಂದ ವಾನರಶ್ರೇಷ್ಠ, ಸೀತಾ ದೇವಿಯು ಹೇಗೆ ಲಭಿಸಿಯಾಳೆಂಬುದನ್ನು ನೀನೇ ನೋಡಿಕೊಳ್ಳಬೇಕು! ಹನುಮಂತ, ಬಲ ಬುದ್ಧಿ ಪರಾಕ್ರಮಗಳು ನಿನ್ನಲ್ಲಿಯೇ ನೆಲೆಸಿವೆ. ನೀತಿ ಕೋವಿದನಾದ ನಿನ್ನಲ್ಲಿಯೇ ದೇಶಕಾಲಾನುಗುಣವಾದ ವರ್ತನೆಯೂ ಕಾರ್ಯನೀತಿಯೂ ಕಂಡುಬರುತ್ತವೆ" ಎಂದು ಹೇಳಿದನು (೬–೭). ಆಗ ಶ್ರೀರಾಮನು ಹನುಮಂತನಿಗೆ ಸಕಲಕಾರ್ಯಭಾರವನ್ನೂ ಸುಗ್ರೀವನು ಹೊರಿಸುತ್ತಿರುವುದನ್ನು ಗಮನಿಸಿದನು. ಹನುಮಂತನ ಸಾಮರ್ಥ್ಯವೇ

ಸರ್ವಥಾ ನಿಶ್ಚಿತಾರ್ಥೋಽಯಂ ಹನೂಮತಿ ಹರೀಶ್ವರಃ ।
ನಿಶ್ಚಿತಾರ್ಥಕರಶ್ಚಾಪಿ ಹನುಮಾನ್ ಕಾರ್ಯಸಾಧನೇ ॥ ೯
ತದೇವಂ ಪ್ರಸ್ಥಿತಸ್ಯಾಸ್ಯ ಪರಿಜ್ಞಾತಸ್ಯ ಕರ್ಮಭಿಃ ।
ಭರ್ತ್ರಾ ಪರಿಗೃಹೀತಸ್ಯ ಧ್ರುವಃ ಕಾರ್ಯಫಲೋದಯಃ ॥ ೧೦
ತಂ ಸಮೀಕ್ಷ್ಯ ಮಹಾತೇಜಾ ವ್ಯವಸಾಯೋತ್ತರಂ ಹರಿಮ್ ।
ಕೃತಾರ್ಥ ಇವ ಸಂವೃತ್ತಃ ಪ್ರಹೃಷ್ಟೇಂದ್ರಿಯಮಾನಸಃ ॥ ೧೧
ದದೌ ತಸ್ಮೈ ತತಃ ಪ್ರೀತಃ ಸ್ವನಾಮಾಂಕೋಪಶೋಭಿತಮ್ ।
ಅಂಗುಲೀಯಮಭಿಜ್ಞಾನಂ ರಾಜಪುತ್ರ್ಯಾಃ ಪರಂತಪಃ ॥ ೧೨
ಅನೇನ ತ್ವಾಂ ಹರಿಶ್ರೇಷ್ಠ ಚಿಹ್ನೇನ ಜನಕಾತ್ಮಜಾ ।
ಮತ್ಸಕಾಶಾದನುಪ್ರಾಪ್ತಮನುದ್ವಿಗ್ನಾನುಪಶ್ಯತಿ ॥ ೧೩

---

ನೆಂಬುದು ಶ್ರೀರಾಮನಿಗೆ ತಿಳಿದಿತ್ತು. ಆದ್ದರಿಂದ ಶ್ರೀರಾಮನು ತನ್ನ ಮನಸ್ಸಿನಲ್ಲಿ 'ಹನುಮಂತನೇ ಈ ಕಾರ್ಯವನ್ನು ಸಾಧಿಸುವನೆಂದು ಕಪಿರಾಜನು ನಿರ್ಧರಿಸಿಕೊಂಡಿದ್ದಾನೆ. ಹನುಮಂತನಾದರೋ ಯಾವ ಕಾರ್ಯವನ್ನಾದರೂ ಕೊನೆಮುಟ್ಟಿಸತಕ್ಕವನು ಹೌದು (೮-೯). ಹಿಂದೆ ದೊಡ್ಡ ಕಾರ್ಯಗಳನ್ನು ವಹಿಸಿ ಸುಗ್ರೀವನು ಇವನನ್ನು ಪರೀಕ್ಷಿಸಿದ್ದಾನೆ ಇವನು ತನ್ನ ಸ್ವಾಮಿಯ ನಂಬಿಕೆಗೆ ಪಾತ್ರನಾಗಿದ್ದಾನೆ. ಈ ರೀತಿಯಲ್ಲಿ ಸಂದೇಶವನ್ನು ಪಡೆದು ಹೊರಟಮೇಲೆ ಹನುಮಂತನು ಕಾರ್ಯವನ್ನು ಸಾಧಿಸುವುದು ನಿಶ್ಚಯ' ಎಂದು ಆಲೋಚಿಸಿದನು (೧೦). ಕಾರ್ಯೋನ್ಮುಖನಾಗಿ ಹೊರಟು ನಿಂತಿದ್ದ ಆಂಜನೇಯನನ್ನು ಕಂಡು ಶ್ರೀರಾಮನ ಇಂದ್ರಿಯಗಳು ಹರ್ಷಗೊಂಡವು. ಹೃದಯವು ಅರಳಿತು ಕಾರ್ಯವು ಸಿದ್ಧಿಸಿತೆಂದೇ ಶ್ರೀರಾಮನು ತಿಳಿದುಕೊಂಡನು. ಅವನು ಸಂಪ್ರೀತನಾಗಿ ತನ್ನ ನಾಮಾಂಕಿತವಾದ ಅಂಗುಲೀಯಕವನ್ನು ತೆಗೆದು, ಜನಕನಂದಿನಿಗೆ ಅದು ಗುರುತಾಗಿರಲೆಂದು ಆಂಜನೇಯನಿಗೆ ಕೊಟ್ಟನು (೧೧-೧೨). ಕೊಡುವಾಗ ಅವನನ್ನು ಕುರಿತು "ವಾನರೋತ್ತಮ, ಈ ಗುರುತಿನಿಂದ ನೀನು ಯಾರೆಂಬುದನ್ನು ಜನಕಪುತ್ರಿಯು ತಿಳಿದುಕೊಳ್ಳುವಳು. ನೀನು ನನ್ನ ಕಡೆಯಿಂದ ಬಂದವನೆಂದರಿತು, ಅಂಜಿಕೆಯಿಲ್ಲದೆ ನಿನ್ನನ್ನು ಕಾಣುವಳು (೧೩).

ವ್ಯವಸಾಯಶ್ಚ ತೇ ವೀರ ಸತ್ತ್ವಯುಕ್ತಶ್ಚ ವಿಕ್ರಮಃ ।
ಸುಗ್ರೀವಸ್ಯ ಚ ಸಂದೇಶಃ ಸಿದ್ಧಿಂ ಕಥಯತೀವ ಮೇ ॥ ೧೪

ಸ ತದ್ಗೃಹ್ಯ ಹರಿಶ್ರೇಷ್ಠಃ ಸ್ಥಾಪ್ಯ ಮೂರ್ಧ್ನಿ ಕೃತಾಂಜಲಿಃ ।
ವಂದಿತ್ವಾ ಚರಣೌ ಚೈವ ಪ್ರಸ್ಥಿತಃ ಪ್ಲವಗೋತ್ತಮಃ ॥ ೧೫

ಸ ತತ್ ಪ್ರಕರ್ಷನ್ ಹರಿಣಾಂ ಮಹದ್ಬಲಂ
ಬಭೂವ ವೀರಃ ಪವನಾತ್ಮಜಃ ಕಪಿಃ ।
ಗತಾಂಬುದೇ ವ್ಯೋಮ್ನಿ ವಿಶುದ್ಧಮಂಡಲಃ
ಶಶೀವ ನಕ್ಷತ್ರಗಣೋಪಶೋಭಿತಃ ॥ ೧೬

ಅತಿಬಲ ಬಲಮಾಶ್ರಿತಸ್ತವಾಹಂ
ಹರಿವರವಿಕ್ರಮ ವಿಕ್ರಮೈರನಲ್ಪೈಃ ।
ಪವನಸುತ ಯಥಾಧಿಗಮ್ಯತೇ ಸಾ
ಜನಕಸುತಾ ಹನುಮಂಸ್ತಥಾ ಕುರುಷ್ವ ॥ ೧೭

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಚತುಶ್ಚತ್ವಾರಿಂಶಃ ಸರ್ಗಃ

---

ನಿನ್ನ ಉತ್ಸಾಹ, ಬಲಪರಾಕ್ರಮಗಳು, ಸುಗ್ರೀವನು ನಿನಗಿತ್ತ ಸಂದೇಶದ ವಿಧಾನ–ಇವುಗಳು, ಓ ವೀರಾಗ್ರಗಣ್ಯ, ಕಾರ್ಯವು ಕೈಗೂಡುವುದೆಂದು ಸಾರುತ್ತಿವೆ” ಎಂದು ನುಡಿದನು (೧೪). ಕೈಮುಗಿದು ನಿಂತಿದ್ದ ಹನುಮಂತನು ಆ ಉಂಗುರವನ್ನು ತೆಗೆದುಕೊಂಡು ಭಕ್ತಿಯಿಂದ ತನ್ನ ತಲೆಯಮೇಲಿಟ್ಟುಕೊಂಡನು ಅನಂತರ ಆ ವಾನರೋತ್ತಮನು ಶ್ರೀರಾಮನ ಪಾದಗಳಿಗೆ ವಂದಿಸಿ ಹೊರಟನು (೧೫). ಪವನತನಯನಾದ ಆ ವೀರಾಗ್ರಣಿಯು ಮಹತ್ತರವಾದ ಕಪಿಸೇನೆಯನ್ನು ಕರೆದುಕೊಂಡು ಹೊರಡಲಾಗಿ, ಕಪಿಗಳಿಂದ ಪರಿವೃತನಾದ ಆ ಕಪಿಶ್ರೇಷ್ಠನು, ಮೋಡವಿಲ್ಲದೆ ಸ್ವಚ್ಛವಾದ ಗಗನತಳದಲ್ಲಿ ನಕ್ಷತ್ರಗಳಿಂದ ಪರಿವೃತನಾಗಿ ಶುದ್ಧಮಂಡಲನಾಗಿರುವ ಚಂದ್ರಮನಂತೆ ಕಂಗೊಳಿಸಿದನು (೧೬). ಆಗ ಶ್ರೀರಾಮನು ಮತ್ತೆ “ಹನುಮಂತ, ನೀನು ಮಹಾಬಲಾಢ್ಯನಾಗಿರುವೆ. ನಿನ್ನ ಬಲವನ್ನು ನಾನು ನಂಬಿಕೊಂಡಿದ್ದೇನೆ. ನೀನು ಸಿಂಹಪರಾಕ್ರಮಿಯಾಗಿರುವೆ ಅಸಾಧಾರಣವಾದ ನಿನ್ನ ಪರಾಕ್ರಮಗಳಿಂದ, ಓ ಪವನತನಯ, ನನ್ನ ಜಾನಕಿಯು ದೊರಕುವಂತೆ ಪ್ರಯತ್ನ ಮಾಡು” ಎಂದು ಹೇಳಿದನು (೧೭).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ನಲವತ್ತುನಾಲ್ಕನೆಯ ಸರ್ಗ

## ಪಂಚಚತ್ವಾರಿಂಶಃ ಸರ್ಗಃ

### ವಾನರಬಲಪ್ರತಿಷ್ಠಾ

ಸರ್ವಾಂಶ್ಚಾಹೂಯ ಸುಗ್ರೀವಃ ಪ್ಲವಗಾನ್ ಪ್ಲವಗರ್ಷಭಃ ।
ಪುನಸ್ತಾನಬ್ರವೀದ್ಭೂಯೋ ರಾಮಕಾರ್ಯಾರ್ಥಸಿದ್ಧಯೇ ॥ ೧

ಏವಮೇತದ್ವಿಚೇತವ್ಯಂ ಯನ್ಮಯಾ ಪರಿಕೀರ್ತಿತಮ್ ।
ತದುಗ್ರಶಾಸನಂ ಭರ್ತುರ್ವಿಜ್ಞಾಯ ಹರಿಪುಂಗವಾಃ ॥ ೨

ಶಲಭಾ ಇವ ಸಂಛಾದ್ಯ ಮೇದಿನೀಂ ಸಂಪ್ರತಸ್ಥಿರೇ ।
ರಾಮಃ ಪ್ರಸ್ರವಣೇ ತಸ್ಮಿನ್ ನ್ಯವಸತ್ ಸಹಲಕ್ಷ್ಮಣಃ ॥ ೩

ಪ್ರತೀಕ್ಷಮಾಣಸ್ತಂ ಮಾಸಂ ಯಃ ಸೀತಾಧಿಗಮೇ ಕೃತಃ ।
ಉತ್ತರಾಂ ತು ದಿಶಾಂ ರಮ್ಯಾಂ ಗಿರಿರಾಜಸಮಾವೃತಾಮ್ ॥ ೪

ಪ್ರತಸ್ಥೇ ಹರಿಭಿರ್ವೀರೋ ಹರಿಃ ಶತವಲಿಸ್ತದಾ ।
ಪೂರ್ವಾಂ ದಿಶಂ ಪ್ರತಿ ಯಯೌ ವಿನತೋ ಹರಿಯೂಥಪಃ ॥ ೫

### ಸರ್ಗ ೪೫

#### ಕಪಿಸೇನೆಯ ಪ್ರಯಾಣಸಂಭ್ರಮ.

ಕಪೀಶ್ವರನಾದ ಸುಗ್ರೀವನು ಮತ್ತೊಮ್ಮೆ ಕಪಿನಾಯಕರೆಲ್ಲರನ್ನೂ ಕುರಿತು "ಎಲೈ ವಾನರರೆ, ಶ್ರೀರಾಮನ ಕಾರ್ಯಸಿದ್ಧಿಯನ್ನು ಗುರಿಯಾಗಿಟ್ಟುಕೊಂಡು, ನಾನು ಯಾವ ರೀತಿಯಲ್ಲಿ ನಿಮಗೆ ತಿಳಿಸಿರುವೆನೋ ಆ ಕ್ರಮದಿಂದ ಆಯಾ ದಿಕ್ಕುಗಳಲ್ಲಿ ನೀವು ಸೀತಾದೇವಿಯನ್ನು ಹುಡುಕಿ ಬರತಕ್ಕದ್ದು" ಎಂದು ಆಜ್ಞಾಪಿಸಿದನು (೧-೨). ಒಡೆಯನ ಕಟ್ಟಾಣತಿಯನ್ನು ಕೇಳಿ ವಾನರರೆಲ್ಲರೂ ಕೂಡಲೆ ಪ್ರಯಾಣಮಾಡಿದರು. ಸಕಲ ಭೂಪ್ರದೇಶವನ್ನೂ ವ್ಯಾಪಿಸುತ್ತ, ಮಿಡತೆಗಳಂತೆ ನಡೆದರು. ಇತ್ತ ಶ್ರೀರಾಮನು ಸೀತಾನ್ವೇಷಣಕ್ಕೆ ಗೊತ್ತಾದ ಒಂದು ತಿಂಗಳ ಅವಧಿಯನ್ನು ನಿರೀಕ್ಷಿಸುತ್ತ ಲಕ್ಷ್ಮಣನೊಡನೆ ಪ್ರಸ್ರವಣಗಿರಿಯಲ್ಲಿ ವಾಸವಾಗಿದ್ದನು (೩-೪). ವೀರನಾದ ಶತಬಲಿಯು ಗಿರಿರಾಜನಾದ ಹಿಮಾಲಯದಿಂದ ಆವೃತವಾದ

ತಾರಾಂಗದಾದಿಸಹಿತಃ ಪ್ಲವಗಃ ಪವನಾತ್ಮಜಃ ।
ಅಗಸ್ತ್ಯಚರಿತಾಮಾಶಾಂ ದಕ್ಷಿಣಾಂ ಹರಿಯೂಥಪಃ ॥ ೬

ಪಶ್ಚಿಮಾಂ ತು ದಿಶಂ ಘೋರಾಂ ಸುಷೇಣಃ ಪ್ಲವಗೇಶ್ವರಃ ।
ಪ್ರತಸ್ಥೇ ಹರಿಶಾರ್ದೂಲೋ ಭೃಶಂ ವರುಣಪಾಲಿತಾಮ್ ॥ ೭

ತತಃ ಸರ್ವಾ ದಿಶೋ ರಾಜಾ ಚೋದಯಿತ್ವಾ ಯಥಾತಥಮ್ ।
ಕಪಿಸೇನಾಪತೀನ್ ಮುಖ್ಯಾನ್ ಮುಮೋದ ಸುಖಿತಃ ಸುಖಮ್ ॥ ೮

ಏವಂ ಸಂಚೋದಿತಾಃ ಸರ್ವೇ ರಾಜ್ಞಾ ವಾನರಯೂಥಪಾಃ ।
ಸ್ವಾಂ ಸ್ವಾಂ ದಿಶಮಭಿಪ್ರೇಕ್ಷ್ಯ ತ್ವರಿತಾಃ ಸಂಪ್ರತಸ್ಥಿರೇ ॥ ೯

ಆನಯಿಷ್ಯಾಮಹೇ ಸೀತಾಂ ಹನಿಷ್ಯಾಮಶ್ಚ ರಾವಣಮ್ ।
ನದಂತಶ್ಚೋನ್ನದಂತಶ್ಚ ಗರ್ಜಂತಶ್ಚ ಪ್ಲವಂಗಮಾಃ ॥ ೧೦

ಕ್ಷ್ವೇಲಂತೋ ಧಾವಮಾನಾಶ್ಚ ವಿನದಂತೋ ಮಹಾಬಲಾಃ ।
ಅಹಮೇಕೋ ಹನಿಷ್ಯಾಮಿ ಪ್ರಾಪ್ತಂ ರಾವಣಮಾಹವೇ ॥ ೧೧

---

ಉತ್ತರದಿಕ್ಕಿಗೆ ಕಪಿಸೇನೆಯೊಡನೆ ನಡೆದನು. ಕಪಿಸೇನಾಪತಿಯಾದ ವಿನತನು ಪೂರ್ವದಿಕ್ಕಿಗೆ ಪ್ರಯಾಣಮಾಡಿದನು. ವಾಯುತನಯನಾದ ಹನುಮಂತನು ತಾರ, ಅಂಗದ ಮೊದಲಾದವರ ಜೊತೆಗೂಡಿ ಅಗಸ್ತ್ಯನಿವಾಸವಾದ ದಕ್ಷಿಣ ದಿಕ್ಕಿಗೆ ಹೊರಟನು (೫-೬). ಕಪಿನಾಯಕನಾದ ಸುಷೇಣನು ಭಯಂಕರವೂ ವರುಣಪಾಲಿತವೂ ಆದ ಪಶ್ಚಿಮದಿಕ್ಕಿಗೆ ಪ್ರಯಾಣಬೆಳೆಸಿದನು. ಹೀಗೆ ಸುಗ್ರೀವನು ಮುಖ್ಯರಾದ ಕಪಿಸೇನಾಪತಿಗಳನ್ನು ಸಕಲ ದಿಕ್ಕುಗಳಿಗೂ ಕ್ರಮವರಿತು ಕಳಿಸಿದನು. ಆಗಲೇ ಸುಗ್ರೀವನ ಮನಸ್ಸಿಗೆ ನೆಮ್ಮದಿ ಯಾಯಿತು; ಸುಖವೆನಿಸಿತು (೭-೮). ಕಪಿರಾಜನಿಂದ ಆಜ್ಞಪ್ತರಾದ ಆ ಕಪಿವೀರರು ತಮಗೆ ಗೊತ್ತಾದ ದಿಕ್ಕುಗಳಿಗೆ ತ್ವರೆಯಿಂದ ನಡೆದರು. ಆ ವಾನರರು ಉತ್ಸಾಹದಿಂದ ಉಬ್ಬಿ "ಸೀತಾದೇವಿಯನ್ನು ನಾವು ಹುಡುಕಿ ಕರೆತರುವೆವು! ರಾವಣನನ್ನು ಕೊಂದಿಸೆಯುವೆವು!" ಎಂದು ಕೂಗುತ್ತ ಕೇಕೆಹಾಕುತ್ತ ಗರ್ಜಿಸುತ್ತ ನಡೆದರು (೯-೧೦). ಆ ಬಲಾಢ್ಯರು ಅಬ್ಬರಿಸುತ್ತ ಕಿರಿಚುತ್ತ ಓಡುತ್ತ ಹೋದರು. ಅವರಲ್ಲಿ ಕೆಲವರು "ನಾನೊಬ್ಬನೇ ನನ್ನ ಸಾಹಸವನ್ನು ಮೆರೆಸಿ ರಣರಂಗದಲ್ಲಿ ರಾವಣನನ್ನು ಸಂಹರಿಸುವೆನು. ಅವನ

*

ತತಶ್ಚೋನ್ಮಥ್ಯ ಸಹಸಾ ಹರಿಷ್ಯೇ ಜನಕಾತ್ಮಜಾಮ್ ।
ವೇಪಮಾನಾಂ ಶ್ರಮೇಣಾದ್ಯ ಭವದ್ಭಿಃ ಸ್ಥೀಯತಾಮಿತಿ ॥ ೧೨
ಏಕ ಏವಾಹರಿಷ್ಯಾಮಿ ಪಾತಾಲಾದಪಿ ಜಾನಕೀಮ್ ।
ವಿಮಥಿಷ್ಯಾಮ್ಯಹಂ ವೃಕ್ಷಾನ್ ಪಾತಯಿಷ್ಯಾಮ್ಯಹಂ ಗಿರೀನ್ ॥ ೧೩
ಧರಣೀಂ ದಾರಯಿಷ್ಯಾಮಿ ಕ್ಷೋಭಯಿಷ್ಯಾಮಿ ಸಾಗರಾನ್ ।
ಅಹಂ ಯೋಜನಸಂಖ್ಯಾಯಾಃ ಪ್ಲವಿತಾ ನಾತ್ರ ಸಂಶಯಃ ॥ ೧೪
ಶತಂ ಯೋಜನಸಂಖ್ಯಾಯಾಃ ಶತಂ ಸಮಧಿಕಂ ಹ್ಯಹಮ್ ।
ಭೂತಲೇ ಸಾಗರೇ ವಾಪಿ ಶೈಲೇಷು ಚ ವನೇಷು ಚ ॥ ೧೫
ಪಾತಾಲಸ್ಯಾಪಿ ವಾ ಮಧ್ಯೇ ನ ಮಮಾಚ್ಛಿದ್ಯತೇ ಗತಿಃ ।
ಇತ್ಯೇಕೈಕಂ ತದಾ ತತ್ರ ವಾನರಾ ಬಲದರ್ಪಿತಾಃ ॥ ೧೬
ಊಚುಶ್ಚ ವಚನಂ ತತ್ರ ಹರಿರಾಜಸ್ಯ ಸಂನಿಧೌ ॥

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಪಂಚಚತ್ವಾರಿಂಶಃ ಸರ್ಗಃ

---

ಸೇನೆಯನ್ನು ಧ್ವಂಸಮಾಡಿ, ಭಯದಿಂದ ನಡುಗುವ ಜನಕಪುತ್ರಿಯನ್ನು ಕರೆತರುವೆನು. ನೀವೇಕೆ ಶ್ರಮಪಡುವಿರಿ? ಇಲ್ಲಿಯೇ ಇರಿ!" ಎಂದು ಸ್ಪರ್ಧೆಯಿಂದ ಹೇಳುತ್ತಿದ್ದರು (೧೧-೧೨) ಒಬ್ಬ ವಾನರನು "ಪಾತಾಳದಲ್ಲಿದ್ದರೂ ಜಾನಕಿಯನ್ನು ನಾನೊಬ್ಬನೇ ಕರೆತರಬಲ್ಲೆನು" ಎಂದನು. ಇನ್ನೊಬ್ಬನು "ಮರಗಳನ್ನು ನಾನು ಮುರಿದು ಈಡಾಡಬಲ್ಲೆ, ಬೆಟ್ಟಗಳನ್ನು ಉರುಳಿಸಬಲ್ಲೆ, ಪೊಡವಿಯನ್ನು ಒಡೆಯಬಲ್ಲೆ, ಸಮುದ್ರಗಳನ್ನು ಅಲ್ಲೋಲ ಕಲ್ಲೋಲವಾಗಿಸಬಲ್ಲೆ!" ಎಂದು ಹೆಮ್ಮೆಯಿಂದ ಕೊಚ್ಚಿಕೊಂಡನು. ಮತ್ತೊಬ್ಬನು "ಒಂದು ಯೋಜನ ದೂರದವರೆಗಾದರೂ ನಾನು ಹಾರಬಲ್ಲೆ, ಸಂದೇಹವೇ ಬೇಡ!" ಎಂದು ಹೇಳಿದನು (೧೩-೧೪). ಅದನ್ನು ಕೇಳಿ ಇನ್ನೊಬ್ಬ ವಾನರನು "ನಾನು ನೂರು ಯೋಜನ ದೂರ ಹಾರಬಲ್ಲೆನು!" ಎಂದನು ಆಗ ಮತ್ತೊಬ್ಬನು "ನೂರು ಯೋಜನಕ್ಕಿಂತಲೂ ಹೆಚ್ಚು ದೂರ ನಾನು ಹಾರುವೆನು!" ಎಂದು ನುಡಿದನು (೧೫). ಆಗ ಮಗದೊಬ್ಬನು "ಭೂತಳ ಸಮುದ್ರತಳ ಶೈಲಾರಣ್ಯಗಳಲ್ಲಾಗಲಿ, ಪಾತಾಳದ ಕೆಳಗಡೆಯಲ್ಲಾಗಲಿ ನಾನು ಸಂಚರಿಸಬಲ್ಲೆ. ಎಲ್ಲಿಯೂ ನನ್ನ ಸಂಚಾರಕ್ಕೆ ಅಡ್ಡಿಯೇ ಬರದು!" ಎಂದು ಕೂಗಿದನು. ಈ ಬಗೆಯಲ್ಲಿ ಸುಗ್ರೀವನ ಸನ್ನಿಧಿಯಲ್ಲಿದ್ದ ಆ ವಾನರರು ದರ್ಪೋದ್ಧತರಾಗಿ ಗರ್ಜಿಸುತ್ತ ರಭಸದಿಂದ ಸಾಗಿದರು (೧೬).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ನಲವತ್ತೈದನೆಯ ಸರ್ಗ

## ಷಟ್‌ಚತ್ವಾರಿಂಶಃ ಸರ್ಗಃ

### ಭೂಮಂಡಲಭ್ರಮಣಕಥನಮ್

**ಗತೇಷು ವಾನರೇಂದ್ರೇಷು ರಾಮಃ ಸುಗ್ರೀವಮಬ್ರವೀತ್ ।**
**ಕಥಂ ಭವಾನ್ ವಿಜಾನೀತೇ ಸರ್ವಂ ವೈ ಮಂಡಲಂ ಭುವಃ ॥** ೧

**ಸುಗ್ರೀವಸ್ತು ತತೋ ರಾಮಮುವಾಚ ಪ್ರಣತಾತ್ಮವಾನ್ ।**
**ಶ್ರೂಯತಾಂ ಸರ್ವಮಾಖ್ಯಾಸ್ಯೇ ವಿಸ್ತರೇಣ ನರರ್ಷಭ ॥** ೨

**ಯದಾ ತು ದುಂದುಭಿಂ ನಾಮ ದಾನವಂ ಮಹಿಷಾಕೃತಿಮ್ ।**
**ಪರಿಕಾಲಯತೇ ವಾಲೀ ಮಲಯಂ ಪ್ರತಿ ಪರ್ವತಮ್ ॥** ೩

**ತದಾ ವಿವೇಶ ಮಹಿಷೋ ಮಲಯಸ್ಯ ಗುಹಾಂ ಪ್ರತಿ ।**
**ವಿವೇಶ ವಾಲೀ ತತ್ರಾಪಿ ಮಲಯಂ ತಜ್ಜಿಘಾಂಸಯಾ ॥** ೪

### ಸರ್ಗ ೪೬

ತಾನು ಸಮಸ್ತಭೂಮಂಡಲವನ್ನೂ ಸುತ್ತಿದ ಪ್ರಕಾರವನ್ನು
ಸುಗ್ರೀವನು ಶ್ರೀರಾಮನಿಗೆ ಹೇಳುವುದು.

ಆ ವಾನರವೀರರೆಲ್ಲರೂ ಹೊರಟುಹೋದಮೇಲೆ ಶ್ರೀರಾಮನು "ಸುಗ್ರೀವ, ಈ ಸಮಸ್ತಭೂಮಂಡಲವನ್ನೂ ನೀನು ಹೇಗೆ ಬಲ್ಲೆ?" ಎಂದು ಕೇಳಿದನು. ಆಗ ಸುಗ್ರೀವನು ಶ್ರೀರಾಮನಿಗೆ ನಮಸ್ಕರಿಸಿ ಹೀಗೆಂದನು: "ಪುರುಷೋತ್ತಮ, ಅದೆಲ್ಲವನ್ನೂ ವಿಸ್ತಾರವಾಗಿ ಹೇಳುವೆನು, ಕೇಳು (೧-೨): ಮಹಿಷಾಕಾರನಾಗಿದ್ದ ದುಂದುಭಿಪುತ್ರನಾದ * ಮಾಯಾವಿಯೆಂಬ ದಾನವನು ವಾಲಿಯೊಡನೆ ಯುದ್ಧಕ್ಕೆ ಬಂದನು. ಆಗ ವಾಲಿಯು ಆ ದಾನವನನ್ನು ಮಲಯಪರ್ವತದವರೆಗೆ ಅಟ್ಟಿಸಿಕೊಂಡುಹೋದನು. ಆ ಮಹಿಷನು ಮಲಯದ ಒಂದು ಗುಹೆಯನ್ನು ಪ್ರವೇಶಿಸಲಾಗಿ, ವಾಲಿಯು ಅವನನ್ನು ಸಂಹರಿಸಬೇಕೆಂದು ತಾನೂ ಆ ಗುಹೆಯನ್ನು ಪ್ರವೇಶಿಸಿದನು (೩-೪).

---

* ಅನುಬಂಧವನ್ನು ನೋಡಿ.

**ತತೋಽಹಂ ತತ್ರ ನಿಕ್ಷಿಪ್ತೋ ಗುಹಾದ್ವಾರಿ ವಿನೀತವತ್ ।**
**ನ ಚ ನಿಷ್ಕ್ರಮತೇ ವಾಲೀ ತದಾ ಸಂವತ್ಸರೇ ಗತೇ ॥ ೫**

**ತತಃ ಕ್ಷತಜವೇಗೇನ ಆಪುಪೂರೇ ತದಾ ಬಿಲಮ್ ।**
**ತದಹಂ ವಿಸ್ಮಿತೋ ದೃಷ್ಟ್ವಾ ಭ್ರಾತೃಶೋಕವಿಷಾರ್ದಿತಃ ॥ ೬**

**ಅಥಾಹಂ ಕೃತಬುದ್ಧಿಸ್ತು ಸುವ್ಯಕ್ತಂ ನಿಹತೋ ಗುರುಃ ।**
**ಶಿಲಾ ಪರ್ವತಸಂಕಾಶಾ ಬಿಲದ್ವಾರಿ ಮಯಾ ಕೃತಾ ॥ ೭**

**ಅಶಕ್ನುವನ್ನಿಷ್ಕ್ರಮಿತುಂ ಮಹಿಷೋ ವಿನಶೇದಿತಿ ।**
**ತತೋಽಹಮಾಗಾಂ ಕಿಷ್ಕಿಂಧಾಂ ನಿರಾಶಸ್ತಸ್ಯ ಜೀವಿತೇ ॥ ೮**

**ರಾಜ್ಯಂ ಚ ಸುಮಹತ್ ಪ್ರಾಪ್ತಂ ತಾರಯಾ ರುಮಯಾ ಸಹ ।**
**ಮಿತ್ರೈಶ್ಚ ಸಹಿತಸ್ತತ್ರ ವಸಾಮಿ ವಿಗತಜ್ವರಃ ॥ ೯**

**ಆಜಗಾಮ ತತೋ ವಾಲೀ ಹತ್ವಾ ತಂ ದಾನವರ್ಷಭಮ್ ।**
**ತತೋಽಹಮದದಾಂ ರಾಜ್ಯಂ ಗೌರವಾದ್ಭಯಯಂತ್ರಿತಃ ॥ ೧೦**

---

ನನ್ನನ್ನು ಗುಹಾದ್ವಾರದಲ್ಲಿ ವಿನೀತನಾಗಿ ಕಾಯುತ್ತಿರಬೇಕೆಂದು ವಾಲಿಯು ನಿಯಮಿಸಿದನು. ಒಂದು ವರ್ಷ ಕಳೆಯಿತು. ವಾಲಿಯು ಹೊರಗೆ ಬರಲಿಲ್ಲ. ಅಷ್ಟರಲ್ಲಿ ರಕ್ತಪ್ರವಾಹದಿಂದ ಬಿಲವು ತುಂಬಿಹೋಯಿತು ಅದನ್ನು ಕಂಡು ನಾನು ಆಶ್ಚರ್ಯಚಕಿತನಾದೆನು. ಅಣ್ಣನು ಹತನಾದನೆಂಬ ಶೋಕದಿಂದ, ವಿಷವನ್ನು ಕುಡಿದಂತೆ ಕಂಗಾಲಾದೆನು (೫-೬). ಅಣ್ಣನು ಹತನಾದನೆಂದೇ ನನ್ನ ಬುದ್ಧಿಗೆ ತೋರಿತು. ಗುಹಾದ್ವಾರವನ್ನು ಬೆಟ್ಟದಂತಹ ಶಿಲೆಯಿಂದ ಮುಚ್ಚಿದೆನು. ಮಹಿಷಾಕೃತಿಯ ಆ ರಾಕ್ಷಸನು ಹೊರಗೆ ಬರಲಾರದೆ ಅಲ್ಲಿಯೇ ಸಾಯಲೆಂದು ನಾನು ಹಾಗೆ ಮಾಡಿದೆನು. ವಾಲಿಯು ಬದುಕಿಲ್ಲವೆಂಬ ನಿರಾಸೆಯಿಂದ ನಾನು ಕಿಷ್ಕಿಂಧೆಗೆ ಹೊರಟುಬಂದೆನು (೭-೮). ನನಗೆ ಮಹತ್ತರವಾದ ಕಿಷ್ಕಿಂಧಾರಾಜ್ಯವೂ ದೊರಕಿತು ರುಮೆಯೊಡನೆ ತಾರೆಯೂ ಸಿಕ್ಕಿದಳು. ಮಿತ್ರರೊಡನೆ ನಿಶ್ಚಿಂತನಾಗಿ ಇದ್ದುಬಿಟ್ಟೆನು. ಶ್ರೀರಾಮ, ಸ್ವಲ್ಪಕಾಲದಮೇಲೆ ವಾಲಿಯು ಆ ದಾನವನನ್ನು ಕೊಂದು ಕಿಷ್ಕಿಂಧೆಗೆ ಬಂದನು! ಆಗ ನಾನು ಅಣ್ಣನೆಂಬ ಗೌರವದಿಂದಲೂ ಭಯ

ಸ ಮಾಂ ಜಿಘಾಂಸುರ್ದುಷ್ಟಾತ್ಮಾ ವಾಲೀ ಪ್ರವ್ಯಥಿತೇಂದ್ರಿಯಃ ।
ಪರಿಕಾಲಯತೇ ಕ್ರೋಧಾದ್ಧಾವಂತಂ ಸಚಿವೈಃ ಸಹ ॥ ೧೧

ತತೋಽಹಂ ವಾಲಿನಾ ತೇನ ಸಾನುಬಂಧಃ ಪ್ರಧಾವಿತಃ ।
ನದೀಶ್ಚ ವಿವಿಧಾಃ ಪಶ್ಯನ್ ವನಾನಿ ನಗರಾಣಿ ಚ ॥ ೧೨

ಆದರ್ಶತಲಸಂಕಾಶಾ ತತೋ ವೈ ಪೃಥಿವೀ ಮಯಾ ।
ಅಲಾತಚಕ್ರಪ್ರತಿಮಾ ದೃಷ್ಟಾ ಗೋಷ್ಪದವತ್ತದಾ ॥ ೧೩

ಪೂರ್ವಾಂ ದಿಶಂ ತತೋ ಗತ್ವಾ ಪಶ್ಯಾಮಿ ವಿವಿಧಾನ್ ದ್ರುಮಾನ್ ।
ಪರ್ವತಾಂಶ್ಚ ನದೀ ರಮ್ಯಾಃ ಸರಾಂಸಿ ವಿವಿಧಾನಿ ಚ ॥ ೧೪

ಉದಯಂ ತತ್ರ ಪಶ್ಯಾಮಿ ಪರ್ವತಂ ಧಾತುಮಂಡಿತಮ್ ।
ಕ್ಷೀರೋದಂ ಸಾಗರಂ ಚೈವ ನಿತ್ಯಮಪ್ಸರಸಾಲಯಮ್ ॥ ೧೫

ಪರಿಕಾಲಯಮಾನಸ್ತು ವಾಲಿನಾಭಿದ್ರುತಸ್ತದಾ ।
ಪುನರಾವೃತ್ಯ ಸಹಸಾ ಪ್ರಸ್ಥಿತೋಽಹಂ ತದಾ ವಿಭೋ ॥ ೧೬

---

ದಿಂದಲೂ ರಾಜ್ಯವನ್ನು ಅವನಿಗೆ ಒಪ್ಪಿಸಿದೆನು (೯-೧೦). ಆದರೆ ದುಷ್ಟನಾದ ವಾಲಿಯು ನನ್ನನ್ನು ಕೊಲ್ಲಬೇಕೆಂದು ಉದ್ದೇಶಿಸಿದನು. ಅವನು ಉದ್ವಿಗ್ನ ಚಿತ್ತನಾಗಿ ಕ್ರೋಧದಿಂದ ನನ್ನನ್ನು ಅಟ್ಟಿಸಿಕೊಂಡು ಬಂದನು. ಅವನ ದೆಸೆಯಿಂದ ನಾನು ಮಂತ್ರಿಗಳೊಡನೆ ಪಲಾಯನಮಾಡಬೇಕಾಯಿತು. ನನ್ನ ಮಂತ್ರಿಗಳೊಡನೆ ನಾನು ಓಡುತ್ತ ವಿವಿಧ ನದಿಗಳನ್ನೂ ವನಗಳನ್ನೂ ನಗರ ಗಳನ್ನೂ ನೋಡುತ್ತ ತಪ್ಪಿಸಿಕೊಂಡುಹೋಗಬೇಕಾಯಿತು (೧೧-೧೨). ಶ್ರೀರಾಮ, ಆ ಸಮಯದಲ್ಲಿ ನಾನು ಈ ಪೃಥಿವಿಯನ್ನು (ಅಂಗೈಯಲ್ಲಿರುವ) ಕನ್ನಡಿಯಂತೆ ನೋಡಿದೆನು! ಕೊಳ್ಳಿಯ ಚಕ್ರದಂತೆ ಭೂಮಿಯೇ ನನ್ನೆದುರಿಗೆ ಗಿರ್ರೆಂದು ತಿರುಗುವಂತೆ ಕಂಡೆನು! ಗೋಷ್ಪದವೋ ಎಂಬಂತೆ ಭೂಮಂಡಲದಲ್ಲಿ ಅಲೆದೆನು! (೧೩). ವಾಲಿಯು ಅಟ್ಟಿಸಿಕೊಂಡು ಬಂದಾಗ ಪೂರ್ವದಿಕ್ಕಿಗೆ ಓಡಿಹೋದೆನು. ಅಲ್ಲಿ ವಿವಿಧಾರಣ್ಯಗಳನ್ನೂ ಪರ್ವತನದೀ ಸರೋವರಗಳನ್ನೂ ಕಂಡೆನು. ಧಾತುಮಂಡಿತವಾದ ಉದಯಪರ್ವತವನ್ನು ನೋಡಿದೆನು! ಅಪ್ಸರೆಯರು ವಿಹರಿಸುವ ಕ್ಷೀರಸಾಗರವನ್ನು ವೀಕ್ಷಿಸಿದೆನು! (೧೪-೧೫). ಪ್ರಭುವೆ, ಅಲ್ಲಿಂದ ಮುಂದೆ ಎಲ್ಲಿ ಹೋಗುವುದೆಂದು ನಾನು

ಪುನರಾವರ್ತಮಾನಸ್ತು ವಾಲಿನಾಭಿದ್ರುತೋ ದ್ರುತಮ್ ।
ದಿಶಸ್ತಸ್ಯಾಸ್ತತೋ ಭೂಯಃ ಪ್ರಸ್ಥಿತೋ ದಕ್ಷಿಣಾಂ ದಿಶಮ್ ॥ ೧೭
ವಿಂಧ್ಯಪಾದಪಸಂಕೀರ್ಣಾಂ ಚಂದನದ್ರುಮಶೋಭಿತಾಮ್ ।
ದ್ರುಮಶೈಲಾಂಸ್ತತಃ ಪಶ್ಯನ್ ಭೂಯೋ ದಕ್ಷಿಣತೋಽಪರಾನ್ ॥ ೧೮
ಪಶ್ಚಿಮಾಂ ತು ದಿಶಂ ಪ್ರಾಪ್ತೋ ವಾಲಿನಾ ಸಮಭಿದ್ರುತಃ ।
ಸಂಪಶ್ಯನ್ ವಿವಿಧಾನ್ ದೇಶಾನಸ್ತಂ ಚ ಗಿರಿಸತ್ತಮಮ್ ॥ ೧೯
ಪ್ರಾಪ್ಯ ಚಾಸ್ತಂ ಗಿರಿಶ್ರೇಷ್ಠಮುತ್ತರಾಂ ಸಂಪ್ರಧಾವಿತಃ ।
ಹಿಮವಂತಂ ಚ ಮೇರುಂ ಚ ಸಮುದ್ರಂ ಚ ತಥೋತ್ತರಮ್ ॥ ೨೦
ಯದಾ ನ ವಿಂದೇ ಶರಣಂ ವಾಲಿನಾ ಸಮಭಿದ್ರುತಃ ।
ತದಾ ಮಾಂ ಬುದ್ಧಿಸಂಪನ್ನೋ ಹನುಮಾನ್ ವಾಕ್ಯಮಬ್ರವೀತ್ ॥
ಇದಾನೀಂ ಮೇ ಸ್ಮೃತಂ ರಾಜನ್ ಯಥಾ ವಾಲೀ ಹರೀಶ್ವರಃ ।
ಮತಂಗೇನ ತದಾ ಶಪ್ತೋ ಹ್ಯಸ್ಮಿನ್ನಾಶ್ರಮಮಂಡಲೇ ॥ ೨೨
ಪ್ರವಿಶೇದ್ಯದಿ ವೈ ವಾಲೀ ಮೂರ್ಧಾಸ್ಯ ಶತಧಾ ಭವೇತ್ ।
ತತ್ರ ವಾಸಃ ಸುಖೋಽಸ್ಮಾಕಂ ನಿರುದ್ವಿಗ್ನೋ ಭವಿಷ್ಯತಿ ॥ ೨೩

---

ಹಿಂದಿರುಗಿ ಬರುತ್ತಿರಲಾಗಿ, ವಾಲಿಯು ಪುನಃ ಅಟ್ಟಿಸಿಕೊಂಡು ಬಂದನು! ಆಗ ನಾನು ದಕ್ಷಿಣದಿಕ್ಕನ್ನು ಹಿಡಿದು ಹೊರಟೆನು. ವಿಂಧ್ಯಪರ್ವತದ ವೃಕ್ಷಪಂಕ್ತಿಗಳನ್ನೂ ಚಂದನವೃಕ್ಷಗಳನ್ನೂ ವಿವಿಧ ಗಿರಿಗಳನ್ನೂ ನೋಡುತ್ತ ದಕ್ಷಿಣದಿಕ್ಕಿಗೆ ಓಡಿದೆನು (೧೭-೧೮). ಅಲ್ಲಿಗೂ ವಾಲಿಯು ಹಿಂಬಾಲಿಸಿ ಬರಲು, ಪಶ್ಚಿಮಕ್ಕೆ ಪಲಾಯನಮಾಡಿದೆನು. ಮಾರ್ಗಮಧ್ಯದಲ್ಲಿ ಅನೇಕ ದೇಶಗಳನ್ನು ವೀಕ್ಷಿಸುತ್ತ ಓಡಿಹೋದೆನು. ಅಸ್ತಪರ್ವತದವರೆಗೂ ಹೋದೆನು! ಅನಂತರ ಉತ್ತರಕ್ಕೆ ತಿರುಗಿ ಹಿಮಾಲಯವನ್ನು ದಾಟಿ ಮೇರುಶೈಲದವರೆಗೆ ಹೋಗಿ ಉತ್ತರಸಮುದ್ರವನ್ನು ಕಂಡೆನು (೧೯-೨೦). ಹೀಗೆ, ಶ್ರೀರಾಮ, ಎಲ್ಲಿಯೂ ನನಗೆ ಸುರಕ್ಷಿತವಾದ ನೆಲೆಯೇ ಇಲ್ಲವಾಗಲು, ಬುದ್ಧಿಶಾಲಿಯಾದ ಹನುಮಂತನು ಒಂದು ಸಲಹೆಯನ್ನಿತ್ತನು. ಅವನು ನನ್ನನ್ನು ನೋಡಿ 'ವಾನರೇಂದ್ರ, ಈಗ ನನ್ನ ಸ್ಮರಣೆಗೆ ಬಂದಿತು! ಮತಂಗಮುನಿಗಳು ವಾಲಿಗೆ ಶಾಪವನ್ನಿತ್ತಿರುವರಲ್ಲವೆ? (೨೧-೨೨). ಮತಂಗಾಶ್ರಮಕ್ಕೆ ವಾಲಿಯು ಪ್ರವೇಶಿಸಿದರೆ ಅವನ ತಲೆಯು ಸಾವಿರ

ತತಃ ಪರ್ವತಮಾಸಾದ್ಯ ಋಶ್ಯಮೂಕಂ ನೃಪಾತ್ಮಜ ।
ನ ವಿವೇಶ ತದಾ ವಾಲೀ ಮತಂಗಸ್ಯ ಭಯಾತ್ತದಾ ॥ ೨೪

ಏವಂ ಮಯಾ ತದಾ ರಾಜನ್ ಪ್ರತ್ಯಕ್ಷಮುಪಲಕ್ಷಿತಮ್ ।
ಪೃಥಿವೀಮಂಡಲಂ ಕೃತ್ಸ್ನಂ ಗುಹಾಮಸ್ಯಾಗತಸ್ತತಃ ॥ ೨೫

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಷಟ್‌ಚತ್ವಾರಿಂಶಃ ಸರ್ಗಃ



ಹೋಳಾಗುವುದೆಂದು ಆ ಮುನಿಗಳು ಶಪಿಸಿದ್ದಾರೆ. ಆದ್ದರಿಂದ ನಾವು ಮತಂಗಾಶ್ರಮದಲ್ಲಿ ನೆಲೆಸುವುದು ಯುಕ್ತ. ಅಲ್ಲಿ ನಮ್ಮ ವಾಸವು ಸೌಖ್ಯದಿಂದ ಕಳೆಯುವುದು ; ನಿರ್ಭಯವಾಗಿರುವುದು' ಎಂದು ಹೇಳಿದನು (೨೩). ಆಮೇಲೆ, ರಾಜಪುತ್ರ, ನಾನು ಋಷ್ಯಮೂಕಗಿರಿಗೆ ಬಂದು ನೆಲೆಸಿದೆನು. ವಾಲಿಯು ಮತಂಗಮುನಿಗಳ ಭಯದಿಂದ ಅಲ್ಲಿಗೆ ಬರಲಿಲ್ಲ. ಈ ಪ್ರಕಾರದಲ್ಲಿ, ಶ್ರೀರಾಮ, ನಾನು ಭೂಮಂಡಲವೆಲ್ಲವನ್ನೂ ಸುತ್ತಿ ಪ್ರತ್ಯಕ್ಷವಾಗಿ ನೋಡಿ ಬಂದಿದ್ದೇನೆ. ಕಡೆಗೆ ಋಷ್ಯಮೂಕದ ಗುಹೆಯನ್ನು ಸೇರಿದೆನು !" ಎಂದು ಹೇಳಿದನು (೨೪–೨೫).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ನಲವತ್ತಾರನೆಯ ಸರ್ಗ



## ಸಪ್ತಚತ್ವಾರಿಂಶಃ ಸರ್ಗಃ

### ಕಪಿಸೇನಾಪ್ರತ್ಯಾಗಮನಮ್

ದರ್ಶನಾರ್ಥಂ ತು ವೈದೇಹ್ಯಾಃ ಸರ್ವತಃ ಕಪಿಯೂಥಪಾಃ ।
ವ್ಯಾದಿಷ್ಟಾಃ ಕಪಿರಾಜೇನ ಯಥೋಕ್ತಂ ಜಗ್ಮುರಂಜಸಾ ॥ ೧

ಸರಾಂಸಿ ಸರಿತಃ ಕಕ್ಷಾನಾಕಾಶಂ ನಗರಾಣಿ ಚ ।
ನದೀದುರ್ಗಾಂಸ್ತಥಾ ಶೈಲಾನ್ ವಿಚಿನ್ವಂತಿ ಸಮಂತತಃ ॥ ೨

ಸುಗ್ರೀವೇಣ ಸಮಾದಿಷ್ಟಾಃ ಸರ್ವೇ ವಾನರಯೂಥಪಾಃ ।
ತತ್ರ ದೇಶಾನ್ ವಿಚಿನ್ವಂತಿ ಸಶೈಲವನಕಾನನಾನ್ ॥ ೩

ವಿಚಿತ್ಯ ದಿವಸಂ ಸರ್ವೇ ಸೀತಾಧಿಗಮನೇ ಧೃತಾಃ ।
ಸಮಾಯಾಂತಿ ಸ್ಮ ಮೇದಿನ್ಯಾಂ ನಿಶಾಕಾಲೇಷು ವಾನರಾಃ ॥ ೪

ಸರ್ವರ್ತುಕಾಂಶ್ಚ ದೇಶೇಷು ವಾನರಾಃ ಸಫಲಾನ್ ದ್ರುಮಾನ್ ।
ಆಸಾದ್ಯ ರಜನೀಂ ಶಯ್ಯಾಂ ಚಕ್ರುಃ ಸರ್ವೇಷ್ವಹಃಸು ತೇ ॥ ೫

### ಸರ್ಗ ೪೭

### ದಕ್ಷಿಣದಿಕ್ಕನ್ನು ಹೊರತು, ಉಳಿದ ದಿಕ್ಕುಗಳಿಗೆ ಹೋದ ಕಪಿಸೈನಿಕರು ಹಿಂದಿರುಗಿ ಬರುವುದು.

ವೈದೇಹಿಯ ದರ್ಶನಕ್ಕಾಗಿ ಕಪಿರಾಜನಾದ ಸುಗ್ರೀವನಿಂದ ಆಜ್ಞಪ್ತರಾದ ಕಪಿನಾಯಕರೆಲ್ಲರೂ ಅವನು ತಿಳಿಸಿದಂತೆ ಬೇರೆ ಬೇರೆ ದಿಕ್ಕುಗಳಿಗೆ ತ್ವರೆಯಿಂದ ಹೊರಟುಹೋದರು. ಅವರು ಅಲ್ಲಲ್ಲಿ ಸರೋವರ, ನದಿ, ಲತಾಗೃಹ, ಬಯಲುಪ್ರದೇಶ ಮತ್ತು ನಗರಗಳನ್ನು ಹೊಕ್ಕು ಹುಡುಕಿದರು. ನದಿಗಳಿಂದ ದುರ್ಗಮವಾದ ಸ್ಥಳಗಳಲ್ಲಿಯೂ ಶೈಲಗಳಲ್ಲಿಯೂ ಅರಸಿದರು (೧-೨). ಸುಗ್ರೀವನಿಂದ ಆದಿಷ್ಟರಾದ ಆ ವಾನರಯೂಥಪರು ಪರ್ವತಾರಣ್ಯಗಳಲ್ಲಿ ಸೀತಾದೇವಿಯನ್ನು ಅನ್ವೇಷಿಸಿದರು. ಅವರೆಲ್ಲರೂ ಜಾನಕಿಯನ್ನು ಹುಡುಕಬೇಕೆಂಬ ದೃಢಸಂಕಲ್ಪದಿಂದ ಹಗಲಿನಲ್ಲಿ ಕಾರ್ಯೋನ್ಮುಖರಾಗಿ ರಾತ್ರಿಯಲ್ಲಿ ಒಂದು ಕಡೆ ಬಂದು ಸೇರುತ್ತಿದ್ದರು (೩-೪). ಆ ವಾನರರು ಪ್ರತಿದಿನವೂ ವಿವಿಧ ದೇಶಗಳಗಲ್ಲಿ ಹುಡುಕಿ ಸರ್ವಋತುಗಳಲ್ಲಿಯೂ ಫಲ

ತದಹಃ ಪ್ರಥಮಂ ಕೃತ್ವಾ ಮಾಸೇ ಪ್ರಸ್ರವಣಂ ಗತಾಃ ।
ಕಪಿರಾಜೇನ ಸಂಗಮ್ಯ ನಿರಾಶಾಃ ಕಪಿಯೂಥಪಾಃ ॥ ೬

ವಿಚಿತ್ಯ ತು ದಿಶಂ ಪೂರ್ವಾಂ ಯಥೋಕ್ತಾಂ ಸಚಿವೈಃ ಸಹ ।
ಅದೃಷ್ಟ್ವಾ ವಿನತಃ ಸೀತಾಮಾಜಗಾಮ ಮಹಾಬಲಃ ॥ ೭

ಉತ್ತರಾಂ ಚ ದಿಶಂ ಸರ್ವಾಂ ವಿಚಿತ್ಯ ಸ ಮಹಾಕಪಿಃ ।
ಆಗತಃ ಸಹ ಸೈನ್ಯೇನ ವೀರಃ ಶತವಲಿಸ್ತದಾ ॥ ೮

ಸುಷೇಣಃ ಪಶ್ಚಿಮಾಮಾಶಾಂ ವಿಚಿತ್ಯ ಸಹ ವಾನರೈಃ ।
ಸಮೇತ್ಯ ಮಾಸೇ ಸಂಪೂರ್ಣೇ ಸುಗ್ರೀವಮುಪಚಕ್ರಮೇ ॥ ೯

ತಂ ಪ್ರಸ್ರವಣಪೃಷ್ಠಸ್ಥಂ ಸಮಾಸಾದ್ಯಾಭಿವಾದ್ಯ ಚ ।
ಆಸೀನಂ ಸಹ ರಾಮೇಣ ಸುಗ್ರೀವಮಿದಮಬ್ರುವನ್ ॥ ೧೦

ವಿಚಿತಾಃ ಪರ್ವತಾಃ ಸರ್ವೇ ವನಾನಿ ನಗರಾಣಿ ಚ ।
ನಿಮ್ನಗಾಃ ಸಾಗರಾಂತಾಶ್ಚ ಸರ್ವೇ ಜನಪದಾಶ್ಚ ಯೇ ॥ ೧೧

---

ಗಳನ್ನು ಕೊಡುವ ಫಲಭರಿತ ವೃಕ್ಷಗಳ ಬಳಿಗೆ ಬಂದು ರಾತ್ರಿಯಲ್ಲಿ ಮಲಗಿಕೊಳ್ಳುತ್ತಿದ್ದರು. ಕಡೆಗೂ ಸೀತೆಯನ್ನು ಕಾಣದೆ ನಿರಾಶರಾದರು. ಸುಗ್ರೀವನ ಬಳಿಯಿಂದ ಹೊರಟ ದಿನವನ್ನೇ ಪ್ರಥಮ ದಿನವೆಂದು ಗಣಿಸಿ, ಅಲ್ಲಿಗೆ ಒಂದು ತಿಂಗಳು ಕಳೆಯುವುದರಲ್ಲಿ ಆ ಕಪಿಯೂಥಪರು ಪ್ರಸ್ರವಣಗಿರಿಗೆ ಹಿಂದಿರುಗಿ ಸುಗ್ರೀವನನ್ನು ಕಂಡರು (೫-೬). ಬಲಾಢ್ಯನಾದ ವಿನತನು ತನ್ನ ಪರಿವಾರದೊಂದಿಗೆ ಪೂರ್ವದಿಕ್ಕನ್ನು ಶೋಧಿಸಿ ಎಲ್ಲಿಯೂ ಸೀತೆಯನ್ನು ಕಾಣದೆ ಬಂದನು. ವೀರನಾದ ಶತಬಲಿಯು ಉತ್ತರದಿಕ್ಕಿನಲ್ಲಿ ಹುಡುಕಿ ನಿರಾಶನಾಗಿ ತನ್ನ ವಾನರಸೇನೆಯೊಡನೆ ಹಿಂದಿರುಗಿದನು (೭-೮). ಸುಷೇಣನು ತನ್ನ ಕಪಿಸೇನೆಯೊಡನೆ ಪಶ್ಚಿಮದಿಕ್ಕಿನಲ್ಲಿ ಅರಸಿ, ತಿಂಗಳು ಕಳೆಯುವುದರಲ್ಲಿ ಸುಗ್ರೀವನ ಸಮೀಪಕ್ಕೆ ಬಂದನು. ಆ ವಾನರರೆಲ್ಲರೂ ಪ್ರಸ್ರವಣಗಿರಿಗೆ ಬಂದು, ಅದರ ಶಿಖರದಲ್ಲಿ ಶ್ರೀರಾಮನೊಡನಿದ್ದ ಸುಗ್ರೀವನನ್ನು ಕಂಡು ವಂದಿಸಿ ಹೀಗೆ ಬಿನ್ನಯಿಸಿದರು (೯-೧೦) : “ಮಹಾರಾಜ, ಸಮಸ್ತಪರ್ವತಗಳನ್ನೂ ಶೋಧಿಸಿದೆವು. ವನಗಳನ್ನೂ ನಗರಗಳನ್ನೂ ಸುತ್ತಿ ನೋಡಿದೆವು. ನದಿಗಳಲ್ಲಿಯೂ ಸಮುದ್ರತೀರಗಳಲ್ಲಿಯೂ ಅರಸಿದೆವು.

ಗುಹಾಶ್ಚ ವಿಚಿತಾಃ ಸರ್ವಾಸ್ತ್ವಯಾ ಯಾಃ ಪರಿಕೀರ್ತಿತಾಃ ।
ವಿಚಿತಾಶ್ಚ ಮಹಾಗುಲ್ಮಾ ಲತಾವಿತತಿಸಂತತಾಃ ॥ ೧೨

ಗಹನೇಷು ಚ ದೇಶೇಷು ದುರ್ಗೇಷು ವಿಷಮೇಷು ಚ ।
ಸತ್ತ್ವಾನ್ಯತಿಪ್ರಮಾಣಾನಿ ವಿಚಿತಾನಿ ಹತಾನಿ ಚ ॥ ೧೩

ಉದಾರಸತ್ತ್ವಾಭಿಜನೋ ಮಹಾತ್ಮಾ
ಸ ಮೈಥಿಲೀಂ ದ್ರಕ್ಷ್ಯತಿ ವಾನರೇಂದ್ರ ।
ದಿಶಂ ತು ಯಾಮೇವ ಗತಾ ತು ಸೀತಾ
ತಾಮಾಸ್ಥಿತೋ ವಾಯುಸುತೋ ಹನೂಮಾನ್ ॥ ೧೪

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಸಪ್ತಚತ್ವಾರಿಂಶಃ ಸರ್ಗಃ



ಸಕಲರಾಷ್ಟ್ರಗಳಲ್ಲಿಯೂ ಹುಡುಕಿದೆವು (೧೧). ಗುಹೆಗಳನ್ನು ಹೊಕ್ಕು ನೋಡಿದೆವು. ನೀನು ಆಜ್ಞಾಪಿಸಿದಂತೆ ಬಳ್ಳಿಗಳಿಂದ ಗಹನವಾದ ಮಹಾಗುಲ್ಮಗಳಲ್ಲಿ ನುಗ್ಗಿ ಅನ್ವೇಷಿಸಿದೆವು (೧೨). ದುರ್ಗಮವಾದ ಸ್ಥಳಗಳಲ್ಲಿಯೂ ವಿಷಮವಾದ ಕೋಟೆಗಳಲ್ಲಿಯೂ ಸೀತಾದೇವಿಯನ್ನು ಹುಡುಕಿದೆವು. ಬೃಹದಾಕಾರದ ಜೀವಿಗಳನ್ನು ಕಂಡಾಗ (ರಾವಣನೆಂಬ ಶಂಕೆಯಿಂದ) ಅವುಗಳನ್ನು ಹಿಡಿದು ನಿಲ್ಲಿಸಿ ಶೋಧಿಸಿ ಕೊಂದುಹಾಕಿದೆವು! (೧೩). ವಾನರೇಂದ್ರ, ರಾವಣನು ಸೀತೆಯನ್ನು ಅಪಹರಿಸಿಕೊಂಡುಹೋದುದು ದಕ್ಷಿಣದಿಕ್ಕಿಗಲ್ಲವೆ? ಆ ದಿಕ್ಕಿಗೆ ವಾಯುಪುತ್ರನಾದ ಹನುಮಂತನು ಹೋಗಿದ್ದಾನೆ. ಹನುಮಂತನು ಬಲಾಢ್ಯನೂ ಮಹಾವಂಶದಲ್ಲಿ ಜನಿಸಿದವನೂ ಆಗಿದ್ದಾನೆ. ಆ ಮಹಾತ್ಮನು ಮೈಥಿಲಿಯನ್ನು ಕಂಡುಬರಬಹುದು!" ಎಂದು ನುಡಿದರು (೧೪).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ನಲವತ್ತೇಳನೆಯ ಸರ್ಗ



## ಅಷ್ಟಚತ್ವಾರಿಂಶಃ ಸರ್ಗಃ

### ಕಂಡೂವನಾದಿವಿಚಯಃ

**ಸಹ ತಾರಾಂಗದಾಭ್ಯಾಂ ತು ಗತ್ವಾ ಸ ಹನುಮಾನ್ ಕಪಿಃ ।**
**ಸುಗ್ರೀವೇಣ ಯಥೋದ್ದಿಷ್ಟಂ ತಂ ದೇಶಮುಪಚಕ್ರಮೇ ॥** ೧

**ಸ ತು ದೂರಮುಪಾಗಮ್ಯ ಸರ್ವೈಸ್ತೈಃ ಕಪಿಸತ್ತಮೈಃ ।**
**ವಿಚಿನೋತಿ ಸ್ಮ ವಿಂಧ್ಯಸ್ಯ ಗುಹಾಶ್ಚ ಗಹನಾನಿ ಚ ॥** ೨

**ಪರ್ವತಾಗ್ರನದೀದುರ್ಗಾನ್ ಸರಾಂಸಿ ವಿಪುಲಾನ್ ದ್ರುಮಾನ್ ।**
**ವೃಕ್ಷಷಂಡಾಂಶ್ಚ ವಿವಿಧಾನ್ ಪರ್ವತಾನ್ ಘನಪಾದಪಾನ್ ॥** ೩

**ಅನ್ವೇಷಮಾಣಾಸ್ತೇ ಸರ್ವೇ ವಾನರಾಃ ಸರ್ವತೋ ದಿಶಮ್ ।**
**ನ ಸೀತಾಂ ದದೃಶುರ್ವೀರಾ ಮೈಥಿಲೀಂ ಜನಕಾತ್ಮಜಾಮ್ ॥** ೪

**ತೇ ಭಕ್ಷಯಂತೋ ಮೂಲಾನಿ ಫಲಾನಿ ವಿವಿಧಾನಿ ಚ ।**
**ಅನ್ವೇಷಮಾಣಾ ದುರ್ಧರ್ಷಾ ನ್ಯವಸಂಸ್ತತ್ರ ತತ್ರ ಹ ॥** ೫

### ಸರ್ಗ ೪೮

ಹನುಮದಾದಿಗಳು ದಕ್ಷಿಣದಿಕ್ಕಿನಲ್ಲಿ ಹುಡುಕುತ್ತ ಕಂಡುವೆಂಬ ಮುನಿಯ ವನವನ್ನು ಪ್ರವೇಶಿಸುವುದು. ಅಂಗದನಿಂದ ಒಬ್ಬ ರಾಕ್ಷಸನ ಸಂಹಾರ.

ಅತ್ತ ಹನುಮಂತನು ತಾರ, ಅಂಗದ ಮೊದಲಾದವರೊಡನೆ ಸೇರಿ, ಸುಗ್ರೀವನು ಹೇಳಿದಂತೆ ದಕ್ಷಿಣದಿಕ್ಕಿಗೆ ಹೋದನು. ಆ ವಾನರೋತ್ತಮರೊಡನೆ ಹನುಮಂತನು ಬಹುದೂರ ಹೋಗಿ ವಿಂಧ್ಯಪರ್ವತದ ಗುಹಾರಣ್ಯಗಳನ್ನು ಅರಸತೊಡಗಿದನು (೧-೨). ಆ ವಾನರರು ಗಿರಿಶಿಖರಗಳನ್ನೂ ನದೀದುರ್ಗಗಳನ್ನೂ ಸರೋವರಗಳನ್ನೂ ಅರಸಿ, ವಿಶಾಲವೃಕ್ಷಗಳನ್ನು ಹತ್ತಿ ನೋಡಿ, ವೃಕ್ಷಪಂಕ್ತಿಗಳನ್ನು ಹುಡುಕಿ, ನಿಬಿಡತರುಗಳಿರುವ ಬೆಟ್ಟಗಳನ್ನು ಅನ್ವೇಷಿಸಿದರು. ಆ ದಿಕ್ಕಿನಲ್ಲಿರುವ ವಿವಿಧ ಪ್ರದೇಶಗಳಲ್ಲಿ ಎಷ್ಟು ಹುಡುಕಿದರೂ ಆ ವೀರರಿಗೆ ಜನಕಾತ್ಮಜೆಯಾದ ಸೀತಾದೇವಿಯು ಗೋಚರಿಸಲಿಲ್ಲ (೩-೪). ಆ ಸಾಹಸಿಗಳು ಕಂದಮೂಲಗಳನ್ನು ತಿನ್ನುತ್ತ, ಹಣ್ಣುಗಳನ್ನು ಸವಿಯುತ್ತ,

ಸ ತು ದೇಶೋ ದುರನ್ವೇಷೋ ಗುಹಾಗಹನವಾನ್ ಮಹಾನ್ ।
ನಿರ್ಜಲಂ ನಿರ್ಜನಂ ಶೂನ್ಯಂ ಗಹನಂ ರೋಮಹರ್ಷಣಮ್ ॥ ೬

ತ್ಯಕ್ತ್ವಾ ತು ತಂ ತದಾ ದೇಶಂ ಸರ್ವೇ ವೈ ಹರಿಯೂಥಪಾಃ ।
ತಾದೃಶಾನ್ಯಪ್ಯರಣ್ಯಾನಿ ವಿಚಿತ್ಯ ಭೃಶಪೀಡಿತಾಃ ॥ ೭

ದೇಶಮನ್ಯಂ ದುರಾಧರ್ಷಂ ವಿವಿಶುಶ್ಚಾಕುತೋಭಯಾಃ ।
ಯತ್ರ ವಂಧ್ಯಫಲಾ ವೃಕ್ಷಾ ವಿಪುಷ್ಪಾಃ ಪರ್ಣವರ್ಜಿತಾಃ ॥ ೮

ನಿಸ್ತೋಯಾಃ ಸರಿತೋ ಯತ್ರ ಮೂಲಂ ಯತ್ರ ಸುದುರ್ಲಭಮ್ ।
ನ ಸಂತಿ ಮಹಿಷಾ ಯತ್ರ ನ ಮೃಗಾ ನ ಚ ಹಸ್ತಿನಃ ॥ ೯

ಶಾರ್ದೂಲಾಃ ಪಕ್ಷಿಣೋ ವಾಪಿ ಯೇ ಚಾನ್ಯೇ ವನಗೋಚರಾಃ ।
ನ ಯತ್ರ ವೃಕ್ಷಾ ನೌಷಧ್ಯೋ ನ ಲತಾ ನಾಪಿ ವೀರುಧಃ ॥ ೧೦

ಸ್ನಿಗ್ಧಪತ್ರಾಃ ಸ್ಥಲೇ ಯತ್ರ ಪದ್ಮಿನ್ಯಃ ಫುಲ್ಲಪಂಕಜಾಃ ।
ಪ್ರೇಕ್ಷಣೀಯಾಃ ಸುಗಂಧಾಶ್ಚ ಭ್ರಮರೈಶ್ಚ ವಿವರ್ಜಿತಾಃ ॥ ೧೧

---

ಮೈಥಿಲಿಯನ್ನು ಹುಡುಕುತ್ತ, ಅಲ್ಲಲ್ಲಿ ವಿಶ್ರಮಿಸುತ್ತ ನಡೆದರು. ಮಧ್ಯದಲ್ಲಿ ಅವರಿಗೆ ಗುಹೆಗಳಿಂದ ಗಹನವಾದ ಮಹಾರಣ್ಯವೊಂದು ಕಾಣಿಸಿತು. ಅದು ನಿರ್ಜಲವೂ ನಿರ್ಜನವೂ ಆಹಾರಶೂನ್ಯವೂ ಆಗಿ ನಡುಕವನ್ನು ಹುಟ್ಟಿಸುವಂತಿದ್ದಿತು (೫-೬). ಆ ವಾನರವೀರರು ಅದನ್ನು ದಾಟಿ ಮುಂದೆ ನಡೆಯಲು ಅದೇ ಬಗೆಯ ಅನೇಕ ವನಗಳು ಸಿಕ್ಕಿದವು! ಅಲ್ಲಿ ವಾನರರು ಬಹಳ ಕಷ್ಟಕ್ಕೆ ಒಳಗಾದರು. ಆದರೂ ಲೆಕ್ಕಿಸದೆ ಆ ಸಾಹಸಿಗಳು ನಿರ್ಭೀತಿಯಿಂದ ಮುಂದೆ ಸಾಗುತ್ತ, ಇನ್ನೊಂದು ಘೋರಾರಣ್ಯವನ್ನು ಸೇರಿದರು. ಅಚ್ಚರಿಯೇನೆಂದರೆ, ಅಲ್ಲಿದ್ದ ಮರಗಳಲ್ಲಿ ಯಾವ ಹಣ್ಣುಗಳೂ ಇರಲಿಲ್ಲ, ಹೂಗಳೂ ಇರಲಿಲ್ಲ, ಎಲೆಗಳೂ ಇರಲಿಲ್ಲ! (೭-೮). ಆ ಅರಣ್ಯದಲ್ಲಿ ಕಂದಮೂಲಗಳು ಇರಲಿಲ್ಲ! ನದಿಗಳಲ್ಲಿ ನೀರಿಲ್ಲ, ಕಾಡುಕೋಣಗಳಿಲ್ಲ, ಜಿಂಕೆಗಳಿಲ್ಲ, ಆನೆಗಳೂ ಇಲ್ಲ! ಹುಲಿಗಳ ಸುಳಿವಿಲ್ಲ, ಹಕ್ಕಿಗಳ ಹಾರಾಟವಿಲ್ಲ, ವನಜಂತುಗಳು ಕಾಣಿಸುವುದೇ ಇಲ್ಲ. ಉತ್ತಮಜಾತಿಯ ವೃಕ್ಷಗಳಾಗಲಿ, ಓಷಧಿಗಳಾಗಲಿ, ಬಳ್ಳಿಗಳಾಗಲಿ, ಪೊದೆಗಳಾಗಲಿ ಬೆಳೆದಿಲ್ಲ! (೯-೧೦). ಕೆರೆಗಳ ಒಣಗಿದ ನೆಲದಲ್ಲಿ ಬೆಳೆದ ತಾವರೆಯ ಗಿಡಗಳಲ್ಲಿ ಹಸಿರಾದ ಎಲೆಗಳಿದ್ದವು. ತಾವರೆಗಳು ಅರಳಿದ್ದವು

ಕಂಡುರ್ನಾಮ ಮಹಾಭಾಗಃ ಸತ್ಯವಾದೀ ತಪೋಧನಃ ।
ಮಹರ್ಷಿಃ ಪರಮಾಮರ್ಷೀ ನಿಯಮೈರ್ದುಷ್ಪ್ರಧರ್ಷಣಃ ॥ ೧೨

ತಸ್ಯ ತಸ್ಮಿನ್ ವನೇ ಪುತ್ರೋ ಬಾಲಕೋ ದಶವಾರ್ಷಿಕಃ ।
ಪ್ರನಷ್ಟೋ ಜೀವಿತಾಂತಾಯ ಕ್ರುದ್ಧಸ್ತತ್ರ ಮಹಾಮುನಿಃ ॥ ೧೩

ತೇನ ಧರ್ಮಾತ್ಮನಾ ಶಪ್ತಂ ಕೃತ್ಸ್ನಂ ತತ್ರ ಮಹದ್ವನಮ್ ।
ಅಶರಣ್ಯಂ ದುರಾಧರ್ಷಂ ಮೃಗಪಕ್ಷಿವಿವರ್ಜಿತಮ್ ॥ ೧೪

ತಸ್ಯ ತೇ ಕಾನನಾಂತಾಂಶ್ಚ ಗಿರೀಣಾಂ ಕಂದರಾಣಿ ಚ ।
ಪ್ರಭವಾಣಿ ನದೀನಾಂ ಚ ವಿಚಿನ್ವಂತಿ ಸಮಾಹಿತಾಃ ॥ ೧೫

ತತ್ರ ಚಾಪಿ ಮಹಾತ್ಮಾನೋ ನಾಪಶ್ಯನ್ ಜನಕಾತ್ಮಜಾಮ್ ।
ಹರ್ತಾರಂ ರಾವಣಂ ವಾಪಿ ಸುಗ್ರೀವಪ್ರಿಯಕಾರಿಣಃ ॥ ೧೬

ತೇ ಪ್ರವಿಶ್ಯಾಶು ತಂ ಭೀಮಂ ಲತಾಗುಲ್ಮಸಮಾವೃತಮ್ ।
ದದೃಶುಃ ಕ್ರೂರಕರ್ಮಾಣಮಸುರಂ ಸುರನಿರ್ಭಯಮ್ ॥ ೧೭

---

ಸುಗಂಧವು ಹರಡಿತ್ತು. ತಾವರೆಗಳು ನೋಡಲು ರಮ್ಯವಾಗಿದ್ದವು. ಆದರೆ ದುಂಬಿಗಳ ಸುಳಿವೇ ಇರಲಿಲ್ಲ! (೧೧). ಹಿಂದೆ ಆ ಪ್ರದೇಶದಲ್ಲಿ ಕಂಡುವೆಂಬ ಮಹಾತ್ಮನೂ ಸತ್ಯವಾದಿಯೂ ಆದ ತಪೋಧನನಿದ್ದನು. ಆ ಮಹರ್ಷಿಯು ಬಹಳ ಕೋಪಿಷ್ಠನಾಗಿದ್ದನು. ತಪೋನಿಯಮಗಳಿಂದ ದುರ್ಧರ್ಷನಾಗಿದ್ದನು. ಆ ಮುನಿಯ ಹತ್ತುವರ್ಷ ವಯಸ್ಸಿನ ಪುತ್ರನು ಅರಣ್ಯದಲ್ಲಿ ಕಾಣದಾದನು. ಅವನು ಮೃತನಾದನೆಂದು ತಿಳಿದು ಕಂಡುಮುನಿಯು ಕ್ರುದ್ಧನಾದನು! (೧೨-೧೩). ಆ ಮುನಿಯು ಸಿಟ್ಟಿನಿಂದ "ಈ ಅರಣ್ಯವು ಪ್ರಾಣಿಗಳ ವಾಸಕ್ಕೆ ಅಯೋಗ್ಯವಾಗಲಿ! ಎಲ್ಲರಿಗೂ ದುಷ್ಪ್ರವೇಶವಾಗಲಿ! ಮೃಗಪಕ್ಷಿಗಳು ಇದನ್ನು ವರ್ಜಿಸಿ ಹೊರಟುಹೋಗಲಿ!" ಎಂದು ಶಪಿಸಿಬಿಟ್ಟನು! (೧೪). ಹೀಗಿದ್ದರೂ ಈ ಕಪಿನಾಯಕರು ಆ ವನಪ್ರದೇಶಗಳನ್ನೂ ಗಿರಿಗಳಲ್ಲಿರುವ ಕಂದರಗಳನ್ನೂ ನದಿಗಳ ಉತ್ಪತ್ತಿಸ್ಥಾನಗಳನ್ನೂ ತಾಳ್ಮೆಯಿಂದ ಹುಡುಕಿದರು. ಆದರೆ ಜಾನಕಿಯು ಎಲ್ಲಿಯೂ ಗೋಚರಿಸಲಿಲ್ಲ. ಅವಳನ್ನು ಅಪಹರಿಸಿದ ರಾವಣನೂ ಕಾಣಿಸಲಿಲ್ಲ (೧೫-೧೬). ದಟ್ಟವಾಗಿ ಆವರಿಸಿದ್ದ ಒಂದು ಲತಾಗುಲ್ಮವನ್ನು ಆ ವಾನರರು ಪ್ರವೇಶಿಸಲು, ಅಲ್ಲಿ ಕ್ರೂರಕರ್ಮ

ತಂ ದೃಷ್ಟ್ವಾ ವಾನರಾ ಘೋರಂ ಸ್ಥಿತಂ ಶೈಲಮಿವಾಪರಮ್ ।
ಗಾಢಂ ಪರಿಹಿತಾಃ ಸರ್ವೇ ದೃಷ್ಟ್ವಾ ತಂ ಪರ್ವತೋಪಮಮ್ ॥ ೧೮

ಸೋಽಪಿ ತಾನ್ ವಾನರಾನ್ ಸರ್ವಾನ್ನಷ್ಟಾಃ ಸ್ಥೇತ್ಯಬ್ರವೀದ್ಬಲೀ ।
ಅಭ್ಯಧಾವತ ಸಂಕ್ರುದ್ಧೋ ಮುಷ್ಟಿಮುದ್ಯಮ್ಯ ಸಂಹಿತಮ್ ॥ ೧೯

ತಮಾಪತಂತಂ ಸಹಸಾ ವಾಲಿಪುತ್ರೋಽಂಗದಸ್ತದಾ ।
ರಾವಣೋಽಯಮಿತಿ ಜ್ಞಾತ್ವಾ ತಲೇನಾಭಿಜಘಾನ ಹ ॥ ೨೦

ಸ ವಾಲಿಪುತ್ರಾಭಿಹತೋ ವಕ್ತ್ರಾಚ್ಛೋಣಿತಮುದ್ವಮನ್ ।
ಅಸುರೋ ನ್ಯಪತದ್ಭೂಮೌ ಪರ್ಯಸ್ತ ಇವ ಪರ್ವತಃ ॥ ೨೧

ತೇಽಪಿ ತಸ್ಮಿನ್ನಿರುಚ್ಛ್ವಾಸೇ ವಾನರಾ ಜಿತಕಾಶಿನಃ ।
ವ್ಯಚಿನ್ವನ್ ಪ್ರಾಯಶಸ್ತತ್ರ ಸರ್ವಂ ತದ್ಗಿರಿಗಹ್ವರಮ್ ॥ ೨೨

ವಿಚಿತಂ ತು ತತಃ ಕೃತ್ವಾ ಸರ್ವೇ ತೇ ಕಾನನಂ ಪುನಃ ।
ಅನ್ಯದೇವಾಪರಂ ಘೋರಂ ವಿವಿಶುರ್ಗಿರಿಗಹ್ವರಮ್ ॥ ೨೩

---

ನಾದ ಒಬ್ಬ ರಾಕ್ಷಸನು ಕಣ್ಣಿಗೆ ಬಿದ್ದನು ! ದೇವಭಯಂಕರನಾದ ಆ ಘೋರ ದೈತ್ಯನು ಪರ್ವತಾಕಾರನಾಗಿದ್ದನು. ಅವನನ್ನು ನೋಡಿದೊಡನೆ ಈ ಕಪಿನಾಯಕರು ದಟ್ಟಿಯನ್ನು ಬಿಗಿದು ಹೋರಾಟಕ್ಕೆ ಸಿದ್ಧರಾದರು ! (೧೭-೧೮). ಬಲಾಢ್ಯನಾದ ಆ ದೈತ್ಯನು ಸಜ್ಜಾಗಿ ನಿಂತ ವಾನರರನ್ನು ನೋಡಿ ಕ್ರುದ್ಧನಾದನು. ಅವನು ಮುಷ್ಟಿಯನ್ನು ಬಿಗಿದು ಎತ್ತಿಕೊಂಡು "ಎಲೈ, ನೀವು ಸತ್ತಿರಿ !" ಎಂದು ಗಜರುತ್ತ ವಾನರರ ಕಡೆಗೆ ನುಗ್ಗಿ ಬಂದನು. ಆ ರಾಕ್ಷಸನನ್ನು ನೋಡಿ ವಾಲಿಪುತ್ರನಾದ ಅಂಗದನು 'ಇವನೇ ರಾವಣನಾಗಿರಬೇಕು !' ಎಂದು ತಿಳಿದು ಅವನನ್ನು ಅಂಗೈಯಿಂದ ಅಪ್ಪಳಿಸಿದನು ! (೧೯-೨೦). ಅಂಗದನು ಅಪ್ಪಳಿಸಿದೊಡನೆ ಆ ರಾಕ್ಷಸನು ಬಾಯಿಂದ ನೆತ್ತರನ್ನು ಕಕ್ಕುತ್ತ, ಉರುಳಿಸಿದ ಪರ್ವತದಂತೆ ನೆಲದಮೇಲೆ ಬಿದ್ದನು. ಸ್ವಲ್ಪ ಹೊತ್ತಿನಲ್ಲಿ ಅವನ ಉಸಿರಾಟ ನಿಂತಿತು ! ಜಯೋತ್ಸಾಹದಿಂದ ಉಬ್ಬಿದ ಕಪಿನಾಯಕರು ಅಲ್ಲಿದ್ದ ಸಕಲ ಗಿರಿಗಹ್ವರಗಳನ್ನೂ ಸೀತೆಗಾಗಿ ಹುಡುಕಾಡಿದರು (೨೧-೨೨). ಆ ಕಾನನವನ್ನು ಮತ್ತೆ ಮತ್ತೆ ಹುಡುಕಿನೋಡಿ, ಕಡೆಗೆ ಇನ್ನೊಂದು ಘೋರವಾದ

ತೇ ವಿಚಿತ್ಯ ಪುನಃ ಖಿನ್ನಾ ವಿನಿಷ್ಪತ್ಯ ಸಮಾಗತಾಃ ।
ಏಕಾಂತೇ ವೃಕ್ಷಮೂಲೇ ತು ನಿಷೇದುರ್ದೀನಮಾನಸಾಃ ॥ ೨೪

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಅಷ್ಟಚತ್ವಾರಿಂಶಃ ಸರ್ಗಃ

---

## ಏಕೋನಪಂಚಾಶಃ ಸರ್ಗಃ

### ರಜತಪರ್ವತವಿಚಯಃ

ಅಥಾಂಗದಸ್ತದಾ ಸರ್ವಾನ್ ವಾನರಾನಿದಮಬ್ರವೀತ್ ।
ಪರಿಶ್ರಾಂತೋ ಮಹಾಪ್ರಾಜ್ಞಃ ಸಮಾಶ್ವಾಸ್ಯ ಶನೈರ್ವಚಃ ॥ ೧

ವನಾನಿ ಗಿರಯೋ ನದ್ಯೋ ದುರ್ಗಾಣಿ ಗಹನಾನಿ ಚ ।
ದರ್ಯೋ ಗಿರಿಗುಹಾಶ್ಚೈವ ವಿಚಿತಾನಿ ಸಮಂತತಃ ॥ ೨

---

ಗಿರಿಗಹ್ವರವನ್ನು ಪ್ರವೇಶಿಸಿದರು ಎಲ್ಲಿ ಅನ್ವೇಷಿಸಿದರೂ ವೈಥಿಲಿಯು ದೊರೆಯಲಿಲ್ಲವೆಂದು ಅವರು ಖಿನ್ನರಾದರು. ಅವರೆಲ್ಲರೂ ಆಶಾಭಂಗದಿಂದ ದೀನರಾಗಿ, ಕಡೆಯಲ್ಲಿ ಒಂದು ಮರದ ಕೆಳಗೆ ಏಕಾಂತವಾದ ಸ್ಥಳದಲ್ಲಿ ಕುಳಿತುಬಿಟ್ಟರು (೨೩–೨೪).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ನಲವತ್ತೆಂಟನೆಯ ಸರ್ಗ

---

## ಸರ್ಗ ೪೯

### ಅಂಗದ ಮತ್ತು ಗಂಧಮಾದನರ ಸಮಾಲೋಚನೆ. ರಜತಪರ್ವತದಲ್ಲಿ ಸೀತೆಯನ್ನು ಹುಡುಕುವುದು.

ಅಂಗದನೂ ಬಹಳ ಬಳಲಿದ್ದನು. ಸ್ವಲ್ಪಕಾಲ ವಿಶ್ರಮಿಸಿಕೊಂಡ ಮೇಲೆ ಆ ಧೀಮಂತನು ವಾನರರನ್ನು ಕುರಿತು ಹೀಗೆಂದನು: “ಮಿತ್ರರೆ, ನಾವು ಇದುವರೆಗೆ ಎಷ್ಟೋ ವನಗಳನ್ನೂ ನದಿಗಳನ್ನೂ ದುರ್ಗಮವಾದ ಗಹನಪ್ರದೇಶಗಳನ್ನೂ ಸುತ್ತಿ ಹುಡುಕಿದೆವು. ದರಿಗಳನ್ನೂ ಗಿರಿಗುಹೆಗಳನ್ನೂ

**ತತ್ರ ತತ್ರ ಸಹಾಸ್ಮಾಭಿರ್ಜಾನಕೀ ನ ಚ ದೃಶ್ಯತೇ ।**
**ತಥಾ ರಕ್ಷೋ ಹೃತಾ ಯೇನ ಸೀತಾ ಸುರಸುತೋಪಮಾ ॥ ೩**

**ಕಾಲಶ್ಚ ನೋ ಮಹಾನ್ ಯಾತಃ ಸುಗ್ರೀವಶ್ಚೋಗ್ರಶಾಸನಃ ।**
**ತಸ್ಮಾದ್ಭವಂತಃ ಸಹಿತಾ ವಿಚಿನ್ವಂತು ಸಮಂತತಃ ॥ ೪**

**ವಿಹಾಯ ತಂದ್ರೀಂ ಶೋಕಂ ಚ ನಿದ್ರಾಂ ಚೈವ ಸಮುತ್ಥಿತಾಮ್ ।**
**ವಿಚಿನುಧ್ವಂ ಯಥಾ ಸೀತಾಂ ಪಶ್ಯಾಮೋ ಜನಕಾತ್ಮಜಾಮ್ ॥ ೫**

**ಅನಿರ್ವೇದಂ ಚ ದಾಕ್ಷ್ಯಂ ಚ ಮನಸಶ್ಚಾಪರಾಜಯಮ್ ।**
**ಕಾರ್ಯಸಿದ್ಧಿಕರಾಣ್ಯಾಹುಸ್ತಸ್ಮಾದೇತದ್ಬ್ರವೀಮ್ಯಹಮ್ ॥ ೬**

**ಅದ್ಯಾಪೀದಂ ವನಂ ದುರ್ಗಂ ವಿಚಿನ್ವಂತು ವನೌಕಸಃ ।**
**ಖೇದಂ ತ್ಯಕ್ತ್ವಾ ಪುನಃ ಸರ್ವೈರ್ವನಮೇತದ್ವಿಚೀಯತಾಮ್ ॥ ೭**

**ಅವಶ್ಯಂ ಕ್ರಿಯಮಾಣಸ್ಯ ದೃಶ್ಯತೇ ಕರ್ಮಣಃ ಫಲಮ್ ।**
**ಅಲಂ ನಿರ್ವೇದಮಾಗಮ್ಯ ನ ಹಿ ನೋ ಮೀಲನಂ ಕ್ಷಮಮ್ ॥ ೮**

---

ಅಲೆದೆವು (೧-೨). ಆದರೆ ಜಾನಕಿಯು ನಮಗೆ ಗೋಚರಿಸಲಿಲ್ಲ. ದೇವ ಕನ್ಯಕೆಯಂತಿದ್ದ ಆಕೆಯನ್ನು ಅಪಹರಿಸಿದ ರಾಕ್ಷಸನೂ ಕಾಣಿಸಲಿಲ್ಲ. ಕಾಲವಾದರೋ ಬಹಳವಾಗಿ ಕಳೆದುಹೋಯಿತು. ಸುಗ್ರೀವನಂತೂ ಉಗ್ರವಾಗಿ ದಂಡಿಸತಕ್ಕವನು ಆದ್ದರಿಂದ, ಗೆಳೆಯರೆ, ಎಲ್ಲರೂ ಮತ್ತೆ ಹುಡುಕಲು ತೊಡಗಿರಿ (೩-೪). ನೀವು ಆಲಸ್ಯವನ್ನು ಬದಿಗೊತ್ತಿ ಕಷ್ಟವನ್ನು ಲೆಕ್ಕಿಸದೆ ಕಾರ್ಯತತ್ಪರರಾಗಬೇಕಾಗಿದೆ. ನಿದ್ರೆಯನ್ನೂ ಮಾಡದೆ ದುಡಿಯ ಬೇಕಾಗಿದೆ. ಜನಕಪುತ್ರಿಯನ್ನು ನಾವು ಕಾಣುವವರೆಗೂ ಹುಡುಕಲೇ ಬೇಕು. ಕಾರ್ಯಸಿದ್ಧಿಯಾಗಬೇಕಾದರೆ, ಬೇಸರವಿಲ್ಲದ ಉತ್ಸಾಹ, ದಕ್ಷತೆ, ಸೋಲನ್ನೊಪ್ಪಿಕೊಳ್ಳದ ಮನೋಭಾವ — ಇವು ಬೇಕೆಂದು ಬಲ್ಲವರು ಹೇಳುತ್ತಾರೆ. ಆದ್ದರಿಂದ ಈ ಮಾತನ್ನು ನಾನು ಹೇಳುತ್ತಿದ್ದೇನೆ (೫-೬) ಈಗಲೂ ನೀವು ದುರ್ಗಮವಾದ ಈ ಅರಣ್ಯವನ್ನು ಹುಡುಕಿರಿ. ಬೇಸರವಿಲ್ಲದೆ ನೀವೆಲ್ಲರೂ ಕಾರ್ಯೋನ್ಮುಖರಾಗಿರಿ. ಕಾರ್ಯವನ್ನು ನಾವು ಹಠದಿಂದ ಮಾಡುತ್ತ ಸಾಗಿದರೆ ಫಲವು ಅವಶ್ಯವಾಗಿ ದೊರೆತೇ ತೀರುವುದು. ಫಲವು ದೊರೆಯದೆಂಬ ನಿರುತ್ಸಾಹವು ಕೂಡದು. ಈಗ ನಾವು ಕಣ್ಣುಮುಚ್ಚಿ

ಸುಗ್ರೀವಃ ಕ್ರೋಧನೋ ರಾಜಾ ತೀಕ್ಷ್ಣದಂಡಶ್ಚ ವಾನರಾಃ ।
ಭೇತವ್ಯಂ ತಸ್ಯ ಸತತಂ ರಾಮಸ್ಯ ಚ ಮಹಾತ್ಮನಃ ॥ ೯

ಹಿತಾರ್ಥಮೇತದುಕ್ತಂ ವಃ ಕ್ರಿಯತಾಂ ಯದಿ ರೋಚತೇ ।
ಉಚ್ಯತಾಂ ವಾ ಕ್ಷಮಂ ಯನ್ನಃ ಸರ್ವೇಷಾಮೇವ ವಾನರಾಃ ॥ ೧೦

ಅಂಗದಸ್ಯ ವಚಃ ಶ್ರುತ್ವಾ ವಚನಂ ಗಂಧಮಾದನಃ ।
ಉವಾಚಾವ್ಯಕ್ತಯಾ ವಾಚಾ ಪಿಪಾಸಾಶ್ರಮಖಿನ್ನಯಾ ॥ ೧೧

ಸದೃಶಂ ಖಲು ವೋ ವಾಕ್ಯಮಂಗದೋ ಯದುವಾಚ ಹ ।
ಹಿತಂ ಚೈವಾನುಕೂಲಂ ಚ ಕ್ರಿಯತಾಮಸ್ಯ ಭಾಷಿತಮ್ ॥ ೧೨

ಪುನರ್ಮಾರ್ಗಾಮಹೇ ಶೈಲಾನ್ ಕಂದರಾಂಶ್ಚ ದರೀಸ್ತಥಾ ।
ಕಾನನಾನಿ ಚ ಶೂನ್ಯಾನಿ ಗಿರಿಪ್ರಸ್ರವಣಾನಿ ಚ ॥ ೧೩

ಯಥೋದ್ದಿಷ್ಟಾನಿ ಸರ್ವಾಣಿ ಸುಗ್ರೀವೇಣ ಮಹಾತ್ಮನಾ ।
ವಿಚಿನ್ವಂತು ವನಂ ಸರ್ವೇ ಗಿರಿದುರ್ಗಾಣಿ ಸರ್ವಶಃ ॥ ೧೪

---

ಕುಳಿತುಕೊಳ್ಳುವುದು ಯುಕ್ತವಲ್ಲ (೭-೮). ವಾನರರೆ, ಕೋಪಿಷ್ಠನಾದ ಸುಗ್ರೀವನು ಈಗ ರಾಜನೆಂಬುದನ್ನು ಮರೆಯದಿರಿ! ಅವನು ವಿಧಿಸುವ ದಂಡನೆಯು ಉಗ್ರವಾದದ್ದು. ಅವನಿಗೆ ನಾವು ಹೆದರಿ ನಡೆಯಬೇಕಾಗಿದೆ. ಅಲ್ಲದೆ ಪ್ರಭಾವಶಾಲಿಯಾದ ಶ್ರೀರಾಮನಿಗೂ ನಾವು ಅಂಜಬೇಕು (೯). ನಿಮ್ಮ ಹಿತಕ್ಕಾಗಿಯೇ ನಾನು ಈ ಮಾತನ್ನು ಹೇಳಿದ್ದೇನೆ. ನಿಮಗೆ ಸಮ್ಮತವಾದರೆ ಇದರಂತೆ ನಡೆಯಿರಿ. ಮಿತ್ರರೆ, ನಮ್ಮೆಲ್ಲರಿಗೂ ಹಿತಕರವಾದ ಮಾರ್ಗಾಂತರವಿದ್ದರೆ ಅದನ್ನು ಸೂಚಿಸಿರಿ" ಎಂದನು. ಅಂಗದನ ನುಡಿಯನ್ನು ಕೇಳಿ ಗಂಧಮಾದನನು ಮಾತಾಡಿದನು. ಬಾಯಾರಿಕೆಯಿಂದಲೂ ಆಯಾಸದಿಂದಲೂ ಅವನ ಧ್ವನಿಯು ಕುಗ್ಗಿಹೋಗಿತ್ತು (೧೦-೧೧). ಆತನು "ಮಿತ್ರರೆ, ಅಂಗದನು ಆಡಿದ ಮಾತು ಬಹಳ ಯುಕ್ತವಾಗಿದೆ. ಅದು ನಮಗೆ ಹಿತಕರವೂ ಯೋಗ್ಯವೂ ಆಗಿದೆ. ಅದರಂತೆ ನಡೆಯಿರಿ. ಪರ್ವತಗಳನ್ನೂ ದರೀಗಹ್ವರಗಳನ್ನೂ ಮತ್ತೆ ಹುಡುಕೋಣ! ಶೂನ್ಯವಾದ ಕಾನನಗಳನ್ನೂ ಗಿರಿನದಿಗಳನ್ನೂ ಅರಸೋಣ! ಸುಗ್ರೀವ ಮಹಾರಾಜನು ಅಪ್ಪಣೆಕೊಡಿಸಿದಂತೆ ಎಲ್ಲ ಗಿರಿದುರ್ಗಾದಿಗಳನ್ನೂ ಅನ್ವೇಷಿಸಿರಿ" ಎಂದು ಹೇಳಿದನು (೧೨-೧೪).

*

ತತಃ ಸಮುತ್ಥಾಯ ಪುನರ್ವಾನರಾಸ್ತೇ ಮಹಾಬಲಾಃ ।
ವಿಂಧ್ಯಕಾನನಸಂಕೀರ್ಣಾಂ ವಿಚೇರುರ್ದಕ್ಷಿಣಾಂ ದಿಶಮ್ ॥ ೧೫

ತೇ ಶಾರದಾಭ್ರಪ್ರತಿಮಂ ಶ್ರೀಮದ್ರಜತಪರ್ವತಮ್ ।
ಶೃಂಗವಂತಂ ದರೀಮಂತಮಧಿರುಹ್ಯ ಚ ವಾನರಾಃ ॥ ೧೬

ತತ್ರ ಲೋಧ್ರವನಂ ರಮ್ಯಂ ಸಪ್ತಪರ್ಣವನಾನಿ ಚ ।
ವ್ಯಚಿನ್ವಂಸ್ತೇ ಹರಿವರಾಃ ಸೀತಾದರ್ಶನಕಾಂಕ್ಷಿಣಃ ॥ ೧೭

ತಸ್ಯಾಗ್ರಮಧಿರೂಢಾಸ್ತೇ ಶ್ರಾಂತಾ ವಿಪುಲವಿಕ್ರಮಾಃ ।
ನ ಪಶ್ಯಂತಿ ಸ್ಮ ವೈದೇಹೀಂ ರಾಮಸ್ಯ ಮಹಿಷೀಂ ಪ್ರಿಯಾಮ್ ॥ ೧೮

ತೇ ತು ದೃಷ್ಟಿಗತಂ ದೃಷ್ಟ್ವಾ ತಂ ಶೈಲಂ ಬಹುಕಂದರಮ್ ।
ಅವಾರೋಹಂತ ಹರಯೋ ವೀಕ್ಷಮಾಣಾಃ ಸಮಂತತಃ ॥ ೧೯

ಅವರುಹ್ಯ ತತೋ ಭೂಮಿಂ ಶ್ರಾಂತಾ ವಿಗತಚೇತಸಃ ।
ಸ್ಥಿತ್ವಾ ಮುಹೂರ್ತಂ ತತ್ರಾಥ ವೃಕ್ಷಮೂಲಮುಪಾಶ್ರಿತಾಃ ॥ ೨೦

---

ಅನಂತರ ಬಲಾಢ್ಯರಾದ ಆ ವಾನರರು ಮತ್ತೆ ಮೇಲಕ್ಕೆದ್ದು ವಿಂಧ್ಯಾಟವೀಸಂಕೀರ್ಣವಾದ ದಕ್ಷಿಣದಿಕ್ಕಿನಲ್ಲಿ ಹುಡುಕಲಾರಂಭಿಸಿದರು ಶರತ್ಕಾಲದ ಮೋಡದಂತೆ ಬೆಳ್ಳಗಿದ್ದ ರಜತಪರ್ವತವು ಕಾಣಿಸಿತು. ಉನ್ನತ ಶಿಖರಗಳಿಂದಲೂ ಗುಹೆಗಳಿಂದಲೂ ಯುಕ್ತವಾದ ಆ ಗಿರಿಯನ್ನು ವಾನರರು ಹತ್ತಿದರು (೧೫-೧೬). ಅಲ್ಲಿ ರಮ್ಯವಾಗಿದ್ದ ಲೋಧ್ರವನವನ್ನೂ ಸಪ್ತಪರ್ಣ ವನವನ್ನೂ ಅರಸಿದರು. ಮಹಾಸಾಹಸಿಗಳಾದ ಆ ವೀರರು ಸೀತಾದರ್ಶನಕ್ಕಾಗಿ ಶ್ರಮಿಸುತ್ತ ರಜತಪರ್ವತದ ತುದಿಯನ್ನೇರಿದರು. ಆದರೆ ಶ್ರೀರಾಮನ ಪ್ರಿಯಪತ್ನಿಯಾದ ವೈದೇಹಿಯು ಕಾಣಿಸಲಿಲ್ಲ! (೧೭-೧೮). ಆ ಕಪಿವೀರರು ರಜತಾದ್ರಿಯಲ್ಲಿ ಕಣ್ಣಿಗೆ ಕಂಡ ಪ್ರದೇಶಗಳನ್ನೆಲ್ಲಾ ಸುತ್ತಿ ಗುಹೆಗಳನ್ನು ಹೊಕ್ಕು ಸುತ್ತಲೂ ಹುಡುಕಿ ನಿರಾಶರಾಗಿ ಬೆಟ್ಟದಿಂದ ಕೆಳಗಿಳಿದರು. ನೆಲಕ್ಕಿಳಿದು ಬಂದಾಗ ಅವರು ಆಯಾಸದಿಂದ ಬಳಲಿ ಕಂಗೆಟ್ಟಿದ್ದರು. ಬುದ್ಧಿಗೆ ಮಂಕುಕವಿದಂತಾಗಿತ್ತು. ಅಲ್ಲಿಯೇ ಸ್ವಲ್ಪಹೊತ್ತು ನಿಂತು ಕಡೆಯಲ್ಲಿ

**ತೇ ಮುಹೂರ್ತಂ ಸಮಾಶ್ವಸ್ತಾಃ ಕಿಂಚಿದ್ಭಗ್ನಪರಿಶ್ರಮಾಃ ।**
**ಪುನರೇವೋದ್ಯತಾಃ ಕೃತ್ಸ್ನಾಂ ಮಾರ್ಗಿತುಂ ದಕ್ಷಿಣಾಂ ದಿಶಮ್ ॥**

**ಹನುಮತ್ಪ್ರಮುಖಾಸ್ತೇ ತು ಪ್ರಸ್ಥಿತಾಃ ಪ್ಲವಗರ್ಷಭಾಃ ।**
**ವಿಂಧ್ಯಮೇವಾದಿತಸ್ತಾವದ್ವಿಚೇರುಸ್ತೇ ತತಸ್ತತಃ ॥　　　೨೨**

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಏಕೋನಪಂಚಾಶಃ ಸರ್ಗಃ



ಒಂದು ಮರದ ಬುಡಕ್ಕೆ ಬಂದು ಸೇರಿದರು (೧೯-೨೦). ಅಲ್ಲಿ ಮುಹೂರ್ತ ಕಾಲ ವಿಶ್ರಮಿಸಿಕೊಂಡಮೇಲೆ ಸ್ವಲ್ಪಮಟ್ಟಿಗೆ ಬಳಲಿಕೆ ಕಳೆಯಿತು ದಕ್ಷಿಣ ದಿಕ್ಕೆಲ್ಲವನ್ನೂ ಹುಡುಕಿಯೇ ಬಿಡಬೇಕೆಂದು ನಿರ್ಧರಿಸಿ ಮತ್ತೆ ಮೇಲೆದ್ದರು! ಹೀಗೆ ಹನುಮಂತನೇ ಮೊದಲಾದ ಆ ಕಪಿವೀರರು ವಿಂಧ್ಯಪರ್ವತದಿಂದ ದಕ್ಷಿಣಕ್ಕಿರುವ ಪ್ರದೇಶಗಳಲ್ಲಿ ಸೀತಾದೇವಿಯನ್ನು ಅರಸಿದರು (೨೧-೨೨).

**ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ನಲವತ್ತೊಂಬತ್ತನೆಯ ಸರ್ಗ**



## ಪಂಚಾಶಃ ಸರ್ಗಃ

### ಋಕ್ಷಬಿಲಪ್ರವೇಶಃ

**ಸಹ ತಾರಾಂಗದಾಭ್ಯಾಂ ತು ಸಂಗಮ್ಯ ಹನುಮಾನ್ ಕಪಿಃ ।**
**ವಿಚಿನೋತಿ ಸ್ಮ ವಿಂಧ್ಯಸ್ಯ ಗುಹಾಶ್ಚ ಗಹನಾನಿ ಚ ॥** ೧

**ಸಿಂಹಶಾರ್ದೂಲಜುಷ್ಟಾಶ್ಚ ಶಿಲಾಶ್ಚ ಸರಿತಸ್ತಥಾ ।**
**ವಿಷಮೇಷು ನಗೇಂದ್ರಸ್ಯ ಮಹಾಪ್ರಸ್ರವಣೇಷು ಚ ॥** ೨

**ಆಸೇದುಸ್ತಸ್ಯ ಶೈಲಸ್ಯ ಕೋಟಿಂ ದಕ್ಷಿಣಪಶ್ಚಿಮಾಮ್ ।**
**ತೇಷಾಂ ತತ್ರೈವ ವಸತಾಂ ಸ ಕಾಲೋ ವ್ಯತ್ಯವರ್ತತ ॥** ೩

**ಸ ಹಿ ದೇಶೋ ದುರನ್ವೇಷೋ ಗುಹಾಗಹನವಾನ್ ಮಹಾನ್ ।**
**ತತ್ರ ವಾಯುಸುತಃ ಸರ್ವಂ ವಿಚಿನೋತಿ ಸ್ಮ ಪರ್ವತಮ್ ॥** ೪

## ಸರ್ಗ ೫೦

### ಹನುಮದಾದಿ ವಾನರರು ಋಕ್ಷಬಿಲವನ್ನು ಪ್ರವೇಶಿಸಿ ಸ್ವಯಂಪ್ರಭೆಯನ್ನು ಕಾಣುವುದು.

ಕಪಿಶ್ರೇಷ್ಠನಾದ ಹನುಮಂತನು ತಾರ, ಅಂಗದ ಮುಂತಾದ ವಾನರರೊಡನೆ ಸೇರಿ ವಿಂಧ್ಯಗಿರಿಯ ಗುಹೆಗಳಲ್ಲಿಯೂ ಕಾಡುಗಳಲ್ಲಿಯೂ ಜಾನಕಿಯನ್ನು ಅರಸಿದನು. ಸಿಂಹಶಾರ್ದೂಲಗಳಿಂದ ತುಂಬಿದ ಬಂಡೆಗಳ ಪೊದರುಗಳು, ನದಿಗಳು, ದುರ್ಗಮವಾದ ಜಲಪ್ರಪಾತಗಳು ಮೊದಲಾದ ಸ್ಥಳಗಳಲ್ಲಿ ಅವರು ಹುಡುಕಿದರು (೧-೨). ಕಡೆಗೆ ಅವರೆಲ್ಲರೂ ಆ ಶೈಲದ ನೈಋತ್ಯ ದಿಕ್ಕಿನ ಒಂದು ಶಿಖರದ ಅಗ್ರಭಾಗಕ್ಕೆ ಹೋದರು. ಅಲ್ಲಿರುವಾಗಲೇ ಸುಗ್ರೀವನು ಗೊತ್ತುಮಾಡಿದ್ದ ಕಾಲಾವಧಿಯು ಮುಗಿದುಹೋಯಿತು. ಆ ಪ್ರದೇಶವು ಮಹತ್ತರವಾದ ಗುಹೆಗಳಿಂದಲೂ ಅರಣ್ಯಗಳಿಂದಲೂ ವ್ಯಾಪ್ತವಾಗಿದ್ದುದರಿಂದ ಅಲ್ಲಿ ಹುಡುಕುವುದು ಕಠಿಣವಾಗಿತ್ತು. ಆದರೂ ಹನುಮಂತನು ಆ ಪರ್ವತಪ್ರದೇಶದಲ್ಲಿ ಸುತ್ತಿ ಸುತ್ತಿ ಹುಡುಕಿದನು (೩-೪).

ಪರಸ್ಪರೇಣ ರಹಿತಾ ಅನ್ಯೋನ್ಯಸ್ಯಾವಿದೂರತಃ ।
ಗಜೋ ಗವಾಕ್ಷೋ ಗವಯಃ ಶರಭೋ ಗಂಧಮಾದನಃ ॥ ೫

ಮೈಂದಶ್ಚ ದ್ವಿವಿದಶ್ಚೈವ ಸುಷೇಣೋ ಹನುಮಾನಪಿ ।
ಅಂಗದೋ ಯುವರಾಜಶ್ಚ ತಾರಶ್ಚ ವನಗೋಚರಃ ॥ ೬

ಗಿರಿಜಾಲಾವೃತಾನ್ ದೇಶಾನ್ ಮಾರ್ಗಿತ್ವಾ ದಕ್ಷಿಣಾಂ ದಿಶಮ್ ।
ವಿಚಿನ್ವಂತಸ್ತತಸ್ತತ್ರ ದದೃಶುರ್ವಿವೃತಂ ಬಿಲಮ್ ॥ ೭

ದುರ್ಗಮೃಕ್ಷಬಿಲಂ ನಾಮ ದಾನವೇನಾಭಿರಕ್ಷಿತಮ್ ।
ಕ್ಷುತ್ಪಿಪಾಸಾಪರೀತಾಶ್ಚ ಶ್ರಾಂತಾಶ್ಚ ಸಲಿಲಾರ್ಥಿನಃ ॥ ೮

ಅವಕೀರ್ಣಂ ಲತಾವೃಕ್ಷೈರ್ದದೃಶುಸ್ತೇ ಮಹಾಬಿಲಮ್ ।
ತತಃ ಕ್ರೌಂಚಾಶ್ಚ ಹಂಸಾಶ್ಚ ಸಾರಸಾಶ್ಚಾಪಿ ನಿಷ್ಕ್ರಮನ್ ॥ ೯

ಜಲಾರ್ದ್ರಾಶ್ಚಕ್ರವಾಕಾಶ್ಚ ರಕ್ತಾಂಗಾಃ ಪದ್ಮರೇಣುಭಿಃ ।
ತತಸ್ತದ್ಬಿಲಮಾಸಾದ್ಯ ಸುಗಂಧಿ ದುರತಿಕ್ರಮಮ್ ॥ ೧೦

---

ಅವನಂತೆಯೇ ಗಜ, ಗವಾಕ್ಷ, ಗವಯ, ಶರಭ, ಗಂಧಮಾದನ, ಮೈಂದ, ದ್ವಿವಿದ, ಸುಷೇಣ, ಯುವರಾಜನಾದ ಅಂಗದ, ವನದಲ್ಲಿ ಪರಿಶ್ರಮವನ್ನು ಪಡೆದ ತಾರ—ಮೊದಲಾದವರು ಅನ್ಯೋನ್ಯವಾಗಿ ಸ್ವಲ್ಪದೂರದಲ್ಲಿಯೇ ಇದ್ದು ಒಬ್ಬೊಬ್ಬರೇ ಹೋಗಿ ಹುಡುಕುತ್ತಿದ್ದರು (೫-೬). ಪರ್ವತಶ್ರೇಣಿಗಳಿಂದ ಆವೃತವಾದ ದಕ್ಷಿಣದ ಪ್ರದೇಶಗಳೆಲ್ಲವನ್ನೂ ಹುಡುಕುತ್ತಿರುವಾಗ, ಅವರಿಗೆ ಒಂದು ವಿಶಾಲವಾದ ಗುಹೆಯು ಗೋಚರಿಸಿತು. ಆ ಗುಹೆಯು ಅತ್ಯಂತ ದುರ್ಗಮವಾಗಿತ್ತು. ಅದಕ್ಕೆ ಋಕ್ಷಬಿಲವೆಂದು ಹೆಸರು. ಅದು ಮಯನೆಂಬ ದಾನವನ ರಕ್ಷಣೆಯಲ್ಲಿತ್ತು. ಸುತ್ತಿ ಸುತ್ತಿ ಬಳಲಿ ಹಸಿವು ಬಾಯಾರಿಕೆಗಳಿಂದ ಪರಿತಪಿಸುತ್ತಿದ್ದ ಈ ವಾನರರಿಗೆ ಮೊದಲು ಕುಡಿಯಲು ನೀರು ಬೇಕಾಗಿತ್ತು (೭-೮). ಮರಬಳ್ಳಿಗಳಿಂದ ಆವೃತವಾದ ಆ ಬಿಲವನ್ನು ವಾನರರು ನೋಡಿದಾಗ, ಬಿಲದ್ವಾರದಿಂದ ಕ್ರೌಂಚ, ಹಂಸ, ಸಾರಸಪಕ್ಷಿಗಳು ಹೊರಗೆ ಹಾರಿಬರುತ್ತಿದ್ದವು. ನೀರಿನಲ್ಲಿ ನೆನೆದ ಚಕ್ರವಾಕಗಳು ಕಮಲರೇಣುಗಳಿಂದ ಕೆಂಪಗೆ ಕಾಣುತ್ತ ಹಾರಿಬರುತ್ತಿದ್ದವು. ಬಿಲದ ಬಳಿ ಸುಗಂಧವು

ವಿಸ್ಮಯವ್ಯಗ್ರಮನಸೋ ಬಭೂವುರ್ವಾನರರ್ಷಭಾಃ ।
ಸಂಜಾತಪರಿಶಂಕಾಸ್ತೇ ತದ್ಬಿಲಂ ಪ್ಲವಗೋತ್ತಮಾಃ ॥ ೧೦

ಅಭ್ಯಪದ್ಯಂತ ಸಂಹೃಷ್ಟಾಸ್ತೇಜೋವಂತೋ ಮಹಾಬಲಾಃ ।
ನಾನಾಸತ್ತ್ವಸಮಾಕೀರ್ಣಂ ದೈತ್ಯೇಂದ್ರನಿಲಯೋಪಮಮ್ ॥ ೧೨

ದುರ್ದರ್ಶಮತಿಘೋರಂ ಚ ದುರ್ವಿಗಾಹಂ ಚ ಸರ್ವಶಃ ।
ತತಃ ಪರ್ವತಕೂಟಾಭೋ ಹನುಮಾನ್ ಪವನಾತ್ಮಜಃ ॥ ೧೩

ಅಬ್ರವೀದ್ವಾನರಾನ್ ಸರ್ವಾನ್ ಕಾಂತಾರವನಕೋವಿದಃ ।
ಗಿರಿಜಾಲಾವೃತಾನ್ ದೇಶಾನ್ ಮಾರ್ಗಿತ್ವಾ ದಕ್ಷಿಣಾಂ ದಿಶಮ್ ॥ ೧೪

ವಯಂ ಸರ್ವೇ ಪರಿಶ್ರಾಂತಾ ನ ಚ ಪಶ್ಯಾಮ ಮೈಥಿಲೀಮ್ ।
ಅಸ್ಮಾಚ್ಚಾಪಿ ಬಿಲಾದ್ಧಂಸಾಃ ಕ್ರೌಂಚಾಶ್ಚ ಸಹ ಸಾರಸೈಃ ॥ ೧೫

ಜಲಾರ್ದ್ರಾಶ್ಚಕ್ರವಾಕಾಶ್ಚ ನಿಷ್ಪತಂತಿ ಸ್ಮ ಸರ್ವತಃ ।
ನೂನಂ ಸಲಿಲವಾನತ್ರ ಕೂಪೋ ವಾ ಯದಿ ವಾ ಹ್ರದಃ ॥ ೧೬

---

ಹರಡಿತ್ತು (೯-೧೦). ಅದನ್ನು ಕಂಡು ಕಪಿನಾಯಕರು ಆಶ್ಚರ್ಯಚಕಿತರಾದರು. ಅಲ್ಲಿ ನೀರಿರಬಹುದೆಂದು ಅವರಿಗೆ ಶಂಕೆಯುಂಟಾಯಿತು. ತೇಜಸ್ವಿಗಳೂ ಬಲಶಾಲಿಗಳೂ ಆದ ಆ ಕಪಿನಾಯಕರು ಸಂತೋಷದಿಂದ ಬಿಲದ ಬಳಿಗೆ ಹೋದರು. ವಿವಿಧ ಜಲಜಂತುಗಳಿಂದ ತುಂಬಿ, ದಾನವೇಂದ್ರನಾದ ಬಲಿಯ ವಾಸಸ್ಥಾನವಾದ ಪಾತಾಳದಂತಿದ್ದ ಆ ಮಹಾಬಿಲವು ನೋಡಲು ಅತ್ಯಂತಘೋರವಾಗಿತ್ತು (೧೧-೧೨). ಅದರಲ್ಲಿಳಿಯುವುದು ಅಶಕ್ಯವಾಗಿತ್ತು. ಆಗ ಇನ್ನೊಂದು ಪರ್ವತಶೃಂಗವೋ ಎಂಬಂತೆ ನಿಂತಿದ್ದ ಹನುಮಂತನು ಬಿಲವನ್ನು ಗಮನಿಸಿ ನೋಡಿದನು. ದುರ್ಗಮಾರಣ್ಯಸಂಚಾರದಲ್ಲಿ ನಿಪುಣನಾದ ಆ ವಾಯುತನಯನು ವಾನರರನ್ನು ಕುರಿತು "ಗೆಳೆಯರೆ, ಪರ್ವತಪಂಕ್ತಿಗಳಿಂದ ಪರಿವೃತವಾದ ದಕ್ಷಿಣದಿಕ್ಕೆಲ್ಲವನ್ನೂ ನಾವು ಶೋಧಿಸಿದೆವು (೧೩-೧೪). ನಾವೆಲ್ಲರೂ ಬಹಳ ಬಳಲಿದ್ದೇವೆ. ಮೈಥಿಲಿಯನ್ನು ಕಾಣದಾದೆವು. ಈ ಬಿಲದ್ವಾರದಿಂದಲಾದರೋ ಹಂಸಗಳೂ ಕ್ರೌಂಚಗಳೂ ಸಾರಸಗಳೂ ಹೊರಗೆ ಬರುತ್ತಿವೆ. ನೀರಿನಿಂದ ಒದ್ದೆಯಾದ ಚಕ್ರವಾಕಗಳು ಹಾರಿಬರುತ್ತಿವೆ. ಈ ಬಿಲದೊಳಗೆ ನೀರಿರುವ ಕೊಳವೋ

**ತಥಾ ಚೇಮೇ ಬಿಲದ್ವಾರೇ ಸ್ನಿಗ್ಧಾಸ್ತಿಷ್ಠಂತಿ ಪಾದಪಾಃ ।**
**ಇತ್ಯುಕ್ತಾಸ್ತದ್ಬಿಲಂ ಸರ್ವೇ ವಿವಿಶುಸ್ತಿಮಿರಾವೃತಮ್ ॥ ೧೭**

**ಅಚಂದ್ರಸೂರ್ಯಂ ಹರಯೋ ದದೃಶೂ ರೋಮಹರ್ಷಣಮ್ ।**
**ನಿಶಾಮ್ಯ ತಸ್ಮಾತ್ ಸಿಂಹಾಂಶ್ಚ ತಾಂಸ್ತಾಂಶ್ಚ ಮೃಗಪಕ್ಷಿಣಃ ॥ ೧೮**

**ಪ್ರವಿಷ್ಟಾ ಹರಿಶಾರ್ದೂಲಾ ಬಿಲಂ ತಿಮಿರಸಂವೃತಮ್ ।**
**ನ ತೇಷಾಂ ಸಜ್ಜತೇ ಚಕ್ಷುರ್ನ ತೇಜೋ ನ ಪರಾಕ್ರಮಃ ॥ ೧೯**

**ವಾಯೋರಿವ ಗತಿಸ್ತೇಷಾಂ ದೃಷ್ಟಿಸ್ತಮಸಿ ವರ್ತತೇ ।**
**ತೇ ಪ್ರವಿಷ್ಟಾಸ್ತು ವೇಗೇನ ತದ್ಬಿಲಂ ಕಪಿಕುಂಜರಾಃ ॥ ೨೦**

**ಪ್ರಕಾಶಮಭಿರಾಮಂ ಚ ದದೃಶುರ್ದೇಶಮುತ್ತಮಮ್ ।**
**ತತಸ್ತಸ್ಮಿನ್ ಬಿಲೇ ದುರ್ಗೇ ನಾನಾಪಾದಪಸಂಕುಲೇ ॥ ೨೧**

---

ಮಡುವೋ ಇದ್ದೇ ಇರಬೇಕು (೧೫-೧೭). ಅಲ್ಲದೆ ಬಿಲದ್ವಾರದಲ್ಲಿ ಹಚ್ಚನೆಯ ಮರಗಳು ಬೆಳೆದುನಿಂತಿವೆ!" ಎಂದು ಹೇಳಿದನು. ಅವನ ಮಾತಿನಿಂದ ಚೋದಿತರಾಗಿ ಆ ವಾನರನಾಯಕರೆಲ್ಲರೂ ಕಗ್ಗತ್ತಲೆಯು ಕವಿದಿದ್ದ ಆ ಬಿಲ ವನ್ನು ಪ್ರವೇಶಿಸಿದರು. ಅಲ್ಲಿ ಚಂದ್ರರಶ್ಮಿಯಾಗಲಿ ಸೂರ್ಯಕಿರಣವಾಗಲಿ ಪ್ರವೇಶಿಸದಷ್ಟು ಗಾಢಾಂಧಕಾರವು ಕವಿದಿತ್ತು. ಮೈನವಿರೇಳುವಂತೆ ಅದು ಭೀಕರವಾಗಿತ್ತು. ಗುಹಾದ್ವಾರದಿಂದ ಹೊರಟುಬರುವ ಸಿಂಹಗಳನ್ನೂ ವಿವಿಧ ಮೃಗಪಕ್ಷಿಗಳನ್ನೂ ನೋಡುತ್ತ, ಆ ಕಪಿವೀರರು ಕತ್ತಲುಕವಿದಿದ್ದ ಬಿಲದಲ್ಲಿ ನುಗ್ಗಿದರು (೧೭-೧೮). ಆ ಬಿಲದಲ್ಲಿ ವಾನರರಿಗೆ ಅವರ ಕಣ್ಣಾಗಲಿ ವೀರ್ಯವಾಗಲಿ ಪರಾಕ್ರಮವಾಗಲಿ ಯಾವ ಉಪಯೋಗಕ್ಕೂ ಬರಲಿಲ್ಲ! ಆದರೂ ಆ ಧೀರರ ನಡಿಗೆಯು ವಾಯುವಿನಂತೆ ತಡೆಯಿಲ್ಲದೆ ಮುಂದೆ ಸಾಗಿತು! ನೋಟವು ಕತ್ತಲಲ್ಲಿ ಐಕ್ಯವಾಗಿತ್ತು! ಆನೆಗಳಂತೆ ವೇಗವಾಗಿ ನುಗ್ಗಿಹೋಗುತ್ತಿದ್ದ ಆ ಕಪಿವೀರರಿಗೆ ಮುಂದೆ ಪ್ರಕಾಶಮಾನವೂ ರಮಣೀಯವೂ ಆದ ಒಂದು ಸ್ಥಳವು ಕಾಣಿಸಿತು (೧೯-೨೦). ಅದು ಕಾಣಿಸುವವರೆಗೂ ಆ ವಾನರರು ವಿವಿಧವೃಕ್ಷಸಂಕುಲವಾಗಿ ಕತ್ತಲೆಯಿಂದ ದುರ್ಗಮವಾಗಿದ್ದ ಆ ಪ್ರದೇಶದಲ್ಲಿ, ಒಬ್ಬರನ್ನೊಬ್ಬರು ಬಿಗಿಯಾಗಿ ತಬ್ಬಿ

ಅನ್ಯೋನ್ಯಂ ಸಂಪರಿಷ್ವಜ್ಯ ಜಗ್ಮುರ್ಯೋಜನಮಂತರಮ್ ।
ತೇ ನಷ್ಟಸಂಜ್ಞಾಸ್ತೃಷಿತಾಃ ಸಂಭ್ರಾಂತಾಃ ಸಲಿಲಾರ್ಥಿನಃ ॥ ೨೨

ಪರಿಪೇತುರ್ಬಿಲೇ ತಸ್ಮಿನ್ ಕಂಚಿತ್ಕಾಲಮತಂದ್ರಿತಾಃ ।
ತೇ ಕೃಶಾ ದೀನವದನಾಃ ಪರಿಶ್ರಾಂತಾಃ ಪ್ಲವಂಗಮಾಃ ॥ ೨೩

ಆಲೋಕಂ ದದೃಶುರ್ವೀರಾ ನಿರಾಶಾ ಜೀವಿತೇ ತದಾ ।
ತತಸ್ತಂ ದೇಶಮಾಗಮ್ಯ ಸೌಮ್ಯಂ ವಿತಿಮಿರಂ ವನಮ್ ॥ ೨೪

ದದೃಶುಃ ಕಾಂಚನಾನ್ ವೃಕ್ಷಾನ್ ದೀಪ್ತವೈಶ್ವಾನರಪ್ರಭಾನ್ ।
ಸಾಲಾಂಸ್ತಾಲಾಂಶ್ಚ ಪುಂನಾಗಾನ್ ಕಕುಭಾನ್ ವಂಜುಲಾನ್ ಧವಾನ್

ಚಂಪಕಾನ್ನಾಗವೃಕ್ಷಾಂಶ್ಚ ಕರ್ಣಿಕಾರಾಂಶ್ಚ ಪುಷ್ಪಿತಾನ್ ।
ಸ್ತಬಕೈಃ ಕಾಂಚನೈಶ್ಚಿತ್ರೈ ರಕ್ತೈಃ ಕಿಸಲಯೈಸ್ತಥಾ ॥ ೨೬

ಆಪೀಡೈಶ್ಚ ಲತಾಭಿಶ್ಚ ಹೇಮಾಭರಣಭೂಷಿತಾನ್ ।
ತರುಣಾದಿತ್ಯಸಂಕಾಶಾನ್ ವೈಡೂರ್ಯಮಯವೇದಿಕಾನ್ ॥ ೨೭

---

ಕೊಂಡು ಒಂದು ಯೋಜನದೂರ ಪ್ರಯಾಣಮಾಡಿದ್ದರು! ಅವರು ಬಾಯಾರಿಕೆಯಿಂದ ಕಂಗೆಟ್ಟು ನೀರಿಗಾಗಿ ಹಾತೊರೆಯುತ್ತ ಪ್ರಜ್ಞೆದಪ್ಪಿದಂತಾಗಿದ್ದರು (೨೧–೨೨). ಆಯಾಸದಿಂದ ದೀನರಾಗಿ ಕೃಶರಾಗಿದ್ದರು. ಆದರೂ ಹಿಂಜರಿಯದೆ ಕೆಲವುಕಾಲ ಮುಂದಕ್ಕೆ ಸಾಗಲು, ಆ ವೀರರಿಗೆ ಪ್ರಕಾಶಮಾನವಾದ ಆ ಪ್ರದೇಶವು ಗೋಚರಿಸಿತು. ಅಷ್ಟರಲ್ಲಿ ಅವರು ಜೀವಿತದಲ್ಲಿ ನಿರಾಶರಾಗಿಬಿಟ್ಟಿದ್ದರು. ಅವರು ಕಂಡ ಪ್ರದೇಶವು ಸೌಮ್ಯವಾಗಿತ್ತು. ಕತ್ತಲೆ ಇರಲಿಲ್ಲ (೨೩–೨೪). ಅಲ್ಲಿದ್ದ ವನದಲ್ಲಿ ಅಗ್ನಿಯಂತೆ ಪ್ರಕಾಶಿಸುತ್ತಿದ್ದ ಸುವರ್ಣಮಯವೃಕ್ಷಗಳನ್ನು ಅವರು ಕಂಡರು. ಸಾಲ, ತಾಲ, ಪುನ್ನಾಗ, ಮತ್ತಿ, ವಂಜುಲ, ಧವ, ಸಂಪಗೆ, ನಾಗವೃಕ್ಷ, ಬೆಟ್ಟದಾವರೆ ಮೊದಲಾದ ಗಿಡಗಳು ಹೂಬಿಟ್ಟಿರುವುದನ್ನು ನೋಡಿದರು. ಸುವರ್ಣಮಯವಾದ ನಾನಾಬಗೆಯ ಹೂಗೊಂಚಲುಗಳಿಂದಲೂ ಕೆಂದಳಿರುಗಳಿಂದಲೂ ವೃಕ್ಷಗಳು ಭೂಷಿತವಾಗಿದ್ದವು (೨೫–೨೬). ಶಿಖರಗಳಂತಿರುವ ಅಗ್ರಭಾಗಗಳಿಂದಲೂ ಬಳ್ಳಿಗಳಿಂದಲೂ ಯುಕ್ತವಾದ ಆ ತರುಗಳು ಚಿನ್ನದ

ವಿಭ್ರಾಜಮಾನಾನ್ ವಪುಷಾ ಪಾದಪಾಂಶ್ಚ ಹಿರಣ್ಮಯಾನ್ ।
ನೀಲವೈಡೂರ್ಯವರ್ಣಾಶ್ಚ ಪದ್ಮಿನೀಃ ಪತಗಾವೃತಾಃ ॥ ೨೮

ಮಹದ್ಭಿಃ ಕಾಂಚನೈಃ ಪದ್ಮೈರ್ವೃತಾ ಬಾಲಾರ್ಕಸಂನಿಭೈಃ ।
ಜಾತರೂಪಮಯೈರ್ಮತ್ಸ್ಯೈರ್ಮಹದ್ಭಿಶ್ಚ ಸಕಚ್ಛಪೈಃ ॥ ೨೯

ನಲಿನೀಸ್ತತ್ರ ದದೃಶುಃ ಪ್ರಸನ್ನಸಲಿಲಾವೃತಾಃ ।
ಕಾಂಚನಾನಿ ವಿಮಾನಾನಿ ರಾಜತಾನಿ ತಥೈವ ಚ ॥ ೩೦

ತಪನೀಯಗವಾಕ್ಷಾಣಿ ಮುಕ್ತಾಜಾಲಾವೃತಾನಿ ಚ ।
ಹೈಮರಾಜತಭೌಮಾನಿ ವೈಡೂರ್ಯಮಣಿಮಂತಿ ಚ ॥ ೩೧

ದದೃಶುಸ್ತತ್ರ ಹರಯೋ ಗೃಹಮುಖ್ಯಾನಿ ಸರ್ವಶಃ ।
ಪುಷ್ಪಿತಾನ್ ಫಲಿನೋ ವೃಕ್ಷಾನ್ ಪ್ರವಾಲಮಣಿಸಂನಿಭಾನ್ ॥ ೩೨

ಕಾಂಚನಭ್ರಮರಾಂಶ್ಚೈವ ಮಧೂನಿ ಚ ಸಮಂತತಃ ।
ಮಣಿಕಾಂಚನಚಿತ್ರಾಣಿ ಶಯನಾನ್ಯಾಸನಾನಿ ಚ ॥ ೩೩

---

ಒಡವೆಗಳನ್ನು ಧರಿಸಿದಂತೆ ಕಾಣುತ್ತಿದ್ದವು. ಬಾಲಸೂರ್ಯನಂತೆ ಬೆಳಗುತ್ತಿದ್ದವು. ಸುವರ್ಣಮಯವೃಕ್ಷಗಳು ಸುಂದರವಾಗಿ ಶೋಭಿಸುತ್ತಿದ್ದವು. ಆ ವಾನರರು ಜಲಪಕ್ಷಿಗಳಿಂದ ತುಂಬಿದ ನೀಲವೈಡೂರ್ಯವರ್ಣದ ಪದ್ಮಸರೋವರಗಳನ್ನು ಕಂಡರು (೨೭-೨೮) ಬಾಲಾದಿತ್ಯನಂತೆ ಬೆಳಗುವ ದೊಡ್ಡ ದೊಡ್ಡ ಚಿನ್ನದಾವರೆಗಳು ಅಲ್ಲಿ ವಿರಾಜಿಸುತ್ತಿದ್ದವು. ಆ ಕೊಳಗಳಲ್ಲಿ ಸುವರ್ಣವರ್ಣದ ಮೀನುಗಳೂ ಬೃಹದಾಕಾರದ ಆಮೆಗಳೂ ವಿಹರಿಸುತ್ತಿದ್ದವು. ಹನುಮಂತನೇ ಮೊದಲಾದ ಕಪಿವೀರರು ಆ ಬಿಲದಲ್ಲಿ ತಿಳಿನೀರಿನಿಂದ ತುಂಬಿದ ಕೊಳಗಳನ್ನೂ ಬೆಳ್ಳಿಬಂಗಾರಗಳಿಂದ ನಿರ್ಮಿತವಾದ ಉನ್ನತ ಗೃಹಗಳನ್ನೂ ನೋಡಿದರು (೨೯-೩೦). ಆ ಗೃಹಗಳಿಗೆ ಮುತ್ತಿನಗೊಂಚಲುಗಳಿಂದ ಅಲಂಕೃತವಾದ ಚಿನ್ನದ ಕಿಟಕಿಗಳಿದ್ದವು. ಚಿನ್ನಬೆಳ್ಳಿಗಳಿಂದ ರಚಿತವಾದ ನೆಲಗಟ್ಟುಗಳಿದ್ದವು. ಆ ಗೃಹಗಳು ವೈಡೂರ್ಯಮಣಿಗಳಿಂದ ಭೂಷಿಸಲ್ಪಟ್ಟಿದ್ದವು (೩೧). ಆ ಬಗೆಯ ಭವನಗಳು ಎಲ್ಲೆಡೆಯೂ ನಿರ್ಮಿತವಾಗಿರುವುದನ್ನು ವಾನರರು ಕಂಡರು. ಹವಳದ ಮಣಿಗಳಂತೆ ಹೊಳೆಯುವ ಹೂಹಣ್ಣುಗಳಿಂದ ಶೋಭಿಸುವ ಮರಗಳನ್ನು ವೀಕ್ಷಿಸಿದರು. ಆ ಮರಗಳ ಬಳಿಯಲ್ಲಿ ಮಕರಂದಕ್ಕಾಗಿ ಸುತ್ತಲೂ ಚಿನ್ನದ ಬಣ್ಣದ ದುಂಬಿಗಳು

ಮಹಾರ್ಹಾಣಿ ಚ ಯಾನಾನಿ ದದೃಶುಸ್ತೇ ಸಮಂತತಃ ।
ಹೈಮರಾಜತಕಾಂಸ್ಯಾನಾಂ ಭಾಜನಾನಾಂ ಚ ಸಂಚಯಾನ್ ॥ ೩೪

ಅಗರೂಣಾಂ ಚ ದಿವ್ಯಾನಾಂ ಚಂದನಾನಾಂ ಚ ಸಂಚಯಾನ್ ।
ಶುಚೀನ್ಯಭ್ಯವಹಾರ್ಯಾಣಿ ಮೂಲಾನಿ ಚ ಫಲಾನಿ ಚ ॥ ೩೫

ಮಹಾರ್ಹಾಣಿ ಚ ಪಾನಾನಿ ಮಧೂನಿ ರಸವಂತಿ ಚ ।
ದಿವ್ಯಾನಾಮಂಬರಾಣಾಂ ಚ ಮಹಾರ್ಹಾಣಾಂ ಚ ಸಂಚಯಾನ್ ॥

ಕಂಬಲಾನಾಂ ಚ ಚಿತ್ರಾಣಾಮಜಿನಾನಾಂ ಚ ಸಂಚಯಾನ್ ।
ತತ್ರ ತತ್ರ ಚ ವಿನ್ಯಸ್ತಾನ್ ದೀಪ್ತಾನ್ ವೈಶ್ವಾನರಪ್ರಭಾನ್ ॥ ೩೭

ದದೃಶುರ್ವಾನರಾಃ ಶುಭ್ರಾನ್ ಜಾತರೂಪಸ್ಯ ಸಂಚಯಾನ್ ।
ತತ್ರ ತತ್ರ ವಿಚಿನ್ವಂತೋ ಬಿಲೇ ತಸ್ಮಿನ್ ಮಹಾಬಲಾಃ ॥ ೩೮

ದದೃಶುರ್ವಾನರಾಃ ಶೂರಾಃ ಸ್ತ್ರಿಯಂ ಕಾಂಚಿದದೂರತಃ ।
ತಾಂ ದೃಷ್ಟ್ವಾ ಭೃಶಸಂತ್ರಸ್ತಾಶ್ಚೀರಕೃಷ್ಣಾಜಿನಾಂಬರಾಮ್ ॥ ೩೯

---

ಹಾರಾಡುತ್ತಿದ್ದವು ! ಅಲ್ಲದೆ ರತ್ನಗಳಿಂದಲೂ ಬಂಗಾರದಿಂದಲೂ ಚಿತ್ರವರ್ಣವಾಗಿ ಶೋಭಿಸುವ ಮಂಚಗಳನ್ನೂ ಪೀಠಗಳನ್ನೂ ಆ ಕಪಿನಾಯಕರು ಕಂಡರು (೩೨-೩೩). ಬಹಳ ಬೆಲೆಬಾಳುವ ವಾಹನಗಳನ್ನು ಸುತ್ತಲೂ ನೋಡಿದರು. ಅಲ್ಲದೆ ಚಿನ್ನ, ಬೆಳ್ಳಿ, ಕಂಚುಗಳಿಂದ ರಚಿತವಾದ ವಿವಿಧ ಪಾತ್ರೆಗಳ ರಾಶಿಯೂ ಅವರಿಗೆ ಕಾಣಿಸಿತು. ದಿವ್ಯವಾದ ಅಗರು, ಚಂದನ ಮುಂತಾದ ಸುಗಂಧದ್ರವ್ಯಗಳೂ ಶುಚಿಯಾದ ಖಾದ್ಯವಸ್ತುಗಳೂ ಫಲ ಮೂಲಗಳೂ ಕಾಣಿಸಿದವು (೩೪-೩೫). ಮತ್ತು ಶ್ರೇಷ್ಠವಾದ ಬಗೆಬಗೆಯ ಪೇಯಗಳೂ ರಸವತ್ತಾದ ಜೇನೂ ಬೆಲೆಬಾಳುವ ದಿವ್ಯವಸ್ತ್ರಗಳ ರಾಶಿಗಳೂ ಆ ವಾನರರಿಗೆ ಗೋಚರಿಸಿದವು. ಚಿತ್ರವರ್ಣದ ಉಣ್ಣೆಯ ವಸ್ತ್ರಗಳೂ ಚರ್ಮಗಳೂ ರಾಶಿರಾಶಿಯಾಗಿದ್ದವು. ಅಲ್ಲದೆ ಬೆಳಗುವ ಬೆಂಕಿಯ ಜ್ವಾಲೆಯೋ ಎಂಬಂತೆ ಅಲ್ಲಲ್ಲಿ ಶುದ್ಧವಾದ ಚಿನ್ನದ ಗಟ್ಟಿಗಳನ್ನು ಪೇರಿಸಿರುವುದು ಕಂಗೊಳಿಸುತ್ತಿತ್ತು ! ಅವೆಲ್ಲವನ್ನೂ ಆ ವೀರರು ಆಲೋಕಿಸಿದರು (೩೬-೩೮). ಆ ವಾನರರು ಹಾಗೆಯೇ ಹುಡುಕುತ್ತ ಬರುತ್ತಿರಲು ಸಮೀಪದಲ್ಲಿ ಒಬ್ಬ ಸ್ತ್ರೀವ್ಯಕ್ತಿಯನ್ನು ನೋಡಿದರು. ಅವಳು ನಾರುಬಟ್ಟೆಯನ್ನೂ ಕೃಷ್ಣಾಜಿನ

ತಾಪಸೀಂ ನಿಯತಾಹಾರಾಂ ಜ್ವಲಂತೀಮಿವ ತೇಜಸಾ ।
ವಿಸ್ಮಿತಾ ಹರಯಸ್ತತ್ರ ವ್ಯವಾತಿಷ್ಠಂತ ಸರ್ವಶಃ ॥ ೪೦
ಪಪ್ರಚ್ಛ ಹನುಮಾಂಸ್ತತ್ರ ಕಾಸಿ ತ್ವಂ ಕಸ್ಯ ವಾ ಬಿಲಮ್ ॥

ತತೋ ಹನೂಮಾನ್ ಗಿರಿಸಂನಿಕಾಶಃ
ಕೃತಾಂಜಲಿಸ್ತಾಮಭಿವಾದ್ಯ ವೃದ್ಧಾಮ್ ।
ಪಪ್ರಚ್ಛ ಕಾ ತ್ವಂ ಭವನಂ ಬಿಲಂ ಚ
ರತ್ನಾನಿ ಚೇಮಾನಿ ವದಸ್ವ ಕಸ್ಯ ॥ ೪೧

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಪಂಚಾಶಃ ಸರ್ಗಃ



ವನ್ನೂ ಧರಿಸಿ ನಿಯತಾಹಾರಳಾಗಿ ತಪಸ್ಸನ್ನುಮಾಡುತ್ತಿದ್ದಳು. ತೇಜೋವಿಶೇಷದಿಂದ ಜ್ವಲಿಸುವಳೋ ಎಂಬಂತಿದ್ದ ಆ ತಪಸ್ವಿನಿಯನ್ನು ಕಂಡೊಡನೆ ಈ ಕಪಿವೀರರು ಹೆದರಿ ಗಪ್ಪನೆ ಸ್ತಬ್ಧರಾಗಿ ದೂರದಲ್ಲಿ ನಿಂತರು! ಆಗ ಹನುಮಂತನು ಮುಂದೆ ಬಂದು "ಎಲೌ ದೇವಿ, ನೀನು ಯಾರು? ಈ ಬಿಲವು ಯಾರದು?" ಎಂದು ಕೇಳಿದನು (೩೯-೪೦). ಪರ್ವತದಂತೆ ಬೃಹದಾಕಾರನಾಗಿದ್ದ ಹನುಮಂತನು ವೃದ್ಧೆಯಾದ ಆ ಸ್ತ್ರೀಯನ್ನು ವಂದಿಸಿ ಕೈಮುಗಿದುಕೊಂಡು "ದೇವಿ, ನೀನು ಯಾರು? ಈ ಭವನವೂ ಬಿಲವೂ ಯಾರದು? ಈ ಉತ್ತಮವಸ್ತುಗಳು ಯಾರಿಗೆ ಸೇರಿದವು?" ಎಂದು ಪ್ರಶ್ನೆಮಾಡಿದನು (೪೧).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಐವತ್ತನೆಯ ಸರ್ಗ



## ಏಕಪಂಚಾಶಃ ಸರ್ಗಃ

### ಸ್ವಯಂಪ್ರಭಾತಿಥ್ಯಮ್

ಇತ್ಯುಕ್ತ್ವಾ ಹನುಮಾಂಸ್ತತ್ರ ಪುನಃ ಕೃಷ್ಣಾಜಿನಾಂಬರಾಮ್ ।
ಅಬ್ರವೀತ್ತಾಂ ಮಹಾಭಾಗಾಂ ತಾಪಸೀಂ ಧರ್ಮಚಾರಿಣೀಮ್ ॥ ೧

ಇದಂ ಪ್ರವಿಷ್ಟಾಃ ಸಹಸಾ ಬಿಲಂ ತಿಮಿರಸಂವೃತಮ್ ।
ಕ್ಷುತ್ಪಿಪಾಸಾಪರಿಶ್ರಾಂತಾಃ ಪರಿಖಿನ್ನಾಶ್ಚ ಸರ್ವಶಃ ॥ ೨

ಮಹದ್ಧರಣ್ಯಾ ವಿವರಂ ಪ್ರವಿಷ್ಟಾಃ ಸ್ಮ ಪಿಪಾಸಿತಾಃ ।
ಇಮಾಂಸ್ತ್ವೇವಂವಿಧಾನ್ ಭಾವಾನ್ ವಿವಿಧಾನದ್ಭುತೋಪಮಾನ್ ॥

ದೃಷ್ಟ್ವಾ ವಯಂ ಪ್ರವ್ಯಥಿತಾಃ ಸಂಭ್ರಾಂತಾ ನಷ್ಟಚೇತಸಃ ।
ಕಸ್ಯೈವ ಕಾಂಚನಾ ವೃಕ್ಷಾಸ್ತರುಣಾದಿತ್ಯಸಂನಿಭಾಃ ॥ ೪

ಶುಚೀನ್ಯಭ್ಯವಹಾರ್ಯಾಣಿ ಮೂಲಾನಿ ಚ ಫಲಾನಿ ಚ ।
ಕಾಂಚನಾನಿ ವಿಮಾನಾನಿ ರಾಜತಾನಿ ಗೃಹಾಣಿ ಚ ॥ ೫

## ಸರ್ಗ ೫೧

### ಸ್ವಯಂಪ್ರಭೆಯು ವಾನರರಿಗೆ ಋಕ್ಷಬಿಲದ ವೃತ್ತಾಂತವನ್ನು ಹೇಳಿ ಅವರನ್ನು ಸತ್ಕರಿಸುವುದು.

ಹೀಗೆ ಹನುಮಂತನು ಕೃಷ್ಣಾಜಿನಧಾರಿಣಿಯೂ ಧರ್ಮಚಾರಿಣಿಯೂ ಆದ ಆ ತಪಸ್ವಿನಿಯನ್ನು ಕುರಿತು ಪ್ರಶ್ನಿಸಿ ಮತ್ತೆ ಹೀಗೆಂದನು: "ಮಹಾಭಾಗೆ, ಕತ್ತಲೆ ಸುತ್ತಿದ್ದ ಈ ಬಿಲದೊಳಗೆ ನಾವು ವಿಚಾರವಿಲ್ಲದೆ ಪ್ರವೇಶಿಸಿಬಿಟ್ಟೆವು. ನಾವು ಹಸಿವುಬಾಯಾರಿಕೆಗಳಿಂದ ಬಳಲಿ ಮಾರ್ಗಾಯಾಸದಿಂದ ನೊಂದಿದ್ದೆವು (೧-೨). ಬಾಯಾರಿಕೆಯಿಂದ ತೊಳಲುತ್ತ ಮಹತ್ತರವಾದ ಈ ಭೂವಿವರವನ್ನು ಹೊಕ್ಕೆವು. ಆದರೆ ಇಲ್ಲಿ ಹೀಗಿರುವ ಅದ್ಭುತವಾದ ವಿವಿಧವಸ್ತುಗಳನ್ನು ಕಂಡು, (ಏನು ತಪ್ಪು ಮಾಡಿದೆವೋ ಎಂದು) ನಮಗೆ ವ್ಯಥೆಯಾಗಿದೆ. ಭೀತರಾಗಿದ್ದೇವೆ; ದಿಗ್ಭ್ರಾಂತರಾಗಿದ್ದೇವೆ. ದೇವಿ, ಬಾಲಾರ್ಕನಂತೆ ಬೆಳಗುವ ಈ ಸುವರ್ಣವೃಕ್ಷಗಳು ಯಾರವು? (೩-೪) ಶುಚಿಯಾದ ಈ ಆಹಾರಪದಾರ್ಥಗಳೂ ಫಲಮೂಲಗಳೂ ಕಾಂಚನಮಯಸೌಧಗಳೂ ರಜತಮಯ

**ತಪನೀಯಗವಾಕ್ಷಾಣಿ ಮಣಿಜಾಲಾವೃತಾನಿ ಚ ।**
**ಪುಷ್ಪಿತಾಃ ಫಲವಂತಶ್ಚ ಪುಣ್ಯಾಃ ಸುರಭಿಗಂಧಿನಃ ॥ ೬**

**ಇಮೇ ಜಾಂಬೂನದಮಯಾಃ ಪಾದಪಾಃ ಕಸ್ಯ ತೇಜಸಾ ।**
**ಕಾಂಚನಾನಿ ಚ ಪದ್ಮಾನಿ ಜಾತಾನಿ ವಿಮಲೇ ಜಲೇ ॥ ೭**

**ಕಥಂ ಮತ್ಸ್ಯಾಶ್ಚ ಸೌವರ್ಣಾಶ್ಚರಂತಿ ಸಹ ಕಚ್ಛಪೈಃ ।**
**ಆತ್ಮಾನಮನುಭಾವಂ ಚ ಕಸ್ಯ ಚೈತತ್ತಪೋಬಲಮ್ ॥ ೮**

**ಅಜಾನತಾಂ ನಃ ಸರ್ವೇಷಾಂ ಸರ್ವಮಾಖ್ಯಾತುಮರ್ಹಸಿ ।**
**ಏವಮುಕ್ತಾ ಹನುಮತಾ ತಾಪಸೀ ಧರ್ಮಚಾರಿಣೀ ॥ ೯**

**ಪ್ರತ್ಯುವಾಚ ಹನೂಮಂತಂ ಸರ್ವಭೂತಹಿತೇ ರತಾ ।**
**ಮಯೋ ನಾಮ ಮಹಾತೇಜಾ ಮಾಯಾವೀ ದಾನವರ್ಷಭಃ ॥ ೧೦**

**ತೇನೇದಂ ನಿರ್ಮಿತಂ ಸರ್ವಂ ಮಾಯಯಾ ಕಾಂಚನಂ ವನಮ್ ।**
**ಪುರಾ ದಾನವಮುಖ್ಯಾನಾಂ ವಿಶ್ವಕರ್ಮಾ ಬಭೂವ ಹ ॥ ೧೧**

---

ಭವನಗಳೂ ಯಾರಿಗೆ ಸೇರಿದವು? ಮಣಿಜಾಲಮಂಡಿತವಾದ ಈ ಚಿನ್ನದ ಗವಾಕ್ಷಗಳೂ ಹೂಹಣ್ಣುಗಳಿಂದ ಬಳುಕುತ್ತ ಪರಿಮಳವನ್ನು ಬೀರುತ್ತ ಬಂಗಾರದಂತೆ ಬೆಳಗುವ ಈ ಪುಣ್ಯವೃಕ್ಷಗಳೂ ಯಾರ ತೇಜಸ್ಸಿನಿಂದ ನಿರ್ಮಿತವಾಗಿವೆ? ತಿಳಿನೀರಿನಲ್ಲಿ ಕಾಂಚನಕಮಲಗಳು ಹೇಗೆ ಹುಟ್ಟಿದವು? (೫-೭). ಚಿನ್ನದ ಮೀನುಗಳು ಚಿನ್ನದ ಆಮೆಗಳೊಡನೆ ಸಂಚರಿಸುತ್ತಿರುವ ಬಗೆಯಾದರೂ ಹೇಗೆ? ಹೇ ಧರ್ಮಚಾರಿಣಿ, ನೀನು ಯಾರು? ನಿನ್ನ ಮಹಿಮೆ ಏನು? ಇದು ಯಾರ ತಪಃಪ್ರಭಾವ? ಎಂಬುದೊಂದೂ ನಮಗೆ ತಿಳಿಯದು. ಅದೆಲ್ಲವನ್ನೂ ದಯವಿಟ್ಟು ಹೇಳೋಣವಾಗಬೇಕು" ಎಂದನು (೮-೯). ಆ ತಾಪಸಿಯು ಸರ್ವಭೂತಗಳ ಹಿತದಲ್ಲಿ ನಿರತಳಾದವಳು. ಆಕೆಯು ಹನುಮಂತನನ್ನು ನೋಡಿ ಈ ಪ್ರಕಾರವಾಗಿ ಹೇಳಿದಳು: "ಮಯನೆಂಬ ದಾನವೋತ್ತಮನೊಬ್ಬನಿದ್ದನು. ಆತನು ಮಹಾತೇಜಸ್ವಿಯೂ ಮಾಯಾವಿಯೂ ಆಗಿದ್ದನು (೧೦). ಆ ಮಯನು ತನ್ನ ವಿಚಿತ್ರಶಕ್ತಿಯಿಂದ ಈ ಕಾಂಚನವನವನ್ನು ನಿರ್ಮಿಸಿದ್ದಾನೆ. ಆತನು ಹಿಂದೆ ದಾನವಶ್ರೇಷ್ಠರ

ಯೇನೇದಂ ಕಾಂಚನಂ ದಿವ್ಯಂ ನಿರ್ಮಿತಂ ಭವನೋತ್ತಮಮ್ ।
ಸ ತು ವರ್ಷಸಹಸ್ರಾಣಿ ತಪಸ್ತಪ್ತ್ವಾ ಮಹಾವನೇ ॥ ೧೨

ಪಿತಾಮಹಾದ್ವರಂ ಲೇಭೇ ಸರ್ವಮೌಶನಸಂ ಧನಮ್ ।
ವನಂ ವಿಧಾಯ ಬಲವಾನ್ ಸರ್ವಕಾಮೇಶ್ವರಸ್ತದಾ ॥ ೧೩

ಉವಾಸ ಸುಖಿತಃ ಕಾಲಂ ಕಂಚಿದಸ್ಮಿನ್ ಮಹಾವನೇ ।
ತಮಪ್ಸರಸಿ ಹೇಮಾಯಾಂ ಸಕ್ತಂ ದಾನವಪುಂಗವಮ್ ॥ ೧೪

ವಿಕ್ರಮ್ಯೈವಾಶನಿಂ ಗೃಹ್ಯ ಜಘಾನೇಶಃ ಪುರಂದರಃ ।
ಇದಂ ಚ ಬ್ರಹ್ಮಣಾ ದತ್ತಂ ಹೇಮಾಯೈ ವನಮುತ್ತಮಮ್ ॥ ೧೫

ಶಾಶ್ವತಾಃ ಕಾಮಭೋಗಾಶ್ಚ ಗೃಹಂ ಚೇದಂ ಹಿರಣ್ಮಯಮ್ ।
ದುಹಿತಾ ಮೇರುಸಾವರ್ಣೇರಹಂ ತಸ್ಯಾಃ ಸ್ವಯಂಪ್ರಭಾ ॥ ೧೬

ಶಿಲ್ಪಿಯಾಗಿದ್ದನು. ಆತನೇ ಸುವರ್ಣಮಯವಾದ ಈ ದಿವ್ಯಭವನವನ್ನು ಕಟ್ಟಿದ್ದಾನೆ. ಮಯನು ಮಹಾರಣ್ಯದಲ್ಲಿ ಸಾವಿರವರ್ಷಗಳವರೆಗೆ ತಪಸ್ಸನ್ನಾಚರಿಸಿದನು (೧೧-೧೨). ಕಡೆಗೆ ಬ್ರಹ್ಮದೇವನಿಂದ ಶುಕ್ರಪ್ರಣೀತವಾದ ಸಕಲಶಿಲ್ಪಶಾಸ್ತ್ರವೂ ತನಗೆ ಸ್ವಾಧೀನವಾಗುವಂತೆ ವರವನ್ನು ಪಡೆದನು. ಬಲಾಢ್ಯನೂ ಸರ್ವಕಾಮಸಂಪನ್ನನೂ ಆದ ಆ ದಾನವಶ್ರೇಷ್ಠನು ಈ ವನವನ್ನು ನಿರ್ಮಿಸಿ ಇಲ್ಲಿ ಸುಖದಿಂದ ವಾಸವಾಗಿದ್ದನು. ಅವನು ಹೇಮೆಯೆಂಬ ಅಪ್ಸರಃಸ್ತ್ರೀಯಲ್ಲಿ ಅನುರಕ್ತನಾಗಿದ್ದನು (೧೩-೧೪). ಪ್ರಭುವಾದ ಇಂದ್ರನು ಯುದ್ಧದಲ್ಲಿ ಮಯನನ್ನು ಗೆದ್ದು ವಜ್ರಾಯುಧದಿಂದ ಅವನನ್ನು ಹೊಡೆದು ಕೊಂದನು * ಆಗ ಬ್ರಹ್ಮನು ಹೇಮೆಗೆ ಉತ್ತಮವಾದ ಈ ವನವನ್ನು ಒಪ್ಪಿಸಿದನು. ಶಾಶ್ವತವಾದ ಈ ಭೋಗಸಾಮಗ್ರಿಗಳೂ ಈ ಸುವರ್ಣ

* ಮಯನು ತ್ರಿಪುರಾಧಿಪತಿಯಾಗಿದ್ದು, ತ್ರಿಪುರವು ನಷ್ಟವಾದಮೇಲೆ ಈ ಬಿಲವನ್ನು ರಚಿಸಿಕೊಂಡು ವಾಸವಾಗಿದ್ದನೆಂದು ಮತ್ಸ್ಯಪುರಾಣದಲ್ಲಿ ಹೇಳಿದೆ. ದಾನವಶಿಲ್ಪಿಯಾದ ಮಯನು ನಿತ್ಯನಾದ್ದರಿಂದ ಅವನ ಮರಣವು ಹೇಗೆ ಸಂಭವಿಸಿತು ? ಎಂಬ ಪ್ರಶ್ನೆ ಹುಟ್ಟಬಹುದು. ಮಯ ಎಂಬುದು ದಾನವಶಿಲ್ಪಿಯ ಅಧಿಕಾರ ಪ್ರಯುಕ್ತವಾದ ನಾಮ. ಪ್ರವಾಹನಿತ್ಯತೆಯಿಂದ ಮಯನು ನಿತ್ಯನೆಂಬುದು ಹೊಂದುತ್ತದೆ. ಆ ಸ್ಥಾನಕ್ಕೆ ಬಂದವನು ಪುನಃ ಮಯನೆನ್ನಿಸಿಕೊಳ್ಳುತ್ತಾನೆ ಎಂದು ಉತ್ತರ. ಈತನು ದಾನವಶಿಲ್ಪಿಯಾದ ಮಯನಲ್ಲವೆಂದು ಕೆಲವರು ಹೇಳುತ್ತಾರೆ.

ಇದಂ ರಕ್ಷಾಮಿ ಭವನಂ ಹೇಮಾಯಾ ವಾನರೋತ್ತಮ ।
ಮಮ ಪ್ರಿಯಸಖೀ ಹೇಮಾ ನೃತ್ತಗೀತವಿಶಾರದಾ ॥ ೧೭

ತಯಾ ದತ್ತವರಾ ಚಾಸ್ಮಿ ರಕ್ಷಾಮಿ ಭವನೋತ್ತಮಮ್ ।
ಕಿಂ ಕಾರ್ಯಂ ಕಸ್ಯ ವಾ ಹೇತೋಃ ಕಾಂತಾರಾಣಿ ಪ್ರಪಶ್ಯಥ ॥ ೧೮

ಕಥಂ ಚೇದಂ ವನಂ ದುರ್ಗಂ ಯುಷ್ಮಾಭಿರುಪಲಕ್ಷಿತಮ್ ।
ಇಮಾನ್ಯಭ್ಯವಹಾರ್ಯಾಣಿ ಮೂಲಾನಿ ಚ ಫಲಾನಿ ಚ ॥ ೧೯

ಭುಕ್ತ್ವಾ ಪೀತ್ವಾ ಚ ಪಾನೀಯಂ ಸರ್ವಂ ಮೇ ವಕ್ತುಮರ್ಹಥ ॥

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಏಕಪಂಚಾಶಃ ಸರ್ಗಃ



ಭವನವೂ ಹೇಮೆಗೆ ಸೇರಿದವು. ವಾನರೋತ್ತಮ, ನಾನು ಮೇರು ಸಾವರ್ಣಿಯ ಮಗಳು ನನ್ನ ಹೆಸರು ಸ್ವಯಂಪ್ರಭೆ (೧೫-೧೭). ಹೇಮೆಯ ಈ ಭವನವನ್ನು ನಾನು ರಕ್ಷಿಸಿಕೊಂಡು ಬರುತ್ತಿದ್ದೇನೆ. ಅವಳು ನನ್ನ ನೆಚ್ಚಿನ ಗೆಳತಿ. ಹೇಮೆಯು ನೃತ್ತಗೀತಗಳಲ್ಲಿ ವಿಶಾರದೆ. ಅವಳು ನನಗೆ ಇದನ್ನು ರಕ್ಷಿಸುವ ಸಾಮರ್ಥ್ಯವನ್ನು ವರವಾಗಿ ಕೊಟ್ಟಿರುವುದರಿಂದ ಇದನ್ನು ರಕ್ಷಿಸುತ್ತಿದ್ದೇನೆ (ಒಳ್ಳೆಯದು) ನಿಮಗೆ ಇಲ್ಲಿ ಕಾರ್ಯವೇನು ? ಏತಕ್ಕೋಸ್ಕರ ಅರಣ್ಯಗಳನ್ನು ಹುಡುಕುತ್ತ ತಿರುಗುತ್ತಿದ್ದೀರಿ ? (೧೭-೧೮). ದುರ್ಗಮವಾದ ಈ ವನವು ನಿಮಗೆ ಕಂಡದ್ದಾದರೂ ಹೇಗೆ ? ಎಲೈ ವಾನರರೆ, ಭಕ್ಷಣ ಯೋಗ್ಯವಾದ ಈ ಫಲಮೂಲಗಳನ್ನು ತಿಂದು ನೀರನ್ನು ಕುಡಿಯಿರಿ. ಆಮೇಲೆ ನಿಮ್ಮ ವೃತ್ತಾಂತವನ್ನು ತಿಳಿಸಿರಿ" ಎಂದು ನುಡಿದಳು (೧೯).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಐವತ್ತೊಂದನೆಯ ಸರ್ಗ



## ದ್ವಿಪಂಚಾಶಃ ಸರ್ಗಃ

### ಬಿಲಪ್ರವೇಶಕಾರಣಕಥನಮ್

ಅಥ ತಾನಬ್ರವೀತ್ ಸರ್ವಾನ್ ವಿಶ್ರಾಂತಾನ್ ಹರಿಯೂಥಪಾನ್ ।
ಇದಂ ವಚನಮೇಕಾಗ್ರಾ ತಾಪಸೀ ಧರ್ಮಚಾರಿಣೀ ॥ ೧

ವಾನರಾ ಯದಿ ವಃ ಖೇದಃ ಪ್ರನಷ್ಟಃ ಫಲಭಕ್ಷಣಾತ್ ।
ಯದಿ ಚೈತನ್ಮಯಾ ಶ್ರಾವ್ಯಂ ಶ್ರೋತುಮಿಚ್ಛಾಮಿ ಕಥ್ಯತಾಮ್ ॥ ೨

ತಸ್ಯಾಸ್ತದ್ವಚನಂ ಶ್ರುತ್ವಾ ಹನುಮಾನ್ ಮಾರುತಾತ್ಮಜಃ ।
ಆರ್ಜವೇನ ಯಥಾತತ್ತ್ವಮಾಖ್ಯಾತುಮುಪಚಕ್ರಮೇ ॥ ೩

ರಾಜಾ ಸರ್ವಸ್ಯ ಲೋಕಸ್ಯ ಮಹೇಂದ್ರವರುಣೋಪಮಃ ।
ರಾಮೋ ದಾಶರಥಿಃ ಶ್ರೀಮಾನ್ ಪ್ರವಿಷ್ಟೋ ದಂಡಕಾವನಮ್ ॥ ೪

ಲಕ್ಷ್ಮಣೇನ ಸಹ ಭ್ರಾತ್ರಾ ವೈದೇಹ್ಯಾ ಚಾಪಿ ಭಾರ್ಯಯಾ ।
ತಸ್ಯ ಭಾರ್ಯಾ ಜನಸ್ಥಾನಾದ್ರಾವಣೇನ ಹೃತಾ ಬಲಾತ್ ॥ ೫

### ಸರ್ಗ ೫೨

ಬಿಲದೊಳಗೆ ಬಂದ ಕಾರಣವನ್ನು ಹನುಮಂತನು ಸ್ವಯಂಪ್ರಭೆಗೆ ತಿಳಿಸುವುದು.

ಅನಂತರ ಕಪಿನಾಯಕರೆಲ್ಲರೂ ಹಸಿವು ಬಾಯಾರಿಕೆಗಳನ್ನು ನೀಗಿಸಿಕೊಂಡು ವಿಶ್ರಮಿಸಿದರು. ಧ್ಯಾನನಿಷ್ಠಳಾಗಿದ್ದ ಆ ತಾಪಸಿಯು ವಾನರರನ್ನು ಕರೆದು "ಎಲೈ ವಾನರರೆ, ಫಲಗಳನ್ನು ತಿಂದು ನಿಮ್ಮ ಆಯಾಸವು ಕಳೆಯಿತೆ? ನಿಮ್ಮ ವೃತ್ತಾಂತವನ್ನು ನಾನು ಕೇಳಬಹುದಾಗಿದ್ದರೆ, ಅದನ್ನು ಕೇಳಲಿಚ್ಛಿಸುವೆನು, ಹೇಳಿರಿ" ಎಂದಳು (೧-೨). ಅದನ್ನು ಕೇಳಿ ವಾಯುಪುತ್ರನಾದ ಹನುಮಂತನು ಋಜುಬುದ್ಧಿಯಿಂದ ಯಥಾರ್ಥವನ್ನು ಹೇಳಲಾರಂಭಿಸಿದನು: "ಹೇ ತಪಸ್ವಿನಿ, ದಶರಥಮಹಾರಾಜನ ಪುತ್ರನಾದ ಶ್ರೀರಾಮನೆಂಬ ರಾಜಕುಮಾರನಿದ್ದಾನೆ. ಆತನು ಸರ್ವಲೋಕಗಳಿಗೆ ಪ್ರಭುವಾಗಿ ಇಂದ್ರವರುಣರಿಗೆ ಸಮಾನನಾಗಿದ್ದಾನೆ. ಕಾರಣಾಂತರದಿಂದ ಅವನು ದಂಡಕಾರಣ್ಯಕ್ಕೆ ಬಂದನು (೩-೪). ಅವನೊಡನೆ ತಮ್ಮನಾದ ಲಕ್ಷ್ಮಣನೂ ಪತ್ನಿಯಾದ

ವೀರಸ್ತಸ್ಯ ಸಖಾ ರಾಜ್ಞಃ ಸುಗ್ರೀವೋ ನಾಮ ವಾನರಃ ।
ರಾಜಾ ವಾನರಮುಖ್ಯಾನಾಂ ಯೇನ ಪ್ರಸ್ಥಾಪಿತಾ ವಯಮ್ ॥ ೬
ಅಗಸ್ತ್ಯಚರಿತಾಮಾಶಾಂ ದಕ್ಷಿಣಾಂ ಯಮರಕ್ಷಿತಾಮ್ ।
ಸಹೈಭಿರ್ವಾನರೈರ್ಮುಖ್ಯೈರಂಗದಪ್ರಮುಖೈರ್ವಯಮ್ ॥ ೭
ರಾವಣಂ ಸಹಿತಾಃ ಸರ್ವೇ ರಾಕ್ಷಸಂ ಕಾಮರೂಪಿಣಮ್ ।
ಸೀತಯಾ ಸಹ ವೈದೇಹ್ಯಾ ಮಾರ್ಗಧ್ವಮಿತಿ ಚೋದಿತಾಃ ॥ ೮
ವಿಚಿತ್ಯ ತು ವಯಂ ಸರ್ವೇ ಸಮಗ್ರಾಂ ದಕ್ಷಿಣಾಂ ದಿಶಮ್ ।
ಬುಭುಕ್ಷಿತಾಃ ಪರಿಶ್ರಾಂತಾ ವೃಕ್ಷಮೂಲಮುಪಾಶ್ರಿತಾಃ ॥ ೯
ವಿವರ್ಣವದನಾಃ ಸರ್ವೇ ಸರ್ವೇ ಧ್ಯಾನಪರಾಯಣಾಃ ।
ನಾಧಿಗಚ್ಛಾಮಹೇ ಪಾರಂ ಮಗ್ನಾಶ್ಚಿಂತಾಮಹಾರ್ಣವೇ ॥ ೧೦
ಚಾರಯಂತಸ್ತತಶ್ಚಕ್ಷುರ್ದೃಷ್ಟವಂತೋ ವಯಂ ಬಿಲಮ್ ।
ಲತಾಪಾದಪಸಂಛನ್ನಂ ತಿಮಿರೇಣ ಸಮಾವೃತಮ್ ॥ ೧೧

---

ವೈದೇಹಿಯೂ ಬಂದರು. ಹೀಗಿರಲು ಶ್ರೀರಾಮನ ಪತ್ನಿಯನ್ನು ರಾವಣನು ಜನಸ್ಥಾನದಲ್ಲಿ ತನ್ನ ಬಲದ ಮದದಿಂದ ಕದ್ದೊಯ್ದನು. ಸುಗ್ರೀವನೆಂಬ ವೀರನಾದ ಕಪಿರಾಜನು ಶ್ರೀರಾಮನ ಮಿತ್ರನಾಗಿದ್ದಾನೆ. ಆತನು ಸೀತಾದೇವಿಯನ್ನು ಹುಡುಕುವುದಕ್ಕಾಗಿ ನಮ್ಮನ್ನು ಕಳಿಸಿದ್ದಾನೆ (೫-೬). ಅಗಸ್ತ್ಯ ಮುನಿಗಳು ಸಂಚರಿಸತಕ್ಕ ಯಮರಕ್ಷಿತವಾದ ಈ ದಕ್ಷಿಣದಿಕ್ಕಿಗೆ ನಮ್ಮನ್ನು ಕಳಿಸಿದ್ದಾನೆ. ಯುವರಾಜನಾದ ಅಂಗದನೇ ಮೊದಲಾದ ವಾನರರೊಡನೆ ನಾವು ಬಂದಿದ್ದೇವೆ. ಕಾಮರೂಪಿಯಾದ ರಾವಣನೆಂಬ ಆ ರಾಕ್ಷಸನನ್ನೂ ಜನಕಪುತ್ರಿಯಾದ ಸೀತಾದೇವಿಯನ್ನೂ ನಾವು ಒಟ್ಟುಗೂಡಿ ಹುಡುಕಬೇಕೆಂದು ಆಜ್ಞಪ್ತರಾಗಿದ್ದೇವೆ (೭-೮). ನಾವು ದಕ್ಷಿಣದಿಕ್ಕೆಲ್ಲವನ್ನೂ ಅನ್ವೇಷಿಸಿ ಹಸಿವಿನಿಂದ ಬಳಲಿ ಒಂದು ವೃಕ್ಷದ ಬುಡವನ್ನು ಆಶ್ರಯಿಸಿ ಕುಳಿತಿದ್ದೆವು. ನಮ್ಮೆಲ್ಲರ ಮುಖಗಳೂ ಬಾಡಿಹೋಗಿದ್ದವು. ಎಲ್ಲರೂ ಚಿಂತಾತುರರಾಗಿದ್ದೆವು. ಚಿಂತಾಸಾಗರದಲ್ಲಿ ಮುಳುಗಿದ್ದ ನಮಗೆ ಪಾರವೇ ಗೋಚರಿಸಲಿಲ್ಲ (೯-೧೦). ಹಾಗಿರುವಾಗ ಸುತ್ತಲೂ ಕಣ್ಣುಹೊರಳಿಸಿ ನೋಡುತ್ತಿರಲು, ಈ ಬಿಲವು ನಮಗೆ ಗೋಚರಿಸಿತು. ಅಲ್ಲಿ ಮರಬಳ್ಳಿಗಳಿಂದ

ಅಸ್ಮಾದ್ಧಂಸಾ ಜಲಕ್ಲಿನ್ನಾಃ ಪಕ್ಷೈಃ ಸಲಿಲವಿಸ್ರವೈಃ ।
ಕುರರಾಃ ಸಾರಸಾಶ್ಚೈವ ನಿಷ್ಪತಂತಿ ಪತತ್ರಿಣಃ ॥ ೧೨

ಸಾಧ್ವತ್ರ ಪ್ರವಿಶಾಮೇತಿ ಮಯಾ ತೂಕ್ತಾಃ ಪ್ಲವಂಗಮಾಃ ।
ತೇಷಾಮಪಿ ಹಿ ಸರ್ವೇಷಾಮನುಮಾನಮುಪಾಗತಮ್ ॥ ೧೩

ಗಚ್ಛಾಮ ಪ್ರವಿಶಾಮೇತಿ ಭರ್ತೃಕಾರ್ಯತ್ವರಾನ್ವಿತಾಃ ।
ತತೋ ಗಾಢಂ ನಿಪತಿತಾ ಗೃಹ್ಯ ಹಸ್ತೌ ಪರಸ್ಪರಮ್ ॥ ೧೪

ಇದಂ ಪ್ರವಿಷ್ಟಾಃ ಸಹಸಾ ಬಿಲಂ ತಿಮಿರಸಂವೃತಮ್ ।
ಏತನ್ನಃ ಕಾರ್ಯಮೇತೇನ ಕೃತ್ಯೇನ ವಯಮಾಗತಾಃ ॥ ೧೫

ತ್ವಾಂ ಚೈವೋಪಗತಾಃ ಸರ್ವೇ ಪರಿದ್ಯೂನಾ ಬುಭುಕ್ಷಿತಾಃ ।
ಆತಿಥ್ಯಧರ್ಮದತ್ತಾನಿ ಮೂಲಾನಿ ಚ ಫಲಾನಿ ಚ ॥ ೧೬

ಅಸ್ಮಾಭಿರುಪಭುಕ್ತಾನಿ ಬುಭುಕ್ಷಾಪರಿಪೀಡಿತೈಃ ।
ಯತ್ತ್ವಯಾ ರಕ್ಷಿತಾಃ ಸರ್ವೇ ಮ್ರಿಯಮಾಣಾ ಬುಭುಕ್ಷಯಾ ॥ ೧೭

---

ಆಚ್ಛಾದಿತವಾಗಿ ಕತ್ತಲೆ ಕವಿದಿತ್ತು. ಆದರೆ ಬಿಲದ್ವಾರದಿಂದ ಹಂಸ, ಕುರರ, ಸಾರಸ ಮುಂತಾದ ಪಕ್ಷಿಗಳು ನೀರಿನಲ್ಲಿ ನೆನೆದು ರೆಕ್ಕೆಗಳಿಂದ ಜಲಬಿಂದುಗಳನ್ನು ಒದರುತ್ತ ಹಾರಿಬರುವುದನ್ನು ಕಂಡೆವು (೧೧-೧೨). ಆಗ ನಾನು 'ಭಲಾ! ಇಲ್ಲಿ ಹೋಗೋಣ' ಎಂದೆನು. ಈ ವಾನರರೆಲ್ಲರಿಗೂ ಇಲ್ಲಿ ನೀರಿದೆಯೆಂಬ ಸೂಚನೆ ತೋರಿತು. ಸ್ವಾಮಿಕಾರ್ಯವನ್ನು ನಡೆಸಬೇಕೆಂಬ ತ್ವರೆಯಲ್ಲಿದ್ದುದರಿಂದ 'ಹೋಗೋಣ! ಒಳಗೆ ನುಗ್ಗೋಣ!' ಎಂದು ನಾವೆಲ್ಲರೂ ಬಂದು, ಒಬ್ಬರಿಗೊಬ್ಬರು ಬಿಗಿಯಾಗಿ ತಬ್ಬಿಕೊಂಡು ಗಾಢಾಂಧಕಾರವು ಕವಿದಿದ್ದ ಈ ಬಿಲವನ್ನು ಥಟ್ಟನೆ ಪ್ರವೇಶಿಸಿಬಿಟ್ಟೆವು (೧೩-೧೪). ಓ ತಪಸ್ವಿನಿ, ನಮ್ಮ ಕಾರ್ಯವು ಈ ಬಗೆಯಾಗಿದೆ. ಈ ಉದ್ದೇಶದಿಂದ ನಾವು ಬಂದೆವು. ಹಸಿವಿನಿಂದ ಕಂಗೆಟ್ಟಿದ್ದ ನಾವು ನಿನ್ನ ಬಳಿಗೆ ಬಂದು ಸೇರಿದೆವು. ನೀನಾದರೋ ಆತಿಥ್ಯಧರ್ಮದಿಂದ ನಮಗೆ ಫಲಮೂಲಗಳನ್ನು ಕೊಟ್ಟು ಉಪಚರಿಸಿದ್ದೀಯೆ (೧೫-೧೬). ಹಸಿವಿನಿಂದ ದೀನರಾಗಿದ್ದ ನಾವು ಅವುಗಳನ್ನು ತಿಂದು ತೃಪ್ತರಾದೆವು. ಕ್ಷುಧೆಯಿಂದ ಸಾಯುವ ಸ್ಥಿತಿಗೆ

ಬ್ರೂಹಿ ಪ್ರತ್ಯುಪಕಾರಾರ್ಥಂ ಕಿಂ ತೇ ಕುರ್ವಂತು ವಾನರಾಃ ।
ಏವಮುಕ್ತಾ ತು ಸರ್ವಜ್ಞಾ ವಾನರೈಸ್ತೈಃ ಸ್ವಯಂಪ್ರಭಾ ॥ ೧೮

ಪ್ರತ್ಯುವಾಚ ತತಃ ಸರ್ವಾನಿದಂ ವಾನರಯೂಥಪಾನ್ ।
ಸರ್ವೇಷಾಂ ಪರಿತುಷ್ಟಾಸ್ಮಿ ವಾನರಾಣಾಂ ಮಹಾತ್ಮನಾಮ್ ॥ ೧೯

ಚರಂತ್ಯಾ ಮಮ ಧರ್ಮೇಣ ನ ಕಾರ್ಯಮಿಹ ಕೇನಚಿತ್ ॥

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ದ್ವಿಪಂಚಾಶಃ ಸರ್ಗಃ



ಬಂದಿದ್ದ ನಮ್ಮನ್ನು ನೀನು ಉಳಿಸಿದೆ. ದೇವಿ, ಇದಕ್ಕೆ ಪ್ರತ್ಯುಪಕಾರವಾಗಿ ಈ ವಾನರರು ಏನುಮಾಡಬೇಕು ? ಅಪ್ಪಣೆಯಾಗಲಿ" ಎಂದು ಹೇಳಿದನು (೧೭-೧೮). ಆಗ ಸರ್ವಜ್ಞಳಾದ ಸ್ವಯಂಪ್ರಭೆಯು ಆ ಕಪಿನಾಯಕರನ್ನು ನೋಡಿ "ಎಲೈ ಕಪಿವೀರರೆ, ಪುಣ್ಯಾತ್ಮರಾದ ನಿಮ್ಮ ವೃತ್ತಾಂತವನ್ನು ಕೇಳಿ ಸಂತುಷ್ಟಳಾದೆನು. ಧರ್ಮಮಾರ್ಗದಲ್ಲಿದ್ದು ತಪಸ್ಸನ್ನಾಚರಿಸುತ್ತಿರುವ ನನಗೆ ಯಾರಿಂದ ಏನು ಆಗಬೇಕಾದದ್ದೂ ಇಲ್ಲ!" ಎಂದಳು (೧೯).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಐವತ್ತೆರಡನೆಯ ಸರ್ಗ



## ತ್ರಿಪಂಚಾಶಃ ಸರ್ಗಃ

### ಅಂಗದಾದಿನಿರ್ವೇದಃ

ಏವಮುಕ್ತಃ ಶುಭಂ ವಾಕ್ಯಂ ತಾಪಸ್ಯಾ ಧರ್ಮಸಂಹಿತಮ್ ।
ಉವಾಚ ಹನುಮಾನ್ ವಾಕ್ಯಂ ತಾಮನಿಂದಿತಚೇಷ್ಟಿತಾಮ್ ॥ ೧

ಶರಣಂ ತ್ವಾಂ ಪ್ರಪನ್ನಾಃ ಸ್ಮಃ ಸರ್ವೇ ವೈ ಧರ್ಮಚಾರಿಣಿ ।
ಯಃ ಕೃತಃ ಸಮಯೋಽಸ್ಮಾಕಂ ಸುಗ್ರೀವೇಣ ಮಹಾತ್ಮನಾ ॥ ೨

ಸ ಚ ಕಾಲೋ ಹ್ಯತಿಕ್ರಾಂತೋ ಬಿಲೇ ನಃ ಪರಿವರ್ತತಾಮ್ ।
ಸಾ ತ್ವಮಸ್ಮಾದ್ಬಿಲಾದ್ಘೋರಾದುತ್ತಾರಯಿತುಮರ್ಹಸಿ ॥ ೩

ತಸ್ಮಾತ್ ಸುಗ್ರೀವವಚನಾದತಿಕ್ರಾಂತಾನ್ ಗತಾಯುಷಃ ।
ತ್ರಾತುಮರ್ಹಸಿ ನಃ ಸರ್ವಾನ್ ಸುಗ್ರೀವಭಯಶಂಕಿತಾನ್ ॥ ೪

ಮಹಚ್ಚ ಕಾರ್ಯಮಸ್ಮಾಭಿಃ ಕರ್ತವ್ಯಂ ಧರ್ಮಚಾರಿಣಿ ।
ತಚ್ಚಾಪಿ ನ ಕೃತಂ ಕಾರ್ಯಮಸ್ಮಾಭಿರಿಹವಾಸಿಭಿಃ ॥ ೫

### ಸರ್ಗ ೫೩

ಸ್ವಯಂಪ್ರಭೆಯು ತನ್ನ ಮಹಿಮೆಯಿಂದ ವಾನರರನ್ನು ಹೊರಗೆ ತಂದುಬಿಡುವುದು.
ಸೀತೆಯು ದೊರಕಲಿಲ್ಲವೆಂದು ಅಂಗದಾದಿಗಳ ವಿಷಾದ.

ಈ ರೀತಿಯಲ್ಲಿ ಆ ತಪಸ್ವಿನಿಯು ಧರ್ಮಸಮ್ಮತವಾದ ಶುಭವಚನವನ್ನು ನುಡಿಯಲು, ಹನುಮಂತನು ಶುದ್ಧಶೀಲೆಯಾದ ಅವಳನ್ನು ಕುರಿತು "ಓ ತಪಸ್ವಿನಿ, ನಾವೆಲ್ಲರೂ ನಿನಗೆ ಶರಣಾಗಿದ್ದೇವೆ. ನಮ್ಮ ಪ್ರಭುವಾದ ಸುಗ್ರೀವನು ಸೀತಾನ್ವೇಷಣೆಗೆ ಒಂದು ಗಡುವನ್ನು ಗೊತ್ತುಮಾಡಿದ್ದನು (೧-೨). ಈ ಬಿಲದಲ್ಲಿ ನಾವು ಅಲೆಯುವಾಗಲೇ ಅವಧಿಯು ಕಳೆದು ಹೋಯಿತು. ಈ ಘೋರವಾದ ಬಿಲದಿಂದ ನೀನೇ ನಮ್ಮನ್ನು ಪಾರುಗಾಣಿಸಬೇಕು. ಸುಗ್ರೀವನ ಆಜ್ಞೆಯನ್ನತಿಕ್ರಮಿಸಿದ ನಮಗೆ ಆಯುಸ್ಸು ಮುಗಿದುಬಂದಂತೆ ಕಾಣುತ್ತದೆ. 'ಅವನ ಭಯದಿಂದ ಸಂದಿಗ್ಧಪರಿಸ್ಥಿತಿಗೆ ಸಿಕ್ಕಿರುವ ನಮ್ಮನ್ನು ನೀನು ಕಾಪಾಡಬೇಕು (೩-೪). ಓ ಧರ್ಮಚಾರಿಣಿ, ಮಹತ್ತರವಾದ ಕಾರ್ಯಭಾರವನ್ನು ನಾವು ನಿರ್ವಹಿಸಬೇಕಾಗಿದೆ. (ಅವಧಿ

ಏವಮುಕ್ತ್ವಾ ಹನುಮತಾ ತಾಪಸೀ ವಾಕ್ಯಮಬ್ರವೀತ್ ।
ಜೀವತಾ ದುಷ್ಕರಂ ಮನ್ಯೇ ಪ್ರವಿಷ್ಟೇನ ನಿವರ್ತಿತುಮ್ ॥ ೬

ತಪಸಸ್ತು ಪ್ರಭಾವೇಣ ನಿಯಮೋಪಾರ್ಜಿತೇನ ಚ ।
ಸರ್ವಾನೇವ ಬಿಲಾದಸ್ಮಾದುದ್ಧರಿಷ್ಯಾಮಿ ವಾನರಾನ್ ॥ ೭

ನಿಮೀಲಯತ ಚಕ್ಷೂಂಷಿ ಸರ್ವೇ ವಾನರಪುಂಗವಾಃ ।
ನ ಹಿ ನಿಷ್ಕ್ರಮಿತುಂ ಶಕ್ಯಮನಿಮೀಲಿತಲೋಚನೈಃ ॥ ೮

ತತಃ ಸಂಮೀಲಿತಾಃ ಸರ್ವೇ ಸುಕುಮಾರಾಂಗುಲೈಃ ಕರೈಃ ।
ಸಹಸಾ ಪಿದಧುರ್ದೃಷ್ಟಿಂ ಹೃಷ್ಟಾ ಗಮನಕಾಂಕ್ಷಿಣಃ ॥ ೯

ವಾನರಾಸ್ತು ಮಹಾತ್ಮಾನೋ ಹಸ್ತರುದ್ಧಮುಖಾಸ್ತದಾ ।
ನಿಮೇಷಾಂತರಮಾತ್ರೇಣ ಬಿಲಾದುತ್ತಾರಿತಾಸ್ತಯಾ ॥ ೧೦

ತತಸ್ತಾನ್ ವಾನರಾನ್ ಸರ್ವಾಂಸ್ತಾಪಸೀ ಧರ್ಮಚಾರಿಣೀ ।
ನಿಃಸೃತಾನ್ ವಿಷಮಾತ್ತಸ್ಮಾತ್ ಸಮಾಶ್ವಾಸ್ಯೇದಮಬ್ರವೀತ್ ॥ ೧೧

---

ಯನ್ನು ಮೀರಿದುದು ಮಾತ್ರವೇ ಅಲ್ಲ) ಈ ಬಿಲದಲ್ಲಿ ಸಿಕ್ಕಿಬಿದ್ದ ನಾವು ಆ ಕಾರ್ಯವನ್ನೂ ಸಾಧಿಸಲಿಲ್ಲ" ಎಂದನು (೫). ಹನುಮಂತನು ಹೀಗೆ ನುಡಿಯಲು ಸ್ವಯಂಪ್ರಭೆಯು "ಎಲೈ ವಾನರರೆ, ಈ ಬಿಲವನ್ನು ಪ್ರವೇಶಿಸಿದವನು ಜೀವಸಹಿತವಾಗಿ ಹಿಂದಿರುಗಲಾರನೆಂದು ನನ್ನ ನಂಬಿಕೆ. ಆದರೆ ನಿಯಮಪಾಲನೆಯಿಂದ ಗಳಿಸಿದ ನನ್ನ ತಪಃಪ್ರಭಾವದಿಂದ ನಿಮ್ಮೆಲ್ಲರನ್ನೂ ಈ ಬಿಲದಿಂದ ದಾಟಿಸುವೆನು! ವಾನರೋತ್ತಮರೆ, ಎಲ್ಲರೂ ಕಣ್ಣು ಮುಚ್ಚಿಕೊಳ್ಳಿರಿ! ಕಣ್ಣು ಮುಚ್ಚದಿದ್ದರೆ ಮಾತ್ರ ನೀವು ಪಾರಾಗಲು ಶಕ್ಯವಿಲ್ಲ" ಎಂದಳು (೬-೮). ನಾವು ಪಾರಾಗುತ್ತೇವೆಂದು ಕಪಿಗಳಿಗೆ ಸಂತೋಷವಾಯಿತು! ಕೋಮಲಾಂಗುಲಿಗಳಿರುವ ತಮ್ಮ ಕೈಗಳಿಂದ ಅವರೆಲ್ಲರೂ ತಮ್ಮ ಕಣ್ಣುಗಳನ್ನು ಮುಚ್ಚಿಕೊಂಡರು! ಸಾಹಸಿಗಳಾದ ಆ ವಾನರರು ಕೈಯಿಂದ ಮುಖವನ್ನು ಮುಚ್ಚಿಕೊಳ್ಳಲು, ಅವರೆಲ್ಲರನ್ನೂ ಸ್ವಯಂಪ್ರಭೆಯು ಒಂದು ನಿಮಿಷಮಾತ್ರದಲ್ಲಿ ಬಿಲದಿಂದ ಹೊರಗೆ ತಂದುಬಿಟ್ಟಳು! (೯-೧೦). ಹೀಗೆ ಸಂಕಟದಿಂದ ಪಾರಾದ ಆ ಕಪಿನಾಯಕರನ್ನು ಸಮಾಧಾನಪಡಿಸುತ್ತ

ಏಷ ವಿಂಧ್ಯೋ ಗಿರಿಃ ಶ್ರೀಮಾನ್ನಾನಾದ್ರುಮಲತಾಕುಲಃ ।
ಏಷ ಪ್ರಸ್ರವಣಃ ಶೈಲಃ ಸಾಗರೋಽಯಂ ಮಹೋದಧಿಃ ॥ ೧೨

ಸ್ವಸ್ತಿ ವೋಽಸ್ತು ಗಮಿಷ್ಯಾಮಿ ಭವನಂ ವಾನರರ್ಷಭಾಃ ।
ಇತ್ಯುಕ್ತ್ವಾ ತದ್ಬಿಲಂ ಶ್ರೀಮತ್ ಪ್ರವಿವೇಶ ಸ್ವಯಂಪ್ರಭಾ ॥ ೧೩

ತತಸ್ತೇ ದದೃಶುರ್ಘೋರಂ ಸಾಗರಂ ವರುಣಾಲಯಮ್ ।
ಅಪಾರಮಭಿಗರ್ಜಂತಂ ಘೋರೈರೂರ್ಮಿಭಿರಾಕುಲಮ್ ॥ ೧೪

ಮಯಸ್ಯ ಮಾಯಾವಿಹಿತಂ ಗಿರಿದುರ್ಗಂ ವಿಚಿನ್ವತಾಮ್ ।
ತೇಷಾಂ ಮಾಸೋ ವ್ಯತಿಕ್ರಾಂತೋ ಯೋ ರಾಜ್ಞಾ ಸಮಯಃ ಕೃತಃ

ವಿಂಧ್ಯಸ್ಯ ತು ಗಿರೇಃ ಪಾದೇ ಸಂಪ್ರಪುಷ್ಪಿತಪಾದಪೇ ।
ಉಪವಿಶ್ಯ ಮಹಾತ್ಮಾನಶ್ಚಿಂತಾಮಾಪೇದಿರೇ ತದಾ ॥ ೧೬

---

ಆ ತಪಸ್ವಿನಿಯು “ಎಲೈ ವಾನರೋತ್ತಮರೆ, ಇಗೋ ಇದು ವಿಂಧ್ಯಪರ್ವತ. ವಿವಿಧ ಲತಾವೃಕ್ಷಗಳಿಂದ ಶೋಭಿಸುತ್ತಿದೆ. ಅದು ಪ್ರಸ್ರವಣಗಿರಿ. ಅತ್ತ ಕಾಣುವುದೇ ಮಹಾಸಾಗರ! ನಿಮಗೆ ಶುಭವಾಗಲಿ! ಇನ್ನು ನನ್ನ ಸ್ಥಳಕ್ಕೆ ಹೋಗುವೆನು” ಎಂದು ಹೇಳಿ ಆ ಬಿಲವನ್ನು ಪ್ರವೇಶಿಸಿದಳು (೧೧-೧೩). ಇತ್ತ ವಾನರರು ವರುಣನ ಆವಾಸಸ್ಥಾನವಾದ ಘೋರಸಾಗರವನ್ನು ವೀಕ್ಷಿಸಿದರು. ಅಪಾರವಾದ ಮಹಾಸಾಗರವು ಭೀಷಣತರಂಗಮಾಲೆಗಳಿಂದ ಆರ್ಭಟಿಸುತ್ತಿತ್ತು. ಮಯನ ಮಾಯೆಯಿಂದ ನಿರ್ಮಿತವಾದ ಆ ಬೆಟ್ಟದ ಗುಹೆಯಲ್ಲಿ ಅಲೆಯುತ್ತಿರುವಾಗಲೇ, ಕಪಿರಾಜನು ಗೊತ್ತುಮಾಡಿದ್ದ ಒಂದು ತಿಂಗಳ ಅವಧಿಯು ಕಳೆದುಹೋಗಿತ್ತು (೧೪-೧೫). ವಿಂಧ್ಯಪರ್ವತದ ಶ್ರೇಣಿಗೆ ಸೇರಿದ ಒಂದು ಬೆಟ್ಟವು* ಪುಷ್ಪಿತವೃಕ್ಷಗಳಿಂದ ಶೋಭಿಸುತ್ತಿತ್ತು. ಆ ಕಪಿವೀರರು ಅಲ್ಲಿ ಹೋಗಿ ಕುಳಿತು ಮಹತ್ತರವಾದ ಚಿಂತೆಯಲ್ಲಿ

---

* ‘ಹಿಮವದ್ವಿಂಧ್ಯಶೈಲಾಭ್ಯಾಂ ಪ್ರಾಯೋ ವ್ಯಾಪ್ತಾ ವಸುಂಧರಾ’ ಎಂದು ಭೇಷಜಕಲ್ಪದಲ್ಲಿ ವರ್ಣನೆ ಇದೆ. ಭರತಖಂಡದ ದಕ್ಷಿಣಭಾಗವೆಲ್ಲವೂ ವಿಂಧ್ಯಪರ್ವತ ಶ್ರೇಣಿಗೆ ಸೇರಿದ್ದೆಂದೂ ಪ್ರಸ್ರವಣ, ಮಲಯ ಮೊದಲಾದವು ಪ್ರತ್ಯಂತಪರ್ವತಗಳೆಂದೂ ತಿಳಿಯಬೇಕು. ಆದ್ದರಿಂದ ದಕ್ಷಿಣಸಮುದ್ರದ ಬಳಿಯಲ್ಲಿ ವಿಂಧ್ಯಪರ್ವತವೆಲ್ಲಿದೆ ಎಂಬ ಶಂಕೆಗೆ ಅವಕಾಶವಿಲ್ಲ.

**ತತಃ ಪುಷ್ಪಾತಿಭಾರಾಗ್ರಾನ್ ಲತಾಶತಸಮಾವೃತಾನ್ ।**
**ದ್ರುಮಾನ್ ವಾಸಂತಿಕಾನ್ ದೃಷ್ಟ್ವಾ ಬಭೂವುರ್ಭಯಶಂಕಿತಾಃ ॥**

**ತೇ ವಸಂತಮನುಪ್ರಾಪ್ತಂ ಪ್ರತಿವೇದ್ಯ ಪರಸ್ಪರಮ್ ।**
**ನಷ್ಟಸಂದೇಶಕಾಲಾರ್ಥಾ ನಿಪೇತುರ್ಧರಣೀತಲೇ ॥** ೧೮

**ತತಸ್ತಾನ್ ಕಪಿವೃದ್ಧಾಂಸ್ತು ಶಿಷ್ಟಾಂಶ್ಚೈವ ವನೌಕಸಃ ।**
**ವಾಚಾ ಮಧುರಯಾಭಾಷ್ಯ ಯಥಾವದನುಮಾನ್ಯ ಚ ॥** ೧೯

**ಸ ತು ಸಿಂಹವೃಷಸ್ಕಂಧಃ ಪೀನಾಯತಭುಜಃ ಕಪಿಃ ।**
**ಯುವರಾಜೋ ಮಹಾಪ್ರಾಜ್ಞ ಅಂಗದೋ ವಾಕ್ಯಮಬ್ರವೀತ್ ॥** ೨೦

**ಶಾಸನಾತ್ ಕಪಿರಾಜಸ್ಯ ವಯಂ ಸರ್ವೇ ವಿನಿರ್ಗತಾಃ ।**
**ಮಾಸಃ ಪೂರ್ಣೋ ಬಿಲಸ್ಥಾನಾಂ ಹರಯಃ ಕಿಂ ನ ಬುಧ್ಯತೇ ॥** ೨೧

**ವಯಮಾಶ್ವಯುಜೇ ಮಾಸಿ ಕಾಲಸಂಖ್ಯಾವ್ಯವಸ್ಥಿತಾಃ ।**
**ಪ್ರಸ್ಥಿತಾಃ ಸೋಽಪಿ ಚಾತೀತಃ ಕಿಮತಃ ಕಾರ್ಯಮುತ್ತರಮ್ ॥** ೨೨

---

ಮುಳುಗಿದರು. ವಸಂತಕಾಲದಲ್ಲಿ ಅರಳುವ ವಿವಿಧ ವೃಕ್ಷಗಳು ನೂರಾರು ಬಳ್ಳಿಗಳಿಂದ ಪರಿವೃತವಾಗಿ, ಹೂಗಳ ಭಾರದಿಂದ ಬಳುಕುವುದನ್ನು ಕಂಡು ಆ ವಾನರರಿಗೆ ಭಯವಾಯಿತು (೧೬–೧೭). "ಓಹೊ! ವಸಂತಕಾಲವು ಸಮೀಪಿಸಿಬಿಟ್ಟಿತು! ರಾಜನು ಗೊತ್ತುಮಾಡಿದ ಕಾಲದಲ್ಲಿ ನಾವು ಕಾರ್ಯವನ್ನು ಸಾಧಿಸಲಿಲ್ಲ!" ಎಂದು ಒಬ್ಬರಿಗೊಬ್ಬರು ಹೇಳಿಕೊಳ್ಳುತ್ತ ಚಿಂತಾಕ್ರಾಂತರಾಗಿ ನೆಲದಮೇಲೆ ಒರಗಿದರು (೧೮). ಆಗ ಮಹಾಪ್ರಾಜ್ಞನೂ ಯುವರಾಜನೂ ಆದ ಅಂಗದನು ಅವರ ಪರಿಸ್ಥಿತಿಯನ್ನು ಕಂಡನು. ಸಿಂಹದಂತೆಯೂ ವೃಷಭದಂತೆಯೂ ಉಬ್ಬಿದ ಹೆಗಲುಳ್ಳವನಾಗಿ ಪುಷ್ಟವೂ ದೀರ್ಘವೂ ಆದ ಬಾಹುಗಳುಳ್ಳ ಆ ಕಪಿವೀರನು ವಯೋವೃದ್ಧರೂ ಶಿಷ್ಟರೂ ಆದ ವಾನರಪ್ರಮುಖರನ್ನು ನೋಡಿ ಮೃದುವಾಕ್ಯಗಳಿಂದ ಮನ್ನಿಸಿ ಸಂತೈಸುತ್ತ ಹೀಗೆಂದನು (೧೯–೨೦): "ವಾನರೋತ್ತಮರೆ, ಕಪಿರಾಜನಾದ ಸುಗ್ರೀವನ ಆದೇಶದಂತೆ ನಾವೆಲ್ಲರೂ ಹೊರಟುಬಂದೆವಷ್ಟೆ. ಆ ಬಿಲದಲ್ಲಿರುವಾಗಲೆ ಒಂದು ತಿಂಗಳ ಗಡುವು ತೀರಿಹೋಯಿತು. ಇದು ನಿಮಗೆ ತಿಳಿಯದ ವಿಷಯವಲ್ಲ. ನಾವು ಆಶ್ವಯುಜಮಾಸದಲ್ಲಿ * ಕಾಲಸಂಖ್ಯೆಯ ವ್ಯವಸ್ಥೆ

---

* ಅನುಬಂಧವನ್ನು ನೋಡಿ.

ಭವಂತಃ ಪ್ರತ್ಯಯಂ ಪ್ರಾಪ್ತಾ ನೀತಿಮಾರ್ಗವಿಶಾರದಾಃ ।
ಹಿತೇಷ್ವಭಿರತಾ ಭರ್ತುರ್ನಿಸೃಷ್ಟಾಃ ಸರ್ವಕರ್ಮಸು ॥ ೨೩

ಕರ್ಮಸ್ವಪ್ರತಿಮಾಃ ಸರ್ವೇ ದಿಕ್ಷು ವಿಶ್ರುತಪೌರುಷಾಃ ।
ಮಾಂ ಪುರಸ್ಕೃತ್ಯ ನಿರ್ಯಾತಾಃ ಪಿಂಗಾಕ್ಷೇಶಪ್ರಚೋದಿತಾಃ ॥ ೨೪

ಇದಾನೀಮಕೃತಾರ್ಥಾನಾಂ ಮರ್ತವ್ಯಂ ನಾತ್ರ ಸಂಶಯಃ ।
ಹರಿರಾಜಸ್ಯ ಸಂದೇಶಮಕೃತ್ವಾ ಕಃ ಸುಖೀ ಭವೇತ್ ॥ ೨೫

ತಸ್ಮಿನ್ನತೀತೇ ಕಾಲೇ ತು ಸುಗ್ರೀವೇಣ ಕೃತೇ ಸ್ವಯಮ್ ।
ಪ್ರಾಯೋಪವೇಶನಂ ಯುಕ್ತಂ ಸರ್ವೇಷಾಂ ಚ ವನೌಕಸಾಮ್ ॥

ತೀಕ್ಷ್ಣಃ ಪ್ರಕೃತ್ಯಾ ಸುಗ್ರೀವಃ ಸ್ವಾಮಿಭಾವೇ ವ್ಯವಸ್ಥಿತಃ ।
ನ ಕ್ಷಮಿಷ್ಯತಿ ನಃ ಸರ್ವಾನಪರಾಧಕೃತೋ ಗತಾನ್ ॥ ೨೭

---

ಯಿಂದ ಸೇರಿದೆವು. ಅದೇ ವ್ಯವಸ್ಥೆಯಿಂದ ಸೀತಾನ್ವೇಷಣೆಗೆ ಹೊರಟೆವು. ಆ ಅವಧಿಯೂ ಕಳೆದುಹೋಯಿತು. ಮುಂದೆ ಮಾಡುವುದೇನು? (೨೧-೨೨). ನೀವು ಸುಗ್ರೀವನ ವಿಶ್ವಾಸಕ್ಕೆ ಪಾತ್ರರಾದವರು. ನೀತಿಮಾರ್ಗದಲ್ಲಿ ವಿಶಾರದರು. ಸ್ವಾಮಿಯ ಹಿತದಲ್ಲಿ ನಿರತರು. ಸಕಲ ಕಾರ್ಯಗಳಲ್ಲಿಯೂ ದಕ್ಷರು. ಕಾರ್ಯಸಾಧನೆಯಲ್ಲಿ ನಿಮಗೆ ಸಾಟಿಯಾದವರೇ ಇಲ್ಲ. ದಿಕ್ಕು ದಿಕ್ಕುಗಳಲ್ಲಿ ನಿಮ್ಮ ಪೌರುಷವು ವಿಖ್ಯಾತವಾಗಿದೆ. ಕಪೀಶ್ವರನ ಆಜ್ಞೆಯಂತೆ ನನ್ನನ್ನು ಮುಂದಿಟ್ಟುಕೊಂಡು ಹೊರಟುಬಂದಿದ್ದೀರಿ (೨೩-೨೪). ಮಿತ್ರರೆ, ನಮ್ಮ ಕಾರ್ಯವು ಕೈಗೂಡದ ಪ್ರಯುಕ್ತವಾಗಿ ನಮಗೆ ಸಾಯಬೇಕಾದ ಪರಿಸ್ಥಿತಿಯೊದಗಿತು; ಇದರಲ್ಲಿ ಸಂಶಯವಿಲ್ಲ. ಕಪಿರಾಜನ ಸಂದೇಶವನ್ನು ನಡೆಸದಮೇಲೆ ಯಾವನು ಸೌಖ್ಯದಿಂದ ಬಾಳಿಯಾನು? ಸುಗ್ರೀವನು ತಾನಾಗಿ ಗೊತ್ತುಪಡಿಸಿದ ಸಮಯವು ಮೀರಿಹೋಗಿರುವಾಗ, ನಮಗೆ ಪ್ರಾಯೋಪವೇಶವೇ * ಯುಕ್ತವಾದುದು (೨೫-೨೬). ಸುಗ್ರೀವನಾದರೋ ಉಗ್ರಸ್ವಭಾವದವನು. ಈಗಲಂತೂ ರಾಜಪಟ್ಟದಲ್ಲಿ ಭದ್ರವಾಗಿ ಕುಳಿತಿದ್ದಾನೆ. ನಾವು ತಪ್ಪುಮಾಡಿ ಅವನ ಮುಂದೆ ಹೋಗಿನಿಂತರೆ ನಮ್ಮನ್ನು ಅವನು

---

* ಪ್ರಾಯೋಪವೇಶ=ಮರಣೋದ್ದೇಶದಿಂದ ಅನ್ನಪಾನಾದಿಗಳನ್ನು ತ್ಯಜಿಸಿ ಮಲಗುವುದು.

ಅಪ್ರವೃತ್ತೌ ಚ ಸೀತಾಯಾಃ ಪಾಪಮೇವ ಕರಿಷ್ಯತಿ ।
ತಸ್ಮಾತ್ ಕ್ಷಮಮಿಹಾದ್ಯೈವ ಗಂತುಂ ಪ್ರಾಯೋಪವೇಶನಮ್ ॥ ೨೮

ತ್ಯಕ್ತ್ವಾ ಪುತ್ರಾಂಶ್ಚ ದಾರಾಂಶ್ಚ ಧನಾನಿ ಚ ಗೃಹಾಣಿ ಚ ।
ಧ್ರುವಂ ನೋ ಹಿಂಸಿತಾ ರಾಜಾ ಸರ್ವಾನ್ ಪ್ರತಿಗತಾನಿತಃ ॥ ೨೯

ವಧೇನಾಪ್ರತಿರೂಪೇಣ ಶ್ರೇಯಾನ್ ಮೃತ್ಯುರಿಹೈವ ನಃ ।
ನ ಚಾಹಂ ಯೌವರಾಜ್ಯೇನ ಸುಗ್ರೀವೇಣಾಭಿಷೇಚಿತಃ ॥ ೩೦

ನರೇಂದ್ರೇಣಾಭಿಷಿಕ್ತೋಽಸ್ಮಿ ರಾಮೇಣಾಕ್ಲಿಷ್ಟಕರ್ಮಣಾ ।
ಸ ಪೂರ್ವಂ ಬದ್ಧವೈರೋ ಮಾಂ ರಾಜಾ ದೃಷ್ಟ್ವಾ ವ್ಯತಿಕ್ರಮಮ್ ॥

ಘಾತಯಿಷ್ಯತಿ ದಂಡೇನ ತೀಕ್ಷ್ಣೇನ ಕೃತನಿಶ್ಚಯಃ ।
ಕಿಂ ಮೇ ಸುಹೃದ್ಭಿರ್ವ್ಯಸನಂ ಪಶ್ಯದ್ಭಿರ್ಜೀವಿತಾಂತರೇ ॥ ೩೨

ಇಹೈವ ಪ್ರಾಯಮಾಸಿಷ್ಯೇ ಪುಣ್ಯೇ ಸಾಗರರೋಧಸಿ ।
ಏತಚ್ಛ್ರುತ್ವಾ ಕುಮಾರೇಣ ಯುವರಾಜೇನ ಭಾಷಿತಮ್ ॥ ೩೩

---

ಕ್ಷಮಿಸುವುದಿಲ್ಲ ಅಲ್ಲದೆ ಸೀತಾವೃತ್ತಾಂತವನ್ನು ತರದಿದ್ದಾಗ ನಮ್ಮನ್ನು ಅವನು ಕೊಂದೇ ತೀರುವನು. ಆದ್ದರಿಂದ, ಸ್ನೇಹಿತರೆ, ನಾವೀಗ ಇಲ್ಲಿಯೇ ಪ್ರಾಯೋಪವೇಶವನ್ನಾಚರಿಸುವುದೇ ಯುಕ್ತವಾಗಿದೆ (೨೭-೨೮). ಹೆಂಡಿರು ಮಕ್ಕಳನ್ನೂ ಮನೆಮಾರುಗಳನ್ನೂ ತೊರೆದು ಇಲ್ಲಿಯೇ ಸಾಯುವುದು ಮೇಲು. ಇಲ್ಲಿಂದ ನಾವೇನಾದರೂ ಹಿಂದಿರುಗಿದರೆ, ನಮ್ಮ ರಾಜನು ನಿಶ್ಚಯವಾಗಿಯೂ ನಮ್ಮನ್ನು ಚಿತ್ರಹಿಂಸೆಗೆ ಒಳಪಡಿಸಿ ಕೊಲ್ಲಿಸುವನು. ಅದಕ್ಕಿಂತ ಇಲ್ಲಿಯೇ ನಾವು ಸಾಯುವುದುತ್ತಮ. ನನಗೆ ಯುವರಾಜ ಪದವಿಯನ್ನಿತ್ತು ಅಭಿಷೇಕಮಾಡಿಸಿದವನು ಸುಗ್ರೀವನಲ್ಲ! (೨೯-೩೦). ನರೇಂದ್ರನೂ ಪುಣ್ಯಾತ್ಮನೂ ಆದ ಶ್ರೀರಾಮನು ನನಗೆ ಯುವರಾಜಪದವಿಯನ್ನಿತ್ತವನು. ಸುಗ್ರೀವನಿಗೆ ನನ್ನ ಮೇಲೆ ಮೊದಲಿನಿಂದಲೂ ವೈರಬುದ್ಧಿಯಿದೆ. ಈಗ ಇದೊಂದು ತಪ್ಪನ್ನು ಕಂಡಮೇಲೆ, ಉಗ್ರದಂಡನೆಯನ್ನು ವಿಧಿಸಿ ಹಠದಿಂದ ನನ್ನನ್ನು ಕೊಲ್ಲಿಸುವನು. ನನ್ನ ಜೀವನದಲ್ಲಿ ಒದಗುವ ಈ ಸಂಕಟವನ್ನು ನನ್ನ ಆಪ್ತರು ಕಣ್ಣಾರೆ ನೋಡುವಂತೆ ಏಕಾಗಬೇಕು? (೩೧-೩೨). ಪವಿತ್ರವಾದ ಈ ಸಾಗರತೀರದಲ್ಲಿಯೇ ನಾನು ಪ್ರಾಯೋಪ

ಸರ್ವೇ ತೇ ವಾನರಶ್ರೇಷ್ಠಾಃ ಕರುಣಂ ವಾಕ್ಯಮಬ್ರುವನ್ ।
ತೀಕ್ಷ್ಣಃ ಪ್ರಕೃತ್ಯಾ ಸುಗ್ರೀವಃ ಪ್ರಿಯಾಸಕ್ತಶ್ಚ ರಾಘವಃ ॥ ೩೪
ಸಮೀಕ್ಷ್ಯಾಕೃತಕಾರ್ಯಾಂಸ್ತು ತಸ್ಮಿಂಶ್ಚ ಸಮಯೇ ಗತೇ ।
ಅದೃಷ್ಟಾಯಾಂ ತು ವೈದೇಹ್ಯಾಂ ದೃಷ್ಟ್ವಾ ಚೈವ ಸಮಾಗತಾನ್ ॥
ರಾಘವಪ್ರಿಯಕಾಮಾರ್ಥಂ ಘಾತಯಿಷ್ಯತ್ಯಸಂಶಯಮ್ ।
ನ ಕ್ಷಮಂ ಚಾಪರಾದ್ಧಾನಾಂ ಗಮನಂ ಸ್ವಾಮಿಪಾರ್ಶ್ವತಃ ॥ ೩೬
ಪ್ರಧಾನಭೂತಾಶ್ಚ ವಯಂ ಸುಗ್ರೀವಸ್ಯ ಸಮಾಗತಾಃ ।
ಇಹೈವ ಸೀತಾಮನ್ವಿಷ್ಯ ಪ್ರವೃತ್ತಿಮುಪಲಭ್ಯ ವಾ ॥ ೩೭
ನೋ ಚೇದ್ಗಚ್ಛಾಮ ತಂ ವೀರಂ ಗಮಿಷ್ಯಾಮೋ ಯಮಕ್ಷಯಮ್ ॥
ಪ್ಲವಂಗಮಾನಾಂ ತು ಭಯಾರ್ದಿತಾನಾಂ
ಶ್ರುತ್ವಾ ವಚಸ್ತಾರ ಇದಂ ಬಭಾಷೇ ।
ಅಲಂ ವಿಷಾದೇನ ಬಿಲಂ ಪ್ರವಿಶ್ಯ
ವಸಾಮ ಸರ್ವೇ ಯದಿ ರೋಚತೇ ವಃ ॥ ೩೮

---

ವೇಶವನ್ನಾಚರಿಸುವೆನು" ಎಂದು ಹೇಳಿದನು. ಯುವರಾಜನಾದ ಅಂಗದ ಕುಮಾರನ ಮಾತನ್ನು ಕೇಳಿ, ಆ ವಾನರಶ್ರೇಷ್ಠರು ಮರುಕದಿಂದ ಹೀಗೆಂದರು: "ಸುಗ್ರೀವನು ಉಗ್ರಸ್ವಭಾವದವನೇ ಹೌದು. ಶ್ರೀರಾಮನು ತನ್ನ ಕಾಂತೆಯನ್ನು ಕಾಣುವ ತವಕದಲ್ಲಿದ್ದಾನೆ (೩೩-೩೪). ನಿಯಮಿತಕಾಲವು ಕಳೆದರೂ ನಾವು ಕಾರ್ಯವನ್ನು ಸಾಧಿಸಲಿಲ್ಲ. ವೈದೇಹಿಯನ್ನು ಕಾಣದೆ ನಾವು ಬರಿಗೈಯಲ್ಲಿ ಬಂದಿರುವುದನ್ನು ಕಂಡರೆ, ರಾಘವನು ಮೆಚ್ಚಲೆಂದಾದರೂ ಸುಗ್ರೀವನು ನಮ್ಮನ್ನು ಕೊಲ್ಲಿಸದೆ ಬಿಡುವುದಿಲ್ಲ. ತಪ್ಪನ್ನು ಹೊತ್ತು ಪ್ರಭುವಿನ ಬಳಿಗೆ ಹೋಗುವುದು ಸರಿಯಲ್ಲ (೩೫-೩೬). ಸುಗ್ರೀವನ ಬಳಿಯಲ್ಲಿ ಪ್ರಮುಖರೆನಿಸಿಕೊಂಡ ನಾವು ಇತ್ತ ಬಂದಿದ್ದೇವೆ. ನಾವು ಸೀತೆಯನ್ನು ಕಂಡೇ ಹಿಂದಕ್ಕೆ ಹೋಗಬೇಕು. ಇಲ್ಲವೆ, ಆಕೆಯ ಸುದ್ದಿಯನ್ನಾದರೂ ಕೊಂಡೊಯ್ಯಬೇಕು. ಇಲ್ಲವಾದರೆ ಸುಗ್ರೀವನ ಹತ್ತಿರ ಹೋಗಲೇಬಾರದು. ಅದಕ್ಕೆ ಬದಲು ಯಮರಾಜನ ಮನೆಗೆ ಹೋಗೋಣ!" ಎಂದು ಹೇಳಿದರು (೩೭). ಹೀಗೆ ಭಯದಿಂದ ಕಳವಳಿಸುತ್ತಿದ್ದ ವಾನರರ

ಇದಂ ಹಿ ಮಾಯಾವಿಹಿತಂ ಸುದುರ್ಗಮಂ
ಪ್ರಭೂತವೃಕ್ಷೋದಕಭೋಜ್ಯಪೇಯಕಮ್ ।
ಇಹಾಸ್ತಿ ನೋ ನೈವ ಭಯಂ ಪುರಂದರಾ-
ನ್ನ ರಾಘವಾದ್ವಾನರರಾಜತೋಽಪಿ ವಾ ॥ ೩೯

ಶ್ರುತ್ವಾಂಗದಸ್ಯಾಪಿ ವಚೋಽನುಕೂಲ-
ಮೂಚುಶ್ಚ ಸರ್ವೇ ಹರಯಃ ಪ್ರತೀತಾಃ ।
ಯಥಾ ನ ಹಿಂಸ್ಯೇಮ ತಥಾ ವಿಧಾನ-
ಮಸಕ್ತಮದ್ಯೈವ ವಿಧೀಯತಾಂ ನಃ ॥ ೪೦

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ತ್ರಿಪಂಚಾಶಃ ಸರ್ಗಃ



ನುಡಿಯನ್ನು ಕೇಳಿ ತಾರನು "ಗೆಳೆಯರೆ, ವಿಷಾದಿಸಬೇಡಿರಿ. ನೀವು ಒಪ್ಪುವುದಾದರೆ, ಅದೇ ಬಿಲವನ್ನು ಮತ್ತೆ ಪ್ರವೇಶಿಸಿ ಅಲ್ಲಿಯೇ ಇದ್ದು ಬಿಡೋಣ! (೩೮). ಆ ಬಿಲವು ಹೇಗಿದ್ದರೂ ಮಾಯಾನಿರ್ಮಿತವಾದ್ದಲ್ಲವೆ? ಇತರರಿಗೆ ಅಲ್ಲಿ ಬರಲು ಸಾಧ್ಯವೇ ಇಲ್ಲ. ಅಲ್ಲಿ ಬೇಕಾದಷ್ಟು ಮರಗಳಿವೆ, ನೀರಿದೆ, ಆಹಾರವಿದೆ, ಪೇಯವಿದೆ! ಆ ಬಿಲದಲ್ಲಿ ನಮಗೆ ಯಾರ ಭಯವೂ ಇರುವುದಿಲ್ಲ. ಅಲ್ಲಿ ಇಂದ್ರನಿಗೂ ಹೆದರಬೇಕಾದ್ದಿಲ್ಲ; ಶ್ರೀರಾಮನಿಗೂ ಹೆದರಬೇಕಾದ್ದಿಲ್ಲ; ಸುಗ್ರೀವನ ಅಂಜಿಕೆಯೂ ಇಲ್ಲ!" ಎಂದು ಹೇಳಿದನು (೩೯). ತಾರನೂ ಅಂಗದನ ಅಭಿಪ್ರಾಯಕ್ಕೆ ಅನುಗುಣವಾಗಿ ನುಡಿದುದನ್ನು ಕೇಳಿ, ಇತರ ವಾನರರಿಗೂ ಅದು ಹೌದೆನಿಸಿತು. ಅವರು "ಹೇಗೆ ಮಾಡಿದರೆ ನಮಗೆ ಹಿಂಸೆಯು ತಪ್ಪುವುದೋ ಹಾಗೆ ಮಾಡಿರಿ! ಈಗಲೇ ಶೀಘ್ರವಾಗಿ ನಿರ್ಣಯಿಸಿರಿ!" ಎಂದು ಹೇಳಿದರು (೪೦).

ಇಲ್ಲಿಗೆ ಶ್ರೀಮದ್ರಾಮಾಯಣದ ಅರಣ್ಯಕಾಂಡದಲ್ಲಿ ಐವತ್ತುಮೂರನೆಯ ಸರ್ಗ



# ಚತುಃಪಂಚಾಶಃ ಸರ್ಗಃ

## ಹನೂಮದ್ಭೇದನಮ್

ತಥಾ ಬ್ರುವತಿ ತಾರೇ ತು ತಾರಾಧಿಪತಿವರ್ಚಸಿ ।
ಅಥ ಮೇನೇ ಹೃತಂ ರಾಜ್ಯಂ ಹನುಮಾನಂಗದೇನ ತತ್ ॥ ೧

ಬುದ್ಧ್ಯಾ ಹ್ಯಷ್ಟಾಂಗಯಾ ಯುಕ್ತಂ ಚತುರ್ಬಲಸಮನ್ವಿತಮ್ ।
ಚತುರ್ದಶಗುಣಂ ಮೇನೇ ಹನುಮಾನ್ ವಾಲಿನಃ ಸುತಮ್ ॥ ೨

ಆಪೂರ್ಯಮಾಣಂ ಶಶ್ವಚ್ಚ ತೇಜೋಬಲಪರಾಕ್ರಮೈಃ ।
ಶಶಿನಂ ಶುಕ್ಲಪಕ್ಷಾದೌ ವರ್ಧಮಾನಮಿವ ಶ್ರಿಯಾ ॥ ೩

## ಸರ್ಗ ೫೪

ಹನುಮಂತನು ಅಂಗದನ ಅಭಿಪ್ರಾಯವನ್ನು ಒಪ್ಪದೆ, ಸುಗ್ರೀವನ ಬಳಿಗೆ ಹೋಗುವುದೇ ಯುಕ್ತವೆಂದು ಪ್ರತಿಪಾದಿಸುವುದು.

ಚಂದ್ರನಂತೆ ಸೌಮ್ಯಸ್ವಭಾವದ ತಾರನೂ ಹಾಗೆ ಅಂಗದನಿಗೆ ಅನುಗುಣವಾಗಿ ಮಾತನಾಡಲು, ಹನುಮಂತನು ತನ್ನ ಮನಸ್ಸಿನಲ್ಲಿ "ಓಹೊ! ಸುಗ್ರೀವನ ರಾಜ್ಯವನ್ನು ಈಗಲೇ ಅಂಗದನು ಕೈವಶಮಾಡಿ ಕೊಂಡಂತಿದೆ!" * ಎಂದು ಚಿಂತಿಸಿದನು (೧). ವಾಲಿಪುತ್ರನಲ್ಲಿ ಅಷ್ಟ ಗುಣಗಳುಳ್ಳ ಬುದ್ಧಿಯೂ ಚತುರ್ಬಲಗಳೂ ಚತುರ್ದಶಗುಣಗಳೂ † ಇವೆಯೆಂದು ಹನುಮಂತನು ಊಹಿಸಿದನು. ಶುಕ್ಲಪಕ್ಷದಲ್ಲಿ ಚಂದ್ರನು ಕಾಂತಿಸಂಪತ್ತಿನಿಂದ ದಿನದಿನವೂ ವರ್ಧಿಸುವಂತೆ, ಅಂಗದನು ತೇಜೋಬಲ ಪರಾಕ್ರಮಗಳಿಂದ ತನ್ನ ಸಾಮರ್ಥ್ಯವನ್ನು ಬೆಳೆಸಿಕೊಳ್ಳುತ್ತಿರುವುದನ್ನು

---

* ತಾರಾದಿಗಳು ಅಂಗದನ ಪರವಾಗಿರುವುದರಿಂದ ಕಿಷ್ಕಿಂಧೆಯನ್ನು ಅಂಗದನು ವಶಪಡಿಸಿಕೊಳ್ಳಬಹುದು ಎಂದು ಆಶಯ. ರಾಜ್ಯವನ್ನಾಳುವ ಸಾಮರ್ಥ್ಯವು ಅಂಗದನಲ್ಲಿದೆ ಎಂದು ಕೆಲವರು ತಾತ್ಪರ್ಯವನ್ನು ಹೇಳುತ್ತಾರೆ. ರಾಜ್ಯವೆಂದರೆ ಸ್ವಯಂಪ್ರಭೆಯ ಬಿಲವೆಂದು ಕೆಲವರು ಊಹಿಸುತ್ತಾರೆ.

† ಅನುಬಂಧವನ್ನು ನೋಡಿ.

ಬೃಹಸ್ಪತಿಸಮಂ ಬುದ್ಧ್ಯಾ ವಿಕ್ರಮೇ ಸದೃಶಂ ಪಿತುಃ ।
ಶುಶ್ರೂಷಮಾಣಂ ತಾರಸ್ಯ ಶುಕ್ರಸ್ಯೇವ ಪುರಂದರಮ್ ॥ ೪
ಭರ್ತುರರ್ಥೇ ಪರಿಶ್ರಾಂತಂ ಸರ್ವಶಾಸ್ತ್ರವಿಶಾರದಃ ।
ಅಭಿಸಂಧಾತುಮಾರೇಭೇ ಹನುಮಾನಂಗದಂ ತತಃ ॥ ೫
ಸ ಚತುರ್ಣಾಮುಪಾಯಾನಾಂ ತೃತೀಯಮುಪವರ್ಣಯನ್ ।
ಭೇದಯಾಮಾಸ ತಾನ್ ಸರ್ವಾನ್ ವಾನರಾನ್ ವಾಕ್ಯಸಂಪದಾ ॥ ೬
ತೇಷು ಸರ್ವೇಷು ಭಿನ್ನೇಷು ತತೋಽಭೀಷಯದಂಗದಮ್ ।
ಭೀಷಣೈರ್ಬಹುಭಿರ್ವಾಕ್ಯೈಃ ಕೋಪೋಪಾಯಸಮನ್ವಿತೈಃ ॥ ೭
ತ್ವಂ ಸಮರ್ಥತರಃ ಪಿತ್ರಾ ಯುದ್ಧೇ ತಾರೇಯ ವೈ ಧುರಮ್ ।
ದೃಢಂ ಧಾರಯಿತುಂ ಶಕ್ತಃ ಕಪಿರಾಜ್ಯಂ ಯಥಾ ಪಿತಾ ॥ ೮

---

ಅವನು ಗಮನಿಸಿದನು (೨-೩). ಅಂಗದನು ಬುದ್ಧಿಯಲ್ಲಿ ಬೃಹಸ್ಪತಿಗೆ ಸಮಾನನೆಂದೂ ಶೌರ್ಯದಲ್ಲಿ ಅವನ ತಂದೆಯಾದ ವಾಲಿಗೆ ಸಾಟಿಯೆಂದೂ ಹನುಮಂತನು ಎಣಿಸಿದನು. ಶುಕ್ರನ* ಉಪದೇಶವನ್ನು ಇಂದ್ರನು ಕೇಳುವಂತೆ, ತಾರನ ಮಾತನ್ನು ಅಂಗದನು ಆಲಿಸುತ್ತಿರುವುದನ್ನು ಆತನು ಗಮನಿಸಿದನು (೪). ತನ್ನ ಪ್ರಭುವಾದ ಸುಗ್ರೀವನ ಕಾರ್ಯಸಾಧನೆಯಲ್ಲಿ ಬಳಲಿ ಅಂಗದನು ವಿಮುಖನಾಗಿರುವನೆಂದು ಸರ್ವಶಾಸ್ತ್ರವಿಶಾರದನಾದ ಹನುಮಂತನು ಅರಿತುಕೊಂಡನು. ಆದ್ದರಿಂದ ಅಂಗದನು ಸುಗ್ರೀವನಿಗೆ ಅನುಕೂಲನಾಗಿ ವರ್ತಿಸುವಂತೆ, ಹನುಮಂತನು ಪ್ರಯತ್ನಮಾಡಿದನು (೫) ಅವನು ಚತುರುಪಾಯಗಳಲ್ಲಿ ಮೂರನೆಯದಾದ ಭೇದೋಪಾಯ ವನ್ನಾಶ್ರಯಿಸಿ, ತನ್ನ ವಾಗ್ಧೋರಣೆಯಿಂದ ಸಮಸ್ತ ವಾನರರೂ ಅಂಗದನ ಅಭಿಪ್ರಾಯವನ್ನು ಒಪ್ಪದಂತೆ ಬೇರ್ಪಡಿಸಿದನು. ಅವರೆಲ್ಲರೂ ಅಂಗದನ ಸಲಹೆಯನ್ನು ಮನ್ನಿಸದೆ ಭಿನ್ನಾಭಿಪ್ರಾಯವನ್ನು ತಳೆಯಲಾಗಿ, ಹನುಮಂತನು ಉಪಾಯದಿಂದ ಸುಳ್ಳುಸಿಟ್ಟನ್ನು ಅಭಿನಯಿಸುತ್ತ ಅಂಜಿಕೆ ಯನ್ನು ಹುಟ್ಟಿಸುವ ಮಾತುಗಳಿಂದ ಅಂಗದನನ್ನು ಅಂಜಿಸಲು ಯತ್ನಿಸಿದನು (೬-೭). ಅವನು ಅಂಗದನನ್ನು ಕುರಿತು "ಅಯ್ಯಾ ತಾರಾತನಯ,

---

* ಅನುಬಂಧವನ್ನು ನೋಡಿ.

ನಿತ್ಯಮಸ್ಥಿರಚಿತ್ತಾ ಹಿ ಕಪಯೋ ಹರಿಪುಂಗವ ।
ನಾಜ್ಞಾಪ್ಯಂ ವಿಷಹಿಷ್ಯಂತಿ ಪುತ್ರದಾರಾನ್ ವಿನಾ ತ್ವಯಾ ॥ ೯

ತ್ವಾಂ ನೈತೇ ಹ್ಯನುಯುಂಜೇಯುಃ ಪ್ರತ್ಯಕ್ಷಂ ಪ್ರವದಾಮಿ ತೇ ।
ಯಥಾಯಂ ಜಾಂಬವಾನ್ನೀಲಃ ಸುಹೋತ್ರಶ್ಚ ಮಹಾಕಪಿಃ ॥ ೧೦

ನ ಹ್ಯಹಂ ತ ಇಮೇ ಸರ್ವೇ ಸಾಮದಾನಾದಿಭಿರ್ಗುಣೈಃ ।
ದಂಡೇನ ವಾ ತ್ವಯಾ ಶಕ್ಯಾಃ ಸುಗ್ರೀವಾದಪಕರ್ಷಿತುಮ್ ॥ ೧೧

ವಿಗೃಹ್ಯಾಸನಮಪ್ಯಾಹುರ್ದುರ್ಬಲೇನ ಬಲೀಯಸಃ ।
ಆತ್ಮರಕ್ಷಾಕರಸ್ತಸ್ಮಾನ್ನ ವಿಗೃಹ್ಣೀತ ದುರ್ಬಲಃ ॥ ೧೨

ಯಾಂ ಚೇಮಾಂ ಮನ್ಯಸೇ ಧಾತ್ರೀಮೇತದ್ಬಿಲಮಿತಿ ಶ್ರುತಮ್ ।
ಏತಲ್ಲಕ್ಷ್ಮಣಬಾಣಾನಾಮೀಷತ್ಕಾರ್ಯಂ ವಿದಾರಣೇ ॥ ೧೩

---

ಯುದ್ಧದಲ್ಲಿ ನೀನು ನಿನ್ನ ತಂದೆಗಿಂತ ಗಟ್ಟಿಗನೇ ಹೌದು. ನಿನ್ನ ತಂದೆಯಂತೆ ನೀನೂ ರಾಜ್ಯಭಾರವನ್ನು ಬಿಗಿಯಿಂದ ನಿರ್ವಹಿಸಬಲ್ಲೆ. ಆದರೆ, ವಾನರೋತ್ತಮ, ಯಾವಾಗಲೂ ಈ ಕಪಿಗಳ ಚಿತ್ತವು ಸ್ಥಿರವಾದುದಲ್ಲ! ಇವರು ತಮ್ಮ ಹೆಂಡಿರುಮಕ್ಕಳನ್ನು ಬಿಟ್ಟು, ಇಲ್ಲಿ ನಿನ್ನ ಆಜ್ಞೆಗೆ ಒಳಪಟ್ಟು ಇರಲಾರರು! (೮-೯). ಇವರು ಎಂದಿಗೂ ಈ ವಿಷಯದಲ್ಲಿ ನಿನ್ನನ್ನು ಹಿಂಬಾಲಿಸತಕ್ಕವರಲ್ಲ! ಇವರೆದುರಿಗೇ ಈ ಮಾತನ್ನು ನಿನಗೆ ಹೇಳಿಬಿಡುತ್ತೇನೆ! ಜಾಂಬವಂತ ನೀಲ ಸುಹೋತ್ರರನ್ನಾಗಲಿ, ನನ್ನನ್ನಾಗಲಿ, ಸುಗ್ರೀವನ ಪಕ್ಷದಿಂದ ನಿನ್ನ ಕಡೆಗೆ ಎಳೆದುಕೊಳ್ಳಲು ಸಾಧ್ಯವಿಲ್ಲ. ಸಾಮದಾನಭೇದೋಪಾಯಗಳಿಗಾಗಲಿ ದಂಡಕ್ಕಾಗಲಿ ನಾವು ಜಗ್ಗುವವರಲ್ಲ! ಹಾಗೆಯೇ ಈ ವಾನರರೆಲ್ಲರೂ ಎಂದು ತಿಳಿ (೧೦-೧೧). ಬಲಶಾಲಿಯು ದುರ್ಬಲನೊಡನೆ ಒಂದುವೇಳೆ ವಿರೋಧವನ್ನು ಬೆಳೆಸಿಕೊಂಡಿರಲು ಶಕ್ಯವೆಂದು ನೀತಿಜ್ಞರು ಹೇಳುತ್ತಾರೆ. ಆದರೆ ದುರ್ಬಲನು ಆತ್ಮರಕ್ಷಣೆಯನ್ನು ಮಾಡಿಕೊಳ್ಳಬೇಕಾದಾಗ, ಎಂದಿಗೂ ಅವನು ಬಲಶಾಲಿಯೊಡನೆ ವಿರೋಧವನ್ನು ಕಟ್ಟಿಕೊಳ್ಳಬಾರದು (೧೨). ಅಂಗದ, ಈ ಗುಹೆಯು ನಿನ್ನನ್ನು ರಕ್ಷಿಸುವುದೆಂದು ಬಗೆದೆಯಾ? ಈ ಬಿಲವನ್ನು ಸೀಳಿಹಾಕುವುದು ಲಕ್ಷ್ಮಣನ ಬಾಣಗಳಿಗೆ ಒಂದು ಅಲ್ಪವಾದ ಕಾರ್ಯವೆಂದು ತಿಳಿ! (ಈ ಬಿಲದಲ್ಲಿದ್ದ ಮಯನನ್ನು

ಸ್ವಲ್ಪಂ ಹಿ ಕೃತಮಿಂದ್ರೇಣ ಕ್ಷಿಪತಾ ಹ್ಯಶನಿಂ ಪುರಾ ।
ಲಕ್ಷ್ಮಣೋ ನಿಶಿತೈರ್ಬಾಣೈರ್ಭಿಂದ್ಯಾತ್ ಪತ್ರಪುಟಂ ಯಥಾ ॥ ೧೪

ಲಕ್ಷ್ಮಣಸ್ಯ ತು ನಾರಾಚಾ ಬಹವಃ ಸಂತಿ ತದ್ವಿಧಾಃ ।
ವಜ್ರಾಶನಿಸಮಸ್ಪರ್ಶಾ ಗಿರೀಣಾಮಪಿ ದಾರಣಾಃ ॥ ೧೫

ಅವಸ್ಥಾನೇ ಯದೈವ ತ್ವಮಾಸಿಷ್ಯಸಿ ಪರಂತಪ ।
ತದೈವ ಹರಯಃ ಸರ್ವೇ ತ್ಯಕ್ಷ್ಯಂತಿ ಕೃತನಿಶ್ಚಯಾಃ ॥ ೧೬

ಸ್ಮರಂತಃ ಪುತ್ರದಾರಾಣಾಂ ನಿತ್ಯೋದ್ವಿಗ್ನಾ ಬುಭುಕ್ಷಿತಾಃ ।
ಖೇದಿತಾ ದುಃಖಶಯ್ಯಾಭಿಸ್ತ್ವಾಂ ಕರಿಷ್ಯಂತಿ ಪೃಷ್ಠತಃ ॥ ೧೭

ಸ ತ್ವಂ ಹೀನಃ ಸುಹೃದ್ಭಿಶ್ಚ ಹಿತಕಾಮೈಶ್ಚ ಬಂಧುಭಿಃ ।
ತೃಣಾದಪಿ ಭೃಶೋದ್ವಿಗ್ನಃ ಸ್ಪಂದಮಾನಾದ್ಭವಿಷ್ಯಸಿ ॥ ೧೮

ನ ಚ ಜಾತು ನ ಹಿಂಸ್ಯುಸ್ತ್ವಾಂ ಘೋರಾ ಲಕ್ಷ್ಮಣಸಾಯಕಾಃ ।
ಅಪವೃತ್ತಂ ಜಿಘಾಂಸಂತೋ ಮಹಾವೇಗಾ ದುರಾಸದಾಃ ॥ ೧೯

---

ಕೊಲ್ಲುವುದಕ್ಕಾಗಿ) ವಜ್ರಾಯುಧವನ್ನು ಪ್ರಯೋಗಿಸಿದ ಇಂದ್ರನಿಂದಾದ ಕಾರ್ಯವು ಅತ್ಯಲ್ಪ. ಲಕ್ಷ್ಮಣನು ತನ್ನ ನಿಶಿತಾಸ್ತ್ರಗಳಿಂದ ಎಲೆಯ ದೊನ್ನೆಯನ್ನು ಹರಿದೊಗೆಯುವಂತೆ, ಈ ಬಿಲವನ್ನು ಚೂರು ಚೂರು ಮಾಡಿಯಾನು ! (೧೩-೧೪). ಆ ಬಗೆಯ ಹರಿತವಾದ ನಾರಾಚಗಳು ಲಕ್ಷ್ಮಣನ ಹತ್ತಿರ ವಿಪುಲವಾಗಿವೆ. ಅವು ವಜ್ರಾಯುಧದಂತೆಯೂ ಸಿಡಿಲಿನಂತೆಯೂ ತಾಗಬಲ್ಲವು. ಬೆಟ್ಟಗಳನ್ನು ಭೇದಿಸಬಲ್ಲವು. ನೀನು ಬಿಲದಲ್ಲಿ ಬೀಡುಬಿಟ್ಟರೆ, ಅಂಗದ, ಈ ಕಪಿಗಳೆಲ್ಲರೂ ನಿಶ್ಚಯವಾಗಿ ನಿನ್ನನ್ನು ಬಿಟ್ಟು ಹೋಗುವರು (೧೫-೧೬). ಅವರು ತಮ್ಮ ಹೆಂಡಿರುಮಕ್ಕಳನ್ನು ನೆನೆಸಿಕೊಳ್ಳುತ್ತ, ಸುಗ್ರೀವಾದಿಗಳಿಗೆ ಅಂಜುತ್ತ, ಹಸಿವಿನಿಂದ ತೊಳಲುತ್ತ, ಈ ಮುಳ್ಳುಹಾಸಿಗೆಯಿಂದ ಬೇಸತ್ತು ನಿನ್ನನ್ನು ತೊರೆದುಹೋಗುವರು. ಆಗ ನೀನು, ಮಿತ್ರರಾಗಲಿ ಶ್ರೇಯಸ್ಸನ್ನು ಕೋರುವ ಬಂಧುಗಳಾಗಲಿ ಇಲ್ಲದೆ ಒಂಟಿಯಾಗುವೆ. ಒಂದು ಹುಲ್ಲುಕಡ್ಡಿಯಲ್ಲಾಡಿದರೂ ನೀನು ಹೆದರಬೇಕಾದ ಪರಿಸ್ಥಿತಿಯುಂಟಾಗುವುದು (೧೭-೧೮). ಕರ್ತವ್ಯಭ್ರಷ್ಟನಾದ ನಿನ್ನನ್ನು ಲಕ್ಷ್ಮಣನ ಘೋರನಾರಾಚಗಳು ಎಂದಿಗೂ ಹಿಂಸಿಸದೆ ಬಿಡಲಾರವು !

ಅಸ್ಮಾಭಿಸ್ತು ಗತಂ ಸಾರ್ಧಂ ವಿನೀತವದುಪಸ್ಥಿತಮ್ ।
ಆನುಪೂರ್ವ್ಯಾತ್ತು ಸುಗ್ರೀವೋ ರಾಜ್ಯೇ ತ್ವಾಂ ಸ್ಥಾಪಯಿಷ್ಯತಿ ॥ ೨೦

ಧರ್ಮಕಾಮಃ ಪಿತೃವ್ಯಸ್ತೇ ಪ್ರೀತಿಕಾಮೋ ದೃಢವ್ರತಃ ।
ಶುಚಿಃ ಸತ್ಯಪ್ರತಿಜ್ಞಶ್ಚ ನ ತ್ವಾಂ ಜಾತು ಜಿಘಾಂಸತಿ ॥ ೨೧

ಪ್ರಿಯಕಾಮಶ್ಚ ತೇ ಮಾತುಸ್ತದರ್ಥಂ ಚಾಸ್ಯ ಜೀವಿತಮ್ ।
ತಸ್ಯಾಪತ್ಯಂ ಚ ನಾಸ್ತ್ಯನ್ಯತ್ತಸ್ಮಾದಂಗದ ಗಮ್ಯತಾಮ್ ॥ ೨೨

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಚತುಃಪಂಚಾಶಃ ಸರ್ಗಃ



ಮಹಾವೇಗಶಾಲಿಗಳೂ ದುರ್ಧರ್ಷಗಳೂ ಆದ ಆ ನಾರಾಚಗಳು ನಿನ್ನನ್ನು ಪೀಡಿಸಲು ಹುಡುಕುತ್ತ ಬರುವುವು! (೧೯). ಅಂಗದ, ನೀನು ನಮ್ಮೊಡನೆ ಎಲ್ಲರಂತೆ ವಿನೀತನಾಗಿ ಸುಗ್ರೀವನೆದುರಿಗೆ ಉಪಸ್ಥಿತನಾದರೆ, ಅವನು ಮುಂದೆ ಕ್ರಮವಾಗಿ ನಿನ್ನನ್ನು ಕಿಷ್ಕಿಂಧಾರಾಜ್ಯದಲ್ಲಿ ಸ್ಥಾಪಿಸುವನು. ನಿನ್ನ ಚಿಕ್ಕಪ್ಪನು ಧರ್ಮಶೀಲನೂ ನಿನ್ನಲ್ಲಿ ಪ್ರೀತಿಯುಳ್ಳವನೂ ಆಗಿದ್ದಾನೆ. ಕರ್ತವ್ಯನಿಷ್ಠನೂ ಶುದ್ಧಸ್ವಭಾವದವನೂ ಆಗಿದ್ದಾನೆ. ಸುಗ್ರೀವನು ಕೊಟ್ಟ ಮಾತನ್ನು ನಡೆಸತಕ್ಕವನು. ಅವನು ಎಂದಿಗೂ ನಿನ್ನನ್ನು ಪೀಡಿಸಲು ಬಯಸುವುದಿಲ್ಲ (೨೦-೨೧). ಅಲ್ಲದೆ ನಿನ್ನ ತಾಯಿಗೆ ಪ್ರಿಯವಾದುದನ್ನೇ ಅವನು ಆಚರಿಸುತ್ತಾನೆ. ಅವಳಿಗಾಗಿ ತನ್ನ ಪ್ರಾಣವನ್ನೇ ಮುಡಿಪಾಗಿ ಇಟ್ಟಿದ್ದಾನೆ. ಅಂಗದ. ಸುಗ್ರೀವನಿಗೆ ನೀನಲ್ಲದೆ ಬೇರೆ ಸಂತಾನವೂ ಇಲ್ಲ! ಆದ್ದರಿಂದ, ಸುಮ್ಮನೆ ಸುಗ್ರೀವನ ಬಳಿಗೆ ಬಾ!" ಎಂದು ಬೋಧಿಸಿದನು (೨೨).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಐವತ್ತನಾಲ್ಕನೆಯ ಸರ್ಗ



## ಪಂಚಪಂಚಾಶಃ ಸರ್ಗಃ

### ಪ್ರಾಯೋಪವೇಶಃ

ಶ್ರುತ್ವಾ ಹನುಮತೋ ವಾಕ್ಯಂ ಪ್ರಶ್ರಿತಂ ಧರ್ಮಸಂಹಿತಮ್ ।
ಸ್ವಾಮಿಸತ್ಕಾರಸಂಯುಕ್ತಮಂಗದೋ ವಾಕ್ಯಮಬ್ರವೀತ್ ॥ ೧

ಸ್ಥೈರ್ಯಂ ಸತ್ತ್ವಂ ಮನಃಶೌಚಮಾನೃಶಂಸ್ಯಮಥಾರ್ಜವಮ್ ।
ವಿಕ್ರಮಶ್ಚೈವ ಧೈರ್ಯಂ ಚ ಸುಗ್ರೀವೇ ನೋಪಪದ್ಯತೇ ॥ ೨

ಭ್ರಾತುರ್ಜ್ಯೇಷ್ಠಸ್ಯ ಯೋ ಭಾರ್ಯಾಂ ಜೀವತೋ ಮಹಿಷೀಂ ಪ್ರಿಯಾಂ
ಧರ್ಮೇಣ ಮಾತರಂ ಯಸ್ತು ಸ್ವೀಕರೋತಿ ಜುಗುಪ್ಸಿತಃ ॥ ೩

ಕಥಂ ಸ ಧರ್ಮಂ ಜಾನೀತೇ ಯೇನ ಭ್ರಾತ್ರಾ ಮಹಾತ್ಮನಾ ।
ಯುದ್ಧಾಯಾಭಿನಿಯುಕ್ತೇನ ಬಿಲಸ್ಯ ಪಿಹಿತಂ ಮುಖಮ್ ॥ ೪

### ಸರ್ಗ ೫೫

ಸುಗ್ರೀವನು ಗುಣಶಾಲಿಯೆಂಬುದಕ್ಕೆ ಅಂಗದನ ಅಸಮ್ಮತಿ.
ಅಂಗದಾದಿ ವಾನರರ ಪ್ರಾಯೋಪವೇಶ.

ಈ ರೀತಿಯಾಗಿ ಹನುಮಂತನಾಡಿದ ಮಾತಿನಲ್ಲಿ ವಿನಯವಿತ್ತು; ಧರ್ಮನಿಷ್ಠೆಯಿತ್ತು; ಸ್ವಾಮಿಭಕ್ತಿಯಿತ್ತು. ಅದನ್ನು ಕೇಳಿ ಅಂಗದನು ಪ್ರತಿಯಾಗಿ ಹೀಗೆಂದನು : "ಆಂಜನೇಯ, (ನಿನ್ನ ಹೇಳಿಕೆಯನ್ನು ನಾನು ಒಪ್ಪಲಾರೆ.) ಸುಗ್ರೀವನಲ್ಲಿ ಸ್ಥಿರಬುದ್ಧಿಯೂ ಇಲ್ಲ, ಸಾತ್ತ್ವಿಕಪ್ರವೃತ್ತಿಯೂ ಇಲ್ಲ. ಅಂತಃಕರಣಶುದ್ಧಿ, ಅಹಿಂಸೆ, ಋಜುಮಾರ್ಗ—ಇವು ಯಾವುವೂ ಇಲ್ಲ. ಶೌರ್ಯಧೈರ್ಯಗಳೂ ಅವನಲ್ಲಿ ಕಂಡುಬರುವುದಿಲ್ಲ (೧-೨). ತನ್ನ ಅಣ್ಣನು ಬದುಕಿರುವಾಗಲೇ ಅವನ ಪ್ರಿಯಪತ್ನಿಯನ್ನು—ಅವನ ರಾಣಿಯನ್ನು—ಧರ್ಮದೃಷ್ಟಿಯಿಂದ ತನ್ನ ತಾಯಿಯಾದವಳನ್ನು—ಯಾವನು ಪರಿಗ್ರಹಿಸಿ ಲೋಕಜುಗುಪ್ಸಿತವಾದ ಕಾರ್ಯವನ್ನೆಸಗಿದನೋ ಅವನು ಧರ್ಮಜ್ಞನೆ? (೩). ದ್ವಾರವನ್ನು ರಕ್ಷಿಸುತ್ತಿರೆಂದು ಮಹಾತ್ಮನಾದ ಅಣ್ಣನು ಆಜ್ಞಾಪಿಸಿ ಯುದ್ಧಕ್ಕಾಗಿ ಗುಹೆಯೊಳಗೆ ಹೋದರೆ, ಇತ್ತ ಗುಹೆಯ ದ್ವಾರವನ್ನೇ

*

ಸತ್ಯಾತ್ ಪಾಣಿಗೃಹೀತಶ್ಚ ಕೃತಕರ್ಮಾ ಮಹಾಯಶಾಃ ।
ವಿಸ್ಮೃತೋ ರಾಘವೋ ಯೇನ ಸ ಕಸ್ಯ ತು ಕೃತಂ ಸ್ಮರೇತ್ ॥ ೫

ಲಕ್ಷ್ಮಣಸ್ಯ ಭಯಾದ್ಯೇನ ನಾಧರ್ಮಭಯಭೀರುಣಾ ।
ಆದಿಷ್ಟಾ ಮಾರ್ಗಿತುಂ ಸೀತಾಂ ಧರ್ಮಸ್ತಸ್ಮಿನ್ ಕಥಂ ಭವೇತ್ ॥ ೬

ತಸ್ಮಿನ್ ಪಾಪೇ ಕೃತಘ್ನೇ ತು ಸ್ಮೃತಿಹೀನೇ ಚಲಾತ್ಮನಿ ।
ಆರ್ಯಃ ಕೋ ವಿಶ್ವಸೇಜ್ಜಾತು ತತ್ಕುಲೀನೋ ಜಿಜೀವಿಷುಃ ॥ ೭

ರಾಜ್ಯೇ ಪುತ್ರಃ ಪ್ರತಿಷ್ಠಾಪ್ಯಃ ಸಗುಣೋ ನಿರ್ಗುಣೋಽಪಿ ವಾ ।
ಕಥಂ ಶತ್ರುಕುಲೀನಂ ಮಾಂ ಸುಗ್ರೀವೋ ಜೀವಯಿಷ್ಯತಿ ॥ ೮

ಭಿನ್ನಮಂತ್ರೋಽಪರಾದ್ಧಶ್ಚ ಹೀನಶಕ್ತಿಃ ಕಥಂ ಹ್ಯಹಮ್ ।
ಕಿಷ್ಕಿಂಧಾಂ ಪ್ರಾಪ್ಯ ಜೀವೇಯಮನಾಥ ಇವ ದುರ್ಬಲಃ ॥ ೯

---

ಮುಚ್ಚಿ ಹೊರಟುಬಂದವನು ಧರ್ಮಜ್ಞನೆ? (೪) ಯಾವನು ಸತ್ಯಪೂರ್ವಕವಾಗಿ ರಾಘವನ ಕೈಹಿಡಿದು ಸಖ್ಯವನ್ನು ಬೆಳೆಸಿ ಅವನಿಂದ ತನ್ನ ಕಾರ್ಯವನ್ನು ಸಾಧಿಸಿಕೊಂಡು, ಅನಂತರ, ಕೀರ್ತಿಶಾಲಿಯಾದ ಆ ಮಹಾಪುರುಷನನ್ನೇ ಮರೆತನೋ, ಆತನು ಯಾರ ಉಪಕಾರವನ್ನು ಸ್ಮರಿಸಿಕೊಂಡಾನು? (೫). ಆ ಸುಗ್ರೀವನು ಲಕ್ಷ್ಮಣನಿಗೆ ಅಂಜಿಕೊಂಡು ಸೀತಾದೇವಿಯನ್ನು ಹುಡುಕಲು ನಮ್ಮನ್ನು ಕಳಿಸಿದ್ದಾನೆಯೇ ಹೊರತು ಅಧರ್ಮಕ್ಕೆ ಹೆದರಿ ಕಳಿಸಿಲ್ಲ ಅಂಥವನಲ್ಲಿ ಧರ್ಮದ ಲೇಶವಾದರೂ ಇದ್ದೀತೆ? ಪಾಪಿಯೂ ಕೃತಘ್ನನೂ ಉಪಕಾರಸ್ಮರಣೆಯಿಲ್ಲದವನೂ ಚಪಲಸ್ವಭಾವದವನೂ ಆದ ಸುಗ್ರೀವನಲ್ಲಿ ಉತ್ತಮಕುಲಸಂಭೂತನಾದ ಯಾವ ಸತ್ಪುರುಷನು ನಂಬಿಕೆಯನ್ನಿಡಬಹುದು? ಬದುಕುವ ಇಚ್ಛೆಯುಳ್ಳ ಯಾವನೂ ಎಂದಿಗೂ ಇಡಲಾರ (೬-೭). ಗುಣವಂತನಾಗಲಿ ಗುಣಹೀನನಾಗಲಿ ತನ್ನ ಮಗನನ್ನು ಮುಂದೆ ಅವನು ರಾಜ್ಯದಲ್ಲಿ ಪ್ರತಿಷ್ಠಾಪಿಸುವನೇ ಹೊರತು, ಶತ್ರುಪುತ್ರನಾದ ನನ್ನನ್ನು ಸುಗ್ರೀವನು ಜೀವದಿಂದ ಇರಗೊಡಿಸುವನೆ? ಹನುಮಂತ, ನನ್ನ ಮಂತ್ರಾಲೋಚನೆಯು ಹೊರಬಿದ್ದಿತು ಈಗ ನಾನು ಅಪರಾಧಿಯಾಗಿದ್ದೇನೆ. ಅವನಷ್ಟು ಶಕ್ತಿ ನನಗಿಲ್ಲ. ನಾನು ಅನಾಥನಾದೆನು. ದುರ್ಬಲನಾದ ನಾನು ಕಿಷ್ಕಿಂಧೆಗೆ

ಉಪಾಂಶುದಂಡೇನ ಹಿ ಮಾಂ ಬಂಧನೇನೋಪಪಾದಯೇತ್ ।
ಶಠಃ ಕ್ರೂರೋ ನೃಶಂಸಶ್ಚ ಸುಗ್ರೀವೋ ರಾಜ್ಯಕಾರಣಾತ್ ॥ ೧೦

ಬಂಧನಾದ್ವಾವಸಾದಾನ್ಮೇ ಶ್ರೇಯಃ ಪ್ರಾಯೋಪವೇಶನಮ್ ।
ಅನುಜಾನೀತ ಮಾಂ ಸರ್ವೇ ಗೃಹಂ ಗಚ್ಛಂತು ವಾನರಾಃ ॥ ೧೧

ಅಹಂ ವಃ ಪ್ರತಿಜಾನಾಮಿ ನಾಗಮಿಷ್ಯಾಮ್ಯಹಂ ಪುರೀಮ್ ।
ಇಹೈವ ಪ್ರಾಯಮಾಸಿಷ್ಯೇ ಶ್ರೇಯೋ ಮರಣಮೇವ ಮೇ ॥ ೧೨

ಅಭಿವಾದನಪೂರ್ವಂ ತು ರಾಘವೌ ಬಲಶಾಲಿನೌ ।
ಅಭಿವಾದನಪೂರ್ವಂ ತು ರಾಜಾ ಕುಶಲಮೇವ ಚ ॥ ೧೩

ವಾಚ್ಯಸ್ತಾತೋ ಯವೀಯಾನ್ ಮೇ ಸುಗ್ರೀವೋ ವಾನರೇಶ್ವರಃ ।
ಆರೋಗ್ಯಪೂರ್ವಂ ಕುಶಲಂ ವಾಚ್ಯಾ ಮಾತಾ ರುಮಾ ಚ ಮೇ ॥

ಮಾತರಂ ಚೈವ ಮೇ ತಾರಾಮಾಶ್ವಾಸಯಿತುಮರ್ಹಥ ।
ಪ್ರಕೃತ್ಯಾ ಪ್ರಿಯಪುತ್ರಾ ಸಾ ಸಾನುಕ್ರೋಶಾ ತಪಸ್ವಿನೀ ॥ ೧೫

---

ಹೋದರೆ ಬದುಕಿ ಉಳಿಯುವೆನೆ? (೮-೯). ವಂಚಕನೂ ಕ್ರೂರನೂ ಘಾತುಕನೂ ಆದ ಸುಗ್ರೀವನು ರಾಜ್ಯನಿಮಿತ್ತವಾಗಿ ನನ್ನನ್ನು ರಹಸ್ಯದಲ್ಲಿ ಬಂಧಿಸಿಡಬಹುದು ಸೆರೆಯಲ್ಲಿ ಕೊಳೆಯುವುದಕ್ಕಿಂತಲೂ ನನಗೆ ಪ್ರಾಯೋಪವೇಶವೇ ಉತ್ತಮ. ಓ ವಾನರರೆ, ನೀವೆಲ್ಲರೂ ನನಗೆ ಅನುಜ್ಞೆಯನ್ನು ಕೊಡಿರಿ. ನೀವು ಮನೆಗೆ ಹೋಗಬಹುದು (೧೦-೧೧). ನಿಮಗೆ ಶಪಥ ಪೂರ್ವಕವಾಗಿ ಹೇಳುವೆನು—ನಾನು ಕಿಷ್ಕಿಂಧೆಗೆ ಬರತಕ್ಕವನಲ್ಲ ಇಲ್ಲಿಯೇ ಪ್ರಾಯೋಪವೇಶವನ್ನು ಹಿಡಿದು ಕುಳ್ಳಿರುವೆನು; ನನಗೆ ಮರಣವೇ ಶ್ರೇಯಸ್ಕರ! ಬಲಾಢ್ಯರಾದ ರಾಮಲಕ್ಷ್ಮಣರಿಗೆ ನನ್ನ ಅಭಿವಾದನೆಗಳನ್ನು ತಿಳಿಸಿ, ಅವರ ಕುಶಲವನ್ನು ವಿಚಾರಿಸಿದೆನೆಂದು ಹೇಳಿರಿ. ಹಾಗೆಯೇ ನಮ್ಮ ರಾಜನಿಗೂ ನನ್ನ ಪ್ರಣಾಮಗಳನ್ನರ್ಪಿಸಿ, ಕುಶಲವನ್ನು ಕೇಳಿದೆನೆಂದು ಹೇಳಿರಿ (೧೨-೧೩). ವಾನರೇಶ್ವರನಾದ ಸುಗ್ರೀವನು ಎಷ್ಟಾದರೂ ನನಗೆ ಚಿಕ್ಕಪ್ಪನಲ್ಲವೆ? ನನ್ನ ಚಿಕ್ಕಮ್ಮನಾದ ರುಮೆಗೂ ಅವಳ ಆರೋಗ್ಯವನ್ನೂ ಕ್ಷೇಮವನ್ನೂ ವಿಚಾರಿಸಿದೆನೆಂದು ನಿವೇದಿಸಿರಿ. ಅಲ್ಲದೆ ನನ್ನ ಮಾತೆಯಾದ ತಾರೆಯನ್ನು ನೀವು ಸಂತೈಸಬೇಕು. ತನ್ನ ಪುತ್ರನಲ್ಲಿ ಸಹಜವಾಗಿ

ವಿನಷ್ಟಮಿಹ ಮಾಂ ಶ್ರುತ್ವಾ ವ್ಯಕ್ತಂ ಹಾಸ್ಯತಿ ಜೀವಿತಮ್ ।
ಏತಾವದುಕ್ತ್ವಾ ವಚನಂ ವೃದ್ಧಾಂಸ್ತಾನಭಿವಾದ್ಯ ಚ ॥ ೧೬
ವಿವೇಶ ಚಾಂಗದೋ ಭೂಮೌ ರುದನ್ ದರ್ಭೇಷು ದುರ್ಮನಾಃ ।
ತಸ್ಯ ಸಂವಿಶತಸ್ತತ್ರ ರುದಂತೋ ವಾನರರ್ಷಭಾಃ ॥ ೧೭
ನಯನೇಭ್ಯಃ ಪ್ರಮುಮುಚುರುಷ್ಣಂ ವೈ ವಾರಿ ದುಃಖಿತಾಃ ।
ಸುಗ್ರೀವಂ ಚೈವ ನಿಂದಂತಃ ಪ್ರಶಂಸಂತಶ್ಚ ವಾಲಿನಮ್ ॥ ೧೮
ಪರಿವಾರ್ಯಾಂಗದಂ ಸರ್ವೇ ವ್ಯವಾಸ್ಯನ್ ಪ್ರಾಯಮಾಸಿತುಮ್ ।
ಮತಂ ತದ್ವಾಲಿಪುತ್ರಸ್ಯ ವಿಜ್ಞಾಯ ಪ್ಲವಗರ್ಷಭಾಃ ॥ ೧೯
ಉಪಸ್ಪೃಶ್ಯೋದಕಂ ತತ್ರ ಪ್ರಾಙ್ಮುಖಾಃ ಸಮುಪಾವಿಶನ್ ।
ದಕ್ಷಿಣಾಗ್ರೇಷು ದರ್ಭೇಷು ಉದಕ್ತೀರಂ ಸಮಾಶ್ರಿತಾಃ ॥ ೨೦
ಮುಮೂರ್ಷವೋ ಹರಿಶ್ರೇಷ್ಠಾ ಏತತ್ ಕ್ಷಮಮಿತಿ ಸ್ಮ ಹ ।
ರಾಮಸ್ಯ ವನವಾಸಂ ಚ ಕ್ಷಯಂ ದಶರಥಸ್ಯ ಚ ॥ ೨೧

---

ಅವಳಿಗೆ ಬಹಳ ಪ್ರೀತಿಯುಂಟು ಕನಿಕರಪಡುವ ಸ್ವಭಾವದವಳು ಈಗ ಶೋಚನೀಯಸ್ಥಿತಿಯಲ್ಲಿದ್ದಾಳೆ (೧೪-೧೫). ಇಲ್ಲಿ ನಾನು ಮೃತನಾದೆ ನೆಂಬ ಸುದ್ದಿಯನ್ನು ಕೇಳಿ, ಅವಳು ಪ್ರಾಣವನ್ನು ತೊರೆಯುವುದೇ ನಿಶ್ಚಯ" ಎಂದು ಹಲುಬಿದನು. ಇಷ್ಟು ಹೇಳಿ ಅಂಗದನು ಹಿರಿಯರಾದ ಕಪಿನಾಯಕರಿಗೆ ಅಭಿವಾದನೆ ಮಾಡಿದನು. ಅನಂತರ ನೆಲದಮೇಲೆ ದರ್ಭೆಗಳನ್ನು ಹರಡಿ ಕಣ್ಣೀರುಸುರಿಸುತ್ತ ಖಿನ್ನನಾಗಿ ಮಲಗಿಬಿಟ್ಟನು (೧೬-೧೭). ಈ ರೀತಿಯಲ್ಲಿ ಅಂಗದನು ನೆಲದಮೇಲೆ ಮಲಗಿದುದನ್ನು ಕಂಡು, ಅಲ್ಲಿದ್ದ ವಾನರರು ಸಂಕಟದಿಂದ ಅಳಲಾರಂಭಿಸಿದರು. ಅವರ ಕಣ್ಣುಗಳಿಂದ ಬಿಸಿಯಾದ ಕಂಬನಿ ಹರಿಯಿತು. ಆ ಕಪಿನಾಯಕರು ಸುಗ್ರೀವನನ್ನು ತೆಗಳುತ್ತ, ವಾಲಿಯನ್ನು ಹೊಗಳುತ್ತ, ಅಂಗದನ ಸುತ್ತಲೂ ಸೇರಿ ತಾವೂ ಪ್ರಾಯೋಪವೇಶವನ್ನಾಚರಿಸಲು ಉದ್ಯುಕ್ತರಾದರು (೧೮-೧೯). ಆ ಕಪಿವೀರರು ಶುದ್ಧಾಚಮನವನ್ನು ಮಾಡಿ ತೆಂಕಣಕಡಲಿನ ಉತ್ತರತೀರದಲ್ಲಿ ದಕ್ಷಿಣಾಭಿಮುಖವಾಗಿ ದರ್ಭೆಗಳನ್ನು ಹರಡಿ, ತಾವು ಪೂರ್ವಾಭಿಮುಖವಾಗಿ ಅದರ ಮೇಲೆ ಕುಳಿತರು. ಅವರು ಸಾವನ್ನು ಬಯಸಿ 'ಇದೇ ನಮಗೆ ಸರಿ'

ಜನಸ್ಥಾನವಧಂ ಚೈವ ವಧಂ ಚೈವ ಜಟಾಯುಷಃ ।
ಹರಣಂ ಚೈವ ವೈದೇಹ್ಯಾ ವಾಲಿನಶ್ಚ ವಧಂ ರಣೇ ॥ ೨೨
ರಾಮಕೋಪಂ ಚ ವದತಾಂ ಹರೀಣಾಂ ಭಯಮಾಗತಮ್ ॥

ಏವಂ ವದದ್ಭಿರ್ಬಹುಭಿರ್ಮಹೀಧರೋ
ಮಹಾದ್ರಿಕೂಟಪ್ರತಿಮೈಃ ಪ್ಲವಂಗಮೈಃ ।
ಬಭೂವ ಸಂನಾದಿತನಿರ್ದರಾಂತರೋ
ಭೃಶಂ ನದದ್ಭಿರ್ಜಲದೈರಿವಾಂಬರಮ್ ॥ ೨೩

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಪಂಚಪಂಚಾಶಃ ಸರ್ಗಃ



ಎಂದು ನಿಶ್ಚಯಿಸಿದರು. ಶ್ರೀರಾಮನ ವನವಾಸ, ದಶರಥನ ಮರಣ—ಇವುಗಳನ್ನು ಒಬ್ಬರಿಗೊಬ್ಬರು ಹೇಳಿಕೊಳ್ಳುತ್ತಿದ್ದರು (೨೦-೨೧). ಜನಸ್ಥಾನದಲ್ಲಿ ನಡೆದ ಖರಾದಿಗಳ ಸಂಹಾರ, ಜಟಾಯುವಿನ ವಧೆ, ವೈದೇಹಿಯ ಅಪಹಾರ, ವಾಲಿಸಂಹಾರ—ಮುಂತಾದ ಸಂದರ್ಭಗಳನ್ನು ಕುರಿತು ಮಾತನಾಡುತ್ತಿದ್ದರು. ಶ್ರೀರಾಮನ ಕೋಪಪ್ರಕಾರವನ್ನು ಹೇಳಿಕೊಳ್ಳುವಾಗ ಆ ವಾನರರಿಗೆ ಭಯವಾಯಿತು (೨೨). ಶೈಲಶಿಖರದಂತೆ ಬೃಹದಾಕಾರವಾಗಿ ಬಹುಸಂಖ್ಯೆಯಲ್ಲಿದ್ದ ಆ ಕಪಿಗಳು ಕೋಲಾಹಲದೊಡನೆ ಹೀಗೆ ಮಾತನಾಡುವಾಗ, ಆ ಬೆಟ್ಟದ ಗುಹೆಗಳಲ್ಲಿ ಮೊಳಗುತ್ತಿತ್ತು. ಅಂಬರದಲ್ಲಿ ಅಂಬುದಗಳು ಘೋರ್ಗರೆಯುವಂತೆ ಶಬ್ದವಾಗುತ್ತಿತ್ತು (೨೩).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಐವತ್ತೈದನೆಯ ಸರ್ಗ



## ಷಟ್ಪಂಚಾಶಃ ಸರ್ಗಃ

### ಸಂಪಾತಿಪ್ರಶ್ನಃ

ಉಪವಿಷ್ಟಾಸ್ತು ತೇ ಸರ್ವೇ ಯಸ್ಮಿನ್ ಪ್ರಾಯಂ ಗಿರಿಸ್ಥಲೀ ।
ಹರಯೋ ಗೃಧ್ರರಾಜಶ್ಚ ತಂ ದೇಶಮುಪಚಕ್ರಮೇ ॥ ೧

ಸಂಪಾತಿರ್ನಾಮ ನಾಮ್ನಾ ತು ಚಿರಜೀವೀ ವಿಹಂಗಮಃ ।
ಭ್ರಾತಾ ಜಟಾಯುಷಃ ಶ್ರೀಮಾನ್ ಪ್ರಖ್ಯಾತಬಲಪೌರುಷಃ ॥ ೨

ಕಂದರಾದಭಿನಿಷ್ಕ್ರಮ್ಯ ಸ ವಿಂಧ್ಯಸ್ಯ ಮಹಾಗಿರೇಃ ।
ಉಪವಿಷ್ಟಾನ್ ಹರೀನ್ ದೃಷ್ಟ್ವಾ ಹೃಷ್ಟಾತ್ಮಾ ಗಿರಮಬ್ರವೀತ್ ॥ ೩

ವಿಧಿಃ ಕಿಲ ನರಂ ಲೋಕೇ ವಿಧಾನೇನಾನುವರ್ತತೇ ।
ಯಥಾಯಂ ವಿಹಿತೋ ಭಕ್ಷ್ಯಶ್ಚಿರಾನ್ಮಹ್ಯಮುಪಾಗತಃ ॥ ೪

ಪರಂಪರಾಣಾಂ ಭಕ್ಷಿಷ್ಯೇ ವಾನರಾಣಾಂ ಮೃತಂ ಮೃತಮ್ ।
ಉವಾಚೇದಂ ವಚಃ ಪಕ್ಷೀ ತಾನ್ನಿರೀಕ್ಷ್ಯ ಪ್ಲವಂಗಮಾನ್ ॥ ೫

## ಸರ್ಗ ೫೬

### ಸಂಪಾತಿಯ ಆಗಮನ. ಅವನನ್ನು ಕಂಡು ವಾನರರ ದುಃಖೋದ್ಗಾರ.

ಈ ರೀತಿಯಲ್ಲಿ ವಾನರರು ಪ್ರಾಯೋಪವೇಶವನ್ನು ಹಿಡಿದು ಯಾವ ಪರ್ವತಪ್ರಾಂತದಲ್ಲಿ ಕುಳಿತಿದ್ದರೋ, ಅಲ್ಲಿಗೆ ಒಂದು ದೊಡ್ಡ ಗೃಧ್ರವು ಬಂದಿತು. ಅದರ ಹೆಸರು ಸಂಪಾತಿ. ಸಂಪಾತಿಯು ಬಹುಕಾಲ ಬದುಕಿ ವಯಸ್ಸಾಗಿದ್ದ ಪಕ್ಷಿರಾಜ. ಆತನು ಜಟಾಯುವಿನ ಅಣ್ಣ. ಬಲಪೌರುಷ ಗಳಲ್ಲಿ ವಿಖ್ಯಾತನಾದ ವರ್ಚಸ್ವಿ (೧–೨). ಅವನು ವಿಂಧ್ಯಪರ್ವತಶ್ರೇಣಿಯ ಒಂದು ಗುಹೆಯಿಂದ ಹೊರಬಂದು, ಅಲ್ಲಿ ಕುಳಿತಿದ್ದ ಕಪಿಗಳನ್ನು ಕಂಡು ಸಂತುಷ್ಟನಾದನು ! ಆ ಸಂಪಾತಿಯು ಕಪಿಗಳನ್ನು ನೋಡುತ್ತ “ ಭಲಾ ! ಅದೃಷ್ಟವೆಂದರೆ ಇದು ! ಲೋಕದಲ್ಲಿ ಅದೃಷ್ಟವು ತನ್ನದೇ ಆದ ಒಂದು ವಿಧಾನದಿಂದ ಜನರಿಗೆ ಅನುಕೂಲವಾಗಿ ಪರಿಣಮಿಸುತ್ತದೆ ! ಬಹುಕಾಲದ ಮೇಲೆ ಸೊಗಸಾದ ಔತಣವು ತಾನಾಗಿ ನನಗೆ ದೊರಕಿತು ! (೩–೪). ಸಾಲುಸಾಲಾಗಿ ಕುಳಿತ ಈ ಕಪಿಗಳಲ್ಲಿ ಒಂದೊಂದನ್ನೂ ಕೊಂದು ಕೊಂದು




ಸಂಪಾತಿಯ ಸಮಾಗಮ

ತಸ್ಯ ತದ್ವಚನಂ ಶ್ರುತ್ವಾ ಭಕ್ಷ್ಯಲುಬ್ಧಸ್ಯ ಪಕ್ಷಿಣಃ ।
ಅಂಗದಃ ಪರಮಾಯಸ್ತೋ ಹನುಮಂತಮಥಾಬ್ರವೀತ್ ॥ ೬

ಪಶ್ಯ ಸೀತಾಪದೇಶೇನ ಸಾಕ್ಷಾದ್ವೈವಸ್ವತೋ ಯಮಃ ।
ಇಮಂ ದೇಶಮನುಪ್ರಾಪ್ತೋ ವಾನರಾಣಾಂ ವಿಪತ್ತಯೇ ॥ ೭

ರಾಮಸ್ಯ ನ ಕೃತಂ ಕಾರ್ಯಂ ರಾಜ್ಞೋ ನ ಚ ವಚಃ ಕೃತಮ್ ।
ಹರೀಣಾಮಿಯಮಜ್ಞಾತಾ ವಿಪತ್ತಿಃ ಸಹಸಾಗತಾ ॥ ೮

ವೈದೇಹ್ಯಾಃ ಪ್ರಿಯಕಾಮೇನ ಕೃತಂ ಕರ್ಮ ಜಟಾಯುಷಾ ।
ಗೃಧ್ರರಾಜೇನ ಯತ್ತತ್ರ ಶ್ರುತಂ ವಸ್ತದಶೇಷತಃ ॥ ೯

ತಥಾ ಸರ್ವಾಣಿ ಭೂತಾನಿ ತಿರ್ಯಗ್ಯೋನಿಗತಾನ್ಯಪಿ ।
ಪ್ರಿಯಂ ಕುರ್ವಂತಿ ರಾಮಸ್ಯ ತ್ಯಕ್ತ್ವಾ ಪ್ರಾಣಾನ್ ಯಥಾ ವಯಮ್
ಅನ್ಯೋನ್ಯಮುಪಕುರ್ವಂತಿ ಸ್ನೇಹಕಾರುಣ್ಯಯಂತ್ರಿತಾಃ ।
ತೇನ ತಸ್ಯೋಪಕಾರಾರ್ಥಂ ತ್ಯಜತಾತ್ಮಾನಮಾತ್ಮನಾ ॥ ೧೦

---

ತಿನ್ನುತ್ತ ಹೋಗುವೆನು !" ಎಂದು ಉದ್ಗರಿಸಿದನು. ಆ ವಾನರರನ್ನು ಕುರಿತು ತಿನ್ನುವ ಲೋಭದಿಂದ ಹೀಗೆ ಹೇಳುತ್ತ ಬಂದ ಸಂಪಾತಿಯ ಮಾತನ್ನು ಕೇಳಿ ಅಂಗದನಿಗೆ ಬಹಳ ವ್ಯಥೆಯಾಯಿತು (೫-೬). ಅವನು ಹನುಮಂತನನ್ನು ನೋಡಿ ಹೀಗೆಂದನು : "ಹನುಮಂತ, ಅಲ್ಲಿ ನೋಡು ! ಸೀತೆಯ ನೆವದಲ್ಲಿ ಎಲ್ಲ ವಾನರರೂ ವಿಪತ್ತಿಗೊಳಗಾದೆವು. ಸೂರ್ಯಪುತ್ರನಾದ ಯಮನೇ ಸಾಕ್ಷಾತ್ತಾಗಿ ಇಲ್ಲಿಗೆ ಬಂದನು ! ನಾವು ಶ್ರೀರಾಮನ ಕಾರ್ಯವನ್ನೂ ಸಾಧಿಸಲಿಲ್ಲ ; ಸುಗ್ರೀವರಾಜನ ಆಜ್ಞೆಯನ್ನೂ ಪಾಲಿಸಲಿಲ್ಲ. ಅಚಿಂತಿತವಾದ ಈ ವಿಪತ್ತು ಥಕ್ಕನೆ ವಾನರರಿಗೆ ಬಂದೊದಗಿತಲ್ಲ ! (೭-೮). ವೈದೇಹಿಗೆ ಒಳ್ಳೆಯದಾಗಲೆಂದು ಗೃಧ್ರರಾಜನಾದ ಜಟಾಯುವು ಯಾವ ಸಾಹಸಕೃತ್ಯವನ್ನೆಸಗಿದನು ! ಅದೆಲ್ಲವನ್ನೂ ನೀವು ಕೇಳಿಬಲ್ಲಿರಿ. ಜಟಾಯುವಿನಂತೆ ಸಕಲ ಪ್ರಾಣಿಗಳೂ ತಿರ್ಯಗ್ಜಂತುಗಳೂ ಸಹ ತಮ್ಮ ಪ್ರಾಣವನ್ನು ಮುಡಿಪಿಟ್ಟು ಶ್ರೀರಾಮನಿಗೆ ಉಪಕಾರವನ್ನು ಮಾಡುತ್ತಿದ್ದಾರೆ. ನಮ್ಮಂತೆಯೇ ಉಪಕರಿಸುತ್ತಿದ್ದಾರೆ (೯-೧೦). ಶ್ರೀರಾಮನ ಸ್ನೇಹಕ್ಕೂ ಅವನ ಕಾರುಣ್ಯಕ್ಕೂ ಕಟ್ಟುಬಿದ್ದು ಅನ್ಯೋನ್ಯವಾಗಿ ಸಹಕರಿಸುತ್ತಿದ್ದಾರೆ. ಹಾಗೆ ಆತನ

ಪ್ರಿಯಂ ಕೃತಂ ಹಿ ರಾಮಸ್ಯ ಧರ್ಮಜ್ಞೇನ ಜಟಾಯುಷಾ ।
ರಾಘವಾರ್ಥೇ ಪರಿಶ್ರಾಂತಾ ವಯಂ ಸಂತ್ಯಕ್ತಜೀವಿತಾಃ ॥ ೧೨

ಕಾಂತಾರಾಣಿ ಪ್ರಪನ್ನಾಃ ಸ್ಮ ನ ಚ ಪಶ್ಯಾಮ ಮೈಥಿಲೀಮ್ ।
ಸ ಸುಖೀ ಗೃಧ್ರರಾಜಸ್ತು ರಾವಣೇನ ಹತೋ ರಣೇ ॥ ೧೩

ಮುಕ್ತಶ್ಚ ಸುಗ್ರೀವಭಯಾದ್ಗತಶ್ಚ ಪರಮಾಂ ಗತಿಮ್ ।
ಜಟಾಯುಷೋ ವಿನಾಶೇನ ರಾಜ್ಞೋ ದಶರಥಸ್ಯ ಚ ॥ ೧೪

ಹರಣೇನ ಚ ವೈದೇಹ್ಯಾಃ ಸಂಶಯಂ ಹರಯೋ ಗತಾಃ ।
ರಾಮಲಕ್ಷ್ಮಣಯೋರ್ವಾಸ ಅರಣ್ಯೇ ಸಹ ಸೀತಯಾ ॥ ೧೫

ರಾಘವಸ್ಯ ಚ ಬಾಣೇನ ವಾಲಿನಶ್ಚ ತಥಾ ವಧಃ ।
ರಾಮಕೋಪಾದಶೇಷಾಣಾಂ ರಾಕ್ಷಸಾನಾಂ ತಥಾ ವಧಃ ॥ ೧೬

---

ಉಪಕಾರಕ್ಕಾಗಿ ಜಟಾಯುವು ತಾನಾಗಿಯೇ ಆತ್ಮಾರ್ಪಣಮಾಡಿಕೊಂಡನು. ಧರ್ಮಜ್ಞನಾದ ಆತನು ಶ್ರೀರಾಮನಿಗೆ ಪ್ರಿಯವಾಗಲೆಂದು ಪ್ರಾಣವನ್ನೊಪ್ಪಿಸಿದನು. ಈಗ ನಾವಾದರೋ ರಾಘವನಿಗೋಸ್ಕರ ಪ್ರಾಣದ ಆಸೆಯನ್ನು ತೊರೆದು ಅಲೆದು ಬಳಲಿದೆವು (೧೧-೧೨). ಅರಣ್ಯಗಳಿಗೆ ಬಂದು ಹುಡುಕಿದೆವು. ಮೈಥಿಲಿಯನ್ನು ಮಾತ್ರ ಕಾಣಲಿಲ್ಲ. ಹನುಮಂತ, ರಣದಲ್ಲಿ ರಾವಣನಿಂದ ಹತನಾದ ಗೃಧ್ರರಾಜನೇ ಸುಖವಂತನೆನ್ನಬೇಕು! ಈ ರೀತಿಯಲ್ಲಿ ಸುಗ್ರೀವನಿಗೆ ಅಂಜಬೇಕಾದ ಪರಿಸ್ಥಿತಿ ಜಟಾಯುವಿಗೆ ಬರಲಿಲ್ಲ! ಅವನಿಗೆ ಸದ್ಗತಿಯೂ ಒದಗಿತು. ಜಟಾಯುವಿನ ಹನನ, ದಶರಥರಾಜನ ಮರಣ, ಸೀತಾದೇವಿಯ ಹರಣ – ಇವು ಮೂರರಿಂದ* ಕಪಿಗಳು ಮರಣಸಂಕಟಕ್ಕೀಡಾದರು! (೧೩-೧೪). ರಾಮಲಕ್ಷ್ಮಣರು ಸೀತೆಯೊಡನೆ ಅರಣ್ಯದಲ್ಲಿ ವಾಸಮಾಡಿದ್ದು, ರಾಮಬಾಣದಿಂದ ವಾಲಿಯ ವಧೆ, ರಾಮನ ಕ್ರೋಧದಿಂದ ಜನಸ್ಥಾನದಲ್ಲಿ ಸಕಲ ರಾಕ್ಷಸರ ಸಂಹಾರ – ಈ ವಿಪರೀತವೆಲ್ಲವೂ ಕೈಕೇಯಿಗೆ ವರವನ್ನು

---

* ಜಟಾಯುವು ಬದುಕಿದ್ದು ಇನ್ನೂ ಹೆಚ್ಚು ಹೊತ್ತು ರಾವಣನನ್ನು ತಡೆದಿದ್ದರೆ ರಾವಣನು ಶ್ರೀರಾಮನಿಗೆ ಗೋಚರನಾಗುತ್ತಿದ್ದನೆಂದೂ, ದಶರಥನು ಬದುಕಿದ್ದರೆ ಭರತನ ಒಪ್ಪಿಗೆಯಿಂದ ಹೇಗಾದರೂ ಶ್ರೀರಾಮನನ್ನು ಅಯೋಧ್ಯೆಗೆ ಕರೆದೊಯ್ಯುತ್ತಿದ್ದನೆಂದೂ ಅಭಿಪ್ರಾಯ.

ಕೈಕೇಯ್ಯಾ ವರದಾನೇನ ಇದಂ ಹಿ ವಿಕೃತಂ ಕೃತಮ್ ॥

ತದಸುಖಮನುಕೀರ್ತಿತಂ ವಚೋ
ಭುವಿ ಪತಿತಾಂಶ್ಚ ಸಮೀಕ್ಷ್ಯ ವಾನರಾನ್ ।
ಭೃಶಚಲಿತಮತಿರ್ಮಹಾಮತಿಃ
ಕೃಪಣಮುದಾಹೃತವಾನ್ ಸ ಗೃಧ್ರರಾಟ್ ॥ ೧೯

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಷಟ್‌ಪಂಚಾಶಃ ಸರ್ಗಃ



ಕೊಟ್ಟುದರಿಂದ ಪ್ರಾಪ್ತವಾಯಿತು!" ಎಂದು ಹೇಳಿದನು (೧೫-೧೮). ಇತ್ತ ಸಂಪಾತಿಯು ಅಂಗದನಾಡಿದ ದುಃಖಕರವಾದ ಮಾತನ್ನು ಆಲಿಸಿದನು. ಅತ್ತ ವಾನರರು (ಶೋಕಿಸುತ್ತ) ನೆಲದಲ್ಲಿ ಮಲಗಿರುವುದನ್ನೂ ಕಂಡನು. ಆಗ ಧೀಮಂತನಾದ ಆ ಗೃಧ್ರರಾಜನ ಮನಸ್ಸು ಪೂರ್ತಿಯಾಗಿ ಕಲಕಿ ಹೋಯಿತು. ಅವನು ಮರುಗುತ್ತ ದೈನ್ಯದಿಂದ ಮಾತಾಡಿದನು (೧೯).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಐವತ್ತಾರನೆಯ ಸರ್ಗ



## ಸಪ್ತಪಂಚಾಶಃ ಸರ್ಗಃ

### ಜಟಾಯುರ್ದಿಷ್ಟಕಥನಮ್

ತತ್ತು ಶ್ರುತ್ವಾ ತದಾ ವಾಕ್ಯಮಂಗದಸ್ಯ ಮುಖೋದ್ಗತಮ್ ।
ಅಬ್ರವೀದ್ವಚನಂ ಗೃಧ್ರಸ್ತೀಕ್ಷ್ಣತುಂಡೋ ಮಹಾಸ್ವನಃ ॥ ೧

ಕೋಽಯಂ ಗಿರಾ ಘೋಷಯತಿ ಪ್ರಾಣೈಃ ಪ್ರಿಯತರಸ್ಯ ಮೇ ।
ಜಟಾಯುಷೋ ವಧಂ ಭ್ರಾತುಃ ಕಂಪಯನ್ನಿವ ಮೇ ಮನಃ ॥ ೨

ಕಥಮಾಸೀಜ್ಜನಸ್ಥಾನೇ ಯುದ್ಧಂ ರಾಕ್ಷಸಗೃಧ್ರಯೋಃ ।
ನಾಮಧೇಯಮಿದಂ ಭ್ರಾತುಶ್ಚಿರಸ್ಯಾದ್ಯ ಮಯಾ ಶ್ರುತಮ್ ॥ ೩

ಇಚ್ಛೇಯಂ ಗಿರಿದುರ್ಗಾಚ್ಚ ಭವದ್ಭಿರವತಾರಿತುಮ್ ।
ಯವೀಯಸೋ ಗುಣಜ್ಞಸ್ಯ ಶ್ಲಾಘನೀಯಸ್ಯ ವಿಕ್ರಮೈಃ ॥ ೪

ಅತಿದೀರ್ಘಸ್ಯ ಕಾಲಸ್ಯ ತುಷ್ಟೋಽಸ್ಮಿ ಪರಿಕೀರ್ತನಾತ್ ।
ತದಿಚ್ಛೇಯಮಹಂ ಶ್ರೋತುಂ ವಿನಾಶಂ ವಾನರರ್ಷಭಾಃ ॥ ೫

### ಸರ್ಗ ೫೭

**ಸಂಪಾತಿಯ ಪ್ರಶ್ನೆ. ವಾನರರು ಜಟಾಯುವಿನ ವೃತ್ತಾಂತವನ್ನು ತಿಳಿಸುವುದು.**

ಅಂಗದನ ಬಾಯಿಂದ ಬಂದ ಆ ನುಡಿಗಳನ್ನಾಲಿಸಿ, ಹರಿತವಾದ ಕೊಕ್ಕುಳ್ಳ ಆ ಗೃಧ್ರರಾಜನು ಉಚ್ಚಸ್ವರದಿಂದ ಹೀಗೆಂದನು: "ಎಲ್ಲೈ ಯಾರದು? ಜಟಾಯುವಿನ ವಧೆಯನ್ನು ಸಾರಿಹೇಳತಕ್ಕವನು ಯಾವನವನು? ಜಟಾಯುವು ನನ್ನ ಪ್ರಾಣಕ್ಕಿಂತಲೂ ಪ್ರಿಯನಾದ ಸೋದರ. ಈ ಸುದ್ದಿಯಿಂದ ನನ್ನ ಮನಸ್ಸು ಹೆದರಿ ನಡುಗಿಹೋಗುತ್ತಿದೆಯಲ್ಲ? (೧-೨). ಜನಸ್ಥಾನದಲ್ಲಿ ಆ ರಾಕ್ಷಸನಿಗೂ ಜಟಾಯುವಿಗೂ ಯುದ್ಧವೇಕೆ ಸಂಭವಿಸಿತು? ನನ್ನ ತಮ್ಮನ ಹೆಸರನ್ನು ಬಹುಕಾಲದಮೇಲೆ ಕೇಳಿದೆನು ಈ ಬೆಟ್ಟದ ತಿಟ್ಟಿನಿಂದ ನನ್ನನ್ನು ನೀವು ಸ್ವಲ್ಪ ಕೆಳಗಿಳಿಸುವಿರಾ? ನನ್ನ ತಮ್ಮನು ಗುಣಶಾಲಿಯೂ ವಿಖ್ಯಾತಪರಾಕ್ರಮನೂ ಆಗಿದ್ದನು (೩-೪). ಬಹುದೀರ್ಘಕಾಲವಾದಮೇಲೆ ಅವನ ಹೆಸರನ್ನು ನೀವು ಕೀರ್ತಿಸಿದ್ದರಿಂದ ನಾನು ಸಂತುಷ್ಟ

ಭ್ರಾತುರ್ಜಟಾಯುಷಸ್ತಸ್ಯ ಜನಸ್ಥಾನನಿವಾಸಿನಃ ।
ತಸ್ಯೈವ ಚ ಮಮ ಭ್ರಾತುಃ ಸಖಾ ದಶರಥಃ ಕಥಮ್ ॥ ೬

ಯಸ್ಯ ರಾಮಃ ಪ್ರಿಯಃ ಪುತ್ರೋ ಜ್ಯೇಷ್ಠೋ ಗುರುಜನಪ್ರಿಯಃ ।
ಸೂರ್ಯಾಂಶುದಗ್ಧಪಕ್ಷತ್ವಾನ್ನ ಶಕ್ನೋಮ್ಯುಪಸರ್ಪಿತುಮ್ ॥ ೭

ಇಚ್ಛೇಯಂ ಪರ್ವತಾದಸ್ಮಾದವತರ್ತುಮರಿಂದಮಾಃ ।
ಶೋಕಾದ್ಭ್ರಷ್ಟಸ್ವರಮಪಿ ಶ್ರುತ್ವಾ ತೇ ಹರಿಯೂಥಪಾಃ ॥ ೮

ಶ್ರದ್ದಧುರ್ನೈವ ತದ್ವಾಕ್ಯಂ ಕರ್ಮಣಾ ತಸ್ಯ ಶಂಕಿತಾಃ ।
ತೇ ಪ್ರಾಯಮುಪವಿಷ್ಟಾಸ್ತು ದೃಷ್ಟ್ವಾ ಗೃಧ್ರಂ ಪ್ಲವಂಗಮಾಃ ॥ ೯

ಚಕ್ರುರ್ಬುದ್ಧಿಂ ತದಾ ರೌದ್ರಾಂ ಸರ್ವಾನ್ನೋ ಭಕ್ಷಯಿಷ್ಯತಿ ।
ಸರ್ವಥಾ ಪ್ರಾಯಮಾಸೀನಾನ್ ಯದಿ ನೋ ಭಕ್ಷಯಿಷ್ಯತಿ ॥ ೧೦

ಕೃತಕೃತ್ಯಾ ಭವಿಷ್ಯಾಮಃ ಕ್ಷಿಪ್ರಂ ಸಿದ್ಧಿಮಿತೋ ಗತಾಃ ।
ಏತಾಂ ಬುದ್ಧಿಂ ತತಶ್ಚಕ್ರುಃ ಸರ್ವೇ ತೇ ವಾನರರ್ಷಭಾಃ ॥ ೧೧

---

ನಾದೆನು ! ಓ ವಾನರೋತ್ತಮರೆ, ಅವನ ಮರಣವೃತ್ತಾಂತವನ್ನು ಕೇಳಬೇಕೆಂದಿರುವೆನು ನನ್ನ ತಮ್ಮನಾದ ಜಟಾಯುವು ಜನಸ್ಥಾನದಲ್ಲಿರುವಾಗ ಸಾವು ಹೇಗೆ ಸಂಭವಿಸಿತು ? ದಶರಥನು ಅವನಿಗೆ ಮಿತ್ರನಾದುದು ಹೇಗೆ ? (೫-೬) ಗುರುಜನಪ್ರಿಯನಾದ ರಾಮನು ದಶರಥನಿಗೆ ಪ್ರಿಯನಾದ ಜ್ಯೇಷ್ಠಪುತ್ರನೆಂದು ಹೇಳಿದಿರಲ್ಲವೆ ? ನನ್ನ ರೆಕ್ಕೆಗಳು ಸೂರ್ಯಕಿರಣಗಳಿಂದ ಸುಟ್ಟುಹೋಗಿವೆಯಾದ್ದರಿಂದ ಇಳಿದುಬರಲು ಅಶಕ್ತನಾಗಿದ್ದೇನೆ. ಎಲೈ ವೀರರೆ, ಈ ಬೆಟ್ಟದ ತಿಟ್ಟಿನಿಂದ ದಯಮಾಡಿ ನನ್ನನ್ನು ಕೆಳಗಿಳಿಸುವಿರಾ ?" ಎಂದನು. ಶೋಕಾರ್ತನಾದ ಸಂಪಾತಿಯು ಗದ್ಗದಸ್ವರದಿಂದ ಹಾಗೆ ಮಾತನಾಡಿದರೂ ಕಪಿನಾಯಕರಿಗೆ ಅವನ ಮಾತಿನಲ್ಲಿ ನಂಬಿಕೆ ಹುಟ್ಟಲಿಲ್ಲ (೭-೮). ಮುಂದೆ ಯಾವ ಕೃತ್ಯವನ್ನೆಸಗುವನೋ ಎಂದು ಅವರಿಗೆ ಹೆದರಿಕೆಯಾಗಿತ್ತು. ಪ್ರಾಯೋಪವಿಷ್ಟರಾಗಿದ್ದ ಆ ವಾನರರು ಗೃಧ್ರವನ್ನು ಮತ್ತೆಮತ್ತೆ ನೋಡಿ "ಈ ಹದ್ದು ನಮ್ಮನ್ನು ತಿನ್ನುವುದು" ಎಂದು ತೀವ್ರವಾದ ಚಿಂತೆಯಲ್ಲೇ ಇದ್ದರು. ಕಡೆಯಲ್ಲಿ "ನಾವು ಹೇಗಿದ್ದರೂ ಸಾಯುವುದಕ್ಕಾಗಿಯೇ ಪ್ರಾಯೋಪವೇಶವನ್ನಾರಂಭಿಸಿದ್ದೇವೆ ! ಇದು ನಮ್ಮನ್ನು

ಅವತಾರ್ಯ ಗಿರೇಃ ಶೃಂಗಾದ್ಗೃಧ್ರಮಾಹಾಂಗದಸ್ತದಾ ।
ಬಭೂವರ್ಕ್ಷರಜಾ ನಾಮ ವಾನರೇಂದ್ರಃ ಪ್ರತಾಪವಾನ್ ॥ ೧೨

ಮಮಾರ್ಯಃ ಪಾರ್ಥಿವಃ ಪಕ್ಷಿನ್ ಧಾರ್ಮಿಕಸ್ತಸ್ಯ ಚಾತ್ಮಜೌ ।
ಸುಗ್ರೀವಶ್ಚೈವ ವಾಲೀ ಚ ಪುತ್ರಾವೋಘಬಲಾವುಭೌ ॥ ೧೩

ಲೋಕೇ ವಿಶ್ರುತಕರ್ಮಾಭೂದ್ರಾಜಾ ವಾಲೀ ಪಿತಾ ಮಮ ।
ರಾಜಾ ಕೃತ್ಸ್ನಸ್ಯ ಜಗತ ಇಕ್ಷ್ವಾಕೂಣಾಂ ಮಹಾರಥಃ ॥ ೧೪

ರಾಮೋ ದಾಶರಥಿಃ ಶ್ರೀಮಾನ್ ಪ್ರವಿಷ್ಟೋ ದಂಡಕಾವನಮ್ ।
ಲಕ್ಷ್ಮಣೇನ ಸಹ ಭ್ರಾತ್ರಾ ವೈದೇಹ್ಯಾ ಚಾಪಿ ಭಾರ್ಯಯಾ ॥ ೧೫

ಪಿತುರ್ನಿದೇಶನಿರತೋ ಧರ್ಮ್ಯಂ ಪಂಥಾನಮಾಶ್ರಿತಃ ।
ತಸ್ಯ ಭಾರ್ಯಾ ಜನಸ್ಥಾನಾದ್ರಾವಣೇನ ಹೃತಾ ಬಲಾತ್ ॥ ೧೬

ರಾಮಸ್ಯ ತು ಪಿತುರ್ಮಿತ್ರಂ ಜಟಾಯುರ್ನಾಮ ಗೃಧ್ರರಾಟ್ ।
ದದರ್ಶ ಸೀತಾಂ ವೈದೇಹೀಂ ಹ್ರಿಯಮಾಣಾಂ ವಿಹಾಯಸಾ ॥ ೧೭

---

ತಿಂದುಬಿಟ್ಟರೆ ಧನ್ಯರಾದೆವು ! ಬೇಗನೆ ನಮ್ಮ ಉದ್ದೇಶವು ಕೈಗೂಡುವುದು" ಎಂದು ಆಲೋಚಿಸಿದರು (೯–೧೧). ಅನಂತರ ಅಂಗದನು ಆ ಪಕ್ಷಿಯನ್ನು ಗಿರಿಶೃಂಗದಿಂದ ಕೆಳಗಿಳಿಸಿ ಹೀಗೆಂದನು : "ಅಯ್ಯಾ ಪಕ್ಷಿರಾಜ, ಋಕ್ಷರಜಸ್ಸೆಂಬ ಪ್ರತಾಪಿಯಾದ ವಾನರೇಂದ್ರನೊಬ್ಬನಿದ್ದನು. ಅವನು ನನಗೆ ಅಜ್ಜನಾಗಬೇಕು. ಅವನು ಧಾರ್ಮಿಕನಾದ ಕಪಿರಾಜ. ಆತನಿಗೆ ವಾಲಿ, ಸುಗ್ರೀವರೆಂಬ ಇಬ್ಬರು ಪುತ್ರರು ಜನಿಸಿದರು. ಅವರಿಬ್ಬರೂ ಮಹಾಪರಾಕ್ರಮಿಗಳು (೧೨-೧೩). ಅವರಲ್ಲಿ ವಾಲಿಯು ನನ್ನ ತಂದೆ. ಲೋಕವಿಖ್ಯಾತನಾದವನು. ಅಯ್ಯಾ ಗೃಧ್ರರಾಜ, ಇಕ್ಷ್ವಾಕುವಂಶದಲ್ಲಿ ಸಮಸ್ತ ಜಗತ್ತಿಗೆ ಅಧಿಪತಿಯಾದ ಮಹಾರಥನೆನಿಸಿದ ಶ್ರೀರಾಮನೆಂಬ ರಾಜಪುತ್ರನಿದ್ದಾನೆ. ಆತನು ದಶರಥ ಮಹಾರಾಜನ ತನಯ. ಕಾರಣಾಂತರದಿಂದ ಅವನು ದಂಡಕಾರಣ್ಯಕ್ಕೆ ಬಂದನು. ಶ್ರೀರಾಮನೊಡನೆ ಅವನ ತಮ್ಮನಾದ ಲಕ್ಷ್ಮಣನೂ ಪತ್ನಿಯಾದ ವೈದೇಹಿಯೂ ಬಂದರು (೧೪–೧೫) ಶ್ರೀರಾಮನು ತಂದೆಯ ಆಜ್ಞೆಯನ್ನು ಪಾಲಿಸುವುದರಲ್ಲಿ ನಿರತನಾಗಿ ಧರ್ಮಮಾರ್ಗವನ್ನನುಸರಿಸಿ ಕಾಡಿಗೆ ಬಂದಿದ್ದಾನೆ. ಅವನ ಪತ್ನಿಯಾದ ಸೀತೆಯನ್ನು ಜನಸ್ಥಾನದಲ್ಲಿ ರಾವಣನು ತನ್ನ ಬಲದ ಕೊಬ್ಬಿನಿಂದ ಅಪಹರಿಸಿಬಿಟ್ಟನು (೧೬). ಶ್ರೀರಾಮನ

ರಾವಣಂ ವಿರಥಂ ಕೃತ್ವಾ ಸ್ಥಾಪಯಿತ್ವಾ ಚ ಮೈಥಿಲೀಮ್ ।
ಪರಿಶ್ರಾಂತಶ್ಚ ವೃದ್ಧಶ್ಚ ರಾವಣೇನ ಹತೋ ರಣೇ ॥ ೧೮

ಏವಂ ಗೃಧ್ರೋ ಹತಸ್ತೇನ ರಾವಣೇನ ಬಲೀಯಸಾ ।
ಸಂಸ್ಕೃತಶ್ಚಾಪಿ ರಾಮೇಣ ಗತಶ್ಚ ಗತಿಮುತ್ತಮಾಮ್ ॥ ೧೯

ತತೋ ಮಮ ಪಿತೃವ್ಯೇಣ ಸುಗ್ರೀವೇಣ ಮಹಾತ್ಮನಾ ।
ಚಕಾರ ರಾಘವಃ ಸಖ್ಯಂ ಸೋಽವಧೀತ್ ಪಿತರಂ ಮಮ ॥ ೨೦

ಮಮ ಪಿತ್ರಾ ವಿರುದ್ಧೋ ಹಿ ಸುಗ್ರೀವಃ ಸಚಿವೈಃ ಸಹ ।
ನಿಹತ್ಯ ವಾಲಿನಂ ರಾಮಸ್ತತಸ್ತಮಭಿಷೇಚಯತ್ ॥ ೨೧

ಸ ರಾಜ್ಯೇ ಸ್ಥಾಪಿತಸ್ತೇನ ಸುಗ್ರೀವೋ ವಾನರಾಧಿಪಃ ।
ರಾಜಾ ವಾನರಮುಖ್ಯಾನಾಂ ಯೇನ ಪ್ರಸ್ಥಾಪಿತಾ ವಯಮ್ ॥ ೨೨

ಏವಂ ರಾಮಪ್ರಯುಕ್ತಾಸ್ತು ಮಾರ್ಗಮಾಣಾಸ್ತತಸ್ತತಃ ।
ವೈದೇಹೀಂ ನಾಧಿಗಚ್ಛಾಮೋ ರಾತ್ರೌ ಸೂರ್ಯಪ್ರಭಾಮಿವ ॥ ೨೩

---

ತಂದೆಯಾದ ದಶರಥನಿಗೆ ಜಟಾಯುವೆಂಬ ಗೃಧ್ರರಾಜನು ಮಿತ್ರನಂತೆ. ಆ ವೈದೇಹಿಯನ್ನು ರಾವಣನು ಆಕಾಶಮಾರ್ಗದಲ್ಲಿ ಕದ್ದೊಯ್ಯುತ್ತಿರುವುದನ್ನು ಜಟಾಯುವು ಕಂಡನು. ಕೂಡಲೆ ಆತನು ರಾವಣನ ರಥವನ್ನು ಹೊಡೆದುರುಳಿಸಿ, ಸೀತೆಯನ್ನು ಭೂಮಿಯಲ್ಲಿಳಿಸುವಂತೆ ಮಾಡಿದನು. ಆದರೆ ಜಟಾಯುವು ವೃದ್ಧನಾದ್ದರಿಂದ ಬಳಲಿ, ಕಡೆಗೆ ರಾವಣನಿಂದ ಹತನಾದನು (೧೭-೧೮). ಈ ರೀತಿಯಲ್ಲಿ ಪ್ರಬಲನಾದ ರಾವಣನು ಗೃಧ್ರರಾಜನನ್ನು ಸಂಹರಿಸಿದನು. ಕೊನೆಗೆ ಜಟಾಯುವು ಶ್ರೀರಾಮನಿಂದ ಉತ್ತರಕ್ರಿಯೆಯನ್ನು ಪಡೆದು ಸದ್ಗತಿಯನ್ನೈದಿದನು. ಆಮೇಲೆ ರಾಘವನು ಮಹಾತ್ಮನೂ ನನ್ನ ಚಿಕ್ಕತಂದೆಯೂ ಆದ ಸುಗ್ರೀವನೊಡನೆ ಸ್ನೇಹವನ್ನು ಬೆಳೆಸಿ, ಸುಗ್ರೀವನಿಗೋಸ್ಕರ ನನ್ನ ತಂದೆಯನ್ನು ಸಂಹರಿಸಿದನು (೧೯-೨೦). ಏಕೆಂದರೆ, ಸುಗ್ರೀವನಿಗೂ ನನ್ನ ತಂದೆಯಾದ ವಾಲಿಗೂ ವೈರವಿತ್ತು. ರಾಘವನು ವಾಲಿಯನ್ನು ಸಂಹರಿಸಿ ಮಂತ್ರಿಪರಿವಾರದೊಡನೆ ಸುಗ್ರೀವನಿಗೆ ಪಟ್ಟಾಭಿಷೇಕಮಾಡಿಸಿದನು. ಹೀಗೆ ಸುಗ್ರೀವನು ವಾನರೇಶ್ವರನೆನಿಸಿ ಕಿಷ್ಕಿಂಧಾ ರಾಜ್ಯದಲ್ಲಿ ಸ್ಥಾಪಿತನಾದನು. ಅವನೇ ನಮ್ಮನ್ನು ಸೀತಾನ್ವೇಷಣೆಗಾಗಿ ಕಳಿಸಿದ್ದಾನೆ (೨೧-೨೨). ಹೀಗೆ ಶ್ರೀರಾಮನ ಕಾರ್ಯಕ್ಕಾಗಿ ಹೊರಟ

ತೇ ವಯಂ ದಂಡಕಾರಣ್ಯಂ ವಿಚಿತ್ಯ ಸುಸಮಾಹಿತಾಃ ।
ಅಜ್ಞಾನಾತ್ತು ಪ್ರವಿಷ್ಟಾಃ ಸ್ಮ ಧರಣ್ಯಾ ವಿವೃತಂ ಬಿಲಮ್ ॥ ೨೪
ಮಯಸ್ಯ ಮಾಯಾವಿಹಿತಂ ತದ್ಬಿಲಂ ಚ ವಿಚಿನ್ವತಾಮ್ ।
ವ್ಯತೀತಸ್ತತ್ರ ನೋ ಮಾಸೋ ಯೋ ರಾಜ್ಞಾ ಸಮಯಃ ಕೃತಃ ॥
ತೇ ವಯಂ ಕಪಿರಾಜಸ್ಯ ಸರ್ವೇ ವಚನಕಾರಿಣಃ ।
ಕೃತಾಂ ಸಂಸ್ಥಾಮತಿಕ್ರಾಂತಾ ಭಯಾತ್ ಪ್ರಾಯಮುಪಾಸ್ಮಹೇ ॥
ಕ್ರುದ್ಧೇ ತಸ್ಮಿಂಸ್ತು ಕಾಕುತ್ಸ್ಥೇ ಸುಗ್ರೀವೇ ಚ ಸಲಕ್ಷ್ಮಣೇ ।
ಗತಾನಾಮಪಿ ಸರ್ವೇಷಾಂ ತತ್ರ ನೋ ನಾಸ್ತಿ ಜೀವಿತಮ್ ॥ ೨೭

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಸಪ್ತಪಂಚಾಶಃ ಸರ್ಗಃ



ನಾವು ವೈದೇಹಿಯನ್ನು ಎಲ್ಲೆಲ್ಲಿಯೂ ಹುಡುಕಿದೆವು. ಅವಳು ಮಾತ್ರ ಸಿಗಲಿಲ್ಲ. ರಾತ್ರಿಯಲ್ಲಿ ಸೂರ್ಯಪ್ರಭೆಯನ್ನು ಹುಡುಕಿದಂತಾಗಿದೆ. ನಾವು ದಂಡಕಾರಣ್ಯವನ್ನೆಲ್ಲ ಎಚ್ಚರಿಕೆಯಿಂದ ಹುಡುಕಿ, ಕಡೆಗೆ ನೆಲದಲ್ಲಿದ್ದ ಒಂದು ದೊಡ್ಡ ಬಿಲವನ್ನು ಗೊತ್ತಿಲ್ಲದೆ ಪ್ರವೇಶಿಸಿದೆವು (೨೩-೨೪). ಅದು ಮಯನ ಮಾಯಾಶಕ್ತಿಯಿಂದ ನಿರ್ಮಿತವಾದ ಬಿಲವಾಗಿತ್ತು. ಅಲ್ಲಿ ಅಲೆಯುತ್ತಿರುವಾಗಲೇ ರಾಜನು ಗೊತ್ತುಮಾಡಿದ್ದ ಒಂದು ತಿಂಗಳ ಅವಧಿ ಕಳೆದು ಹೋಯಿತು. ನಾವೆಲ್ಲರೂ ಕಪಿರಾಜನಾದ ಸುಗ್ರೀವನ ಆಜ್ಞೆಯಂತೆ ವರ್ತಿಸಬೇಕು. ಅವನು ಗೊತ್ತುಮಾಡಿದ ಅವಧಿಯನ್ನು ಮೀರಿದೆವೆಂದು ಅಂಜಿ, ಸಾಯುವುದೇ ಲೇಸೆಂದು ಪ್ರಾಯೋಪವೇಶಕ್ಕೆ ಕುಳಿತಿದ್ದೇವೆ (೨೫-೨೬). ಅಯ್ಯಾ ಪಕ್ಷಿರಾಜ, ಈಗ ನಾವು ಕಿಷ್ಕಿಂಧೆಗೆ ಹೋದರೂ ಜೀವಸಹಿತವಾಗಿ ಇರಲಾರೆವು. ಶ್ರೀರಾಮಲಕ್ಷ್ಮಣರೂ ಸುಗ್ರೀವನೂ ಕ್ರುದ್ಧರಾದರೆ ಸರ್ವಥಾ ನಮಗೆ ಉಳಿಗಾಲವಿಲ್ಲ" ಎಂದು ಹೇಳಿದನು (೨೭).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಐವತ್ತೇಳನೆಯ ಸರ್ಗ



## ಅಷ್ಟಪಂಚಾಶಃ ಸರ್ಗಃ

### ಸೀತಾಪ್ರವೃತ್ತ್ಯುಪಲಂಭಃ

ಇತ್ಯುಕ್ತಃ ಕರುಣಂ ವಾಕ್ಯಂ ವಾನರೈಸ್ತ್ಯಕ್ತಜೀವಿತೈಃ ।
ಸಬಾಷ್ಪೋ ವಾನರಾನ್ ಗೃಧ್ರಃ ಪ್ರತ್ಯುವಾಚ ಮಹಾಸ್ವನಃ ॥ ೧

ಯವೀಯಾನ್ ಮಮ ಸ ಭ್ರಾತಾ ಜಟಾಯುರ್ನಾಮ ವಾನರಾಃ ।
ಯಮಾಖ್ಯಾತ ಹತಂ ಯುದ್ಧೇ ರಾವಣೇನ ಬಲೀಯಸಾ ॥ ೨

ವೃದ್ಧಭಾವಾದಪಕ್ಷತ್ವಾಚ್ಛೃಣ್ವಂಸ್ತದಪಿ ಮರ್ಷಯೇ ।
ನ ಹಿ ಮೇ ಶಕ್ತಿರಸ್ತ್ಯದ್ಯ ಭ್ರಾತುರ್ವೈರವಿಮೋಕ್ಷಣೇ ॥ ೩

ಪುರಾ ವೃತ್ರವಧೇ ವೃತ್ತೇ ಸ ಚಾಹಂ ಚ ಜಯೈಷಿಣೌ ।
ಆದಿತ್ಯಮುಪಯಾತೌ ಸ್ವೋ ಜ್ವಲಂತಂ ರಶ್ಮಿಮಾಲಿನಮ್ ॥ ೪

## ಸರ್ಗ ೫೮

### ಸಂಪಾತಿಯು ತನ್ನ ವೃತ್ತಾಂತವನ್ನೂ ಸೀತಾದೇವಿಯಿರುವ ಸ್ಥಳವನ್ನೂ ವಾನರರಿಗೆ ತಿಳಿಸುವುದು.

ಹೀಗೆ ಜೀವದ ಹಂಗುದೊರೆದಿದ್ದ ವಾನರರ ಕರುಣಾಪೂರ್ಣವಾದ ನುಡಿಯನ್ನು ಕೇಳಿ ಸಂಪಾತಿಯ ಕಣ್ಣಲ್ಲಿ ನೀರು ತುಂಬಿತು. ಅವನು (ತನಗೆ ಸಹಜವಾದ) ಉಚ್ಚಸ್ವರದಲ್ಲಿ ಇಂತೆಂದನು (೧) : " ಎಲೈ ವಾನರರೆ, ಪ್ರಬಲನಾದ ರಾವಣನಿಂದ ಹತನಾದನೆಂದು ಹೇಳುವಿರಲ್ಲ, ಆ ಜಟಾಯುವು ನನ್ನ ತಮ್ಮ. ನಾನು ವೃದ್ಧನಾಗಿದ್ದೇನೆ, ರೆಕ್ಕೆಯಿಲ್ಲ. ಆದ್ದರಿಂದ, ರಾವಣನು ಜಟಾಯುವನ್ನು ಕೊಂದನೆಂದು ಕೇಳಿಯೂ ತಾಳಿಕೊಂಡಿದ್ದೇನೆ! ತಮ್ಮನ ವೈರಿಯನ್ನು ತೊಡೆದು ಸೇಡುತೀರಿಸಿಕೊಳ್ಳುವಷ್ಟು ಶಕ್ತಿ ಈಗ ನನಗಿಲ್ಲ! (೨-೩). ಎಲೈ ವಾನರರೆ, ಹಿಂದೆ ವೃತ್ರಾಸುರನ ವಧೆಯು ನಡೆದಾಗ, ಅಣ್ಣತಮ್ಮಂದಿರಾದ ನಾವಿಬ್ಬರೂ ನಮ್ಮ ಸತ್ತ್ವವನ್ನು ಪರೀಕ್ಷಿಸಬೇಕೆಂದು

ಆವೃತ್ಯಾಕಾಶಮಾರ್ಗೇಣ ಜವೇನ ಸ್ಮ ಗತೌ ಭೃಶಮ್ ।
ಮಧ್ಯಂ ಪ್ರಾಪ್ತೇ ದಿನಕರೇ ಜಟಾಯುರವಸೀದತಿ ॥ ೫

ತಮಹಂ ಭ್ರಾತರಂ ದೃಷ್ಟ್ವಾ ಸೂರ್ಯರಶ್ಮಿಭಿರರ್ದಿತಮ್ ।
ಪಕ್ಷಾಭ್ಯಾಂ ಛಾದಯಾಮಾಸ ಸ್ನೇಹಾತ್ ಪರಮವಿಹ್ವಲಮ್ ॥ ೬

ನಿರ್ದಗ್ಧಪಕ್ಷಃ ಪತಿತೋ ವಿಂಧ್ಯೇಽಹಂ ವಾನರರ್ಷಭಾಃ ।
ಅಹಮಸ್ಮಿನ್ ವಸನ್ ಭ್ರಾತುಃ ಪ್ರವೃತ್ತಿಂ ನೋಪಲಕ್ಷಯೇ ॥ ೭

ಜಟಾಯುಷಸ್ತ್ವೇವಮುಕ್ತೋ ಭ್ರಾತ್ರಾ ಸಂಪಾತಿನಾ ತದಾ ।
ಯುವರಾಜೋ ಮಹಾಪ್ರಾಜ್ಞಃ ಪ್ರತ್ಯುವಾಚಾಂಗದಸ್ತದಾ ॥ ೮

ಜಟಾಯುಷೋ ಯದಿ ಭ್ರಾತಾ ಶ್ರುತಂ ತೇ ಗದಿತಂ ಮಯಾ ।
ಆಖ್ಯಾಹಿ ಯದಿ ಜಾನಾಸಿ ನಿಲಯಂ ತಸ್ಯ ರಕ್ಷಸಃ ॥ ೯

ಅದೀರ್ಘದರ್ಶಿನಂ ತಂ ವೈ ರಾವಣಂ ರಾಕ್ಷಸಾಧಮಮ್ ।
ಅಂತಿಕೇ ಯದಿ ವಾ ದೂರೇ ಯದಿ ಜಾನಾಸಿ ಶಂಸ ನಃ ॥ ೧೦

---

ಸೂರ್ಯಮಂಡಲದ ಕಡೆಗೆ ಹಾರಿಹೋದೆವು. ಉಗ್ರಜ್ವಾಲಾಮಾಲಿಯಾಗಿ ಉರಿಯುವ ಸೂರ್ಯನ ಬಳಿಗೆ ಗಗನಮಾರ್ಗದಲ್ಲಿ ಮಂಡಲಗತಿಯಿಂದ ಸುತ್ತುತ್ತ ರಭಸದಿಂದ ಅಡರಿದೆವು! (ಮಧ್ಯಾಹ್ನದ ವೇಳೆಗೆ) ಭಾಸ್ಕರನು ಆಕಾಶಮಧ್ಯಕ್ಕೆ ಬಂದಾಗ, ಜಟಾಯುವು ಬೇಗೆಯಿಂದ ಬಳಲಿ ಕುಂದಿದನು (೪-೫). ಸೂರ್ಯಕಿರಣಗಳಿಂದ ತಪ್ತನಾಗಿ ಬಸವಳಿದ ನನ್ನ ಸೋದರ ನನ್ನು ಕಂಡು, ನಾನು ವಾತ್ಸಲ್ಯದಿಂದ ಅವನಮೇಲೆ ರೆಕ್ಕೆಗಳನ್ನು ಹರಡಿ ಮರೆಮಾಡಿದೆನು. ವಾನರೋತ್ತಮರೆ, ಆಗ ನನ್ನ ರೆಕ್ಕೆಗಳು ಸುಟ್ಟು ಹೋದವು. ಈ ವಿಂಧ್ಯಪರ್ವತಶ್ರೇಣಿಯಲ್ಲಿ ನಾನು ಬಿದ್ದುಬಿಟ್ಟೆನು. ಅಲ್ಲಿಂದ ಮೊದಲು ನಾನು ಇಲ್ಲಿಯೇ ಇದ್ದೇನೆ. ನನ್ನ ಸೋದರನ ಸುದ್ದಿಯನ್ನೇ ತಿಳಿಯದಿದ್ದೇನೆ" ಎಂದನು (೬-೭). ಸಂಪಾತಿಯು ಹೀಗೆ ಹೇಳಲು, ಮಹಾ ಪ್ರಾಜ್ಞನೂ ಯುವರಾಜನೂ ಆದ ಅಂಗದನು "ಓಹೊ! ನೀನು ಜಟಾಯುವಿನ ಅಣ್ಣನೆ? ನಾನಾಡಿದ ಮಾತು ನಿನ್ನ ಕಿವಿಗೆ ಬಿದ್ದಿತೆ? ಹಾಗಾದರೆ, ಆ ರಾಕ್ಷಸಾಧಮನ ವಾಸಸ್ಥಾನವು ಗೊತ್ತಿದ್ದರೆ ನಮಗೆ ಹೇಳು! (೮-೯). ಮುಂದಾಲೋಚನೆಯಿಲ್ಲದೆ ದುಡುಕಿದ ಆ ನೀಚರಾವಣನು

ತತೋಽಬ್ರವೀನ್ಮಹಾತೇಜಾ ಜ್ಯೇಷ್ಠೋ ಭ್ರಾತಾ ಜಟಾಯುಷಃ ।
ಆತ್ಮಾನುರೂಪಂ ವಚನಂ ವಾನರಾನ್ ಸಂಪ್ರಹರ್ಷಯನ್ ॥ ೧೦

ನಿರ್ದಗ್ಧಪಕ್ಷೋ ಗೃಧ್ರೋಽಹಂ ಹೀನವೀರ್ಯಃ ಪ್ಲವಂಗಮಾಃ ।
ವಾಙ್ಮಾತ್ರೇಣ ತು ರಾಮಸ್ಯ ಕರಿಷ್ಯೇ ಸಾಹ್ಯಮುತ್ತಮಮ್ ॥ ೧೨

ಜಾನಾಮಿ ವಾರುಣಾನ್ ಲೋಕಾನ್ ವಿಷ್ಣೋಸ್ತ್ರೈವಿಕ್ರಮಾನಪಿ ।
ದೇವಾಸುರವಿಮರ್ದಾನ್ ವಾಪ್ಯಮೃತಸ್ಯ ಚ ಮಂಥನಮ್ ॥ ೧೩

ರಾಮಸ್ಯ ಯದಿದಂ ಕಾರ್ಯಂ ಕರ್ತವ್ಯಂ ಪ್ರಥಮಂ ಮಯಾ ।
ಜರಯಾ ಚ ಹೃತಂ ತೇಜಃ ಪ್ರಾಣಾಶ್ಚ ಶಿಥಿಲಾ ಮಮ ॥ ೧೪

ತರುಣೀ ರೂಪಸಂಪನ್ನಾ ಸರ್ವಾಭರಣಭೂಷಿತಾ ।
ಹ್ರಿಯಮಾಣಾ ಮಯಾ ದೃಷ್ಟಾ ರಾವಣೇನ ದುರಾತ್ಮನಾ ॥ ೧೫

ಕ್ರೋಶಂತೀ ರಾಮ ರಾಮೇತಿ ಲಕ್ಷ್ಮಣೇತಿ ಚ ಭಾಮಿನೀ ।
ಭೂಷಣಾನ್ಯಪವಿಧ್ಯಂತೀ ಗಾತ್ರಾಣಿ ಚ ವಿಧುನ್ವತೀ ॥ ೧೬

---

ಇರುವುದೆಲ್ಲಿ ? ಆ ಸ್ಥಳವು ಹತ್ತಿರವಿರಲಿ, ದೂರವಿರಲಿ—ಚಿಂತೆಯಿಲ್ಲ, ಹೇಳು ನಮಗೆ !" ಎಂದು ಕೇಳಿದನು. ಆಗ ಜಟಾಯುವಿನ ಅಣ್ಣನೂ ಮಹಾತೇಜಸ್ವಿಯೂ ಆದ ಸಂಪಾತಿಯು ತನ್ನ ಸ್ವಭಾವಕ್ಕೆ ಅನುಗುಣವಾಗಿ (ಉಚ್ಚಸ್ವರದಿಂದ) ವಾನರರಿಗೆ ಸಂತೋಷವಾಗುವಂತೆ ಹೀಗೆಂದನು (೧೦-೧೧) : " ಎಲೈ ಕಪಿವೀರರೆ, ನನ್ನ ರೆಕ್ಕೆಗಳು ಸುಟ್ಟುಹೋಗಿವೆ. ವೃದ್ಧನಾದ್ದರಿಂದ ಶಕ್ತಿಹೀನನಾಗಿದ್ದೇನೆ. ವಾಙ್ಮಾತ್ರದಿಂದಲಾದರೂ ಶ್ರೀರಾಮನಿಗೆ ಒಂದು ಉತ್ತಮವಾದ ನೆರವನ್ನು ನೀಡುವೆನು ! ಅತಳವಿತಳಾದಿ ಸಮಸ್ತ ವಾರುಣಲೋಕಗಳನ್ನೂ ನಾನು ಬಲ್ಲೆನು. ವಿಷ್ಣುವು ವಾಮನನಾಗಿ ಆಕ್ರಮಿಸಿದ ಊರ್ಧ್ವಲೋಕಗಳನ್ನೂ ಬಲ್ಲೆನು. ದೇವಾಸುರರಿಗೆ ನಡೆದ ಸಂಗ್ರಾಮಗಳನ್ನು ಕಂಡಿರುವೆನು. ಸಮುದ್ರಮಂಥನವನ್ನು ನೋಡಿದ್ದೇನೆ ! (೧೨-೧೩). ಇದು ಶ್ರೀರಾಮನ ಕಾರ್ಯ. ಅವಶ್ಯವಾಗಿ ನಾನು ಸಹಾಯ ಮಾಡಲೇಬೇಕು. ಮುಪ್ಪಿನಿಂದ ನನ್ನ ತೇಜಸ್ಸು ಕುಗ್ಗಿದೆ. ಪ್ರಾಣಬಲವು ಕುಂಠಿತವಾಗಿದೆ. ದುರಾತ್ಮನಾದ ರಾವಣನು ರೂಪಸಂಪನ್ನೆಯಾದ ಒಬ್ಬ ಯುವತಿಯನ್ನು ಅಪಹರಿಸಿಕೊಂಡುಹೋದುದನ್ನು ನಾನು ನೋಡಿದ್ದೇನೆ ! (೧೪-೧೫). ಸರ್ವಾಭರಣಭೂಷಿತೆಯಾಗಿದ್ದ ಆ ತರುಣಿಯು 'ರಾಮಾ,

ಸೂರ್ಯಪ್ರಭೇವ ಶೈಲಾಗ್ರೇ ತಸ್ಯಾಃ ಕೌಶೇಯಮುತ್ತಮಮ್ ।
ಅಸಿತೇ ರಾಕ್ಷಸೇ ಭಾತಿ ಯಥಾ ವಾ ತಟಿದಂಬುದೇ ॥ ೧೭

ತಾಂ ತು ಸೀತಾಮಹಂ ಮನ್ಯೇ ರಾಮಸ್ಯ ಪರಿಕೀರ್ತನಾತ್ ।
ಶ್ರೂಯತಾಂ ಮೇ ಕಥಯತೋ ನಿಲಯಂ ತಸ್ಯ ರಕ್ಷಸಃ ॥ ೧೮

ಪುತ್ರೋ ವಿಶ್ರವಸಃ ಸಾಕ್ಷಾದ್ಭ್ರಾತಾ ವೈಶ್ರವಣಸ್ಯ ಚ ।
ಅಧ್ಯಾಸ್ತೇ ನಗರೀಂ ಲಂಕಾಂ ರಾವಣೋ ನಾಮ ರಾಕ್ಷಸಃ ॥ ೧೯

ಇತೋ ದ್ವೀಪೇ ಸಮುದ್ರಸ್ಯ ಸಂಪೂರ್ಣೇ ಶತಯೋಜನೇ ।
ತಸ್ಮಿನ್ ಲಂಕಾ ಪುರೀ ರಮ್ಯಾ ನಿರ್ಮಿತಾ ವಿಶ್ವಕರ್ಮಣಾ ॥ ೨೦

ಜಾಂಬೂನದಮಯೈರ್ದ್ವಾರೈಶ್ಚಿತ್ರೈಃ ಕಾಂಚನವೇದಿಕೈಃ ।
ಪ್ರಾಕಾರೇಣಾರ್ಕವರ್ಣೇನ ಮಹತಾ ಸುಸಮಾವೃತಾ ॥ ೨೧

ತಸ್ಯಾಂ ವಸತಿ ವೈದೇಹೀ ದೀನಾ ಕೌಶೇಯವಾಸಿನೀ ।
ರಾವಣಾಂತಃಪುರೇ ರುದ್ಧಾ ರಾಕ್ಷಸೀಭಿಃ ಸಮಾವೃತಾ ॥ ೨೨

---

ರಾಮಾ, ಲಕ್ಷ್ಮಣಾ!’ ಎಂದು ಅರಚುತ್ತಿದ್ದಳು. ತಾನು ತೊಟ್ಟಿದ್ದ ಒಡವೆಗಳನ್ನು ಕಿತ್ತೆಸೆಯುತ್ತ ಕೈಕಾಲುಗಳನ್ನು ಒದರುತ್ತಿದ್ದಳು. ಕಪ್ಪುಬಣ್ಣದ ಆ ರಾಕ್ಷಸನಮೇಲೆ ಹಾರಾಡುತ್ತಿದ್ದ ಅವಳ ಸೀರೆಯ ಸೆರಗು, ಪರ್ವತಾಗ್ರದಲ್ಲಿ ಹರಡಿದ ಸೂರ್ಯರಶ್ಮಿಯಂತೆ ಗೋಚರಿಸಿತು. ಮೋಡದ ನಡುವೆ ಮಿಂಚುವ ಮಿಂಚಿನಂತೆ ಕಂಡಿತು (೧೬-೧೭). ಶ್ರೀರಾಮನ ಹೆಸರನ್ನು ಹಿಡಿದು ಕೂಗುತ್ತಿದ್ದುದರಿಂದ ಆಕೆಯೇ ಸೀತೆಯಾಗಿರಬೇಕೆಂದು ನಾನು ಊಹಿಸುತ್ತೇನೆ! ಆ ರಾಕ್ಷಸನ ವಾಸಸ್ಥಾನವನ್ನು ಹೇಳುವೆನು, ಕೇಳಿರಿ: ರಾವಣನೆಂಬ ಆ ರಾಕ್ಷಸನು ಲಂಕಾನಗರಿಯಲ್ಲಿ ವಾಸವಾಗಿದ್ದಾನೆ. ಅವನು ವಿಶ್ರವಸ್ಸಿನ ಔರಸಪುತ್ರ. ಕುಬೇರನಿಗೆ ಒಡಹುಟ್ಟಿದವನು (೧೮-೧೯). ಇಲ್ಲಿಂದ ನೂರು ಯೋಜನಗಳ ಆಚೆಗೆ ಸಮುದ್ರದಲ್ಲಿರುವ ಒಂದು ದ್ವೀಪದಲ್ಲಿ ಲಂಕಾನಗರವಿದೆ. ವಿಶ್ವಕರ್ಮನಿಂದ ನಿರ್ಮಿತವಾದ ಆ ನಗರವು ಬಹಳ ರಮ್ಯವಾಗಿದೆ. ಆ ನಗರವು ಚಿನ್ನದ ನೆಲಗಟ್ಟುಗಳಿರುವ ಚಿತ್ರಾಕಾರದ ಸುವರ್ಣಮಯದ್ವಾರಗಳಿಂದಲೂ ಮಹತ್ತರವಾದ ಭಾಸ್ಕರವರ್ಣದ ಪ್ರಾಕಾರದಿಂದಲೂ ಪರಿವೃತವಾಗಿದೆ (೨೦-೨೧). ಆ ಪಟ್ಟಣದಲ್ಲಿ ವೈದೇಹಿಯು ಆಗ ಧರಿಸಿದ್ದ ಕೌಶೇಯವಸ್ತ್ರದಲ್ಲಿಯೇ ದೀನಳಾಗಿದ್ದಾಳೆ. ರಾವಣನ ಅಂತಃಪುರದಲ್ಲಿ

ಜನಕಸ್ಯಾತ್ಮಜಾಂ ರಾಜ್ಞಸ್ತತ್ರ ದ್ರಕ್ಷ್ಯಥ ಮೈಥಿಲೀಮ್ ।
ಲಂಕಾಯಾಮಥ ಗುಪ್ತಾಯಾಂ ಸಾಗರೇಣ ಸಮಂತತಃ ॥ ೨೩

ಸಂಪ್ರಾಪ್ಯ ಸಾಗರಸ್ಯಾಂತಂ ಸಂಪೂರ್ಣಂ ಶತಯೋಜನಮ್ ।
ಆಸಾದ್ಯ ದಕ್ಷಿಣಂ ತೀರಂ ತತೋ ದ್ರಕ್ಷ್ಯಥ ರಾವಣಮ್ ॥ ೨೪

ತತ್ರೈವ ತ್ವರಿತಾಃ ಕ್ಷಿಪ್ರಂ ವಿಕ್ರಮಧ್ವಂ ಪ್ಲವಂಗಮಾಃ ।
ಜ್ಞಾನೇನ ಖಲು ಪಶ್ಯಾಮಿ ದೃಷ್ಟ್ವಾ ಪ್ರತ್ಯಾಗಮಿಷ್ಯಥ ॥ ೨೫

ಆದ್ಯಃ ಪಂಥಾಃ ಕುಲಿಂಗಾನಾಂ ಯೇ ಚಾನ್ಯೇ ಧಾನ್ಯಜೀವಿನಃ ।
ದ್ವಿತೀಯೋ ಬಲಿಭೋಜಾನಾಂ ಯೇ ಚ ವೃಕ್ಷಫಲಾಶಿನಃ ॥ ೨೬

ಭಾಸಾಸ್ತೃತೀಯಂ ಗಚ್ಛಂತಿ ಕ್ರೌಂಚಾಶ್ಚ ಕುರರೈಃ ಸಹ ।
ಶ್ಯೇನಾಶ್ಚತುರ್ಥಂ ಗಚ್ಛಂತಿ ಗೃಧ್ರಾ ಗಚ್ಛಂತಿ ಪಂಚಮಮ್ ॥ ೨೭

ಸೆರೆಯಿಡಲ್ಪಟ್ಟಿದ್ದಾಳೆ. ರಾಕ್ಷಸಿಯರು ಕಾವಲಾಗಿ ಅವಳನ್ನು ಸುತ್ತುಗಟ್ಟಿದ್ದಾರೆ (೨೨). ವಾನರರೆ, ಲಂಕೆಯಲ್ಲಿ ನೀವು ಜನಕರಾಜನಂದಿನಿಯಾದ ಸೀತಾದೇವಿಯನ್ನು ಕಾಣಬಹುದು! ಲಂಕೆಯಾದರೋ ಸುತ್ತಲೂ ಸಮುದ್ರದಿಂದ ಪರಿವೃತವಾಗಿ ಸುರಕ್ಷಿತವಾಗಿದೆ! ಈ ಸಮುದ್ರದಲ್ಲಿ ನೂರು ಯೋಜನಗಳನ್ನು ದಾಟಿ ದಕ್ಷಿಣತೀರಕ್ಕೆ ಹೋದರೆ, ರಾವಣನನ್ನು ನೋಡಬಹುದು! (೨೩-೨೪). ವಾನರರೆ, ನೀವು ಸಾಹಸಮಾಡಿ ತ್ವರೆಯಿಂದ ಅಲ್ಲಿಗೆ ಹೋಗಿರಿ. ನನ್ನ ತಿಳಿವಳಿಕೆಗೆ,* ನೀವು ಜಾನಕಿಯನ್ನು ಕಂಡು ಬರಬಲ್ಲಿರೆಂದು ಅನ್ನಿಸುತ್ತದೆ. ಧಾನ್ಯಜೀವಿಗಳಾದ ಕುಲಿಂಗಾದಿಪಕ್ಷಿಗಳು ಹಾರಿಹೋಗಬಲ್ಲ ದೂರ ಮೊದಲನೆಯ ಮಾರ್ಗವೆನಿಸುವುದು. ಮರದ ಹಣ್ಣುಗಳನ್ನು ತಿಂದು ಜೀವಿಸುವ ಕಾಗೆ ಮೊದಲಾದವು ಇನ್ನೂ ಹೆಚ್ಚು ದೂರದವರೆಗೆ ಹಾರಬಲ್ಲವು. ಅದು ಎರಡನೆಯ ಮಾರ್ಗ (೨೫-೨೬). ಭಾಸ, ಕ್ರೌಂಚ ಮತ್ತು ಕುರರ ಪಕ್ಷಿಗಳು ಮೂರನೆಯ ಮಾರ್ಗದವರೆಗೆ ಹೋಗುತ್ತವೆ. ಗಿಡಗಗಳು ನಾಲ್ಕನೆಯ ಮಾರ್ಗವನ್ನೂ, ಹದ್ದುಗಳು ಐದನೆಯ ಮಾರ್ಗವನ್ನೂ ಸೇರ

* ಮೂಲದಲ್ಲಿ 'ಜ್ಞಾನೇನ' ಎಂದಿದೆ. ಜ್ಞಾನ=ದಿವ್ಯಜ್ಞಾನ ಎಂದು ವ್ಯಾಖ್ಯಾನಕಾರರು ಹೇಳುತ್ತಾರೆ.

ಬಲವೀರ್ಯೋಪಪನ್ನಾನಾಂ ರೂಪಯೌವನಶಾಲಿನಾಮ್ ।
ಷಷ್ಠಸ್ತು ಪಂಥಾ ಹಂಸಾನಾಂ ವೈನತೇಯಗತಿಃ ಪರಾ ॥ ೨೮

ವೈನತೇಯಾಚ್ಚ ನೋ ಜನ್ಮ ಸರ್ವೇಷಾಂ ವಾನರರ್ಷಭಾಃ ।
ಇಹಸ್ಥೋಽಹಂ ಪ್ರಪಶ್ಯಾಮಿ ರಾವಣಂ ಜಾನಕೀಂ ತಥಾ ॥ ೨೯

ಅಸ್ಮಾಕಮಪಿ ಸೌಪರ್ಣಂ ದಿವ್ಯಂ ಚಕ್ಷುರ್ಬಲಂ ತಥಾ ।
ತಸ್ಮಾದಾಹಾರವೀರ್ಯೇಣ ನಿಸರ್ಗೇಣ ಚ ವಾನರಾಃ ॥ ೩೦

ಆಯೋಜನಶತಾತ್ ಸಾಗ್ರಾದ್ವಯಂ ಪಶ್ಯಾಮ ನಿತ್ಯಶಃ ।
ಅಸ್ಮಾಕಂ ವಿಹಿತಾ ವೃತ್ತಿರ್ನಿಸರ್ಗೇಣ ಚ ದೂರತಃ ॥ ೩೧

ವಿಹಿತಾ ಪಾದಮೂಲೇ ತು ವೃತ್ತಿಶ್ಚರಣಯೋಧಿನಾಮ್ ।
ಗರ್ಹಿತಂ ತು ಕೃತಂ ಕರ್ಮ ಯೇನ ಸ್ಮ ಪಿಶಿತಾಶಿನಾ ॥ ೩೨

ಪ್ರತಿಕಾರ್ಯಂ ಚ ಮೇ ತಸ್ಯ ವೈರಂ ಭ್ರಾತುಃ ಕೃತಂ ಭವೇತ್ ।
ಉಪಾಯೋ ದೃಶ್ಯತಾಂ ಕಶ್ಚಿಲ್ಲಂಘನೇ ಲವಣಾಂಭಸಃ ॥ ೩೩

---

ಬಲ್ಲವು. ಬಲವೀರ್ಯಗಳಿಂದಲೂ ರೂಪಯೌವನಗಳಿಂದಲೂ ತುಳುಕುವ ಹಂಸಗಳದು ಆರನೆಯ ಮಾರ್ಗ. ವಿನತಾಪುತ್ರರಾದ ಗರುಡಾರುಣರ ಮಾರ್ಗ ಅದಕ್ಕೂ ಮುಂದೆ! (೨೭-೨೮). ವಾನರರೆ, ವಿನತಾಪುತ್ರನಾದ ಅರುಣನಿಂದ ನಾವು ಜನಿಸಿದ್ದೇವೆ! ನಾನು ಇಲ್ಲಿಂದಲೇ ರಾವಣನನ್ನೂ ಜಾನಕಿಯನ್ನೂ ಕಣ್ಣಾರೆ ನೋಡುತ್ತಿದ್ದೇನೆ! ಗರುಡನಿಗಿರುವಂತೆ ನಮಗೂ ಸಹ ದಿವ್ಯವಾದ ನೇತ್ರಪಾಟವವೂ ದೇಹಬಲವೂ ಉಂಟು. ಆಹಾರಬಲದಿಂದಲೂ ಜಾತಿಸ್ವಭಾವದಿಂದಲೂ ನಾವು ನೂರು ಯೋಜನಗಳಿಗಿಂತಲೂ ಹೆಚ್ಚು ದೂರದವರೆಗೆ ಸರಿಯಾಗಿ ನೋಡಬಲ್ಲೆವು (೨೯-೩೦). ದೂರದಲ್ಲಿಯೇ ಕಂಡ ಆಹಾರವನ್ನು ತಿಂದು ಜೀವಿಸುವುದು ನಮಗೆ ಸ್ವಭಾವದಿಂದ ಬಂದಿದೆ. ಕಾಲುಬುಡದಲ್ಲಿ ಕಂಡುದನ್ನು ತಿಂದು ಜೀವಿಸುವುದು ಕೋಳಿಗಳಿಗೆ ವಿಹಿತವಾಗಿದೆ. ವಾನರೋತ್ತಮರೆ, ಆ ರಾಕ್ಷಸನು ಅತಿಹೇಯವಾದ ಕೃತ್ಯವನ್ನು ಮಾಡಿದನು (೩೧-೩೨). ಅವನಮೇಲಿನ ಸೇಡನ್ನು ನನ್ನ ತಮ್ಮನಿಗೋಸ್ಕರ ನಾನೂ ತೀರಿಸಿಕೊಳ್ಳಬೇಕಾಗಿದೆ! (ನಿಮ್ಮ ಕಾರ್ಯವು ಸಿದ್ಧಿಸಿದರೆ) ನನ್ನ ಕಾರ್ಯವೂ ನಡೆದಂತಾಯಿತು! ಆದ್ದರಿಂದ, ಸಮುದ್ರ

ಅಭಿಗಮ್ಯ ತು ವೈದೇಹೀಂ ಸಮೃದ್ಧಾರ್ಥಾ ಗಮಿಷ್ಯಥ ।
ಸಮುದ್ರಂ ನೇತುಮಿಚ್ಛಾಮಿ ಭವದ್ಭಿರ್ವರುಣಾಲಯಮ್ ॥ ೩೪

ಪ್ರದಾಸ್ಯಾಮ್ಯುದಕಂ ಭ್ರಾತುಃ ಸ್ವರ್ಗತಸ್ಯ ಮಹಾತ್ಮನಃ ।
ತತೋ ನೀತ್ವಾ ತು ತಂ ದೇಶಂ ತೀರಂ ನದನದೀಪತೇಃ ॥ ೩೫

ನಿರ್ದಗ್ಧಪಕ್ಷಂ ಸಂಪಾತಿಂ ವಾನರಾಃ ಸುಮಹೌಜಸಃ ।
ಪುನಸ್ತಂ ಪ್ರಾಪಯಿತ್ವಾ ಚ ತಂ ದೇಶಂ ಪತಗೇಶ್ವರಮ್ ॥ ೩೬

ಬಭೂವುರ್ವಾನರಾ ಹೃಷ್ಟಾಃ ಪ್ರವೃತ್ತಿಮುಪಲಭ್ಯ ತೇ ॥

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಅಷ್ಟಪಂಚಾಶಃ ಸರ್ಗಃ



ವನ್ನು ಲಂಘಿಸಿಹೋಗಲು ಯಾವುದಾದರೊಂದು ಉಪಾಯವನ್ನು ಹುಡುಕಿ ತೆಗೆಯಿರಿ (೩೩). ವೈದೇಹಿಯನ್ನು ಕಂಡು ಕೃತಕೃತ್ಯರಾಗಿ ಕಿಷ್ಕಿಂಧೆಗೆ ಹೋಗಿರಿ. ಓ ವಾನರೋತ್ತಮರೆ, ವರುಣಾಲಯವಾದ ಸಮುದ್ರದ ಬಳಿಗೆ ನನ್ನನ್ನು ಕರೆದೊಯ್ಯುವಿರಾ? ಮಹಾತ್ಮನೆನಿಸಿ ಸ್ವರ್ಗಸ್ಥನಾದ ನನ್ನ ತಮ್ಮನಿಗೆ ಜಲತರ್ಪಣವನ್ನು ಕೊಡುವೆನು" ಎಂದು ಹೇಳಿದನು (೩೪). ಆಗ ಸಾಹಸಿಗಳಾದ ಆ ಕಪಿನಾಯಕರು ರೆಕ್ಕೆಗಳು ಸುಟ್ಟಿದ್ದ ಸಂಪಾತಿಯನ್ನು ಸಮುದ್ರದ ತೀರಪ್ರದೇಶಕ್ಕೆ ಕರೆದೊಯ್ದರು. (ಅವನು ತರ್ಪಣವನ್ನಿತ್ತ ಮೇಲೆ) ಆ ಪಕ್ಷಿರಾಜನನ್ನು ಪುನಃ ಮೊದಲಿದ್ದ ಸ್ಥಳಕ್ಕೆ ಕರೆತಂದರು. ಸೀತಾ ವೃತ್ತಾಂತವು ತಿಳಿಯಿತೆಂದು ಆ ವಾನರರು ಸಂತೋಷದಿಂದ ನಲಿದರು (೩೫-೩೬).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಐವತ್ತೆಂಟನೆಯ ಸರ್ಗ



## ಏಕೋನಷಷ್ಟಿತಮಃ ಸರ್ಗಃ

### ಸುಪಾರ್ಶ್ವವಚನಾನುವಾದಃ

ತತಸ್ತದಮೃತಾಸ್ವಾದಂ ಗೃಧ್ರರಾಜೇನ ಭಾಷಿತಮ್ ।
ನಿಶಮ್ಯ ವದತಾ ಹೃಷ್ಟಾಸ್ತೇ ವಚಃ ಪ್ಲವಗರ್ಷಭಾಃ ॥ ೧

ಜಾಂಬವಾನ್ ವಾನರಶ್ರೇಷ್ಠಃ ಸಹ ಸರ್ವೈಃ ಪ್ಲವಂಗಮೈಃ ।
ಭೂತಲಾತ್ ಸಹಸೋತ್ಥಾಯ ಗೃಧ್ರರಾಜಮಥಾಬ್ರವೀತ್ ॥ ೨

ಕ್ವ ಸೀತಾ ಕೇನ ವಾ ದೃಷ್ಟಾ ಕೋ ವಾ ಹರತಿ ಮೈಥಿಲೀಮ್ ।
ತದಾಖ್ಯಾತು ಭವಾನ್ ಸರ್ವಂ ಗತಿರ್ಭವ ವನೌಕಸಾಮ್ ॥ ೩

ಕೋ ದಾಶರಥಿಬಾಣಾನಾಂ ವಜ್ರವೇಗನಿಪಾತಿನಾಮ್ ।
ಸ್ವಯಂ ಲಕ್ಷ್ಮಣಮುಕ್ತಾನಾಂ ನ ಚಿಂತಯತಿ ವಿಕ್ರಮಮ್ ॥ ೪

### ಸರ್ಗ ೫೯ *

ಸಂಪಾತಿಯು ತನ್ನ ಮಗನಾದ ಸುಪಾರ್ಶ್ವನಿಂದ ಸೀತಾಹರಣದ
ವೃತ್ತಾಂತವನ್ನು ತಿಳಿದುದಾಗಿ ಹೇಳುವುದು.

ಗೃಧ್ರರಾಜನಾದ ಸಂಪಾತಿಯ ಮಾತು ಕಪಿವೀರರಿಗೆ ಅಮೃತದಂತೆ ಇಂಪಾಗಿ ತೋರಿತು. ಅದನ್ನು ಕೇಳಿ ಅವರು ಹರ್ಷದಿಂದ ಉಬ್ಬಿದರು. ವಾನರರಿಗೆ ಮಾರ್ಗದರ್ಶಿಯಾಗಿದ್ದ ಜಾಂಬವಂತನು ಥಟ್ಟನೆ ನೆಲದಿಂದ ಮೇಲೆದ್ದನು. ಇತರ ವಾನರರೊಡನೆ ಗೃಧ್ರರಾಜನ ಬಳಿಗೆ ಹೋಗಿ “ ಅಯ್ಯಾ ಗೃಧ್ರರಾಜ, ಸೀತೆಯನ್ನು ಮೊದಲು ಯಾರು ಎಲ್ಲಿ ಕಂಡರು ? ಅವಳನ್ನು ಅಪಹರಿಸಿದವನಾರು ? ಎಲ್ಲವನ್ನೂ ವಿವರವಾಗಿ ಹೇಳು. ಈ ವಾನರರಿಗೆ ದಿಕ್ಕಾಗು (೧-೩). ಸಿಡಿಲಿನಂತೆ ರಭಸದಿಂದ ಬಂದೆರಗುವ ಶ್ರೀರಾಮನ ಶರಗಳಿಗಾಗಲಿ, ಲಕ್ಷ್ಮಣನ ಶರಗಳಿಗಾಗಲಿ ಇರುವ ಸಾಮರ್ಥ್ಯವೇನೆಂಬು

---

* ಈ ಸರ್ಗವೂ ಸೇರಿ ಮುಂದಿನ ಐದು ಸರ್ಗಗಳು ಪ್ರಕ್ಷಿಪ್ತವೆಂದು ಗೋವಿಂದ ರಾಜರು ಬರೆದಿದ್ದಾರೆ. ಪ್ರಾಮಾಣಿಕವಾದ ಪ್ರಾಚೀನ ಗ್ರಂಥಗಳಲ್ಲಿ ಈ ಸರ್ಗಗಳು ದೊರೆಯುವುದಿಲ್ಲ. ಇವುಗಳಿಲ್ಲದಿದ್ದರೂ ಕಥಾಸಂದರ್ಭವು ಕೆಡುವುದಿಲ್ಲ. ವಿರೋಧವೂ ಕಂಡುಬರುತ್ತದೆ. ಅದ್ದರಿಂದ ಈ ಭಾಗವು ಪ್ರಕ್ಷಿಪ್ತವೇ ಸರಿ.

ಸ ಹರೀನ್ ಪ್ರೀತಿಸಂಯುಕ್ತಾನ್ ಸೀತಾಶ್ರುತಿಸಮಾಹಿತಾನ್ ।
ಪುನರಾಶ್ವಾಸಯನ್ ಪ್ರೀತ ಇದಂ ವಚನಮಬ್ರವೀತ್ ॥ ೫

ಶ್ರೂಯತಾಮಿಹ ವೈದೇಹ್ಯಾ ಯಥಾ ಮೇ ಹರಣಂ ಶ್ರುತಮ್ ।
ಯೇನ ಚಾಪಿ ಮಮಾಖ್ಯಾತಂ ಯತ್ರ ವಾಯತಲೋಚನಾ ॥ ೬

ಅಹಮಸ್ಮಿನ್ ಗಿರೌ ದುರ್ಗೇ ಬಹುಯೋಜನಮಾಯತೇ ।
ಚಿರಾನ್ನಿಪತಿತೋ ವೃದ್ಧಃ ಕ್ಷೀಣಪ್ರಾಣಪರಾಕ್ರಮಃ ॥ ೭

ತಂ ಮಾಮೇವಂಗತಂ ಪುತ್ರಃ ಸುಪಾರ್ಶ್ವೋ ನಾಮ ನಾಮತಃ ।
ಆಹಾರೇಣ ಯಥಾಕಾಲಂ ಬಿಭರ್ತಿ ಪತತಾಂ ವರಃ ॥ ೮

ತೀಕ್ಷ್ಣಕಾಮಾಸ್ತು ಗಂಧರ್ವಾಸ್ತೀಕ್ಷ್ಣಕೋಪಾ ಭುಜಂಗಮಾಃ ।
ಮೃಗಾಣಾಂ ತು ಭಯಂ ತೀಕ್ಷ್ಣಂ ತತಸ್ತೀಕ್ಷ್ಣಕ್ಷುಧಾ ವಯಮ್ ॥ ೯

ಸ ಕದಾಚಿತ್ ಕ್ಷುಧಾರ್ತಸ್ಯ ಮಮಾಹಾರಾಭಿಕಾಂಕ್ಷಿಣಃ ।
ಗತಸೂರ್ಯೇಽಹನಿ ಪ್ರಾಪ್ತೋ ಮಮ ಪುತ್ರೋ ಹ್ಯನಾಮಿಷಃ ॥ ೧೦

---

ದನ್ನು ಚಿಂತಿಸದಿರುವ ಆ ಅವಿವೇಕಿಯಾದರೂ ಯಾರು ?" ಎಂದು ಕೇಳಿದನು. ಸೀತೆಯೆಂಬ ಶಬ್ದವನ್ನು ಕೇಳಿದ ಮಾತ್ರದಿಂದಲೇ ಸಮಾಧಾನ ಹೊಂದಿ ಸಂತುಷ್ಟರಾದ ವಾನರರನ್ನು ನೋಡಿ ಸಂಪ್ರೀತನಾದ ಸಂಪಾತಿಯು, ಮತ್ತೆ ಅವರನ್ನು ಸಂತೈಸುತ್ತ ಹೀಗೆಂದನು (೪-೫) : "ಸೀತಾಹರಣದ ಸುದ್ದಿಯನ್ನು ನಾನು ಕೇಳಿರುವಂತೆ ಹೇಳುವೆನು, ಕೇಳಿರಿ. ಯಾರು ನನಗೆ ಇದನ್ನು ಹೇಳಿದರು, ಎಲ್ಲಿ ಆ ಸುಂದರಿಯು ಇರುವಳು—ಎಂಬುದನ್ನು ತಿಳಿಸುವೆನು. ಬಹುಯೋಜನವಿಸ್ತೃತವಾದ ಈ ದುರ್ಗಮಪರ್ವತದಲ್ಲಿ ನಾನು ಬಹುಕಾಲದಿಂದ ಬಿದ್ದಿರುವೆನು. ವೃದ್ಧನಾದ ನಾನು ಪ್ರಾಣಬಲವನ್ನು ಕಳೆದುಕೊಂಡಿರುವೆನು (೬-೭). ಈ ದುರವಸ್ಥೆಯಲ್ಲಿರುವ ನನ್ನನ್ನು ಸುಪಾರ್ಶ್ವನೆಂಬ ನನ್ನ ಮಗನು, ಕಾಲಕ್ಕೆ ಸರಿಯಾಗಿ ಆಹಾರವನ್ನು ತಂದುಕೊಟ್ಟು ಪೋಷಿಸುತ್ತಿದ್ದಾನೆ. ಎಲೈ ವಾನರರೆ, ಗಂಧರ್ವರಿಗೆ ಕಾಮವೂ ಸರ್ಪಗಳಿಗೆ ಕೋಪವೂ ಅಧಿಕ. ಮೃಗಗಳಿಗೆ ಭಯವು ಹೆಚ್ಚು. ಗೃಧ್ರಜಾತಿಯ ನಮಗೆ ಹಸಿವು ಹೆಚ್ಚು! (೮-೯). ಹೀಗಿರಲು ಒಂದು ದಿನ ನಾನು ಹಸಿವಿನಿಂದ ಬಳಲಿ ಆಹಾರಕ್ಕಾಗಿ ಹಾತೊರೆಯುತ್ತಿದ್ದೆನು. ಆ ದಿನ

ಸ ಮಯಾ ವೃದ್ಧಭಾವಾಚ್ಚ ಕೋಪಾಚ್ಚ ಪರಿಭರ್ತ್ಸಿತಃ ।
ಕ್ಷುತ್ಪಿಪಾಸಾಪರೀತೇನ ಕುಮಾರಃ ಪತತಾಂ ವರಃ ॥ ೧೧

ಸ ಮಾಮಾಹಾರಸಂರೋಧಾತ್ ಪೀಡಿತಂ ಪ್ರೀತಿವರ್ಧನಃ ।
ಅನುಮಾನ್ಯ ಯಥಾತತ್ತ್ವಮಿದಂ ವಚನಮಬ್ರವೀತ್ ॥ ೧೨

ಅಹಂ ತಾತ ಯಥಾಕಾಲಮಾಮಿಷಾರ್ಥೀ ಖಮಾಪ್ಲುತಃ ।
ಮಹೇಂದ್ರಸ್ಯ ಗಿರೇರ್ದ್ವಾರಮಾವೃತ್ಯ ಚ ಸಮಾಸ್ಥಿತಃ ॥ ೧೩

ತತಃ ಸತ್ತ್ವಸಹಸ್ರಾಣಾಂ ಸಾಗರಾಂತರಚಾರಿಣಾಮ್ ।
ಪಂಥಾನಮೇಕೋಽಧ್ಯವಸಂ ಸಂನಿರೋದ್ಧುಮವಾಙ್ಮುಖಃ ॥ ೧೪

ತತ್ರ ಕಶ್ಚಿನ್ಮಯಾ ದೃಷ್ಟಃ ಸೂರ್ಯೋದಯಸಮಪ್ರಭಾಮ್ ।
ಸ್ತ್ರಿಯಮಾದಾಯ ಗಚ್ಛನ್ ವೈ ಭಿನ್ನಾಂಜನಚಯೋಪಮಃ ॥ ೧೫

ಸೋಽಹಮಭ್ಯವಹಾರಾರ್ಥೀ ತೌ ದೃಷ್ಟ್ವಾ ಕೃತನಿಶ್ಚಯಃ ।
ತೇನ ಸಾಮ್ನಾ ವಿನೀತೇನ ಪಂಥಾನಮಭಿಯಾಚಿತಃ ॥ ೧೬

---

ಸೂರ್ಯನು ಮುಳುಗಿದಮೇಲೆ ನನ್ನ ಪುತ್ರನು ಆಹಾರವನ್ನು ತರದೆ ಬರಿಗೈಯಿಂದ ಬಂದನು. ನಾನು ಮೊದಲೇ ವಯಸ್ಸಾದವನು, ಹಸಿವು ಬಾಯಾರಿಕೆಗಳಿಂದ ಕಂಗೆಟ್ಟುಹೋಗಿದ್ದೆನು. ಆದ್ದರಿಂದ ಕೋಪಗೊಂಡು ಅವನನ್ನು ಗದರಿಸಿದೆನು! (೧೦-೧೧). ಆಹಾರವಿಲ್ಲದೆ ನಾನು ಖಿನ್ನನಾಗಿರುವೆನೆಂದೂಹಿಸಿ, ಸುಪಾರ್ಶ್ವನು ನನ್ನನ್ನು ಸಂತೈಸುತ್ತ ಇದ್ದ ಸಂಗತಿಯನ್ನರುಹಿದನು: "ಅಪ್ಪ, ನಾನು ಆಹಾರವನ್ನು ತರುವುದಕ್ಕಾಗಿ ಗೊತ್ತಾದ ವೇಳೆಯಲ್ಲಿ ಆಕಾಶಮಾರ್ಗವಾಗಿ ಹಾರಿಹೋದೆನು. ಆಮೇಲೆ ಮಹೇಂದ್ರ ಗಿರಿಯ ದ್ವಾರವನ್ನು ಅಡ್ಡಗಟ್ಟಿ ಕುಳಿತೆನು (೧೨-೧೩). ಅಲ್ಲಿ ಸಮುದ್ರ ಸಂಚಾರಿಗಳಾದ ಸಾವಿರಾರು ಜಂತುಗಳನ್ನು ಅಡ್ಡಗಟ್ಟಿ ಹಿಡಿಯಬೇಕೆಂದು ನಾನೊಬ್ಬನೇ ತಲೆಬಾಗಿ ಕುಳಿತಿದ್ದೆನು. ಆಗ ಕಾಡಿಗೆಯ ರಾಶಿಯಂತೆ ಕಪ್ಪಾಗಿದ್ದ ಒಬ್ಬ ಪುರುಷನು ಉದಯಕಾಲದ ಸೂರ್ಯನಂತೆ ಕಾಂತಿಮತಿಯಾದ ಸ್ತ್ರೀಯೋರ್ವಳನ್ನು ಎತ್ತಿಕೊಂಡು ಹೋಗುವುದು ನನಗೆ ಕಾಣಿಸಿತು (೧೪-೧೫). ಆಹಾರಾರ್ಥಿಯಾಗಿ ಕುಳಿತಿದ್ದ ನಾನು ಅದನ್ನು ಕಂಡು ಅವರೀರ್ವರನ್ನೂ ಹಿಡಿಯಬೇಕೆಂದು ನಿಶ್ಚಯಿಸಿಕೊಂಡೆನು. ಅಷ್ಟರಲ್ಲಿ

ನ ಹಿ ಸಾಮೋಪಪನ್ನಾನಾಂ ಪ್ರಹರ್ತಾ ವಿದ್ಯತೇ ಕ್ವಚಿತ್ ।
ನೀಚೇಷ್ವಪಿ ಜನಃ ಕಶ್ಚಿತ್ ಕಿಮಂಗ ಬತ ಮದ್ವಿಧಃ ॥ ೧೭

ಸ ಯಾತಸ್ತೇಜಸಾ ವ್ಯೋಮ ಸಂಕ್ಷಿಪನ್ನಿವ ವೇಗಿತಃ ।
ಅಥಾಹಂ ಖೇಚರೈರ್ಭೂತೈರಭಿಗಮ್ಯ ಸಭಾಜಿತಃ ॥ ೧೮

ದಿಷ್ಟ್ಯಾ ಜೀವಸಿ ತಾತೇತಿ ಹ್ಯಬ್ರುವನ್ ಮಾಂ ಮಹರ್ಷಯಃ ।
ಕಥಂಚಿತ್ ಸಕಲತ್ರೋಽಸೌ ಗತಸ್ತೇ ಸ್ವಸ್ತ್ಯಸಂಶಯಮ್ ॥ ೧೯

ಏವಮುಕ್ತಸ್ತತೋಽಹಂ ತೈಃ ಸಿದ್ಧೈಃ ಪರಮಶೋಭನೈಃ ।
ಸ ಚ ಮೇ ರಾವಣೋ ರಾಜಾ ರಕ್ಷಸಾಂ ಪ್ರತಿವೇದಿತಃ ॥ ೨೦

ಹರನ್ ದಾಶರಥೇರ್ಭಾರ್ಯಾಂ ರಾಮಸ್ಯ ಜನಕಾತ್ಮಜಾಮ್ ।
ಭ್ರಷ್ಟಾಭರಣಕೌಶೇಯಾಂ ಶೋಕವೇಗಪರಾಜಿತಾಮ್ ॥ ೨೧

---

ಆ ಪುರುಷನು ದಾರಿಯನ್ನು ಬಿಡಬೇಕೆಂದು ನನ್ನನ್ನು ವಿನಯದಿಂದ ಪ್ರಾರ್ಥಿಸಿದನು. ಓ ತಂದೆಯೆ, ಸಾಮದಿಂದ ಬೇಡಿಕೊಳ್ಳತಕ್ಕವರನ್ನು ಎಲ್ಲಿಯಾದರೂ ಪ್ರಹರಿಸುವುದುಂಟೆ? ನೀಚನೂ ಅಂಥ ಕೆಲಸವನ್ನು ಮಾಡಲಾರ. ಇನ್ನು ನನ್ನಂಥವನು ಮಾಡಬಹುದೆ? (೧೬-೧೭). (ನಾನು ದಾರಿಯನ್ನು ಬಿಟ್ಟೊಡನೆ) ಆತನು ತನ್ನ ತೇಜಸ್ಸಿನಿಂದ ಆಕಾಶವನ್ನೇ ಕಿತ್ತಿಸೆಯುವನೋ ಎಂಬಂತೆ, ರಭಸದಿಂದ ಹೊರಟುಹೋದನು. ಆಮೇಲೆ ಗಗನಚಾರಿಗಳಾದ ಸಿದ್ಧಚಾರಣಾದಿಗಳು ಬಂದು ನನ್ನನ್ನು ಅಭಿನಂದಿಸಿದರು: 'ಅಯ್ಯಾ, ಸುದೈವದಿಂದ ನೀನು ಬದುಕಿ ಉಳಿದೆ! ಅವನೊಡನೆ ರಕ್ಷಣೀಯಳಾದ ಸ್ತ್ರೀವ್ಯಕ್ತಿಯೋರ್ವಳಿದ್ದುದರಿಂದ, ಅವನು ಹೇಗೋ ಸುಮ್ಮನೆ ಹೊರಟುಹೋದನು. ನಿಸ್ಸಂಶಯವಾಗಿ ಅದರಿಂದಲೇ ನಿನಗೆ ಕ್ಷೇಮವಾಯಿತು' ಎಂದು ಮಹಾನುಭಾವರಾದ ಮಹರ್ಷಿಗಳೂ ಸಿದ್ಧಪುರುಷರೂ ನನಗೆ ಹೇಳಿದರು (೧೮-೧೯). ಆ ಪುರುಷನು ರಾಕ್ಷಸರಾಜನಾದ ರಾವಣನೆಂದೂ, ಆ ಸ್ತ್ರೀಯು ದಶರಥಪುತ್ರನಾದ ಶ್ರೀರಾಮನ ಪತ್ನಿಯೆಂದೂ, ಜನಕರಾಜನ ಪುತ್ರಿಯೆಂದೂ ಆಮೇಲೆ ನನಗೆ ಗೊತ್ತಾಯಿತು. ಆ ಸ್ತ್ರೀಯು ಕದಲಿದ ದುಕೂಲಾಭರಣಗಳುಳ್ಳವಳಾಗಿ ಶೋಕಾವೇಶದಿಂದ ಬಸವಳಿದಿದ್ದಳು. ಅವಳ

ರಾಮಲಕ್ಷ್ಮಣಯೋರ್ನಾಮ ಕ್ರೋಶಂತೀಂ ಮುಕ್ತಮೂರ್ಧಜಾಮ್
ಏಷ ಕಾಲಾತ್ಯಯಸ್ತಾವದಿತಿ ಕಾಲವಿದಾಂ ವರಃ ॥ ೨೨

ಏತಮರ್ಥಂ ಸಮಗ್ರಂ ಮೇ ಸುಪಾರ್ಶ್ವಃ ಪ್ರತ್ಯವೇದಯತ್ ।
ತಚ್ಛ್ರುತ್ವಾಪಿ ಹಿ ಮೇ ಬುದ್ಧಿರ್ನಾಸೀತ್ ಕಾಚಿತ್ ಪರಾಕ್ರಮೇ ॥

ಅಪಕ್ಷೋಽಹಂ ಕಥಂ ಪಕ್ಷೀ ಕರ್ಮ ಕಿಂಚಿದುಪಕ್ರಮೇ ।
ಯತ್ತು ಶಕ್ಯಂ ಮಯಾ ಕರ್ತುಂ ವಾಗ್ಬುದ್ಧಿಗುಣವರ್ತಿನಾ ॥ ೨೪

ಶ್ರೂಯತಾಂ ತತ್ ಪ್ರವಕ್ಷ್ಯಾಮಿ ಭವತಾಂ ಪೌರುಷಾಶ್ರಯಮ್ ।
ವಾಙ್ಮತಿಭ್ಯಾಂ ತು ಸರ್ವೇಷಾಂ ಕರಿಷ್ಯಾಮಿ ಪ್ರಿಯಂ ಹಿ ವಃ ॥ ೨೫

ಯದ್ಧಿ ದಾಶರಥೇಃ ಕಾರ್ಯಂ ಮಮ ತನ್ನಾತ್ರ ಸಂಶಯಃ ।
ತೇ ಭವಂತೋ ಮತಿಶ್ರೇಷ್ಠಾ ಬಲವಂತೋ ಮನಸ್ವಿನಃ ॥ ೨೬

ಪ್ರೇಷಿತಾಃ ಕಪಿರಾಜೇನ ದೇವೈರಪಿ ದುರಾಸದಾಃ ।
ರಾಮಲಕ್ಷ್ಮಣಬಾಣಾಶ್ಚ ನಿಶಿತಾಃ ಕಂಕಪತ್ರಿಣಃ ॥ ೨೭

---

ಕೇಶಪಾಶವು ಕೆದರಿತ್ತು. ರಾಮಲಕ್ಷ್ಮಣರ ಹೆಸರನ್ನು ಹಿಡಿದು ಕೂಗಿ ಕೊಳ್ಳುತ್ತಿದ್ದಳು. ತಡವಾಗಿ ಬರಲು ಇದೇ ಕಾರಣ" ಎಂದು ನನ್ನ ಮಗನು ಹೇಳಿದನು. ಕಾಲದ ಮೂಲ್ಯವನ್ನು ಬಲ್ಲವರಲ್ಲಿ ಅವನು ಅಗ್ರಗಣ್ಯ (೨೦-೨೨). ವಾನರರೆ, ಈ ರೀತಿಯಲ್ಲಿ ಸುಪಾರ್ಶ್ವನು ಸಮಗ್ರವೃತ್ತಾಂತವನ್ನೂ ನನಗೆ ತಿಳಿಸಿದನು. ಅದನ್ನು ಕೇಳಿಯೂ ನನ್ನ ಪರಾಕ್ರಮವನ್ನು ಮೆರೆಸಲು ನನಗೆ ಬುದ್ಧಿಯುಂಟಾಗಲಿಲ್ಲ! ಪಕ್ಷಿಯಾದ ನನಗೆ ರೆಕ್ಕೆಗಳೇ ಇಲ್ಲದಿದ್ದರೆ, ಯಾವ ಕಾರ್ಯವನ್ನು ಮಾಡಿಯೇನು? ಆದರೆ ವಾಙ್ಮಾತ್ರದಿಂದಲೂ ಬುದ್ಧಿಶಕ್ತಿಯಿಂದಲೂ ಯಾವ ಉಪಕಾರವನ್ನು ಮಾಡಲು ಶಕ್ಯವೋ ಅದನ್ನು ಹೇಳುವೆನು, ಕೇಳಿರಿ (೨೩-೨೪). ಕಾರ್ಯಸಿದ್ಧಿಯು ನಿಮ್ಮ ಪೌರುಷ ವನ್ನವಲಂಬಿಸಿದೆ. ವಾಗ್‌ಬುದ್ಧಿಗಳಿಂದ ನಿಮ್ಮೆಲ್ಲರಿಗೂ ಪ್ರಿಯವಾದುದನ್ನು ಮಾಡಬಲ್ಲೆನು. ಯಾವುದು ಶ್ರೀರಾಮನ ಕಾರ್ಯವೋ ಅದು ನನ್ನ ಕಾರ್ಯವೇ. ವಾನರೋತ್ತಮರೆ, ನೀವೆಲ್ಲರೂ ಬುದ್ಧಿಶಾಲಿಗಳು; ಬಲಶಾಲಿ ಗಳು; ಧೀರರು (೨೫-೨೬). ಕಪಿರಾಜನಾದ ಸುಗ್ರೀವನಿಂದ ಪ್ರೇರಿತರಾಗಿ ಬಂದಿದ್ದೀರಿ. ದೇವತೆಗಳಿಗೂ ನಿಮ್ಮನ್ನು ಧರ್ಷಿಸಲು ಶಕ್ಯವಿಲ್ಲ. ರಾಮ

ತ್ರಯಾಣಾಮಪಿ ಲೋಕಾನಾಂ ಪರ್ಯಾಪ್ತಾಸ್ತ್ರಾಣನಿಗ್ರಹೇ ।
ಕಾಮಂ ಖಲು ದಶಗ್ರೀವಸ್ತೇಜೋಬಲಸಮನ್ವಿತಃ ॥ ೨೮

ಭವತಾಂ ತು ಸಮರ್ಥಾನಾಂ ನ ಕಿಂಚಿದಪಿ ದುಷ್ಕರಮ್ ।
ತದಲಂ ಕಾಲಸಂಗೇನ ಕ್ರಿಯತಾಂ ಬುದ್ಧಿನಿಶ್ಚಯಃ ॥ ೨೯

ನ ಹಿ ಕರ್ಮಸು ಸಜ್ಜಂತೇ ಬುದ್ಧಿಮಂತೋ ಭವದ್ವಿಧಾಃ ॥

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಏಕೋನಷಷ್ಟಿತಮಃ ಸರ್ಗಃ



ಲಕ್ಷ್ಮಣರ ಗರಿಗಟ್ಟಿದ ಬಾಣಗಳಾದರೋ ಅತಿತೀಕ್ಷ್ಣವಾದವು. ಮೂರು ಲೋಕಗಳನ್ನು ರಕ್ಷಿಸುವುದಕ್ಕೂ ಶಿಕ್ಷಿಸುವುದಕ್ಕೂ ಅವು ಸಮರ್ಥವಾಗಿವೆ. ದಶಕಂಠನು ತೇಜೋಬಲಗಳಿಂದ ದುರ್ಧರ್ಷನಾಗಿರುವುದೇನೋ ದಿಟ (೨೭-೨೮). ಆದರೆ ಕಾರ್ಯದಕ್ಷರಾದ ನಿಮಗೆ ದುಷ್ಕರವಾದುದು ಯಾವುದೂ ಇಲ್ಲ! ಇನ್ನು ಕಾಲವಿಳಂಬ ಬೇಡ. ಒಂದೇ ನಿಶ್ಚಯಮಾಡಿರಿ. ಬುದ್ಧಿಶಾಲಿಗಳಾದ ನಿಮ್ಮಂಥವರು ಕಾರ್ಯಸಾಧನೆಯಲ್ಲಿ ಹಿಂಜರಿಯರು" ಎಂದು ಹೇಳಿದನು (೨೯).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಐವತ್ತೊಂಬತ್ತನೆಯ ಸರ್ಗ



## ಷಷ್ಟಿತಮಃ ಸರ್ಗಃ

### ಸಂಪಾತಿಪುರಾವೃತ್ತವರ್ಣನಮ್

ತತಃ ಕೃತೋದಕಂ ಸ್ನಾತಂ ತಂ ಗೃಧ್ರಂ ಹರಿಯೂಥಪಾಃ ।
ಉಪವಿಷ್ಟಾ ಗಿರೌ ದುರ್ಗೇ ಪರಿವಾರ್ಯ ಸಮಂತತಃ ॥ ೧

ತಮಂಗದಮುಪಾಸೀನಂ ತೈಃ ಸರ್ವೈರ್ಹರಿಭಿರ್ವೃತಮ್ ।
ಜನಿತಪ್ರತ್ಯಯೋ ಹರ್ಷಾತ್ ಸಂಪಾತಿಃ ಪುನರಬ್ರವೀತ್ ॥ ೨

ಕೃತ್ವಾ ನಿಃಶಬ್ದಮೇಕಾಗ್ರಾಃ ಶೃಣ್ವಂತು ಹರಯೋ ಮಮ ।
ತಥ್ಯಂ ಸಂಕೀರ್ತಯಿಷ್ಯಾಮಿ ಯಥಾ ಜಾನಾಮಿ ಮೈಥಿಲೀಮ್ ॥ ೩

ಅಸ್ಯ ವಿಂಧ್ಯಸ್ಯ ಶಿಖರೇ ಪತಿತೋಽಸ್ಮಿ ಪುರಾ ಹ್ಯಹಮ್ ।
ಸೂರ್ಯಾತಪಪರೀತಾಂಗೋ ನಿರ್ದಗ್ಧಃ ಸೂರ್ಯರಶ್ಮಿಭಿಃ ॥ ೪

ಲಬ್ಧಸಂಜ್ಞಸ್ತು ಷಡ್ರಾತ್ರಾತ್ರಾದ್ವಿವಶೋ ವಿಹ್ವಲನ್ನಿವ ।
ವೀಕ್ಷಮಾಣೋ ದಿಶಃ ಸರ್ವಾ ನಾಭಿಜಾನಾಮಿ ಕಿಂಚನ ॥ ೫

### ಸರ್ಗ ೬೦

ಸಂಪಾತಿಯು ತನ್ನ ಪೂರ್ವಕಥೆಯನ್ನಾರಂಭಿಸಿ ನಿಶಾಕರಮುನಿಯ ಸಂದರ್ಶನ ವೃತ್ತಾಂತವನ್ನು ವಾನರರಿಗೆ ತಿಳಿಸುವುದು.

ಸಂಪಾತಿಯು ಜಟಾಯುವಿಗೆ ಜಲತರ್ಪಣವನ್ನಿತ್ತು ಸ್ನಾನಮಾಡಿ ಬರಲಾಗಿ, ವಾನರರು ಪರ್ವತದಮೇಲೆ ಅವನ ಸುತ್ತಲೂ ಬಂದು ಕುಳಿತರು. ಅಂಗದನು ಕಪಿನಾಯಕರೊಡನೆ ಬಂದು ಸಂಪಾತಿಯ ಸಮೀಪದಲ್ಲಿ ಉಪವಿಷ್ಟನಾದನು. (ನಿಶಾಕರಮುನಿಯು ತಿಳಿಸಿದ್ದಂತೆ ತನಗೆ ರೆಕ್ಕೆಗಳು ಹುಟ್ಟುತ್ತವೆಯೆಂದು) ಸಂಪಾತಿಗೆ ನಂಬಿಕೆಯಾಯಿತು. ಅವನು ಹರ್ಷದಿಂದ ಅಂಗದನನ್ನು ನೋಡುತ್ತ ಹೀಗೆಂದನು (೧-೨): "ಎಲೈ ವಾನರೋತ್ತಮರೆ, ಸದ್ದುಮಾಡದೆ ಸಾವಧಾನವಾಗಿ ಕೇಳಿರಿ. ಮೈಥಿಲಿಯ ವೃತ್ತಾಂತವು ಮೊದಲೇ ನನಗೆ ತಿಳಿದಿತ್ತೆಂಬ ಸತ್ಯಾಂಶವನ್ನು ಹೇಳುತ್ತಿದ್ದೇನೆ. ಹಿಂದೆ ನಾನು ತಿಳಿಸಿದಂತೆ, ವಿಂಧ್ಯಪರ್ವತಶ್ರೇಣಿಗೆ ಸೇರಿದ ಈ ಶಿಖರದಲ್ಲಿ ಬಿಸಿಲಿನಿಂದ ಬೆಂದು ಸೂರ್ಯಕಿರಣಗಳಿಂದ ಸುಟ್ಟುಬಿದ್ದೆನಷ್ಟೆ (೩-೪). ಆರು ರಾತ್ರಿಗಳು ಕಳೆದಮೇಲೆ ನನಗೆ ಪ್ರಜ್ಞೆಬಂದಿತು! ಅನಾಥನಾಗಿ

ತತಸ್ತು ಸಾಗರಾನ್ ಶೈಲಾನ್ನದೀಃ ಸರ್ವಾಃ ಸರಾಂಸಿ ಚ ।
ವನಾನಿ ಚ ಪ್ರದೇಶಾಂಶ್ಚ ಸಮೀಕ್ಷ್ಯ ಮತಿರಾಗಮತ್ ॥ ೬

ಹೃಷ್ಟಪಕ್ಷಿಗಣಾಕೀರ್ಣಃ ಕಂದರಾಂತರಕೂಟವಾನ್ ।
ದಕ್ಷಿಣಸ್ಯೋದಧೇಸ್ತೀರೇ ವಿಂಧ್ಯೋಽಯಮಿತಿ ನಿಶ್ಚಿತಃ ॥ ೭

ಆಸೀಚ್ಚಾತ್ರಾಶ್ರಮಃ ಪುಣ್ಯಃ ಸುರೈರಪಿ ಸುಪೂಜಿತಃ ।
ಋಷಿರ್ನಿಶಾಕರೋ ನಾಮ ಯಸ್ಮಿನ್ನುಗ್ರತಪಾ ಭವತ್ ॥ ೮

ಅಷ್ಟೌ ವರ್ಷಸಹಸ್ರಾಣಿ ತೇನಾಸ್ಮಿನ್ನೃಷಿಣಾ ವಿನಾ ।
ವಸತೋ ಮಮ ಧರ್ಮಜ್ಞಾಃ ಸ್ವರ್ಗತೇ ತು ನಿಶಾಕರೇ ॥ ೯

ಅವತೀರ್ಯ ಚ ವಿಂಧ್ಯಾಗ್ರಾತ್ ಕೃಚ್ಛ್ರೇಣ ವಿಷಮಾಚ್ಛನೈಃ ।
ತೀಕ್ಷ್ಣದರ್ಭಾಂ ವಸುಮತೀಂ ದುಃಖೇನ ಪುನರಾಗತಃ ॥ ೧೦

ತಮೃಷಿಂ ದ್ರಷ್ಟುಕಾಮೋಽಸ್ಮಿ ದುಃಖೇನಾಭ್ಯಾಗತೋ ಭೃಶಮ್ ।
ಜಟಾಯುಷಾ ಮಯಾ ಚೈವ ಬಹುಶೋಽಧಿಗತೋ ಹಿ ಸಃ ॥ ೧೧

---

ದಿಕ್ಕುಗೆಟ್ಟು ಸುತ್ತಲೂ ನೋಡಿದೆನು. ನಾನೆಲ್ಲಿದ್ದೇನೆ ಏನೆಂಬುದೊಂದೂ ನನಗೆ ಹೊಳೆಯಲಿಲ್ಲ. ಆಮೇಲೆ ಈ ಸಮುದ್ರ, ಬೆಟ್ಟ, ನದಿ, ಕೊಳ, ವನ ಮುಂತಾದ ಪ್ರದೇಶಗಳನ್ನು ಲಕ್ಷಿಸಿ ನೋಡುತ್ತಿರಲಾಗಿ, ' ಇದು ತೆಂಕಣ ಕಡಲಿನ ತೀರ, ಇಲ್ಲಿರುವುದು ವಿಂಧ್ಯಪರ್ವತಶ್ರೇಣಿ, ಪಕ್ಷಿಗಳು ಹರ್ಷದಿಂದ ನಲಿಯುತ್ತಿವೆ. ಗುಹೆಗಳಿರುವ ಗಿರಿಶೃಂಗವಿದು ' ಎಂದು ನಿಶ್ಚಯವಾಯಿತು (೫-೭). ಇಲ್ಲಿ ದೇವತೆಗಳಿಗೂ ಪೂಜ್ಯವಾದ ಒಂದು ಪುಣ್ಯಾಶ್ರಮವಿದ್ದಿತು. ಅದರಲ್ಲಿ ಉಗ್ರತಪಸ್ಸನ್ನಾಚರಿಸುತ್ತಿದ್ದ ನಿಶಾಕರನೆಂಬ ಋಷಿಯೊಬ್ಬನಿದ್ದನು. ಓ ಧರ್ಮಜ್ಞರೆ, ಆತನು ಸ್ವರ್ಗಸ್ಥನಾದಮೇಲೆ ಅವನನ್ನಗಲಿ ನಾನು ಇಲ್ಲಿ ವಾಸಿಸುತ್ತ ಎಂಟುಸಾವಿರ ವರ್ಷಗಳಾದವು ! ಇರಲಿ ; ಆಮೇಲೆ ವಿಂಧ್ಯ ಶಿಖರದ ತಿಟ್ಟನಿಂದ ಮೆಲ್ಲಗೆ ಕಷ್ಟಪಟ್ಟು ಕೆಳಗಿಳಿದು, ತೀಕ್ಷ್ಣವಾದ ದರ್ಭೆ ಗಳಿಂದ ತುಂಬಿದ ಈ ಆಶ್ರಮಭೂಮಿಗೆ ಬಂದು ಸೇರಿದೆನು (೮-೧೦). ನಿಶಾಕರಮುನಿಯನ್ನು ನೋಡಬೇಕೆಂದು ಬಹುಶ್ರಮದಿಂದ ಬಂದೆನು. ಹಿಂದೆ ನಾನೂ ಜಟಾಯುವೂ ಅನೇಕವೇಳೆ ಆತನನ್ನು ಕಂಡು ಸೇವೆಮಾಡಿದ್ದೆವು.

ತಸ್ಯಾಶ್ರಮಪದಾಭ್ಯಾಶೇ ವವುರ್ವಾತಾಃ ಸುಗಂಧಿನಃ ।
ವೃಕ್ಷೋ ನಾಪುಷ್ಪಿತಃ ಕಶ್ಚಿದಫಲೋ ವಾ ನ ವಿದ್ಯತೇ ॥ ೧೨

ಉಪೇತ್ಯ ಚಾಶ್ರಮಂ ಪುಣ್ಯಂ ವೃಕ್ಷಮೂಲಮುಪಾಶ್ರಿತಃ ।
ದ್ರಷ್ಟುಕಾಮಃ ಪ್ರತೀಕ್ಷೇಽಹಂ ಭಗವಂತಂ ನಿಶಾಕರಮ್ ॥ ೧೩

ಅಥಾಪಶ್ಯಮದೂರಸ್ಥಮೃಷಿಂ ಜ್ವಲಿತತೇಜಸಮ್ ।
ಕೃತಾಭಿಷೇಕಂ ದುರ್ಧರ್ಷಮುಪಾವೃತ್ತಮುದಙ್ಮುಖಮ್ ॥ ೧೪

ತಮೃಕ್ಷಾಃ ಸೃಮರಾ ವ್ಯಾಘ್ರಾಃ ಸಿಂಹಾ ನಾಗಾಃ ಸರೀಸೃಪಾಃ ।
ಪರಿವಾರ್ಯೋಪಗಚ್ಛಂತಿ ಧಾತಾರಂ ಪ್ರಾಣಿನೋ ಯಥಾ ॥ ೧೫

ತತಃ ಪ್ರಾಪ್ತಮೃಷಿಂ ಜ್ಞಾತ್ವಾ ತಾನಿ ಸತ್ತ್ವಾನಿ ವೈ ಯಯುಃ ।
ಪ್ರವಿಷ್ಟೇ ರಾಜನಿ ಯಥಾ ಸರ್ವಂ ಸಾಮಾತ್ಯಕಂ ಬಲಮ್ ॥ ೧೬

ಋಷಿಸ್ತು ದೃಷ್ಟ್ವಾ ಮಾಂ ಪ್ರೀತಃ ಪ್ರವಿಷ್ಟಶ್ಚಾಶ್ರಮಂ ಪುನಃ ।
ಮುಹೂರ್ತಮಾತ್ರಾನ್ನಿಷ್ಕ್ರಮ್ಯ ತತಃ ಕಾರ್ಯಮಪೃಚ್ಛತ ॥ ೧೭

---

ಆ ಮುನಿಯ ಆಶ್ರಮದ ಬಳಿಯಲ್ಲಿ ಸುಗಂಧಿಯಾದ ವಾಯುವು ಬೀಸುತ್ತಿತ್ತು. ಹೂವಿಲ್ಲದ ಅಥವಾ ಹಣ್ಣಿಲ್ಲದ ಒಂದು ಮರವೂ ಅಲ್ಲಿರಲಿಲ್ಲ (೧೧-೧೨). ನಾನು ಆತನ ಪುಣ್ಯಾಶ್ರಮವನ್ನು ಸೇರಿ ಮಹಾತ್ಮನಾದ ನಿಶಾಕರಮುನಿಯನ್ನು ಪರೀಕ್ಷಿಸುತ್ತ ಒಂದು ಮರದ ಬುಡದಲ್ಲಿ ನಿಂತೆನು. ಸ್ವಲ್ಪ ಹೊತ್ತಿನಲ್ಲಿ ತೇಜಸ್ವಿಯಾದ ಆ ಮುನಿಯು ಸ್ನಾನಮಾಡಿ ನನ್ನ ಸಮೀಪದಲ್ಲಿ ಉತ್ತರಾಭಿಮುಖವಾಗಿ ಬರುವುದನ್ನು ಕಂಡೆನು (೧೩-೧೪). ಎಲೈ ವಾನರರೆ, ಸಮಸ್ತ ಭೂತಗಳೂ ಬ್ರಹ್ಮದೇವನನ್ನು ಬಳಸಿ ಸೇವಿಸುವಂತೆ, ಆ ಋಷಿಯ ಸುತ್ತಲೂ ಕರಡಿ, ಚಮರಮೃಗ, ಹುಲಿ, ಸಿಂಹ, ಆನೆ, ಸರ್ಪ ಮೊದಲಾದ ಪ್ರಾಣಿಗಳು ಆತನನ್ನು ಸೇವಿಸುತ್ತ ಬರುತ್ತಿದ್ದವು (೧೫). ರಾಜನು ತನ್ನ ಅಂತಃಪುರವನ್ನು ಪ್ರವೇಶಿಸಿದ ಮೇಲೆ ಮಂತ್ರಿಗಳೇ ಮೊದಲಾದ ಪರಿವಾರದವರು ಹಿಂದಿರುಗಿ ಹೋಗುವಂತೆ, ಆ ಮಹರ್ಷಿಯು ಆಶ್ರಮವನ್ನು ಪ್ರವೇಶಿಸಲು, ಆ ಪ್ರಾಣಿಗಳೆಲ್ಲವೂ ತಮ್ಮ ತಮ್ಮ ನಿವಾಸಗಳಿಗೆ ಹಿಂದಿರುಗಿ ಹೋದವು (೧೬). ಆ ಮುನಿಯು ಪ್ರೀತಿಯಿಂದ ನನ್ನನ್ನು ನೋಡಿ ಆಶ್ರಮದೊಳಗೆ ಹೋಗಿ, ಸ್ವಲ್ಪಹೊತ್ತಿನ ಮೇಲೆ ಪುನಃ ಹೊರಗೆ

ಸೌಮ್ಯ ವೈಕಲ್ಯತಾಂ ದೃಷ್ಟ್ವಾ ರೋಮ್ಣಾಂ ತೇ ನಾವಗಮ್ಯತೇ ।
ಅಗ್ನಿದಗ್ಧಾವಿಮೌ ಪಕ್ಷೌ ತ್ವಕ್ಚೈವ ವ್ರಣಿತಾ ತವ ॥ ೧೮

ಗೃಧ್ರೌ ದ್ವೌ ದೃಷ್ಟಪೂರ್ವೌ ಮೇ ಮಾತರಿಶ್ವಸಮೌ ಜವೇ ।
ಗೃಧ್ರಾಣಾಂ ಚೈವ ರಾಜಾನೌ ಭ್ರಾತರೌ ಕಾಮರೂಪಿಣೌ ॥ ೧೯

ಜ್ಯೇಷ್ಠೋ ಹಿ ತ್ವಂ ತು ಸಂಪಾತೇ ಜಟಾಯುರನುಜಸ್ತವ ।
ಮಾನುಷಂ ರೂಪಮಾಸ್ಥಾಯ ಗೃಹ್ಣೀತಾಂ ಚರಣೌ ಮಮ ॥ ೨೦

ಕಿಂ ತೇ ವ್ಯಾಧಿಸಮುತ್ಥಾನಂ ಪಕ್ಷಯೋಃ ಪತನಂ ಕಥಮ್ ।
ದಂಡೋ ವಾಯಂ ಕೃತಃ ಕೇನ ಸರ್ವಮಾಖ್ಯಾಹಿ ಪೃಚ್ಛತಃ ॥ ೨೧

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಷಷ್ಟಿತಮಃ ಸರ್ಗಃ



ಬಂದು ನನ್ನನ್ನು ಮಾತನಾಡಿಸಿದನು: 'ಸೌಮ್ಯ-ಸಂಪಾತಿ, ನಿನ್ನ ರೋಮಗಳು ಸೀದುಹೋಗಿವೆ; ರೆಕ್ಕೆಗಳು ಸುಟ್ಟುಹೋಗಿವೆ; ಚರ್ಮದಲ್ಲಿ ಗಾಯವಾಗಿದೆ, ನಿನ್ನ ಗುರುತೇ ಸಿಗುವುದಿಲ್ಲ! (೧೭-೧೮). ಗೃಧ್ರಗಳಾದ ನೀವಿಬ್ಬರು ಒಟ್ಟಿಗೆ ಬರುವುದನ್ನು ನೋಡಿದ್ದೇನೆ. ವಾಯುವೇಗದಲ್ಲಿ ಸಂಚರಿಸ ಬಲ್ಲ ಗೃಧ್ರರಾಜರಾದ ನೀವು ಅಣ್ಣತಮ್ಮಂದಿರು; ಕಾಮರೂಪಿಗಳು. ಹಿರಿಯನಾದ ನೀನು ಸಂಪಾತಿ. ನಿನ್ನ ತಮ್ಮ ಜಟಾಯು. ನೀವಿಬ್ಬರೂ ಮನುಷ್ಯರೂಪವನ್ನು ಧರಿಸಿಬಂದು ನನ್ನ ಪಾದಗಳಿಗೆ ನಮಸ್ಕರಿಸುತ್ತಿದ್ದಿರಲ್ಲವೆ? (೧೯-೨೦). ಸಂಪಾತಿ, ನಿನಗೆ ಯಾವುದಾದರೂ ವ್ಯಾಧಿಯುಂಟಾಯಿತೆ? ರೆಕ್ಕೆಗಳು ಹೇಗೆ ಬಿದ್ದುಹೋದವು? ಅಥವಾ ಯಾರಾದರೂ ನಿನ್ನನ್ನು ದಂಡಿಸಿದರೆ? ಎಲ್ಲವನ್ನೂ ನನಗೆ ಹೇಳು' ಎಂದನು" (೨೧).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಅರುವತ್ತನೆಯ ಸರ್ಗ



## ಏಕಷಷ್ಟಿತಮಃ ಸರ್ಗಃ

### ಸೂರ್ಯಾನುಗಮನಾಖ್ಯಾನಮ್

ತತಸ್ತದ್ದಾರುಣಂ ಕರ್ಮ ದುಷ್ಕರಂ ಸಾಹಸಾತ್ ಕೃತಮ್ ।
ಆಚಚಕ್ಷೇ ಮುನೇಃ ಸರ್ವಂ ಸೂರ್ಯಾನುಗಮನಂ ತದಾ ॥ ೧

ಭಗವನ್ ವ್ರಣಯುಕ್ತತ್ವಾಲ್ಲಜ್ಜಯಾ ವ್ಯಾಕುಲೇಂದ್ರಿಯಃ ।
ಪರಿಶ್ರಾಂತೋ ನ ಶಕ್ನೋಮಿ ವಚನಂ ಪ್ರತಿಭಾಷಿತುಮ್ ॥ ೨

ಅಹಂ ಚೈವ ಜಟಾಯುಶ್ಚ ಸಂಘರ್ಷಾದ್ದರ್ಪಮೋಹಿತೌ ।
ಆಕಾಶಂ ಪತಿತೌ ವೀರೌ ಜಿಜ್ಞಾಸಂತೌ ಪರಾಕ್ರಮಮ್ ॥ ೩

ಕೈಲಾಸಶಿಖರೇ ಬದ್ಧ್ವಾ ಮುನೀನಾಮಗ್ರತಃ ಪಣಮ್ ।
ರವಿಃ ಸ್ಯಾದನುಯಾತವ್ಯೋ ಯಾವದಸ್ತಂ ಮಹಾಗಿರಿಮ್ ॥ ೪

### ಸರ್ಗ ೬೧

ತಾನೂ ಜಟಾಯುವೂ ಸೂರ್ಯನ ಬಳಿಗೆ ಹಾರಿದೆವೆಂದೂ ಆಗ ರೆಕ್ಕೆಗಳು ದಗ್ಧವಾದವೆಂದೂ ಸಂಪಾತಿಯು ನಿಶಾಕರಮುನಿಗೆ ಹೇಳುವುದು.

ಸಂಪಾತಿಯು ಹೇಳಿದನು : "ಎಲೈ ವಾನರರೆ, ಆಗ ನಾನು ಸೂರ್ಯ ಮಂಡಲದವರೆಗೆ ಹಾರಿಹೋದ ಸಾಹಸಮಯವಾದ ದುರಂತಕೃತ್ಯವನ್ನು ವಿವರಿಸಿದೆನು : 'ಭಗವನ್, ನನ್ನ ದೇಹವು ವ್ರಣದಿಂದ ತುಂಬಿದೆ. ಇಂದ್ರಿಯಗಳು ವಿಚಲಿತವಾಗಿವೆ. ಬಹಳ ಬಳಲಿಹೋಗಿದ್ದೇನೆ. ನಾಚಿಕೆ ಯಿಂದ ಉತ್ತರ ಹೇಳಲಾರದವನಾಗಿದ್ದೇನೆ (೧-೨). ನಾನೂ ಜಟಾಯುವೂ ಗರ್ವದಿಂದ ಬುದ್ಧಿಗೆಟ್ಟು ಸ್ಪರ್ಧೆಗೆ ಇಳಿದೆವು. ನಮ್ಮ ಪರಾಕ್ರಮವನ್ನು ಪರೀಕ್ಷಿಸಬೇಕೆಂದು ಆಕಾಶವನ್ನಡರಿದೆವು. ಕೈಲಾಸಶಿಖರದಲ್ಲಿ ಮುನಿ ಗಳೆದುರಿಗೆ ಪಣವನ್ನು ಕಟ್ಟಿದ್ದೆವು 'ಸೂರ್ಯನು ಅಸ್ತಾಚಲವನ್ನು ಸೇರುವ ವರೆಗೂ ಅವನ ಹಿಂದೆಯೇ ಹಾರಿಹೋಗಬೇಕು !' ಎಂಬುದು ನಮ್ಮ

ಅಥಾವಾಂ ಯುಗಪತ್ ಪ್ರಾಪ್ತಾವಪಶ್ಯಾವ ಮಹೀತಲೇ ।
ರಥಚಕ್ರಪ್ರಮಾಣಾನಿ ನಗರಾಣಿ ಪೃಥಕ್ಪೃಥಕ್ ॥ ೫

ಕ್ವಚಿದ್ವಾದಿತ್ರಘೋಷಾಂಶ್ಚ ಬ್ರಹ್ಮಘೋಷಾಂಶ್ಚ ಶುಶ್ರುವಃ ।
ಗಾಯಂತೀಶ್ಚಾಂಗನಾ ಬಹ್ವೀಃ ಪಶ್ಯಾವೋ ರಕ್ತವಾಸಸಃ ॥ ೬

ತೂರ್ಣಮುತ್ಪತ್ಯ ಚಾಕಾಶಮಾದಿತ್ಯಪಥಮಾಶ್ರಿತೌ ।
ಆವಾಮಾಲೋಕಯಾವಸ್ತದ್ವನಂ ಶಾದ್ವಲಸಂಸ್ಥಿತಮ್ ॥ ೭

ಉಪಲೈರಿವ ಸಂಛನ್ನಾ ದೃಶ್ಯತೇ ಭೂಃ ಶಿಲೋಚ್ಚಯೈಃ ।
ಆಪಗಾಭಿಶ್ಚ ಸಂವೀತಾ ಸೂತ್ರೈರಿವ ವಸುಂಧರಾ ॥ ೮

ಹಿಮವಾಂಶ್ಚೈವ ವಿಂಧ್ಯಶ್ಚ ಮೇರುಶ್ಚ ಸುಮಹಾನ್ನಗಃ ।
ಭೂತಲೇ ಸಂಪ್ರಕಾಶಂತೇ ನಾಗಾ ಇವ ಜಲಾಶಯೇ ॥ ೯

ತೀವ್ರಃ ಸ್ವೇದಶ್ಚ ಖೇದಶ್ಚ ಭಯಂ ಚಾಸೀತ್ತದಾವಯೋಃ ।
ಸಮಾವಿಶತಿ ಮೋಹಶ್ಚ ತಮೋ ಮೂರ್ಛಾ ಚ ದಾರುಣಾ ॥ ೧೦

---

ಪಣವಾಗಿತ್ತು (೩-೪). ಅನಂತರ ನಾವು ಒಟ್ಟಿಗೆ ಆಕಾಶವನ್ನಡರಿದಾಗ, ಭೂಮಿಯಲ್ಲಿರುವ ನಗರಗಳು ಬಂಡಿಯ ಗಾಲಿಗಳಷ್ಟು ಚಿಕ್ಕದಾಗಿ ಅಲ್ಲಲ್ಲಿ ಕಾಣಿಸುತ್ತಿದ್ದವು! ಗಗನತಳದಲ್ಲಿ ಕೆಲವೆಡೆ ವಾದ್ಯಘೋಷಗಳೂ ವೇದ ಘೋಷಗಳೂ ನಮಗೆ ಕೇಳಿಸಿದವು. ರಕ್ತವಸ್ತ್ರವನ್ನು ಧರಿಸಿದ ಬಹುಮಂದಿ ಸ್ತ್ರೀಯರು ಹಾಡುವುದನ್ನು ನೋಡಿದೆವು (೫-೬). ಬಹುಬೇಗನೆ ಆಕಾಶ ವನ್ನೇರಿ ಕೆಳಗೆ ನೋಡಿದಾಗ, ನಮ್ಮಿಬ್ಬರಿಗೂ ಭೂಮಿಯು ಒಂದು ಹುಲ್ಲು ಗಾವಲಿನಂತೆ ಹಸುರಾಗಿ ಕಾಣಿಸಿತು. ಪರ್ವತಗಳು ಕಲ್ಲುಹರಳುಗಳಂತೆಯೂ ನದಿಗಳು ದಾರಗಳಂತೆಯೂ ಗೋಚರಿಸಿದವು! ಭೂತಳದಲ್ಲಿ ಮಹಾಪರ್ವತ ಗಳೆನಿಸಿದ ಹಿಮಾಚಲ, ವಿಂಧ್ಯ, ಮೇರುಗಳು ಕೆರೆಯಲ್ಲಿರುವ ಆನೆಗಳಂತೆ ಕಂಡವು! (೭-೯). ಮುನಿಗಳೆ, ಆ ಸಮಯದಲ್ಲಿ ನಮಗೆ ಬಹಳ ಆಯಾಸ ವಾಯಿತು ಬೆವರು ಕಿತ್ತುಕೊಂಡಿತು. ಭಯವು ಆವರಿಸಿತು. ದಿಗ್ಭ್ರಮೆ ಯುಂಟಾಯಿತು. ಕತ್ತಲೆ ಕವಿದು ಎಚ್ಚರದಪ್ಪಿದಂತಾಯಿತು! ದಕ್ಷಿಣ ದಿಕ್ಕಾವುದು, ಆಗ್ನೇಯವಾವುದು, ಪಶ್ಚಿಮ ಯಾವುದು— ಎಂಬುದೊಂದೂ

ನ ದಿಗ್ವಿಜ್ಞಾಯತೇ ಯಾಮ್ಯಾ ನಾಗ್ನೇಯೀ ನ ಚ ವಾರುಣೀ ।
ಯುಗಾಂತೇ ನಿಯತೋ ಲೋಕೋ ಹತೋ ದಗ್ಧ ಇವಾಗ್ನಿನಾ ॥

ಮನಶ್ಚ ಮೇ ಹತಂ ಭೂಯಃ ಸಂನಿವರ್ತ್ಯ ತು ಸಂಶ್ರಯಮ್ ।
ಯತ್ನೇನ ಮಹತಾ ಹ್ಯಸ್ಮಿನ್ ಪುನಃ ಸಂಧಾಯ ಚಕ್ಷುಷೀ ॥ ೧೨

ಯತ್ನೇನ ಮಹತಾ ಭೂಯೋ ರವಿಃ ಸಮವಲೋಕಿತಃ ।
ತುಲ್ಯಃ ಪೃಥ್ವೀಪ್ರಮಾಣೇನ ಭಾಸ್ಕರಃ ಪ್ರತಿಭಾತಿ ನೌ ॥ ೧೩

ಜಟಾಯುರ್ಮಾಮನಾಪೃಚ್ಛ್ಯ ನಿಪಪಾತ ಮಹೀಂ ತತಃ ।
ತಂ ದೃಷ್ಟ್ವಾ ತೂರ್ಣಮಾಕಾಶಾದಾತ್ಮಾನಂ ಮುಕ್ತವಾನಹಮ್ ॥

ಪಕ್ಷಾಭ್ಯಾಂ ಚ ಮಯಾ ಗುಪ್ತೋ ಜಟಾಯುರ್ನ ಪ್ರದಹ್ಯತೇ ।
ಪ್ರಮಾದಾತ್ತತ್ರ ನಿರ್ದಗ್ಧಃ ಪತನ್ ವಾಯುಪಥಾದಹಮ್ ॥ ೧೫

ಆಶಂಕೇ ತಂ ನಿಪತಿತಂ ಜನಸ್ಥಾನೇ ಜಟಾಯುಷಮ್ ।
ಅಹಂ ತು ಪತಿತೋ ವಿಂಧ್ಯೇ ದಗ್ಧಪಕ್ಷೋ ಜಡೀಕೃತಃ ॥ ೧೬

---

ತಿಳಿಯಲಿಲ್ಲ (೧೦). ಪ್ರಳಯಕಾಲದಲ್ಲಿ ವಿಧಿವಶವಾದ ಈ ಲೋಕವು ಅಗ್ನಿಯಿಂದ ದಗ್ಧವಾಗಿ ನೆಲೆದಪ್ಪಿಹೋದಂತೆ ನಮಗೆ ಕಂಡಿತು! ನನ್ನ ಮನಸ್ಸು ಎಲ್ಲಿಯೋ, ಕಣ್ಣು ಎಲ್ಲಿಯೋ ಆಯಿತು! ಕಡೆಗೆ ಮಹಾಪ್ರಯತ್ನದಿಂದ ಮನಸ್ಸನ್ನೂ ಕಣ್ಣನ್ನೂ ಒಂದುಗೂಡಿಸಿ ಸೂರ್ಯನ ಕಡೆಗೆ ನೋಡಿದೆನು. ಆಗ ಸೂರ್ಯನು ಈ ಪೃಥ್ವಿಯಷ್ಟು ವಿಶಾಲವಾಗಿ ನಮಗೆ ಗೋಚರಿಸಿದನು! (೧೧-೧೩). ಆಗ ಜಟಾಯುವು ನನಗೆ ತಿಳಿಸದೆಯೇ ಭೂಮಿಗೆ ಇಳಿದುಬಿಟ್ಟನು! ಆಗ ನಾನೂ ಸಹ ಆಕಾಶವನ್ನು ಬಿಟ್ಟು ಕೆಳಗಿಳಿಯತೊಡಗಿದೆನು. ಜಟಾಯುವನ್ನು ನಾನು ರೆಕ್ಕೆಗಳಿಂದ ಮರೆಸಿ ನೆರಳಿನಲ್ಲಿರುವಂತೆ ಮಾಡಿದೆನಾದ್ದರಿಂದ, ಅವನು ದಗ್ಧನಾಗದೆ ಉಳಿದುಕೊಂಡನು. ಆಕಾಶದಿಂದಿಳಿಯುವಾಗ ನನ್ನ ಅವಿವೇಕದಿಂದಲೇ ನಾನು ಸುಟ್ಟುಹೋದೆನು (೧೪-೧೫). ಜಟಾಯುವು ಜನಸ್ಥಾನದಲ್ಲಿ ಬಿದ್ದುಹೋಗಿರಬಹುದೆಂದು ನನ್ನ ಊಹೆ. ನನ್ನ ರೆಕ್ಕೆಗಳು ಸುಟ್ಟೊಡನೆ ನಾನು ಮೂರ್ಛಿತನಾಗಿ ಈ ವಿಂಧ್ಯಪರ್ವತಶ್ರೇಣಿಯಲ್ಲಿ ಬಿದ್ದುಬಿಟ್ಟೆನು.

ರಾಜ್ಯೇನ ಹೀನೋ ಭ್ರಾತ್ರಾ ಚ ಪಕ್ಷಾಭ್ಯಾಂ ವಿಕ್ರಮೇಣ ಚ ।
ಸರ್ವಥಾ ಮರ್ತುಮೇವೇಚ್ಛನ್ ಪತಿಷ್ಯೇ ಶಿಖರಾದ್ಗಿರೇಃ ॥ ೧೭

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಏಕಷಷ್ಟಿತಮಃ ಸರ್ಗಃ

---

## ದ್ವಿಷಷ್ಟಿತಮಃ ಸರ್ಗಃ

### ನಿಶಾಕರಭವಿಷ್ಯಾಖ್ಯಾನಮ್

ಏವಮುಕ್ತ್ವಾ ಮುನಿಶ್ರೇಷ್ಠಮರುದಂ ದುಃಖಿತೋ ಭೃಶಮ್ ।
ಅಥ ಧ್ಯಾತ್ವಾ ಮುಹೂರ್ತಂ ತು ಭಗವಾನಿದಮಬ್ರವೀತ್ ॥ ೧

ಪಕ್ಷೌ ಚ ತೇ ಪ್ರಪಕ್ಷೌ ಚ ಪುನರನ್ಯೌ ಭವಿಷ್ಯತಃ ।
ಪ್ರಾಣಾಶ್ಚ ಚಕ್ಷುಷೀ ಚೈವ ವಿಕ್ರಮಶ್ಚ ಬಲಂ ಚ ತೇ ॥ ೨

---

ಮಹರ್ಷಿಗಳೆ, ನನ್ನ ಪಕ್ಷಿರಾಜ್ಯವೂ ಹೋಯಿತು ; ತಮ್ಮನೂ ಅಗಲಿದನು. ರೆಕ್ಕೆಗಳು ಸುಟ್ಟುಹೋದವು. ಪರಾಕ್ರಮವು ನಾಶಿಸಿತು. ಒಟ್ಟಿನಲ್ಲಿ ನಾನು ನಿಶ್ಚಯವಾಗಿಯೂ ಸಾಯಬೇಕೆಂದಿದ್ದೇನೆ. ಗಿರಿಶಿಖರದಿಂದ ಕೆಳಗೆ ಉರುಳುವೆನು !' ಎಂದೆನು" (೧೬-೧೭).

**ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಅರುವತ್ತೊಂದನೆಯ ಸರ್ಗ**

---

## ಸರ್ಗ ೬೨

### ಸಂಪಾತಿಗೆ ಪುನಃ ರೆಕ್ಕೆಗಳು ಬರುವುವೆಂದು ನಿಶಾಕರಮುನಿಯು ಭವಿಷ್ಯವನ್ನು ಹೇಳುವುದು.

ಸಂಪಾತಿಯು ಹೇಳಿದನು : "ವಾನರರೆ, ಈ ರೀತಿಯಲ್ಲಿ ನುಡಿದು ಅತ್ಯಂತ ದುಃಖದಿಂದ ನಾನು ಅತ್ತೆನು. ಆ ಮಹರ್ಷಿಯು ಕ್ಷಣಕಾಲ ಧ್ಯಾನಮಗ್ನನಾದನು. ಅನಂತರ ನನ್ನನ್ನು ನೋಡಿ ಈ ಪ್ರಕಾರ ಹೇಳಿದನು : 'ಸಂಪಾತಿ, ನಿನಗೆ ಬೇರೆಯ ರೆಕ್ಕೆಗಳೂ ಪುಕ್ಕಗಳೂ ಹುಟ್ಟುವುವು. ಪ್ರಾಣಬಲ, ನೇತ್ರಪಾಟವ, ಬಲಪರಾಕ್ರಮಗಳು ಹೊಸದಾಗಿ ಬರುವುವು (೧-೨).

ಪುರಾಣೇ ಸುಮಹತ್ಕಾರ್ಯಂ ಭವಿಷ್ಯತಿ ಮಯಾ ಶ್ರುತಮ್ ।
ದೃಷ್ಟಂ ಮೇ ತಪಸಾ ಚೈವ ಶ್ರುತ್ವಾ ಚ ವಿದಿತಂ ಮಮ ॥ ೩

ರಾಜಾ ದಶರಥೋ ನಾಮ ಕಶ್ಚಿದಿಕ್ಷ್ವಾಕುನಂದನಃ ।
ತಸ್ಯ ಪುತ್ರೋ ಮಹಾತೇಜಾ ರಾಮೋ ನಾಮ ಭವಿಷ್ಯತಿ ॥ ೪

ಅರಣ್ಯಂ ಚ ಸಹ ಭ್ರಾತ್ರಾ ಲಕ್ಷ್ಮಣೇನ ಗಮಿಷ್ಯತಿ ।
ಅಸ್ಮಿನ್ನರ್ಥೇ ನಿಯುಕ್ತಃ ಸನ್ ಪಿತ್ರಾ ಸತ್ಯಪರಾಕ್ರಮಃ ॥ ೫

ನೈರ್ಋತೋ ರಾವಣೋ ನಾಮ ತಸ್ಯ ಭಾರ್ಯಾಂ ಹರಿಷ್ಯತಿ ।
ರಾಕ್ಷಸೇಂದ್ರೋ ಜನಸ್ಥಾನಾದವಧ್ಯಃ ಸುರದಾನವೈಃ ॥ ೬

ಸಾ ಚ ಕಾಮೈಃ ಪ್ರಲೋಭ್ಯಂತೀ ಭಕ್ಷ್ಯೈರ್ಭೋಜ್ಯೈಶ್ಚ ಮೈಥಿಲೀ ।
ನ ಭೋಕ್ಷ್ಯತಿ ಮಹಾಭಾಗಾ ದುಃಖೇ ಮಗ್ನಾ ಯಶಸ್ವಿನೀ ॥ ೭

ಪರಮಾನ್ನಂ ತು ವೈದೇಹ್ಯಾ ಜ್ಞಾತ್ವಾ ದಾಸ್ಯತಿ ವಾಸವಃ ।
ಯದನ್ನಮಮೃತಪ್ರಖ್ಯಂ ಸುರಾಣಾಮಪಿ ದುರ್ಲಭಮ್ ॥ ೮

---

ಒಂದು ಮಹಾಕಾರ್ಯವು ಮುಂದೆ ನಡೆಯುವುದಾಗಿ ಪುರಾಣದಲ್ಲಿದೆ ಯೆಂದು ನಾನು ಕೇಳಿದ್ದೇನೆ. ನನ್ನ ತಪಶ್ಶಕ್ತಿಯಿಂದ ಅದನ್ನು ತಿಳಿದಿದ್ದೇನಲ್ಲದೆ ಹಿರಿಯರಿಂದಲೂ ಕೇಳಿಬಲ್ಲೆನು. ಏನೆಂದರೆ, ಇಕ್ಷ್ವಾಕುವಂಶದಲ್ಲಿ ದಶರಥನೆಂಬ ರಾಜನು ಇರುವನು. ಅವನಿಗೆ ಮಹಾತೇಜಸ್ವಿಯಾದ ಶ್ರೀರಾಮನೆಂಬ ಪುತ್ರನು ಜನಿಸುವನು (೩-೪). ಆತನು ತಮ್ಮನಾದ ಲಕ್ಷ್ಮಣನೊಡನೆ ಅರಣ್ಯಕ್ಕೆ ಹೋಗಬೇಕಾಗಿ ಬರುವುದು. ಅರಣ್ಯಕ್ಕೆ ಹೋಗಬೇಕೆಂದು ತಂದೆಯಿಂದ ಆಜ್ಞಪ್ತನಾಗಿ ಸತ್ಯಪರಾಕ್ರಮನಾದ ಶ್ರೀರಾಮನು ಅರಣ್ಯಕ್ಕೆ ಹೋಗುವನು (೫). ರಾವಣನೆಂಬ ಒಬ್ಬ ದಾನವೇಂದ್ರನು ಜನಸ್ಥಾನದಿಂದ ಶ್ರೀರಾಮನ ಪತ್ನಿಯನ್ನು ಅಪಹರಿಸಿಕೊಂಡುಹೋಗುವನು. ಆ ರಾಕ್ಷಸನು ದೇವಾಸುರರಿಗೂ ಅವಧ್ಯನಾಗಿರುವನು. ಆಮೇಲೆ ರಾಮಪತ್ನಿಯಾದ ಮೈಥಿಲಿಗೆ ರಾವಣನು ಭಕ್ಷ್ಯಭೋಜ್ಯಗಳನ್ನೂ ಭೋಗಸಾಮಗ್ರಿಗಳನ್ನೂ ಕೊಟ್ಟು ಪ್ರಲೋಭಿಸಲು ಯತ್ನಿಸಿದರೂ ಆ ಮಹಾಭಾಗಳು ಅವನಿಗೆ ವಶಳಾಗುವುದಿಲ್ಲ. ಆ ಕೀರ್ತಿಶಾಲಿನಿಯು ದುಃಖಮಗ್ನಳಾಗಿ ಯಾವ ಆಹಾರವನ್ನೂ ತೆಗೆದುಕೊಳ್ಳುವುದಿಲ್ಲ (೬-೭). ಆಗ ಇಂದ್ರನು ವೈದೇಹಿಯ

ತದನ್ನಂ ಮೈಥಿಲೀ ಪ್ರಾಪ್ಯ ವಿಜ್ಞಾಯೇಂದ್ರಾದಿದಂ ತ್ವಿತಿ ।
ಅಗ್ರಮುದ್ಧೃತ್ಯ ರಾಮಾಯ ಭೂತಲೇ ನಿರ್ವಪಿಷ್ಯತಿ ॥ ೯

ಯದಿ ಜೀವತಿ ಮೇ ಭರ್ತಾ ಲಕ್ಷ್ಮಣೇನ ಸಹ ಪ್ರಭುಃ ।
ದೇವತ್ವಂ ಗಚ್ಛತೋರ್ವಾಪಿ ತಯೋರನ್ನಮಿದಂ ತ್ವಿತಿ ॥ ೧೦

ಏಷ್ಯಂತ್ಯನ್ವೇಷಕಾಸ್ತಸ್ಯಾ ರಾಮದೂತಾಃ ಪ್ಲವಂಗಮಾಃ ।
ಆಖ್ಯೇಯಾ ರಾಮಮಹಿಷೀ ತ್ವಯಾ ತೇಭ್ಯೋ ವಿಹಂಗಮ ॥ ೧೧

ಸರ್ವಥಾ ಹಿ ನ ಗಂತವ್ಯಮೀದೃಶಃ ಕ್ವ ಗಮಿಷ್ಯಸಿ ।
ದೇಶಕಾಲೌ ಪ್ರತೀಕ್ಷಸ್ವ ಪಕ್ಷೌ ತ್ವಂ ಪ್ರತಿಪತ್ಸ್ಯಸೇ ॥ ೧೨

ಯದಾ ಪ್ರವೃತ್ತಿಂ ತಾಂ ಸರ್ವಾಮಾಖ್ಯಾಸ್ಯಸಿ ವಿಹಂಗಮ ।
ತದೈವ ಪಕ್ಷೌ ವರ್ಣಶ್ಚ ತವ ಸರ್ವಂ ಭವಿಷ್ಯತಿ ॥ ೧೩

---

ಪರಿಸ್ಥಿತಿಯನ್ನರಿತು ಆಕೆಗೆ ದಿವ್ಯಾನ್ನವನ್ನು ಕಳಿಸಿಕೊಡುವನು. ಅಮೃತ ಸಮಾನವಾದ ಆ ದಿವ್ಯಾನ್ನವು ದೇವತೆಗಳಿಗೂ ಲಭ್ಯವಲ್ಲ. ಆ ದಿವ್ಯಾನ್ನವನ್ನು ಇಂದ್ರನು ಕಳಿಸಿದ್ದಾನೆಂದು ಮೈಥಿಲಿಯು ಸ್ವೀಕರಿಸುವಳು. ಒಂದು ಭಾಗವನ್ನು ಶ್ರೀರಾಮನಿಗೋಸ್ಕರ ಭೂತಳದಲ್ಲಿಡುವಳು (೮-೯). 'ನನ್ನ ಪತಿಯೂ ಪ್ರಭುವೂ ಆಗಿರುವ ಶ್ರೀರಾಮನಿಗೂ ಲಕ್ಷ್ಮಣನಿಗೂ ಈ ಅನ್ನವು ಅರ್ಪಿತವಾಗಲಿ. ಅವರು ಜೀವಿಸಿದ್ದರೂ ದೇವಭಾವವನ್ನು ಪಡೆದಿದ್ದರೂ ಅವರಿಗೆ ಈ ದಿವ್ಯಾನ್ನವು ಸೇರಲಿ' ಎಂದು ಹೇಳುತ್ತ ಆ ದೇವಿಯು ಅದನ್ನು ಅರ್ಪಿಸುವಳು (೧೦). ಓ ಸಂಪಾತಿ, ಕೆಲವು ದಿನಗಳಾದಮೇಲೆ ಆಕೆಯನ್ನು ಹುಡುಕುತ್ತ ರಾಮದೂತರಾದ ವಾನರರು ಇಲ್ಲಿಗೆ ಬರುವರು. ನೀನು ಅವರಿಗೆ ಶ್ರೀರಾಮನ ಪತ್ನಿಯ ವೃತ್ತಾಂತವನ್ನು ಅರುಹು. ಈ ದುರವಸ್ಥೆಯಲ್ಲಿ ನೀನು ಎಲ್ಲಿಗೂ ಹೋಗಬೇಡ. ಎಲ್ಲಿಗೆ ತಾನೆ ನಿನಗೆ ಹೋಗಲು ಸಾಧ್ಯವಿದೆ? ದೇಶಕಾಲಗಳನ್ನು ಎದುರುನೋಡುತ್ತಿರು. ನಿನ್ನ ರೆಕ್ಕೆಗಳು ಪುನಃ ಹುಟ್ಟುವುವು (೧೧-೧೨). ಎಲೈ ಪಕ್ಷಿಯೆ, ಸೀತಾ ವೃತ್ತಾಂತವೆಲ್ಲವನ್ನೂ ನೀನು ತಿಳಿಸಿದರೆ, ಆಗ ನಿನ್ನ ರೆಕ್ಕೆಗಳೂ ಹುಟ್ಟು

ನೋತ್ಸಹೇಯಮಹಂ ಕರ್ತುಮದ್ಯೈವ ತ್ವಾಂ ಸಪಕ್ಷಕಮ್ ।
ಇಹಸ್ಥಸ್ತ್ವಂ ತು ಲೋಕಾನಾಂ ಹಿತಂ ಕಾರ್ಯಂ ಕರಿಷ್ಯಸಿ ॥ ೧೪

ತ್ವಯಾಪಿ ಖಲು ತತ್ ಕಾರ್ಯಂ ತಯೋಶ್ಚ ನೃಪಪುತ್ರಯೋಃ ।
ಬ್ರಾಹ್ಮಣಾನಾಂ ಸುರಾಣಾಂ ಚ ಮುನೀನಾಂ ವಾಸವಸ್ಯ ಚ ॥ ೧೫

ಇಚ್ಛಾಮ್ಯಹಮಪಿ ದ್ರಷ್ಟುಂ ಭ್ರಾತರೌ ರಾಮಲಕ್ಷ್ಮಣೌ ।
ನೇಚ್ಛೇ ಚಿರಂ ಧಾರಯಿತುಂ ಪ್ರಾಣಾಂಸ್ತ್ಯಕ್ಷ್ಯೇ ಕಲೇವರಮ್ ॥ ೧೬

ಮಹರ್ಷಿಸ್ತ್ವಬ್ರವೀದೇವಂ ದೃಷ್ಟತತ್ತ್ವಾರ್ಥದರ್ಶನಃ ॥

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ದ್ವಿಷಷ್ಟಿತಮಃ ಸರ್ಗಃ



ತ್ತವೆ; ತೇಜಸ್ಸೂ ಬರುತ್ತದೆ. ಈಗಲೇ ರೆಕ್ಕೆಗಳನ್ನು ಅನುಗ್ರಹಿಸಲು ನಾನು ಯತ್ನಿಸಲಾರೆ. ಏಕೆಂದರೆ, ಇಲ್ಲಿಯೇ ನೀನಿದ್ದರೆ ಮುಂದೆ ನಿನ್ನಿಂದ ಲೋಕ ಹಿತಕರವಾದ ಕಾರ್ಯವು ಜರುಗುವುದು (೧೩-೧೪). ರಾಜಕುಮಾರರಾದ ರಾಮಲಕ್ಷ್ಮಣರ ಕಾರ್ಯವನ್ನು ನೀನೂ ಸ್ವಲ್ಪ ನಡೆಸಿಕೊಡು. ಅವರದು ಮಾತ್ರವೇ ಅಲ್ಲ; ಬ್ರಾಹ್ಮಣರು, ದೇವತೆಗಳು, ಮುನಿಗಳು, ದೇವೇಂದ್ರ– ಇವರಿಗೂ ಸೇರಿದ ಕಾರ್ಯವದು (೧೫). ಸೋದರರಾದ ಶ್ರೀರಾಮ ಲಕ್ಷ್ಮಣರನ್ನು ನೋಡಲು, ಸಂಪಾತಿ, ನನಗೆ ಬಹಳ ಅಭಿಲಾಷೆಯಿದೆ. ಆದರೆ ಅಷ್ಟು ದೀರ್ಘಕಾಲದವರೆಗೆ ಪ್ರಾಣವನ್ನು ಇಟ್ಟುಕೊಂಡಿರಲು ಇಷ್ಟ ವಿಲ್ಲ ಆದ್ದರಿಂದ ಈ ಕಳೇವರವನ್ನು ತ್ಯಜಿಸುವೆನು’ ಎಂಬುದಾಗಿ ತತ್ತ್ವಜ್ಞಾನಿ ಯಾದ ಆ ಮಹರ್ಷಿಯು ನನಗೆ ಹೇಳಿದನು” (೧೬).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಅರುವತ್ತೆರಡನೆಯ ಸರ್ಗ



## ತ್ರಿಷಷ್ಟಿತಮಃ ಸರ್ಗಃ

### ಸಂಪಾತಿಪಕ್ಷಪ್ರರೋಹಃ

ಏತೈರನ್ಯೈಶ್ಚ ಬಹುಭಿರ್ವಾಕ್ಯೈರ್ವಾಕ್ಯವಿದಾಂ ವರಃ ।
ಮಾಂ ಪ್ರಶಸ್ಯಾಭ್ಯನುಜ್ಞಾಪ್ಯ ಪ್ರವಿಷ್ಟಃ ಸ ಸ್ವಮಾಶ್ರಮಮ್ ॥ ೧
ಕಂದರಾತ್ತು ವಿಸರ್ಪಿತ್ವಾ ಪರ್ವತಸ್ಯ ಶನೈಃ ಶನೈಃ ।
ಅಹಂ ವಿಂಧ್ಯಂ ಸಮಾರುಹ್ಯ ಭವತಃ ಪ್ರತಿಪಾಲಯೇ ॥ ೨
ಅದ್ಯ ತ್ವೇತಸ್ಯ ಕಾಲಸ್ಯ ಸಾಗ್ರಂ ವರ್ಷಶತಂ ಗತಮ್ ।
ದೇಶಕಾಲಪ್ರತೀಕ್ಷೋಽಸ್ಮಿ ಹೃದಿ ಕೃತ್ವಾ ಮುನೇರ್ವಚಃ ॥ ೩
ಮಹಾಪ್ರಸ್ಥಾನಮಾಸಾದ್ಯ ಸ್ವರ್ಗತೇ ತು ನಿಶಾಕರೇ ।
ಮಾಂ ನಿರ್ದಹತಿ ಸಂತಾಪೋ ವಿತರ್ಕೈರ್ಬಹುಭಿರ್ವೃತಮ್ ॥ ೪
ಉತ್ಥಿತಾಂ ಮರಣೇ ಬುದ್ಧಿಂ ಮುನಿವಾಕ್ಯೈರ್ನಿವರ್ತಯೇ ।
ಬುದ್ಧಿರ್ಯಾ ತೇನ ಮೇ ದತ್ತಾ ಪ್ರಾಣಾನಾಂ ರಕ್ಷಣಾಯ ತು ॥ ೫

## ಸರ್ಗ ೬೩

### ಸಂಪಾತಿಗೆ ರೆಕ್ಕೆಗಳು ಹುಟ್ಟುವುದು. ಅವನು ವಾನರರಿಗೆ ಮುಂದಿನ ಕರ್ತವ್ಯವನ್ನು ಹೇಳಿ ಹೊರಟುಹೋಗುವುದು.

ಸಂಪಾತಿಯು ಹೇಳಿದನು: "ಎಲೈ ವಾನರೋತ್ತಮರೆ, ವಾಕ್ಯಕೋವಿದನಾದ ನಿಶಾಕರಮುನಿಯು ಇವೇ ಮೊದಲಾದ ವಾಕ್ಯಗಳಿಂದ ನನಗೆ ಸಮಾಧಾನಹೇಳಿ, ತನ್ನ ಆಶ್ರಮವನ್ನು ಪ್ರವೇಶಿಸಿದನು. ನಾನು ಆ ಪರ್ವತಕಂದರದಿಂದ ಮೆಲ್ಲಮೆಲ್ಲಗೆ ವಿಂಧ್ಯಪರ್ವತವನ್ನೇರಿ ನಿಮ್ಮ ಆಗಮನವನ್ನು ನಿರೀಕ್ಷಿಸುತ್ತಿದ್ದೆನು (೧-೨). ಆ ಮಹರ್ಷಿಯ ಮಾತನ್ನು ಮನಸ್ಸಿನಲ್ಲಿಟ್ಟುಕೊಂಡು, ದೇಶಕಾಲಗಳನ್ನು ನಿರೀಕ್ಷಿಸುತ್ತ ಇದುವರೆಗೆ ನೂರಾರು ವರ್ಷಗಳನ್ನು ಕಳೆದೆನು ನಿಶಾಕರಮುನಿಯು ಮಹಾಪ್ರಸ್ಥಾನಕ್ಕೆ ಹೋಗಿ ಸ್ವರ್ಗವನ್ನು ಸೇರಲಾಗಿ, ವಿವಿಧ ಶಂಕಾತಂಕಗಳಿಂದಾದ ಸಂಕಟವು ನನ್ನನ್ನು ಸುಡುತ್ತಿತ್ತು (೩-೪). ಒಂದೊಂದು ಸಲ ಆತ್ಮಹತ್ಯೆಮಾಡಿಕೊಳ್ಳಬೇಕೆಂದು ಬುದ್ಧಿಯುಂಟಾಗುತ್ತಿತ್ತು. ಆದರೆ ಮುನಿಯ ಮಾತುಗಳನ್ನು ನಂಬಿ

ಸಾ ಮೇಽಪನಯತೇ ದುಃಖಂ ದೀಪ್ತೇವಾಗ್ನಿಶಿಖಾ ತಮಃ ।
ಬುದ್ಧ್ಯತಾ ಚ ಮಯಾ ವೀರ್ಯಂ ರಾವಣಸ್ಯ ದುರಾತ್ಮನಃ ॥ ೬

ಪುತ್ರಃ ಸಂತರ್ಜಿತೋ ವಾಗ್ಭಿರ್ನ ತ್ರಾತಾ ಮೈಥಿಲೀ ಕಥಮ್ ।
ತಸ್ಯಾ ವಿಲಪಿತಂ ಶ್ರುತ್ವಾ ತೌ ಚ ಸೀತಾವಿನಾಕೃತೌ ॥ ೭

ನ ಮೇ ದಶರಥಸ್ನೇಹಾತ್ ಪುತ್ರೇಣೋತ್ಪಾದಿತಂ ಪ್ರಿಯಮ್ ।
ತಸ್ಯ ತ್ವೇವಂ ಬ್ರುವಾಣಸ್ಯ ಸಂಪಾತೇರ್ವಾನರೈಃ ಸಹ ॥ ೮

ಉತ್ಪೇತತುಸ್ತದಾ ಪಕ್ಷೌ ಸಮಕ್ಷಂ ವನಚಾರಿಣಾಮ್ ।
ಸ ದೃಷ್ಟ್ವಾ ಸ್ವಾಂ ತನುಂ ಪಕ್ಷೈರುದ್ಗತೈರರುಣಚ್ಛದೈಃ ॥ ೯

ಪ್ರಹರ್ಷಮತುಲಂ ಲೇಭೇ ವಾನರಾಂಶ್ಚೇದಮಬ್ರವೀತ್ ।
ಋಷೇರ್ನಿಶಾಕರಸ್ಯೈವ ಪ್ರಭಾವಾದಮಿತಾತ್ಮನಃ ॥ ೧೦

---

ಸಮಾಧಾನಮಾಡಿಕೊಳ್ಳುತ್ತಿದ್ದೆನು ಪ್ರಾಣವನ್ನು ರಕ್ಷಿಸಿಕೊಳ್ಳಬೇಕೆಂದು ಆತನು ನನಗೆ ಉಪದೇಶಿಸಿದ್ದನು. ಅಗ್ನಿಜ್ವಾಲೆಯು ಕತ್ತಲೆಯನ್ನು ನಾಶಪಡಿಸುವಂತೆ, ಅವನ ಹಿತೋಪದೇಶವು ನನ್ನ ದುಃಖವನ್ನೀಗ ಶಮನಗೊಳಿಸಿತು! ವಾನರರೆ, ದುರಾತ್ಮನಾದ ರಾವಣನ ಶೌರ್ಯವೆಷ್ಟೆಂಬುದು ನನಗೆ ಗೊತ್ತಿದೆ (೫-೬). ನಾನು ಪುತ್ರನಾದ ಸುಪಾರ್ಶ್ವನನ್ನು ಕುರಿತು 'ಎಲೈ, ಮೈಥಿಲಿಯ ರೋದನವನ್ನು ಕೇಳಿದಮೇಲಾದರೂ ಅವಳನ್ನು ರಕ್ಷಿಸದೆ ಬಿಟ್ಟುದೇಕೆ ?' ಎಂದು ಗದರಿಸಿಕೊಂಡೆನು. ಒಟ್ಟಿನಲ್ಲಿ ರಾಮಲಕ್ಷ್ಮಣರು ಸೀತಾವಿಯುಕ್ತರಾದರು. ದಶರಥನಲ್ಲಿದ್ದ ಸ್ನೇಹಕ್ಕೆ ತಕ್ಕಂತೆ ನನ್ನ ಮಗನು ಸೀತೆಯನ್ನು ಬಿಡಿಸಿ, ನನಗೆ ಪ್ರಿಯವನ್ನುಂಟುಮಾಡದೆ ಹೋದನು" ಎಂದು ನುಡಿದನು (೭-೮). ಸಂಪಾತಿಯು ಹೀಗೆ ಹೇಳುತ್ತಿರುವಾಗಲೇ ಸಮಸ್ತ ವಾನರರ ಸಮಕ್ಷದಲ್ಲಿ ಅವನಿಗೆ ರೆಕ್ಕೆಗಳು ಹುಟ್ಟಿದವು! ತನ್ನ ಶರೀರವು ಕೆಂಪು ಪುಕ್ಕಗಳಿರುವ ಗರಿಗಳಿಂದ ವ್ಯಾಪ್ತವಾದುದನ್ನು ಕಂಡು ಸಂಪಾತಿಗೆ ಅಮಿತಾನಂದವಾಯಿತು. (೯). ಅವನು ವಾನರರನ್ನು ನೋಡಿ "ವಾನರರೆ, ನೋಡಿರಿ! ಮಹಾಮಹಿಮನಾದ ನಿಶಾಕರಮುನಿಯ

ಆದಿತ್ಯರಶ್ಮಿನಿರ್ದಗ್ಧೌ ಪಕ್ಷೌ ಮೇ ಪುನರುತ್ಥಿತೌ ।
ಯೌವನೇ ವರ್ತಮಾನಸ್ಯ ಮಮಾಸೀದ್ಯಃ ಪರಾಕ್ರಮಃ ॥ ೧೧

ತಮೇವಾದ್ಯಾನುಗಚ್ಛಾಮಿ ಬಲಂ ಪೌರುಷಮೇವ ಚ ।
ಸರ್ವಥಾ ಕ್ರಿಯತಾಂ ಯತ್ನಃ ಸೀತಾಮಧಿಗಮಿಷ್ಯಥ ॥ ೧೨

ಪಕ್ಷಲಾಭೋ ಮಮಾಯಂ ವಃ ಸಿದ್ಧಿಪ್ರತ್ಯಯಕಾರಕಃ ।
ಇತ್ಯುಕ್ತ್ವಾ ಸ ಹರೀನ್ ಸರ್ವಾನ್ ಸಂಪಾತಿಃ ಪತಗೋತ್ತಮಃ ॥ ೧೩

ಉತ್ಪಪಾತ ಗಿರೇಃ ಶೃಂಗಾಜ್ಜಿಜ್ಞಾಸುಃ ಖಗಮಾಂ ಗತಿಮ್ ।
ತಸ್ಯ ತದ್ವಚನಂ ಶ್ರುತ್ವಾ ಪ್ರೀತಿಸಂಹೃಷ್ಟಮಾನಸಾಃ ॥ ೧೪

ಬಭೂವುರ್ಹರಿಶಾರ್ದೂಲಾ ವಿಕ್ರಮಾಭ್ಯುದಯೋನ್ಮುಖಾಃ ॥

ಅಥ ಪವನಸಮಾನವಿಕ್ರಮಾಃ
ಪ್ಲವಗವರಾಃ ಪ್ರತಿಲಬ್ಧಪೌರುಷಾಃ ।

---

ಪ್ರಭಾವದಿಂದ ನನ್ನ ರೆಕ್ಕೆಗಳು ಮತ್ತೆ ಹುಟ್ಟಿದವು. ಸೂರ್ಯರಶ್ಮಿಗಳಿಂದ ಇವು ಹಿಂದೆ ದಗ್ಧವಾಗಿದ್ದವು. ಯೌವನದಲ್ಲಿದ್ದಾಗ ನನಗೆ ಯಾವ ಪರಾಕ್ರಮ ವಿದ್ದಿತೋ, ಆ ಪರಾಕ್ರಮವೂ—ಆ ಬಲಪೌರುಷಗಳೂ—ಈಗ ನನಗೆ ಬಂದವು (೧೦–೧೧). ನೀವು ಮುಂದಿನ ಪ್ರಯತ್ನವನ್ನು ತಪ್ಪದೆ ಮಾಡಿರಿ. ಸೀತೆ ಯನ್ನು ಕಾಣುವಿರಿ. ನನಗೆ ರೆಕ್ಕೆಹುಟ್ಟಿರುವುದೇ ನಿಮ್ಮ ಕಾರ್ಯಸಿದ್ಧಿ ಯಾಗುವುದನ್ನು ದೃಢಪಡಿಸುತ್ತದೆ" ಎಂದನು. ಹಾಗೆ ಹೇಳಿ ಆ ಪಕ್ಷಿರಾಜನು ಗಿರಿಶೃಂಗದಿಂದ ಮೇಲಕ್ಕೆ ಹಾರಿಹೋದನು (೧೨–೧೩). ತನಗೆ ಆಕಾಶ ಮಾರ್ಗದಲ್ಲಿ ಸಂಚರಿಸುವ ಶಕ್ತಿಬಂದಿದೆಯೇ ಎಂದು ಪರೀಕ್ಷಿಸುವುದು ಅವನ ಉದ್ದೇಶವಾಗಿತ್ತು. ಸಂಪಾತಿಯ ನುಡಿಯನ್ನು ಕೇಳಿ ಕಪಿನಾಯಕರ ಮನಸ್ಸಿಗೆ ಸಂತೋಷವಾಯಿತು. ಅವರು ಹರ್ಷದಿಂದ ಉಬ್ಬಿದರು. ತಮ್ಮ ವಿಕ್ರಮವನ್ನು ಮೆರೆಸಿ ಕಾರ್ಯಸಿದ್ಧಿಯನ್ನು ಪಡೆಯಲು ಉದ್ಯುಕ್ತರಾದರು (೧೪). ಸಂಪಾತಿಯ ಹೇಳಿಕೆಯಿಂದ ಆ ವಾನರವೀರರ ಪೌರುಷವು ಮತ್ತೆ ಕಾರ್ಯೋನ್ಮುಖವಾಯಿತು. ವಾಯುಸಮಾನವಿಕ್ರಮರಾದ ಆ ಧೀರರು

ಅಭಿಜಿದಭಿಮುಖಾಂ ದಿಶಂ ಯಯು-
ರ್ಜನಕಸುತಾಪರಿಮಾರ್ಗಣೋನ್ಮುಖಾಃ ॥ ೧೫

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ತ್ರಿಷಷ್ಟಿತಮಃ ಸರ್ಗಃ

---

## ಚತುಃಷಷ್ಟಿತಮಃ ಸರ್ಗಃ

### ಸಮುದ್ರಲಂಘನಮಂತ್ರಣಮ್

**ಆಖ್ಯಾತಾ ಗೃಧ್ರರಾಜೇನ ಸಮುತ್ಪತ್ಯ ಪ್ಲವಂಗಮಾಃ ।**
**ಸಂಗಮ್ಯ ಪ್ರೀತಿಸಂಯುಕ್ತಾ ವಿನೇದುಃ ಸಿಂಹವಿಕ್ರಮಾಃ ॥ ೧**

**ಸಂಪಾತೇರ್ವಚನಂ ಶ್ರುತ್ವಾ ಹರಯೋ ರಾವಣಕ್ಷಯಮ್ ।**
**ಹೃಷ್ಟಾಃ ಸಾಗರಮಾಜಗ್ಮುಃ ಸೀತಾದರ್ಶನಕಾಂಕ್ಷಿಣಃ ॥ ೨**

---

ಜನಕತನಯಳನ್ನು ಅನ್ವೇಷಿಸಲೇಬೇಕೆಂದು ದಕ್ಷಿಣದಿಕ್ಕಿಗೆ ಹೊರಟರು. ಅವರು ಹೊರಟಾಗ ಅಭಿಜಿನ್ನಕ್ಷತ್ರವು ಉದಯಾಭಿಮುಖವಾಗಿತ್ತು (೧೫).

**ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಅರುವತ್ತುಮೂರನೆಯ ಸರ್ಗ***

---

## ಸರ್ಗ ೬೪

### ವಿಶಾಲಸಾಗರವನ್ನು ಕಂಡು ವಾನರರ ವಿಷಾದ. ಸಾಗರವನ್ನು ಲಂಘಿಸುವ ಸಾಮರ್ಥ್ಯ ಯಾರಲ್ಲಿದೆಯೆಂದು ಅಂಗದನ ಪ್ರಶ್ನೆ.

ಗೃಧ್ರರಾಜನಾದ ಸಂಪಾತಿಯು ಸೀತೆಯಿದ್ದ ಸ್ಥಳವನ್ನು ತಿಳಿಸಲಾಗಿ, ವಾನರರೆಲ್ಲರೂ ಹರ್ಷದಿಂದ ಎದ್ದು ನಿಂತರು! ಆ ಸಿಂಹಪರಾಕ್ರಮಿಗಳು ಗುಂಪು ಗುಂಪಾಗಿ ಸೇರಿ ಸಿಂಹನಾದಮಾಡಿದರು! ರಾವಣನಿವಾಸವೆಲ್ಲಿದೆ ಯೆಂದು ಹೇಳಿದ ಸಂಪಾತಿಯ ವಚನವನ್ನು ಕೇಳಿ ಸಂಪ್ರೀತರಾದ ಕಪಿ ನಾಯಕರು, ಸೀತಾದೇವಿಯನ್ನು ಸಂದರ್ಶಿಸಬೇಕೆಂದು ನಿರ್ಧರಿಸಿ ಸಮುದ್ರದ

---

* ಇಲ್ಲಿಗೆ ಪ್ರಕ್ಷಿಪ್ತ ಭಾಗವು ಮುಗಿಯಿತು.

ಅಭಿಕ್ರಮ್ಯ ತು ತಂ ದೇಶಂ ದದೃಶುರ್ಭೀಮವಿಕ್ರಮಾಃ ।
ಕೃತ್ಸ್ನಂ ಲೋಕಸ್ಯ ಮಹತಃ ಪ್ರತಿಬಿಂಬಮಿವ ಸ್ಥಿತಮ್ ॥ ೩
ದಕ್ಷಿಣಸ್ಯ ಸಮುದ್ರಸ್ಯ ಸಮಾಸಾದ್ಯೋತ್ತರಾಂ ದಿಶಮ್ ।
ಸಂನಿವೇಶಂ ತತಶ್ಚಕ್ರುಃ ಸಹಿತಾ ವಾನರೋತ್ತಮಾಃ ॥ ೪

ಸತ್ತ್ವೈರ್ಮಹದ್ಭಿರ್ವಿಕೃತೈಃ ಕ್ರೀಡದ್ಭಿರ್ವಿವಿಧೈರ್ಜಲೇ ।
ವ್ಯಾತ್ತಾಸ್ಯೈಃ ಸುಮಹಾಕಾಯೈರೂರ್ಮಿಭಿಶ್ಚ ಸಮಾಕುಲಮ್ ॥ ೫

ಪ್ರಸುಪ್ತಮಿವ ಚಾನ್ಯತ್ರ ಕ್ರೀಡಂತಮಿವ ಚಾನ್ಯತಃ ।
ಕ್ವಚಿತ್ ಪರ್ವತಮಾತ್ರೈಶ್ಚ ಜಲರಾಶಿಭಿರಾವೃತಮ್ ॥ ೬

ಸಂಕುಲಂ ದಾನವೇಂದ್ರೈಶ್ಚ ಪಾತಾಲತಲವಾಸಿಭಿಃ ।
ರೋಮಹರ್ಷಕರಂ ದೃಷ್ಟ್ವಾ ವಿಷೇದುಃ ಕಪಿಕುಂಜರಾಃ ॥ ೭

ಆಕಾಶಮಿವ ದುಷ್ಪಾರಂ ಸಾಗರಂ ಪ್ರೇಕ್ಷ್ಯ ವಾನರಾಃ ।
ವಿಷೇದುಃ ಸಹಸಾ ಸರ್ವೇ ಕಥಂ ಕಾರ್ಯಮಿತಿ ಬ್ರುವನ್ ॥ ೮

---

ಕಡೆಗೆ ತೆರಳಿದರು (೧–೨). ಭೀಮಪರಾಕ್ರಮಿಗಳಾದ ಆ ವಾನರರಿಗೆ ಮಹಾಸಾಗರವು ಗೋಚರಿಸಿತು. (ಅದರಲ್ಲಿ ಗ್ರಹನಕ್ಷತ್ರಾದಿಗಳು ಪ್ರತಿಬಿಂಬಿಸಿದ್ದರಿಂದ) ಈ ವಿಶಾಲವಿಶ್ವದ ಒಂದು ದೊಡ್ಡ ಪ್ರತಿಬಿಂಬವೋ ಎಂಬಂತೆ ಆ ಮಹಾಸಾಗರವಿದ್ದಿತು (೩). ಆ ವಾನರವೀರರು ದಕ್ಷಿಣಸಮುದ್ರದ ಉತ್ತರತೀರವನ್ನು ಸೇರಿ, ಅಲ್ಲಿ ಬೀಡುಬಿಟ್ಟರು. ಸಮುದ್ರಜಲದಲ್ಲಿ ಬೃಹದಾಕಾರದ ವಿಕೃತರೂಪದ ವಿವಿಧ ಜಲಜಂತುಗಳು ಬಾಯಿತೆರೆದುಕೊಂಡು ಈಜಾಡುತ್ತಿದ್ದವು. ಉತ್ತುಂಗತರಂಗಗಳು ಬಂದು ಅಪ್ಪಳಿಸುತ್ತಿದ್ದವು (೪–೫). ಆ ವಿಶಾಲ ಮಹಾಸಾಗರವು ಕೆಲವುಕಡೆ ಶಾಂತವಾಗಿ ಮಲಗಿದಂತೆಯೂ ಕೆಲವುಕಡೆ (ಸಣ್ಣ ಸಣ್ಣ ಅಲೆಗಳಿಂದ) ಆಟವಾಡುವಂತೆಯೂ ಇತ್ತು. ಕೆಲವುಕಡೆ ಪರ್ವತಾಕಾರದ ಜಲರಾಶಿಗಳಿಂದ ವ್ಯಾಕುಲವಾಗಿತ್ತು (೬). ಕೆಲವುಕಡೆ ಪಾತಾಳವಾಸಿಗಳಾದ ರಾಕ್ಷಸರು ಮೇಲೆ ಬಂದು ಸಂಚರಿಸುತ್ತಿದ್ದರು. ರೋಮಾಂಚಕರವಾದ ಆ ಮಹಾಸಮುದ್ರವನ್ನು ಕಂಡು ಕಪಿನಾಯಕರು ಖಿನ್ನರಾದರು ! ಆಕಾಶದಂತೆ ಕೊನೆಯೇ ಇಲ್ಲದ ಜಲರಾಶಿಯನ್ನು ನೋಡಿ ವಿಷಣ್ಣರಾದರು ! ಮುಂದೆ ಏನುಮಾಡಬೇಕೆಂದು ಹೇಳಿಕೊಳ್ಳುತ್ತ ಚಿಂತೆಗೊಳ

ವಿಷಣ್ಣಾಂ ವಾಹಿನೀಂ ದೃಷ್ಟ್ವಾ ಸಾಗರಸ್ಯ ನಿರೀಕ್ಷಣಾತ್ ।
ಆಶ್ವಾಸಯಾಮಾಸ ಹರೀನ್ ಭಯಾರ್ತಾನ್ ಹರಿಸತ್ತಮಃ ॥ ೯

ತಾನ್ ವಿಷಾದೇನ ಮಹತಾ ವಿಷಣ್ಣಾನ್ ವಾನರರ್ಷಭಾನ್ ।
ಉವಾಚ ಮತಿಮಾನ್ ಕಾಲೇ ವಾಲಿಸೂನುರ್ಮಹಾಬಲಃ ॥ ೧೦

ನ ವಿಷಾದೇ ಮನಃ ಕಾರ್ಯಂ ವಿಷಾದೋ ದೋಷವತ್ತಮಃ ।
ವಿಷಾದೋ ಹಂತಿ ಪುರುಷಂ ಬಾಲಂ ಕ್ರುದ್ಧ ಇವೋರಗಃ ॥ ೧೧

ಯೋ ವಿಷಾದಂ ಪ್ರಸಹತೇ ವಿಕ್ರಮೇ ಪರ್ಯುಪಸ್ಥಿತೇ ।
ತೇಜಸಾ ತಸ್ಯ ಹೀನಸ್ಯ ಪುರುಷಾರ್ಥೋ ನ ಸಿಧ್ಯತಿ ॥ ೧೨

ಇತಿ ಬ್ರುವತಿ ತಸ್ಮಿಂಸ್ತು ವಾಲಿಪುತ್ರೇ ಮಹಾಮತೌ ।
ಆದಿತ್ಯೋಽಸ್ತಂ ಗತಸ್ತತ್ರ ರಜನೀ ಚಾಭ್ಯವರ್ತತ ॥ ೧೩

ತಸ್ಯಾಂ ರಾತ್ರ್ಯಾಂ ವ್ಯತೀತಾಯಾಮಂಗದೋ ವಾನರೈಃ ಸಹ ।
ಹರಿವೃದ್ಧೈಃ ಸಮಾಗಮ್ಯ ಪುನರ್ಮಂತ್ರಮಮಂತ್ರಯತ್ ॥ ೧೪

---

ಗಾದರು (೭-೮). ಸಮುದ್ರವನ್ನು ವೀಕ್ಷಿಸಿ ವಿಷಾದಿಸುತ್ತಿದ್ದ ಕಪಿಸೇನೆಯನ್ನು ವಾನರೋತ್ತಮನಾದ ಅಂಗದನು ಗಮನಿಸಿದನು. ಸಂತತ ಚಿಂತೆಯಿಂದ ಆತಂಕಿಸುತ್ತ ಅಂಜಿದ ವಾನರರನ್ನು ನೋಡಿ, ಬುದ್ಧಿಶಾಲಿಯೂ ಮಹಾಬಲನೂ ಆದ ವಾಲಿಪುತ್ರನು "ವಾನರೋತ್ತಮರೆ, ನೀವು ಮನಸ್ಸಿಗೆ ಚಿಂತೆಯನ್ನಂಟಿಸಿಕೊಳ್ಳಬೇಡಿರಿ. ಚಿಂತೆಯೆಂಬುದು ಬಹಳ ಕೆಟ್ಟದು. ಕೆರಳಿದ ಹಾವು ಹುಡುಗನನ್ನು ಕಚ್ಚಿಕೊಲ್ಲುವಂತೆ, ಚಿಂತೆಯು ಮನುಷ್ಯನನ್ನು ಕೊಲ್ಲುವುದು (೯-೧೧). ಪರಾಕ್ರಮವನ್ನು ಮೆರೆಸಬೇಕಾದ ಕಾಲದಲ್ಲಿ ಯಾವನು ಚಿಂತೆಗೊಳಗಾಗುವನೋ ಅಂಥವನು ತೇಜೋಹೀನನಾಗುವನು. ಅವನ ಕಾರ್ಯವು ಸಿದ್ಧಿಸದು" ಎಂದು ಹೇಳಿದನು. ಪ್ರಾಜ್ಞನಾದ ಅಂಗದನು ಹೀಗೆ ವಾನರರಿಗೆ ಧೈರ್ಯ ಹೇಳುತ್ತಿರಲು ಸೂರ್ಯನು ಅಸ್ತಂಗತನಾದನು. ರಾತ್ರಿಯಾಯಿತು (೧೨-೧೩). ರಾತ್ರಿಯು ಕಳೆದು ಬೆಳಗಾಗಲು, ಅಂಗದನು ಕೆಲವು ವಾನರಪ್ರಮುಖರೊಡನೆ ಕಲೆತು ಮುಂದಿನ ಕರ್ತವ್ಯವನ್ನು ಕುರಿತು

ಸಾ ವಾನರಾಣಾಂ ಧ್ವಜಿನೀ ಪರಿವಾರ್ಯಾಂಗದಂ ಬಭೌ ।
ವಾಸವಂ ಪರಿವಾರ್ಯೇವ ಮರುತಾಂ ವಾಹಿನೀ ಸ್ಥಿತಾ ॥ ೧೫

ಕೋಽನ್ಯಸ್ತಾಂ ವಾನರೀಂ ಸೇನಾಂ ಶಕ್ತಃ ಸ್ತಂಭಯಿತುಂ ಭವೇತ್ ।
ಅನ್ಯತ್ರ ವಾಲಿತನಯಾದನ್ಯತ್ರ ಚ ಹನೂಮತಃ ॥ ೧೬

ತತಸ್ತಾನ್ ಪರಿವೃದ್ಧಾಂಶ್ಚ ತಚ್ಚ ಸೈನ್ಯಮರಿಂದಮಃ ।
ಅನುಮಾನ್ಯಾಂಗದಃ ಶ್ರೀಮಾನ್ ವಾಕ್ಯಮರ್ಥವದಬ್ರವೀತ್ ॥ ೧೭

ಕ ಇದಾನೀಂ ಮಹಾತೇಜಾ ಲಂಘಯಿಷ್ಯತಿ ಸಾಗರಮ್ ।
ಕಃ ಕರಿಷ್ಯತಿ ಸುಗ್ರೀವಂ ಸತ್ಯಸಂಧಮರಿಂದಮಮ್ ॥ ೧೮

ಕೋ ವೀರೋ ಯೋಜನಶತಂ ಲಂಘಯೇಚ್ಚ ಪ್ಲವಂಗಮಾಃ ।
ಇಮಾಂಶ್ಚ ಯೂಥಪಾನ್ ಸರ್ವಾನ್ ಮೋಕ್ಷಯೇತ್ ಕೋ ಮಹಾಭಯಾತ್ ॥ ೧೯

ಕಸ್ಯ ಪ್ರಭಾವಾದ್ದಾರಾಂಶ್ಚ ಪುತ್ರಾಂಶ್ಚೈವ ಗೃಹಾಣಿ ಚ ।
ಇತೋ ನಿವೃತ್ತಾಃ ಪಶ್ಯೇಮ ಸಿದ್ಧಾರ್ಥಾಃ ಸುಖಿನೋ ವಯಮ್ ॥

---

ಸಮಾಲೋಚಿಸಿದನು. ದೇವೇಂದ್ರನ ಸುತ್ತಲೂ ದೇವಸೇನೆಯು ಬಳಸಿ ನಿಂತಂತೆ, ಕಪಿಸೇನೆಯು ಅಂಗದನ ಸುತ್ತಲೂ ಬಂದು ನೆರೆಯಿತು (೧೪-೧೫). ವಾಲಿತನಯನಾದ ಅಂಗದನನ್ನೂ ಹನುಮಂತನನ್ನೂ ಬಿಟ್ಟರೆ ಆ ಕಪಿಸೇನೆಯನ್ನು ಸಂತೈಸಿ ಹಿಡಿದು ನಿಲ್ಲಿಸಲು ಯಾರಿಗೆ ಸಾಧ್ಯವಾದೀತು ! ಅನಂತರ ತೇಜಸ್ವಿಯೂ ವೀರಾಗ್ರಗಣ್ಯನೂ ಆದ ಅಂಗದನು ಹಿರಿಯ ವಾನರರ ಅನುಮತಿಯನ್ನು ಪಡೆದು ಕಪಿಸೇನೆಯನ್ನು ಸಂತೈಸುತ್ತ ಅರ್ಥವತ್ತಾದ ಮಾತನ್ನಾಡಿದನು (೧೬-೧೭) : “ಮಿತ್ರರೆ, ಈಗ ನಿಮ್ಮಲ್ಲಿ ಈ ಸಮುದ್ರವನ್ನು ದಾಟಿಹೋಗಬಲ್ಲ ಮಹಾತೇಜಸ್ವಿ ಯಾರು ? ಶೂರನಾದ ಸುಗ್ರೀವ ಮಹಾರಾಜನು ಸತ್ಯಸಂಧನೆಂದು ಸ್ಥಾಪಿಸಬಲ್ಲ ಧೀರನಾರು ? ನೂರು ಯೋಜನಗಳ ದೂರ ಹಾರಬಲ್ಲ ವೀರನಾರು ? ಈ ಕಪಿನಾಯಕರಿಗೆ ಒದಗಿದ ದೊಡ್ಡ ಅಂಜಿಕೆಯನ್ನು ನೀಗಿಸಬಲ್ಲ ಅಭಯದಾತನಾರು ? (೧೮-೧೯). ಯಾರ ಸಾಹಸದ ಮಹಿಮೆಯಿಂದ ನಾವು ಕೃತಕೃತ್ಯರಾಗಿ ಸೌಖ್ಯದಿಂದ ಹಿಂದಿರುಗಿ ನಮ್ಮ ಹೆಂಡಿರುಮಕ್ಕಳನ್ನೂ ಮನೆಮಠಗಳನ್ನೂ ನೋಡುತ್ತ

ತಸ್ಯ ಪ್ರಸಾದಾದ್ರಾಮಂ ಚ ಲಕ್ಷ್ಮಣಂ ಚ ಮಹಾಬಲಮ್ ।
ಅಭಿಗಚ್ಛೇಮ ಸಂಹೃಷ್ಟಾಃ ಸುಗ್ರೀವಂ ಚ ಮಹಾಬಲಮ್ ॥ ೨೧
ಯದಿ ಕಶ್ಚಿತ್ ಸಮರ್ಥೋ ವಃ ಸಾಗರಪ್ಲವನೇ ಹರಿಃ ।
ಸ ದದಾತ್ವಿಹ ನಃ ಶೀಘ್ರಂ ಪುಣ್ಯಾಮಭಯದಕ್ಷಿಣಾಮ್ ॥ ೨೨
ಅಂಗದಸ್ಯ ವಚಃ ಶ್ರುತ್ವಾ ನ ಕಶ್ಚಿತ್ ಕಿಂಚಿದಬ್ರವೀತ್ ।
ಸ್ತಿಮಿತೇವಾಭವತ್ಸರ್ವಾ ತತ್ರ ಸಾ ಹರಿವಾಹಿನೀ ॥ ೨೩
ಪುನರೇವಾಂಗದಃ ಪ್ರಾಹ ತಾನ್ ಹರೀನ್ ಹರಿಸತ್ತಮಃ ।
ಸರ್ವೇ ಬಲವತಾಂ ಶ್ರೇಷ್ಠಾ ಭವಂತೋ ದೃಢವಿಕ್ರಮಾಃ ॥ ೨೪
ವ್ಯಪದೇಶ್ಯಕುಲೇ ಜಾತಾಃ ಪೂಜಿತಾಶ್ಚಾಪ್ಯಭೀಕ್ಷ್ಣಶಃ ।
ನ ಹಿ ವೋ ಗಮನೇ ಸಂಗಃ ಕದಾಚಿತ್ಕಸ್ಯಚಿತ್ಕ್ವಚಿತ್ ॥ ೨೫
ಬ್ರುವಧ್ವಂ ಯಸ್ಯ ಯಾ ಶಕ್ತಿಃ ಪ್ಲವನೇ ಪ್ಲವಗರ್ಷಭಾಃ ॥

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಚತುಃಷಷ್ಟಿತಮಃ ಸರ್ಗಃ

---

ಬಾಳಿಯೇವು? ಯಾರ ಅನುಗ್ರಹದಿಂದ ನಾವು ಮಹಾಬಲಾನ್ವಿತರಾದ ಶ್ರೀರಾಮ ಲಕ್ಷ್ಮಣರನ್ನೂ ಸುಗ್ರೀವನನ್ನೂ ಹರ್ಷದಿಂದ ಹೋಗಿ ನೋಡಿಯೇವು? (೨೦-೨೧). ಓ ಕಪಿವೀರರೆ, ನಿಮ್ಮಲ್ಲಿ ಯಾರಾದರೂ ಈ ಸಮುದ್ರವನ್ನು ಲಂಘಿಸಿಹೋಗಲು ಸಮರ್ಥನಿದ್ದರೆ, ಅವನು ಮುಂದೆ ಬರಲಿ! ತಡಮಾಡದೆ ಮುಂದೆ ಬಂದು ಪುಣ್ಯಕರವಾದ ಅಭಯದಕ್ಷಿಣೆಯನ್ನಿತ್ತು ನಮ್ಮನ್ನು ಸಂತೈಸಲಿ!" ಎಂದು ಘೋಷಿಸಿದನು. ಅಂಗದನ ವಚನವನ್ನು ಕೇಳಿ ಒಬ್ಬನೂ ಒಂದು ಮಾತನ್ನೂ ಆಡಲಿಲ್ಲ! ಸಮಸ್ತ ಕಪಿಸೇನೆಯೂ ಸ್ತಬ್ಧವಾಗಿ ಸುಮ್ಮನೆ ನಿಂತಿತು (೨೨-೨೩). ಆಗ ಅಂಗದನು ವಾನರರನ್ನು ನೋಡಿ ಮತ್ತೆ "ಎಲೈ ವಾನರರೆ, ನೀವೆಲ್ಲರೂ ಬಲಶಾಲಿಗಳಲ್ಲಿ ಅಗ್ರಗಣ್ಯರು. ಮಹಾಪರಾಕ್ರಮಿಗಳು. ಕೀರ್ತಿವೆತ್ತ ಕುಲದಲ್ಲಿ ಜನಿಸಿದವರು. ಸಾಹಸಿಗಳೆಂದು ಎಷ್ಟೋಸಲ ಸಮ್ಮಾನಿತರಾದವರು. ನಿಮ್ಮಲ್ಲಿ ಯಾರಿಗೂ ಯಾವಾಗಲೂ ಎಲ್ಲಿಯೂ ಗತಿಭಂಗವೆಂಬುದೇ ಇಲ್ಲ. ಓ ವಾನರೋತ್ತಮರೆ, ನಿಮ್ಮಲ್ಲಿ ಯಾರಿಗೆ ಎಷ್ಟುದೂರ ಲಂಘಿಸಲು ಸಾಮರ್ಥ್ಯ ಉಂಟು? ಅದನ್ನಾದರೂ ಘೋಷಿಸಿರಿ" ಎಂದನು (೨೪-೨೫).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಅರುವತ್ತನಾಲ್ಕನೆಯ ಸರ್ಗ

## ಪಂಚಷಷ್ಟಿತಮಃ ಸರ್ಗಃ

### ಬಲೇಯತ್ತಾವಿಷ್ಕರಣಮ್

ತತೋಽಂಗದವಚಃ ಶ್ರುತ್ವಾ ಸರ್ವೇ ತೇ ವಾನರೋತ್ತಮಾಃ ।
ಸ್ವಂ ಸ್ವಂ ಗತೌ ಸಮುತ್ಸಾಹಮಾಹುಸ್ತತ್ರ ಯಥಾಕ್ರಮಮ್ ॥ ೧

ಗಜೋ ಗವಾಕ್ಷೋ ಗವಯಃ ಶರಭೋ ಗಂಧಮಾದನಃ ।
ಮೈಂದಶ್ಚ ದ್ವಿವಿದಶ್ಚೈವ ಸುಷೇಣೋ ಜಾಂಬವಾಂಸ್ತಥಾ ॥ ೨

ಆಬಭಾಷೇ ಗಜಸ್ತತ್ರ ಪ್ಲವೇಯಂ ದಶಯೋಜನಮ್ ।
ಗವಾಕ್ಷೋ ಯೋಜನಾನ್ಯಾಹ ಗಮಿಷ್ಯಾಮೀತಿ ವಿಂಶತಿಮ್ ॥ ೩

ಗವಯೋ ವಾನರಸ್ತತ್ರ ವಾನರಾಂಸ್ತಾನುವಾಚ ಹ ।
ತ್ರಿಂಶತಂ ತು ಗಮಿಷ್ಯಾಮಿ ಯೋಜನಾನಾಂ ಪ್ಲವಂಗಮಾಃ ॥ ೪

ಶರಭಸ್ತಾನುವಾಚಾಥ ವಾನರಾನ್ ವಾನರರ್ಷಭಃ ।
ಚತ್ವಾರಿಂಶದ್ಗಮಿಷ್ಯಾಮಿ ಯೋಜನಾನಾಂ ಪ್ಲವಂಗಮಾಃ ॥ ೫

### ಸರ್ಗ ೬೫

ಸಮುದ್ರಲಂಘನೆಯಲ್ಲಿ ತಮಗಿರುವ ಸಾಮರ್ಥ್ಯವನ್ನು ವಾನರರು ಹೇಳಿಕೊಳ್ಳುವುದು.
ಹನುಮಂತನು ಸಮರ್ಥನೆಂದು ಜಾಂಬವಂತನ ನಿರ್ದೇಶ.

ಅಂಗದನ ನುಡಿಯನ್ನು ಕೇಳಿ ಆ ವಾನರವೀರರು ಸಮುದ್ರವನ್ನು ಲಂಘಿಸುವುದರಲ್ಲಿ ತಮಗಿರುವ ಸಾಮರ್ಥ್ಯವನ್ನು ಕ್ರಮವಾಗಿ ಹೇಳತೊಡಗಿದರು. ಗಜ, ಗವಾಕ್ಷ, ಗವಯ, ಶರಭ, ಗಂಧಮಾದನ, ಮೈಂದ, ದ್ವಿವಿದ, ಸುಷೇಣ ಮತ್ತು ಜಾಂಬವಂತರು ತಮ್ಮ ಬಲೋತ್ಸಾಹಗಳನ್ನು ತಿಳಿಸಿದರು (೧–೨) ತಾನು ಹತ್ತುಯೋಜನಗಳ ದೂರ ಹಾರಬಲ್ಲೆನೆಂದು ಗಜನು ಹೇಳಿದನು. ಗವಾಕ್ಷನು ಇಪ್ಪತ್ತುಯೋಜನಗಳವರೆಗೆ ಹಾರಬಲ್ಲೆನೆಂದು ನುಡಿದನು. ಆಗ ಗವಯನೆಂಬ ವಾನರೋತ್ತಮನು ಆ ವಾನರರನ್ನು ನೋಡಿ “ಮಿತ್ರರೇ, ನಾನು ಮೂವತ್ತುಯೋಜನಗಳವರೆಗೆ ಹೋಗಬಲ್ಲೆನು” ಎಂದನು (೩–೪). ಅನಂತರ ಶರಭನೆಂಬ ಕಪಿವೀರನು “ವಾನರರೆ, ನಾನು

**ವಾನರಾಂಸ್ತು ಮಹಾತೇಜಾ ಅಬ್ರವೀದ್ಗಂಧಮಾದನಃ ।**
**ಯೋಜನಾನಾಂ ಗಮಿಷ್ಯಾಮಿ ಪಂಚಾಶತ್ತು ನ ಸಂಶಯಃ ॥ ೬**

**ಮೈಂದಸ್ತು ವಾನರಸ್ತತ್ರ ವಾನರಾಂಸ್ತಾನುವಾಚ ಹ ।**
**ಯೋಜನಾನಾಂ ಪರಂ ಷಷ್ಟಿಮಹಂ ಪ್ಲವಿತುಮುತ್ಸಹೇ ॥ ೭**

**ತತಸ್ತತ್ರ ಮಹಾತೇಜಾ ದ್ವಿವಿದಃ ಪ್ರತ್ಯಭಾಷತ ।**
**ಗಮಿಷ್ಯಾಮಿ ನ ಸಂದೇಹಃ ಸಪ್ತತಿಂ ಯೋಜನಾನ್ಯಹಮ್ ॥ ೮**

**ಸುಷೇಣಸ್ತು ಹರಿಶ್ರೇಷ್ಠಃ ಪ್ರೋಕ್ತವಾನ್ ಕಪಿಸತ್ತಮಾನ್ ।**
**ಅಶೀತಿಂ ಯೋಜನಾನಾಂ ತು ಪ್ಲವೇಯಂ ಪ್ಲವಗೇಶ್ವರಾಃ ॥ ೯**

**ತೇಷಾಂ ಕಥಯತಾಂ ತತ್ರ ಸರ್ವಾಂಸ್ತಾನನುಮಾನ್ಯ ಚ ।**
**ತತೋ ವೃದ್ಧತಮಸ್ತೇಷಾಂ ಜಾಂಬವಾನ್ ಪ್ರತ್ಯಭಾಷತ ॥ ೧೦**

**ಪೂರ್ವಮಸ್ಮಾಕಮಪ್ಯಾಸೀತ್ ಕಶ್ಚಿದ್ಗತಿಪರಾಕ್ರಮಃ ।**
**ತೇ ವಯಂ ವಯಸಃ ಪಾರಮನುಪ್ರಾಪ್ತಾಃ ಸ್ಮ ಸಾಂಪ್ರತಮ್ ॥ ೧೧**

---

ನಲವತ್ತು ಯೋಜನಗಳವರೆಗೆ ಹಾರಬಲ್ಲೆನು" ಎಂದು ತಿಳಿಸಿದನು. ಆಗ ಮಹಾತೇಜಸ್ವಿಯಾದ ಗಂಧಮಾದನನು "ಐವತ್ತು ಯೋಜನಗಳಷ್ಟು ದೂರ ನಾನು ಹೋಗಬಲ್ಲೆ, ಸಂದೇಹವೇ ಇಲ್ಲ!" ಎಂದನು (೫-೬). ಆಮೇಲೆ ಮೈಂದನು ಆ ಕಪಿವೀರರನ್ನು ಕುರಿತು "ನಾನು ಅರುವತ್ತು ಯೋಜನಗಳನ್ನು ಲಂಘಿಸಬಲ್ಲೆನೆಂಬ ಉತ್ಸಾಹವನ್ನು ತಳೆದಿದ್ದೇನೆ" ಎಂದು ಹೇಳಿದನು. ಆಗ ಮಹಾಶೂರನಾದ ದ್ವಿವಿದನು "ನಿಸ್ಸಂಶಯವಾಗಿ ನಾನು ಎಪ್ಪತ್ತು ಯೋಜನಗಳವರೆಗೆ ಹೋಗುವೆನು" ಎಂದು ನುಡಿದನು (೭-೮). ಕಪಿಶ್ರೇಷ್ಠನಾದ ಸುಷೇಣನು "ಎಲೈ ವಾನರೋತ್ತಮರೆ, ನಾನು ಎಂಬತ್ತು ಯೋಜನಗಳವರೆಗೆ ಹಾರಬಲ್ಲೆನು!" ಎಂದು ಹೇಳಿದನು. ಹೀಗೆ ಅವರೆಲ್ಲರೂ ತಮ್ಮ ಸಾಮರ್ಥ್ಯವನ್ನು ಹೇಳಿಕೊಳ್ಳುತ್ತಿರಲಾಗಿ, ಆ ಕಪಿಸೇನೆಯಲ್ಲಿ ಅತ್ಯಂತ ವೃದ್ಧನಾದ ಜಾಂಬವಂತನು ಅವರೆಲ್ಲರ ಒಪ್ಪಿಗೆಯನ್ನು ಪಡೆದು ಇಂತೆಂದನು (೯-೧೦): "ಎಲೈ ಪರಾಕ್ರಮಿಗಳೇ, ಹಿಂದೆ ನಮಗೂ ತಕ್ಕಮಟ್ಟಿಗೆ ಲಂಘಿಸುವ ಸಾಮರ್ಥ್ಯವಿದ್ದಿತು! ಈಗ ನಮಗೆ ವಯಸ್ಸಾಗಿಹೋಯಿತು.

ಕಿಂ ತು ನೈವಂ ಗತೇ ಶಕ್ಯಮಿದಂ ಕಾರ್ಯಮುಪೇಕ್ಷಿತುಮ್ ।
ಯದರ್ಥಂ ಕಪಿರಾಜಶ್ಚ ರಾಮಶ್ಚ ಕೃತನಿಶ್ಚಯೌ ॥ ೧೨

ಸಾಂಪ್ರತಂ ಕಾಲಭೇದೇನ ಯಾ ಗತಿಸ್ತಾಂ ನಿಬೋಧತ ।
ನವತಿಂ ಯೋಜನಾನಾಂ ತು ಗಮಿಷ್ಯಾಮಿ ನ ಸಂಶಯಃ ॥ ೧೩

ತಾಂಸ್ತು ಸರ್ವಾನ್ ಹರಿಶ್ರೇಷ್ಠಾನ್ ಜಾಂಬವಾನ್ ಪುನರಬ್ರವೀತ್ ।
ನ ಖಲ್ವೇತಾವದೇವಾಸೀದ್ಗಮನೇ ಮೇ ಪರಾಕ್ರಮಃ ॥ ೧೪

ಮಯಾ ಮಹಾಬಲೇಶ್ಚೈವ ಯಜ್ಞೇ ವಿಷ್ಣುಃ ಸನಾತನಃ ।
ಪ್ರದಕ್ಷಿಣೀಕೃತಃ ಪೂರ್ವಂ ಕ್ರಮಮಾಣಸ್ತ್ರಿವಿಕ್ರಮಮ್ ॥ ೧೫

ಸ ಇದಾನೀಮಹಂ ವೃದ್ಧಃ ಪ್ಲವನೇ ಮಂದವಿಕ್ರಮಃ ।
ಯೌವನೇ ಚ ತದಾಸೀನ್ಮೇ ಬಲಮಪ್ರತಿಮಂ ಪರೈಃ ॥ ೧೬

ಸಂಪ್ರತ್ಯೇತಾವತೀಂ ಶಕ್ತಿಂ ಗಮನೇ ತರ್ಕಯಾಮ್ಯಹಮ್ ।
ನೈತಾವತಾ ಚ ಸಂಸಿದ್ಧಿಃ ಕಾರ್ಯಸ್ಯಾಸ್ಯ ಭವಿಷ್ಯತಿ ॥ ೧೭

---

ವಯಸ್ಸಿನ ಕಡೆಯ ಘಟ್ಟವನ್ನು ಮುಟ್ಟಿದ್ದೇವೆ! ಆದರೆ ಪರಿಸ್ಥಿತಿಯು ಹೀಗೆ ಬಂದಾಗ, ಕರ್ತವ್ಯವನ್ನು ಉಪೇಕ್ಷಿಸಲು ಸಾಧ್ಯವಿಲ್ಲ. ಕಪಿರಾಜನೂ ಶ್ರೀರಾಮನೂ ಪ್ರಕೃತಕಾರ್ಯವನ್ನು ಸಾಧಿಸಬೇಕೆಂದು ನಿಶ್ಚಯಿಸಿದ್ದಾರೆ (೧೧-೧೨). ಕಾಲಪರಿಣಾಮದಿಂದ ಈಗ ನಾನು ವೃದ್ಧನಾಗಿದ್ದರೂ ನನ್ನ ಲಂಘನ ಸಾಮರ್ಥ್ಯವೇನೆಂಬುದನ್ನು ಕೇಳಿರಿ: ಸಂದೇಹವಿಲ್ಲದೆ ತೊಂಬತ್ತು ಯೋಜನಗಳ ದೂರ ಹಾರಬಲ್ಲೆನು!" ಎಂದು ಹೇಳಿ, ಸ್ವಲ್ಪ ತಡೆದು ಮತ್ತೆ ಜಾಂಬವಂತನು ಹೀಗೆಂದನು: "ನನ್ನ ಪರಾಕ್ರಮ ಹಿಂದೆ ಇಷ್ಟುಮಾತ್ರವೇ ಇರಲಿಲ್ಲ (೧೩-೧೪). ಬಲಿಚಕ್ರವರ್ತಿಯ ಯಜ್ಞಸಮಯದಲ್ಲಿ ಶಾಶ್ವತನಾದ ಮಹಾವಿಷ್ಣುವು (ವಾಮನಾವತಾರವನ್ನೆತ್ತಿ) ಮೂರುಹೆಜ್ಜೆಗಳನ್ನಿಟ್ಟು ಮೂರುಲೋಕಗಳನ್ನು ಅಳೆದನಲ್ಲವೆ? ಆಗ (ಬೃಹದಾಕಾರವನ್ನು ತಳೆದ) ವಾಮನಮೂರ್ತಿಯನ್ನು ನಾನು ಪ್ರದಕ್ಷಿಣೆಯಾಗಿ ಸುತ್ತಿಬಂದಿದ್ದೇನೆ! (೧೫). ಈಗಲಾದರೋ ಮುದುಕನಾಗಿದ್ದೇನೆ. ನೆಗೆಯುವ ಶಕ್ತಿ ಕುಂಠಿತವಾಗಿದೆ! ಯೌವನಕಾಲದಲ್ಲಿ ನನಗೆ ಇನ್ನೊಬ್ಬರಿಗಿಲ್ಲದ ಅಸಾಧಾರಣವಾದ ಶಕ್ತಿಯಿತ್ತು. ಈಗ ನನಗೆ ತೊಂಬತ್ತುಯೋಜನಗಳ ದೂರ ನೆಗೆಯುವಷ್ಟೇ ಶಕ್ತಿಯಿದೆ

ಅಥೋತ್ತರಮುದಾರಾರ್ಥಮಬ್ರವೀದಂಗದಸ್ತದಾ ।
ಅನುಮಾನ್ಯ ಮಹಾಪ್ರಾಜ್ಞಂ ಜಾಂಬವಂತಂ ಮಹಾಕಪಿಃ ॥ ೧೮

ಅಹಮೇತದ್ಗಮಿಷ್ಯಾಮಿ ಯೋಜನಾನಾಂ ಶತಂ ಮಹತ್ ।
ನಿವರ್ತನೇ ತು ಮೇ ಶಕ್ತಿಃ ಸ್ಯಾನ್ನ ವೇತಿ ನ ನಿಶ್ಚಿತಾ ॥ ೧೯

ತಮುವಾಚ ಹರಿಶ್ರೇಷ್ಠಂ ಜಾಂಬವಾನ್ ವಾಕ್ಯಕೋವಿದಃ ।
ಜ್ಞಾಯತೇ ಗಮನೇ ಶಕ್ತಿಸ್ತವ ಹರ್ಯೃಕ್ಷಸತ್ತಮ ॥ ೨೦

ಕಾಮಂ ಶತಂ ಸಹಸ್ರಂ ವಾ ನ ಹ್ಯೇಷ ವಿಧಿರುಚ್ಯತೇ ।
ಯೋಜನಾನಾಂ ಭವಾನ್ ಶಕ್ತೋ ಗಂತುಂ ಪ್ರತಿನಿವರ್ತಿತುಮ್ ॥

ನ ಹಿ ಪ್ರೇಷಯಿತಾ ತಾತ ಸ್ವಾಮೀ ಪ್ರೇಷ್ಯಃ ಕಥಂಚನ ।
ಭವತಾಯಂ ಜನಃ ಸರ್ವಃ ಪ್ರೇಷ್ಯಃ ಪ್ಲವಗಸತ್ತಮ ॥ ೨೨

ಭವಾನ್ ಕಲತ್ರಮಸ್ಮಾಕಂ ಸ್ವಾಮಿಭಾವೇ ವ್ಯವಸ್ಥಿತಃ ।
ಸ್ವಾಮೀ ಕಲತ್ರಂ ಸೈನ್ಯಸ್ಯ ಗತಿರೇಷಾ ಪರಂತಪ ॥ ೨೩

---

ಯೆಂದು ತೋರುತ್ತದೆ! ಆದರೆ ಇಷ್ಟರಿಂದ ನಮ್ಮ ಕಾರ್ಯಸಿದ್ಧಿಯಾಗುವುದಿಲ್ಲ" ಎಂದನು (೧೬-೧೭). ಆಗ ಕಪಿಶ್ರೇಷ್ಠನಾದ ಅಂಗದನು ಪ್ರಾಜ್ಞನಾದ ಜಾಂಬವಂತನ ಒಪ್ಪಿಗೆಯನ್ನು ಪಡೆದು ವಾನರರನ್ನು ನೋಡುತ್ತ "ಮಿತ್ರರೆ, ಈ ನೂರುಯೋಜನಗಳ ದೂರವನ್ನು ನಾನು ಲಂಘಿಸಿ ಹೋಗಬಲ್ಲೆ! ಆದರೆ, ಮತ್ತೆ ಹಿಂದಿರುಗಿಬರುವ ಶಕ್ತಿ ನನಗಿದೆಯೋ ಇಲ್ಲವೋ ನಿಶ್ಚಯವಾಗಿ ಹೇಳಲಾರೆ" ಎಂದು ಹೇಳಿದನು (೧೮-೧೯). ಆಗ ವಾಕ್ಯಕೋವಿದನಾದ ಜಾಂಬವಂತನು ಅಂಗದನನ್ನು ನೋಡಿ "ಕಪಿಶ್ರೇಷ್ಠ, ನಿನ್ನ ಗಮನ ಸಾಮರ್ಥ್ಯವೇನೆಂಬುದು ನಮಗೆ ಗೊತ್ತಿದೆ. ನೂರುಯೋಜಗಳಲ್ಲ, ಸಾವಿರ ಯೋಜನಗಳವರೆಗೆ ಹೋಗುವ ಸಾಮರ್ಥ್ಯವು ನಿನಗಿರಬಹುದು. ಅದು ಮುಖ್ಯ ವಿಷಯವಲ್ಲ. ಅಷ್ಟು ಯೋಜನಗಳವರೆಗೆ ಹೋಗಿ ಹಿಂದಿರುಗಿ ಬರುವ ಶಕ್ತಿ ನಿನಗುಂಟು (೨೦-೨೧). ವತ್ಸ, ಪ್ರಭುವಾದವನು ಭೃತ್ಯರನ್ನು ಕಾರ್ಯಾರ್ಥವಾಗಿ ಕಳಿಸಬೇಕೇ ಹೊರತು, ಭೃತ್ಯರೇ ಪ್ರಭುವನ್ನು ಕಳಿಸಬಾರದು! ನಾವೆಲ್ಲರೂ ನಿನ್ನ ಭೃತ್ಯವರ್ಗಕ್ಕೆ ಸೇರಿದವರಾದ್ದರಿಂದ ನಮ್ಮನ್ನು ನೀನು ಕಳಿಸಬೇಕು. ಸ್ವಾಮಿಯಾದ ನೀನು ನಮ್ಮೆಲ್ಲರಿಗೂ ಪತ್ನಿಯಂತೆ

ತಸ್ಮಾತ್ ಕಲತ್ರವತ್ತತ್ರ ಪ್ರತಿಪಾಲ್ಯಃ ಸದಾ ಭವಾನ್ ।
ಅಪಿ ಚೈತಸ್ಯ ಕಾರ್ಯಸ್ಯ ಭವಾನ್ ಮೂಲಮರಿಂದಮ ॥ ೨೪

ಮೂಲಮರ್ಥಸ್ಯ ಸಂರಕ್ಷ್ಯಮೇಷ ಕಾರ್ಯವಿದಾಂ ನಯಃ ।
ಮೂಲೇ ಹಿ ಸತಿ ಸಿಧ್ಯಂತಿ ಗುಣಾಃ ಪುಷ್ಪಫಲೋದಯಾಃ ॥ ೨೫

ತದ್ಭವಾನಸ್ಯ ಕಾರ್ಯಸ್ಯ ಸಾಧನಂ ಸತ್ಯವಿಕ್ರಮ ।
ಬುದ್ಧಿವಿಕ್ರಮಸಂಪನ್ನೋ ಹೇತುರತ್ರ ಪರಂತಪ ॥ ೨೬

ಗುರುಶ್ಚ ಗುರುಪುತ್ರಶ್ಚ ತ್ವಂ ಹಿ ನಃ ಕಪಿಸತ್ತಮ ।
ಭವಂತಮಾಶ್ರಿತ್ಯ ವಯಂ ಸಮರ್ಥಾ ಹ್ಯರ್ಥಸಾಧನೇ ॥ ೨೭

ಉಕ್ತವಾಕ್ಯಂ ಮಹಾಪ್ರಾಜ್ಞಂ ಜಾಂಬವಂತಂ ಮಹಾಕಪಿಃ ।
ಪ್ರತ್ಯುವಾಚೋತ್ತರಂ ವಾಕ್ಯಂ ವಾಲಿಸೂನುರಥಾಂಗದಃ ॥ ೨೮

ಯದಿ ನಾಹಂ ಗಮಿಷ್ಯಾಮಿ ನಾನ್ಯೋ ವಾನರಪುಂಗವಃ ।
ಪುನಃ ಖಲ್ವಿದಮಸ್ಮಾಭಿಃ ಕಾರ್ಯಂ ಪ್ರಾಯೋಪವೇಶನಮ್ ॥ ೨೯

---

ರಕ್ಷಣೀಯನಾಗಿರುವೆ. ಎಲೈ ವೀರನೆ, ಸೇನೆಗೆ ಸ್ವಾಮಿಯು ಪತ್ನಿಯಂತೆ ರಕ್ಷಣೀಯಳೆಂಬುದು ಲೋಕಮರ್ಯಾದೆ (೨೨-೨೩). ಆದ್ದರಿಂದ, ನಾವು ನಿನ್ನನ್ನು ಯಾವಾಗಲೂ ಯತ್ನದಿಂದ ರಕ್ಷಿಸಿಕೊಳ್ಳಬೇಕು. ಅಲ್ಲದೆ ಈ ಕಾರ್ಯಕ್ಕೆ ನೀನು ಮೂಲಭೂತನು. ಸಮಸ್ತ ಕಾರ್ಯದಲ್ಲಿಯೂ ಮೂಲಭೂತವಾದುದನ್ನು ಸಂರಕ್ಷಿಸಿಕೊಳ್ಳಬೇಕೆಂಬುದು ಕಾರ್ಯಜ್ಞರ ನೀತಿ. ವೃಕ್ಷದ ಮೂಲವನ್ನು ಸರಿಯಾಗಿ ನೋಡಿಕೊಂಡರೆ ತಾನೆ ಪುಷ್ಪಫಲಾದಿ ಪ್ರಯೋಜನಗಳು ಸಿದ್ಧಿಸುತ್ತವೆ? (೨೪-೨೫). ಆದ್ದರಿಂದ, ಓ ಪರಾಕ್ರಮಿ, ನಮ್ಮ ಈ ಕಾರ್ಯವನ್ನು ಸಾಧಿಸಲು ನೀನು ಸೂತ್ರಧಾರನಾಗಿ ಉಳಿದಿರಬೇಕು. ಬುದ್ಧಿಪರಾಕ್ರಮಸಂಪನ್ನನಾದ ನೀನು ಕಾರಣಭೂತನಾಗಿ ಹಿಂದಿರಬೇಕು. ವಾನರೋತ್ತಮ, ನೀನು ನಮ್ಮ ಸ್ವಾಮಿಯ ಪುತ್ರನೂ ಸ್ವಾಮಿಯೂ ಆಗಿರುವೆ. ನಿನ್ನನ್ನಾಶ್ರಯಿಸಿಯೇ ನಾವು ಕಾರ್ಯಸಾಧನೆಯಲ್ಲಿ ಸಮರ್ಥರೆನಿಸಿಕೊಂಡಿದ್ದೇವೆ" ಎಂದು ಹೇಳಿದನು (೨೬-೨೭). ಮಹಾಪ್ರಾಜ್ಞನಾದ ಜಾಂಬವಂತನು ಈ ರೀತಿಯಲ್ಲಿ ನುಡಿದುದನ್ನು ಕೇಳಿ ವಾಲಿಪುತ್ರನಾದ ಅಂಗದನು "ಜಾಂಬವಂತ, ನಾನೂ ಹೋಗುವುದಿಲ್ಲ— ಹೋಗತಕ್ಕ ಇನ್ನೊಬ್ಬ ವಾನರಪುಂಗವನೂ ಇಲ್ಲ ಎಂದಾದರೆ, ಮತ್ತೆ ನಾವು

ನ ಹ್ಯಕೃತ್ವಾ ಹರಿಪತೇಃ ಸಂದೇಶಂ ತಸ್ಯ ಧೀಮತಃ ।
ತತ್ರಾಪಿ ಗತ್ವಾ ಪ್ರಾಣಾನಾಂ ಪಶ್ಯಾಮಿ ಪರಿರಕ್ಷಣಮ್ ॥ ೩೦

ಸ ಹಿ ಪ್ರಸಾದೇ ಚಾತ್ಯರ್ಥಂ ಕೋಪೇ ಚ ಹರಿರೀಶ್ವರಃ ।
ಅತೀತ್ಯ ತಸ್ಯ ಸಂದೇಶಂ ವಿನಾಶೋ ಗಮನೇ ಭವೇತ್ ॥ ೩೧

ತದ್ಯಥಾ ಹ್ಯಸ್ಯ ಕಾರ್ಯಸ್ಯ ನ ಭವತ್ಯನ್ಯಥಾಗತಿಃ ।
ತದ್ಭವಾನೇವ ದೃಷ್ಟಾರ್ಥಃ ಸಂಚಿಂತಯಿತುಮರ್ಹತಿ ॥ ೩೨

ಸೋಽಂಗದೇನ ತದಾ ವೀರಃ ಪ್ರತ್ಯುಕ್ತಃ ಪ್ಲವಗರ್ಷಭಃ ।
ಜಾಂಬವಾನುತ್ತರಂ ವಾಕ್ಯಂ ಪ್ರೋವಾಚೇದಂ ತತೋಽಂಗದಮ್ ॥

ಅಸ್ಯ ತೇ ವೀರ ಕಾರ್ಯಸ್ಯ ನ ಕಿಂಚಿತ್ ಪರಿಹೀಯತೇ ।
ಏಷ ಸಂಚೋದಯಾಮ್ಯೇನಂ ಯಃ ಕಾರ್ಯಂ ಸಾಧಯಿಷ್ಯತಿ ॥ ೩೪

ತತಃ ಪ್ರತೀತಂ ಪ್ಲವತಾಂ ವರಿಷ್ಠ-
ಮೇಕಾಂತಮಾಶ್ರಿತ್ಯ ಸುಖೋಪವಿಷ್ಟಮ್ ।

---

ಪ್ರಾಯೋಪವೇಶವನ್ನು ಮಾಡಬೇಕಾಗಿ ಬಂದಿತು ! (೨೮-೨೯). ಧೀಮಂತನಾದ ಕಪಿರಾಜನ ಆಜ್ಞೆಯನ್ನು ನೆರವೇರಿಸದೆ ನಾವು ಕಿಷ್ಕಿಂಧೆಗೆ ಹೋದರೆ, ನಮ್ಮ ಪ್ರಾಣವನ್ನುಳಿಸಿಕೊಳ್ಳುವ ದಾರಿ ನನಗೆ ತೋರದು ! ಸುಗ್ರೀವನು ಅನುಗ್ರಹಿಸುವುದರಲ್ಲಿಯೂ ಕೋಪದಿಂದ ನಿಗ್ರಹಿಸುವುದರಲ್ಲಿಯೂ ಗಟ್ಟಿಗ. ಅವನ ಸೂಚನೆಯನ್ನು ಮೀರಿ ಅಲ್ಲಿಗೆ ಹೋದರೆ ನಮ್ಮ ನಾಶವು ಆಗಿಯೇ ತೀರುವುದು (೩೦-೩೧). ಆದ್ದರಿಂದ, ಜಾಂಬವಂತ, ಈ ಕಾರ್ಯವು ಕೆಡದೆ ,ಸಿದ್ಧಿಸುವ ಬಗೆ ಹೇಗೆಂಬುದನ್ನು ವಿವೇಚನಾಚತುರನಾದ ನೀನೇ ಪರ್ಯಾಲೋಚಿಸಿ ಹೇಳಬೇಕು" ಎಂದನು. ಅಂಗದನು ಹೀಗೆನ್ನಲು ಜಾಂಬವಂತನು ಅವನನ್ನು ಕುರಿತು "ಎಲೈ ವೀರಾಗ್ರಣಿ—ಅಂಗದ, ಈ ಕಾರ್ಯವನ್ನು ಸಾಧಿಸುವುದಕ್ಕೆ ನಿನಗೆ ಯಾವ ಕೊರತೆಯೂ ಆಗದು ! ಇದನ್ನು ಯಾವನು ಸಾಧಿಸಬಲ್ಲನೋ ಅಂಥವನನ್ನು ತೋರಿಸುತ್ತೇನೆ, ನೋಡು !" ಎಂದು ಹೇಳಿದನು (೩೨-೩೪). ಆ ಸಮಯದಲ್ಲಿ ವಿಖ್ಯಾತ ಪೌರುಷನೂ ವಾನರಶ್ರೇಷ್ಠನೂ ಆದ ಹನುಮಂತನು ಒಂದು ಏಕಾಂತ

ಸಂಚೋದಯಾಮಾಸ ಹರಿಪ್ರವೀರೋ
ಹರಿಪ್ರವೀರಂ ಹನುಮಂತಮೇವ ॥ ೩೫

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಪಂಚಷಷ್ಟಿತಮಃ ಸರ್ಗಃ

---

## ಷಟ್‌ಷಷ್ಟಿತಮಃ ಸರ್ಗಃ

### ಹನೂಮದ್ಬಲಸಂಧುಕ್ಷಣಮ್

**ಅನೇಕಶತಸಾಹಸ್ರೀಂ ವಿಷಣ್ಣಾಂ ಹರಿವಾಹಿನೀಮ್ ।**
**ಜಾಂಬವಾನ್ ಸಮುದೀಕ್ಷ್ಯೈವಂ ಹನುಮಂತಮಥಾಬ್ರವೀತ್ ॥ ೧**

**ವೀರ ವಾನರಲೋಕಸ್ಯ ಸರ್ವಶಾಸ್ತ್ರವಿಶಾರದ ।**
**ತೂಷ್ಣೀಮೇಕಾಂತಮಾಶ್ರಿತ್ಯ ಹನುಮನ್ ಕಿಂ ನ ಜಲ್ಪಸಿ ॥ ೨**

---

ಸ್ಥಳದಲ್ಲಿ (ಏನೂ ಅರಿಯದವನಂತೆ) ಸುಖವಾಗಿ ಸುಮ್ಮನೆ ಕುಳಿತಿದ್ದನು! ಜಾಂಬವಂತನು ಅಂಗದನಿಗೆ ಆ ಹನುಮಂತನನ್ನು ತೋರಿಸಿದನು! (೩೫).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಅರುವತ್ತೈದನೆಯ ಸರ್ಗ

---

## ಸರ್ಗ ೬೬

### ಜಾಂಬವಂತನು ಹನುಮಂತನ ಜನ್ಮವೃತ್ತಾಂತವನ್ನು ಹೇಳಿ ಸಮುದ್ರಲಂಘನಕ್ಕಾಗಿ ಅವನನ್ನು ಪ್ರೇರಿಸುವುದು.

ಅನೇಕಲಕ್ಷಸಂಖ್ಯೆಯಲ್ಲಿದ್ದ ಕಪಿಸೇನೆಯು ಮುಂದೇನು ಗತಿಯೆಂದು ಚಿಂತಾಕ್ರಾಂತವಾಗಿರುವುದನ್ನು ನೋಡಿ ಜಾಂಬವಂತನು ಹನುಮಂತನನ್ನು ಕುರಿತು ಹೀಗೆಂದನು: "ಓ ಹನುಮಂತ, ಈ ವಾನರಸೇನೆಯಲ್ಲಿ ಅಗ್ರಗಣ್ಯನಾದ ವೀರ ನೀನು. ಸರ್ವಶಾಸ್ತ್ರಗಳಲ್ಲಿ ವಿಶಾರದನಾಗಿದ್ದೀಯೆ. ಏಕಾಂತವಾಗಿ ಸುಮ್ಮನೆ ಕುಳಿತಿರುವೆಯಲ್ಲ! ಏಕೆ ಮಾತನಾಡುವುದಿಲ್ಲ ನೀನು? (೧-೨).

ಹನುಮನ್ ಹರಿರಾಜಸ್ಯ ಸುಗ್ರೀವಸ್ಯ ಸಮೋ ಹ್ಯಸಿ ।
ರಾಮಲಕ್ಷ್ಮಣಯೋಶ್ಚಾಪಿ ತೇಜಸಾ ಚ ಬಲೇನ ಚ ॥ ೩

ಅರಿಷ್ಟನೇಮಿನಃ ಪುತ್ರೋ ವೈನತೇಯೋ ಮಹಾಬಲಃ ।
ಗರುತ್ಮಾನಿತಿ ವಿಖ್ಯಾತ ಉತ್ತಮಃ ಸರ್ವಪಕ್ಷಿಣಾಮ್ ॥ ೪

ಬಹುಶೋ ಹಿ ಮಯಾ ದೃಷ್ಟಃ ಸಾಗರೇ ಸ ಮಹಾಬಲಃ ।
ಭುಜಗಾನುದ್ಧರನ್ ಪಕ್ಷೀ ಮಹಾವೇಗೋ ಮಹಾಯಶಾಃ ॥ ೫

ಪಕ್ಷಯೋರ್ಯದ್ಬಲಂ ತಸ್ಯ ತಾವದ್ಭುಜಬಲಂ ತವ ।
ವಿಕ್ರಮಶ್ಚಾಪಿ ವೇಗಶ್ಚ ನ ತೇ ತೇನಾವಹೀಯತೇ ॥ ೬

ಬಲಂ ಬುದ್ಧಿಶ್ಚ ತೇಜಶ್ಚ ಸತ್ತ್ವಂ ಚ ಹರಿಪುಂಗವ ।
ವಿಶಿಷ್ಟಂ ಸರ್ವಭೂತೇಷು ಕಿಮಾತ್ಮಾನಂ ನ ಬುಧ್ಯಸೇ ॥ ೭

ಆಸೀದಪ್ಸರಸಾಂ ಶ್ರೇಷ್ಠಾ ವಿಖ್ಯಾತಾ ಪುಂಜಿಕಸ್ಥಲಾ ।
ಅಂಜನೇತಿ ಪರಿಖ್ಯಾತಾ ಪತ್ನೀ ಕೇಸರಿಣೋ ಹರೇಃ ॥ ೮

---

ತೇಜೋಬಲಗಳಲ್ಲಿ ಕಪಿರಾಜನಾದ ಸುಗ್ರೀವನಿಗೆ ಸಮನಾಗಿದ್ದೀಯೆ. ಶ್ರೀರಾಮಲಕ್ಷ್ಮಣರಿಗೆ ಸಮನಾಗಿದ್ದೀಯೆ. ಕಶ್ಯಪಪುತ್ರನೂ * ವಿನತಾಗರ್ಭಸಂಭೂತನೂ ಆದ ಗರುತ್ಮಂತನೆಂಬ ಪಕ್ಷಿರಾಜನಿದ್ದಾನೆ. ಅವನು ಅತ್ಯಂತ ಬಲಶಾಲಿಯೆಂದು ವಿಖ್ಯಾತನಾಗಿದ್ದಾನೆ (೩-೪) ಮಹಾಪರಾಕ್ರಮಿಯೂ ಕೀರ್ತಿಶಾಲಿಯೂ ಆದ ಆ ಪಕ್ಷಿರಾಜನು ಸಮುದ್ರದಲ್ಲಿರುವ ಸರ್ಪಗಳನ್ನು ಸೆಳೆದೊಯ್ಯುವುದನ್ನು ನಾನು ಅನೇಕಸಲ ನೋಡಿದ್ದೇನೆ. ಹನುಮಂತ, ಆ ವೈನತೇಯನ ರೆಕ್ಕೆಗಳಿಗೆ ಎಷ್ಟು ಬಲವುಂಟೋ ಅಷ್ಟು ಬಲವು ನಿನ್ನ ಬಾಹುಗಳಿಗಿದೆ! ನಿನ್ನ ಪರಾಕ್ರಮವಾಗಲಿ ವೇಗವಾಗಲಿ ಅವನಿಗಿಂತ ಕಡಮೆಯದಲ್ಲ! (೫-೬). ನಿನ್ನ ಬಲ, ನಿನ್ನ ಬುದ್ಧಿ, ನಿನ್ನ ತೇಜಸ್ಸು, ನಿನ್ನ ಧೈರ್ಯ – ಎಲ್ಲೈ ವಾನರೋತ್ತಮ, ಈ ಪ್ರಪಂಚದಲ್ಲಿ ಸರ್ವಾಧಿಕವಾದುದು. ನಿನ್ನ ಮಹಿಮೆಯನ್ನು ನೀನೇ ತಿಳಿಯದಿರುವೆಯಲ್ಲ! (೭). ವತ್ಸ–ಆಂಜನೇಯ, ಪುಂಜಿಕಸ್ಥಳೆಯೆಂಬ ಶ್ರೇಷ್ಠಳಾದ ಒಬ್ಬ ಅಪ್ಸರೆಯಿದ್ದಳು.

---

* ಮೂಲದಲ್ಲಿ 'ಅರಿಷ್ಟನೇಮಿನಃ ಪುತ್ರಃ' ಎಂದಿದೆ. ಕಶ್ಯಪನಿಗೆ ಅರಿಷ್ಟನೇಮಿಯೆಂದು ನಾಮಾಂತರವಿದ್ದುದಾಗಿ ಪುರಾಣಾಂತರಸಂವಾದದಿಂದ ತಿಳಿದುಬರುತ್ತದೆ.

ವಿಖ್ಯಾತಾ ತ್ರಿಷು ಲೋಕೇಷು ರೂಪೇಣಾಪ್ರತಿಮಾ ಭುವಿ ।
ಅಭಿಶಾಪಾದಭೂತ್ತಾತ ವಾನರೀ ಕಾಮರೂಪಿಣೀ ॥ ೯

ದುಹಿತಾ ವಾನರೇಂದ್ರಸ್ಯ ಕುಂಜರಸ್ಯ ಮಹಾತ್ಮನಃ ।
ಕಪಿತ್ವೇ ಚಾರುಸರ್ವಾಂಗೀ ಕದಾಚಿತ್ ಕಾಮರೂಪಿಣೀ ॥ ೧೦

ಮಾನುಷಂ ವಿಗ್ರಹಂ ಕೃತ್ವಾ ರೂಪಯೌವನಶಾಲಿನೀ ।
ವಿಚಿತ್ರಮಾಲ್ಯಾಭರಣಾ ಮಹಾರ್ಹಕ್ಷೌಮವಾಸಿನೀ ॥ ೧೧

ಅಚರತ್ ಪರ್ವತಸ್ಯಾಗ್ರೇ ಪ್ರಾವೃಡಂಬುದಸಂನಿಭೇ ।
ತಸ್ಯಾ ವಸ್ತ್ರಂ ವಿಶಾಲಾಕ್ಷ್ಯಾಃ ಪೀತಂ ರಕ್ತದಶಂ ಶುಭಮ್ ॥ ೧೨

ಸ್ಥಿತಾಯಾಃ ಪರ್ವತಸ್ಯಾಗ್ರೇ ಮಾರುತೋಽಪಾಹರಚ್ಛನೈಃ ।
ಸ ದದರ್ಶ ತತಸ್ತಸ್ಯಾ ವೃತ್ತಾವೂರೂ ಸುಸಂಹತೌ ॥ ೧೩

ಸ್ತನೌ ಚ ಪೀನೌ ಸಹಿತೌ ಸುಜಾತಂ ಚಾರು ಚಾನನಮ್ ।
ತಾಂ ವಿಶಾಲಾಯತಶ್ರೋಣೀಂ ತನುಮಧ್ಯಾಂ ಯಶಸ್ವಿನೀಮ್ ॥

---

ಅವಳು ಮೂರುಲೋಕಗಳಲ್ಲಿಯೂ ಅಪ್ರತಿಮಸುಂದರಿಯೆಂದು ವಿಖ್ಯಾತ ಳಾಗಿದ್ದಳು ಆ ಪುಂಜಿಕಸ್ಥಳೆಯು ಶಾಪವಶದಿಂದ ವಾನರಜನ್ಮವನ್ನೆತ್ತಿ ಕಾಮರೂಪಿಣಿಯಾದ ವಾನರಿಯಾದಳು. ಅಂಜನಾದೇವಿಯೆಂದು ಹೆಸರಾಯಿತು. ಅವಳು ಮಹಾಶೂರನಾದ ಕೇಸರಿಯೆಂಬ ವಾನರೋತ್ತಮನ ಭಾರ್ಯೆಯಾದಳು (೮-೯). ಆಕೆಯು ವಾನರೇಂದ್ರನೂ ಮಹಾತ್ಮನೂ ಆದ ಕುಂಜರನಿಗೆ ಮಗಳಾಗಿ ಜನಿಸಿದ್ದಳು. ಅಂಜನಾದೇವಿಯು ವಾನರ ಜನ್ಮದಲ್ಲಿ ಜನಿಸಿದ್ದರೂ ಕಾಮರೂಪಿಣಿಯಾದ್ದರಿಂದ ಒಂದುಸಲ ಬಹು ಮನೋಹರವಾದ ಮನುಷ್ಯರೂಪವನ್ನು ಧರಿಸಿದಳು. ಸೌಂದರ್ಯ ತಾರುಣ್ಯಗಳು ಉಕ್ಕುತ್ತಿದ್ದವು. ಅವಳು ಉತ್ತಮವಾದ ದುಕೂಲವನ್ನುಟ್ಟು ವಿವಿಧ ಮಾಲ್ಯಾಭರಣಗಳನ್ನು ತೊಟ್ಟು, ಒಂದು ಪರ್ವತಶಿಖರದಲ್ಲಿ ಸಂಚರಿಸುತ್ತಿದ್ದಳು (೧೦-೧೧). ಆ ಶಿಖರವು ಮಳೆಗಾಲದ ಒಂದು ಮೇಘಖಂಡವೋ ಎಂಬಂತೆ ಅತ್ಯುನ್ನತವಾಗಿ ನೀಲವರ್ಣವಾಗಿತ್ತು. ಅಂಜನೆಯು ಕೆಂಪು ಅಂಚಿನ ಪೀತಾಂಬರವನ್ನುಟ್ಟಿದ್ದಳು. ಆಗ ವಾಯುದೇವನು ಆ ಸುಂದರಿಯ ಸೀರೆಯನ್ನು ಮೆಲ್ಲಗೆ ಹಾರಿಸಿಬಿಟ್ಟನು. ದುಂಡಾದ ಅವಳ ತೊಡೆಗಳು ಆತನಿಗೆ ಗೋಚರಿಸಿದವು (೧೨-೧೩) ಅವಳ ಪೀನಸ್ತನಗಳನ್ನೂ ಚೆಲುವಿನ ಮುಖ

ದೃಷ್ಟ್ವೈವ ಶುಭಸರ್ವಾಂಗೀಂ ಪವನಃ ಕಾಮಮೋಹಿತಃ ।
ಸ ತಾಂ ಭುಜಾಭ್ಯಾಂ ದೀರ್ಘಾಭ್ಯಾಂ ಪರ್ಯಷ್ವಜತ ಮಾರುತಃ ॥

ಮನ್ಮಥಾವಿಷ್ಟಸರ್ವಾಂಗೋ ಗತಾತ್ಮಾ ತಾಮನಿಂದಿತಾಮ್ ।
ಸಾ ತು ತತ್ರೈವ ಸಂಭ್ರಾಂತಾ ಸುವೃತ್ತಾ ವಾಕ್ಯಮಬ್ರವೀತ್ ॥ ೧೬

ಏಕಪತ್ನೀವ್ರತಮಿದಂ ಕೋ ನಾಶಯಿತುಮಿಚ್ಛತಿ ।
ಅಂಜನಾಯಾ ವಚಃ ಶ್ರುತ್ವಾ ಮಾರುತಃ ಪ್ರತ್ಯಭಾಷತ ॥ ೧೭

ನ ತ್ವಾಂ ಹಿಂಸಾಮಿ ಸುಶ್ರೋಣಿ ಮಾ ಭೂತ್ತೇ ಸುಭಗೇ ಭಯಮ್ ।
ಮಾರುತೋಽಸ್ಮಿ ಗತೋ ಯತ್ತ್ವಾಂ ಪರಿಷ್ವಜ್ಯ ಯಶಸ್ವಿನೀಮ್ ॥ ೧೮

ವೀರ್ಯವಾನ್ ಬುದ್ಧಿಸಂಪನ್ನಸ್ತವ ಪುತ್ರೋ ಭವಿಷ್ಯತಿ ।
ಮಹಾಸತ್ತ್ವೋ ಮಹಾತೇಜಾ ಮಹಾಬಲಪರಾಕ್ರಮಃ ॥ ೧೯

ಲಂಘನೇ ಪ್ಲವನೇ ಚೈವ ಭವಿಷ್ಯತಿ ಮಯಾ ಸಮಃ ।
ಏವಮುಕ್ತಾ ತತಸ್ತುಷ್ಟಾ ಜನನೀ ತೇ ಮಹಾಕಪೇ ॥ ೨೦

---

ವನ್ನೂ ಆತನು ವೀಕ್ಷಿಸಿದನು. ವಿಶಾಲಶ್ರೋಣಿಯೂ ಕೃಶಮಧ್ಯಳೂ ಆದ ಆ ದಿವ್ಯಸುಂದರಿಯನ್ನು ನೋಡಿ ವಾಯುದೇವನು ಕಾಮಪೀಡಿತನಾಗಿ ದೀರ್ಘವಾದ ತನ್ನ ತೋಳುಗಳಿಂದ ಅವಳನ್ನು ಆಲಿಂಗಿಸಿಕೊಂಡನು (೧೪-೧೫) ಮಾರುತನು ಮನ್ಮಥಾವಿಷ್ಟನಾದ್ದರಿಂದ ಚಿತ್ತಸ್ಥೈರ್ಯವನ್ನು ಕಳೆದುಕೊಂಡು, ಪತಿವ್ರತೆಯಾದ ಅಂಜನಾದೇವಿಯನ್ನಾಲಿಂಗಿಸಿದನು. ಸದಾಚಾರನಿರತಳಾದ ಆ ದೇವಿಯು ದಿಗ್ಭ್ರಾಂತಳಾಗಿ ಕೂಡಲೆ 'ಆಃ! ಯಾರವನು? ನನ್ನ ಪಾತಿವ್ರತ್ಯವನ್ನು ಕೆಡಿಸಲುದ್ದೇಶಿಸಿದವನು ಯಾವನು?' ಎಂದು ಕೂಗಿಕೊಂಡಳು (೧೬-೧೭). ಆಗ ವಾಯುದೇವನು ಅಂಜನೆಯನ್ನು ಕುರಿತು 'ಸುಂದರಿ. ಹೆದರಬೇಡ. ಪಾತಿವ್ರತ್ಯವನ್ನು ಕೆಡಿಸಿ ನಿನಗೆ ನಾನು ತೊಂದರೆಕೊಡುವುದಿಲ್ಲ. ಹೇ ಸೌಭಾಗ್ಯಶಾಲಿನಿ, ನಾನು ಮಾರುತ. ನಿನ್ನನ್ನು ನಾನು ಆಲಿಂಗಿಸಿದ್ದರಿಂದ ವೀರ್ಯಶಾಲಿಯೂ ಬುದ್ಧಿಸಂಪನ್ನನೂ ಆದ ಪುತ್ರನೊಬ್ಬನು ನಿನಗೆ ಜನಿಸುವನು. ಅವನು ಮಹಾಧೀರನೂ ಮಹಾತೇಜಸ್ವಿಯೂ ಅಸಾಧಾರಣವಾದ ಬಲಪರಾಕ್ರಮಗಳುಳ್ಳವನೂ ಆಗುವನು (೧೮-೧೯). ಆ ಪುತ್ರನು ದೂರವನ್ನು ಲಂಘಿಸುವುದರಲ್ಲಿಯೂ

ಗುಹಾಯಾಂ ತ್ವಾಂ ಮಹಾಬಾಹೋ ಪ್ರಜಜ್ಞೇ ಪ್ಲವಗರ್ಷಭಮ್ ।
ಅಭ್ಯುತ್ಥಿತಂ ತತಃ ಸೂರ್ಯಂ ಬಾಲೋ ದೃಷ್ಟ್ವಾ ಮಹಾವನೇ ॥ ೨೦

ಫಲಂ ಚೇತಿ ಜಿಘೃಕ್ಷುಸ್ತ್ವಮುತ್ಪ್ಲುತ್ಯಾಭ್ಯುದ್ಗತೋ ದಿವಮ್ ।
ಶತಾನಿ ತ್ರೀಣಿ ಗತ್ವಾಥ ಯೋಜನಾನಾಂ ಮಹಾಕಪೇ ॥ ೨೨

ತೇಜಸಾ ತಸ್ಯ ನಿರ್ಧೂತೋ ನ ವಿಷಾದಂ ಗತಸ್ತತಃ ।
ತಾವದಾಪತತಸ್ತೂರ್ಣಮಂತರಿಕ್ಷಂ ಮಹಾಕಪೇ ॥ ೨೩

ಕ್ಷಿಪ್ತಮಿಂದ್ರೇಣ ತೇ ವಜ್ರಂ ಕ್ರೋಧಾವಿಷ್ಟೇನ ಧೀಮತಾ ।
ತದಾ ಶೈಲಾಗ್ರಶಿಖರೇ ವಾಮೋ ಹನುರಭಜ್ಯತ ॥ ೨೪

ತತೋ ಹಿ ನಾಮಧೇಯಂ ತೇ ಹನುಮಾನಿತಿ ಕೀರ್ತ್ಯತೇ ।
ತತಸ್ತ್ವಾಂ ನಿಹತಂ ದೃಷ್ಟ್ವಾ ವಾಯುರ್ಗಂಧವಹಃ ಸ್ವಯಮ್॥ ೨೫

ಶೀಘ್ರಗತಿಯಲ್ಲಿಯೂ ನನಗೆ ಸಮಾನನಾಗುವವನು!' ಎಂದು ಹೇಳಿದನು ಆಗ, ವಾನರೋತ್ತಮ, ನಿನ್ನ ತಾಯಿಗೆ ಸಮಾಧಾನವಾಯಿತು. ಅಂಜನಾ ದೇವಿಯು ಒಂದು ಗುಹೆಯಲ್ಲಿ ಕಪಿಶ್ರೇಷ್ಠನಾದ ನಿನ್ನನ್ನು ಹಡೆದಳು. ಸೂರ್ಯನು ಉದಯಿಸಿ ಮೇಲೆ ಬಂದಿದ್ದನು. ಬಾಲಕನಾಗಿದ್ದ ನೀನು ಸೂರ್ಯಬಿಂಬವನ್ನು ನೋಡಿ 'ಅದು ಅರಣ್ಯದಲ್ಲಿರುವ ಒಂದು ಹಣ್ಣು' ಎಂದು ಭ್ರಮಿಸಿ, ಅದನ್ನು ಹಿಡಿಯುವುದಕ್ಕಾಗಿ ಅಂತರಿಕ್ಷಕ್ಕೆ ಹಾರಿದೆ! ಓ ಮಹಾಕಪಿ! ಮುನ್ನೂರುಯೋಜನಗಳ ದೂರ ಅಂತರಿಕ್ಷದಲ್ಲಿ ನೀನು ಹಾರಿಹೋದೆ! (೨೦-೨೨). ಸೂರ್ಯನ ಪ್ರಖರವಾದ ತೇಜಸ್ಸಿನ ಹೊಡೆತಕ್ಕೂ ನೀನು ಅಳುಕಲಿಲ್ಲ. ಹಾಗೆ ನೀನು ಆಕಾಶದಲ್ಲಿ ಏರಿಹೋಗುತ್ತಿರಲು, ಇಂದ್ರನು ಕ್ರುದ್ಧನಾಗಿ ನಿನ್ನಮೇಲೆ ವಜ್ರಾಯುಧವನ್ನು ಬೀಸಿದನು. ಆಗ ನೀನು ಒಂದು ಪರ್ವತಶಿಖರದಮೇಲೆ ಬೀಳಲಾಗಿ, ನಿನ್ನ ಎಡಭಾಗದ ಹನುವಿಗೆ * ಪೆಟ್ಟಾಗಿ ಊದಿಕೊಂಡಿತು (೨೩-೨೪). ಆದ್ದರಿಂದ ನಿನಗೆ ಹನುಮಂತನೆಂಬ ಹೆಸರು ಪ್ರಸಿದ್ಧವಾಯಿತು ಇಂದ್ರನು ವಜ್ರಾಯುಧದಿಂದ ನಿನಗೆ ಹೊಡೆದುದನ್ನು ಕಂಡು, ವಾಯುದೇವನು ಕ್ರುದ್ಧನಾದನು.

* ಹನು=ಕೆನ್ನೆ ; ದವಡೆ.

ತ್ರೈಲೋಕ್ಯೇ ಭೃಶಸಂಕ್ರುದ್ಧೋ ನ ವವೌ ವೈ ಪ್ರಭಂಜನಃ ।
ಸಂಭ್ರಾಂತಾಶ್ಚ ಸುರಾಃ ಸರ್ವೇ ತ್ರೈಲೋಕ್ಯೇ ಕ್ಷೋಭಿತೇ ಸತಿ ॥ ೨೬

ಪ್ರಸಾದಯಂತಿ ಸಂಕ್ರುದ್ಧಂ ಮಾರುತಂ ಭುವನೇಶ್ವರಾಃ ।
ಪ್ರಸಾದಿತೇ ಚ ಪವನೇ ಬ್ರಹ್ಮಾ ತುಭ್ಯಂ ವರಂ ದದೌ ॥ ೨೭

ಅಶಸ್ತ್ರವಧ್ಯತಾಂ ತಾತ ಸಮರೇ ಸತ್ಯವಿಕ್ರಮ ।
ವಜ್ರಸ್ಯ ಚ ನಿಪಾತೇನ ವಿರುಜಂ ತ್ವಾಂ ಸಮೀಕ್ಷ್ಯ ಚ ॥ ೨೮

ಸಹಸ್ರನೇತ್ರಃ ಪ್ರೀತಾತ್ಮಾ ದದೌ ತೇ ವರಮುತ್ತಮಮ್ ।
ಸ್ವಚ್ಛಂದತಶ್ಚ ಮರಣಂ ತೇ ಭೂಯಾದಿತಿ ವೈ ಪ್ರಭೋ ॥ ೨೯

ಸ ತ್ವಂ ಕೇಸರಿಣಃ ಪುತ್ರಃ ಕ್ಷೇತ್ರಜೋ ಭೀಮವಿಕ್ರಮಃ ।
ಮಾರುತಸ್ಯೌರಸಃ ಪುತ್ರಸ್ತೇಜಸಾ ಚಾಪಿ ತತ್ಸಮಃ ॥ ೩೦

ಈದೃಶಸ್ಯ ಚ ತೇ ತಾತ ವರ್ಣಯಾಮಃ ಕಥಂ ಬಲಮ್ ।
ಕಾರ್ಯಂ ಚಾಲೋಕಸಾಮಾನ್ಯಂ ಕರ್ತುಂ ಶಕ್ತಸ್ತ್ವಮೇವ ಹಿ ॥

---

ಮೂರುಲೋಕಗಳಲ್ಲಿ ಎಲ್ಲಿಯೂ ಅವನು ಬೀಸಲೇ ಇಲ್ಲ! ತ್ರೈಲೋಕ್ಯವೂ ತತ್ತರಿಸಲು ದೇವತೆಗಳು ಭೀತರಾಗಿ, ಕ್ರುದ್ಧನಾದ ಮಾರುತನನ್ನು ಸಂತೈಸ ತೊಡಗಿದರು ಮಾರುತನ ಕೋಪವು ಶಾಂತವಾಗಲು, ಹೇ ವತ್ಸ, ಬ್ರಹ್ಮನು ಬಂದು 'ಯುದ್ಧದಲ್ಲಿ ಯಾವ ಆಯುಧದಿಂದಲೂ ಈ ಮಗುವಿಗೆ ಸಾವಾಗ ದಿರಲಿ' ಎಂದು ನಿನಗೆ ವರವನ್ನನುಗ್ರಹಿಸಿದನು (೨೫-೨೭). ಅಪ್ಪಾ-ಹನುಮಂತ, ವಿಕ್ರಮವೆಂಬುದು ಸತ್ಯವಾಗಿಯೂ ನಿನ್ನಲ್ಲಿ ನೆಲೆಸಿದೆ. ವಜ್ರಾಯುಧದ ಪೆಟ್ಟಿಗೂ ಜಗ್ಗದ ನಿನ್ನನ್ನು ಕಂಡು ದೇವೇಂದ್ರನು ಸಂತುಷ್ಟನಾಗಿ 'ನಿನಗೆ ಸ್ವೇಚ್ಛಾಮರಣದ ಶಕ್ತಿಯುಂಟಾಗಲಿ' ಎಂದು ಶ್ರೇಷ್ಠವಾದ ವರವನ್ನಿತ್ತನು (೨೮-೨೯). ನೀನು ಕೇಸರಿಗೆ ಕ್ಷೇತ್ರಜ ಪುತ್ರನಾಗಿ ವಾಯುದೇವನಿಗೆ ಔರಸಪುತ್ರನಾಗಿರುವೆ. ಭೀಮಪರಾಕ್ರಮಿಯಾದ ನೀನು ತೇಜಸ್ಸಿನಲ್ಲಿ ವಾಯುವಿಗೆ ಸಮನಾಗಿದ್ದೀಯೆ. ವತ್ಸ, ಇಂಥ ಮಹಾನುಭಾವನಾದ ನಿನ್ನ ಬಲವನ್ನು ನಾವು ಏನೆಂದು ವರ್ಣಿಸೋಣ! ಇತರರಿಗೆ ಶಕ್ಯವಲ್ಲದ ಅಸಾಧಾರಣ ಕಾರ್ಯವನ್ನು ಸಾಧಿಸಲು ನೀನೇ ಸಮರ್ಥ

ಭವಾನ್ ಜೀವಾತವೇಽಸ್ಮಾಕಮಂಜನಾಗರ್ಭಸಂಭವ ।
ತ್ವಂ ಹಿ ವಾಯುಸುತೋ ವತ್ಸ ಪ್ಲವನೇ ಚಾಪಿ ತತ್ಸಮಃ ॥ ೩೨

ವಯಮದ್ಯ ಗತಪ್ರಾಣಾ ಭವಾನ್ನಸ್ತ್ರಾತು ಸಾಂಪ್ರತಮ್ ।
ದಾಕ್ಷ್ಯವಿಕ್ರಮಸಂಪನ್ನಃ ಪಕ್ಷಿರಾಜ ಇವಾಪರಃ ॥ ೩೩

ತ್ರಿವಿಕ್ರಮೇ ಮಯಾ ತಾತ ಸಶೈಲವನಕಾನನಾ ।
ತ್ರಿಃಸಪ್ತಕೃತ್ವಃ ಪೃಥಿವೀ ಪರಿಕ್ರಾಂತಾ ಪ್ರದಕ್ಷಿಣಮ್ ॥ ೩೪

ತಥಾ ಚೌಷಧಯೋಽಸ್ಮಾಭಿಃ ಸಂಚಿತಾ ದೇವಶಾಸನಾತ್ ।
ನಿಷ್ಪನ್ನಮಮೃತಂ ಯಾಭಿಸ್ತದಾಸೀನ್ನೋ ಮಹದ್ಬಲಮ್ ॥ ೩೫

ಸ ಇದಾನೀಮಹಂ ವೃದ್ಧಃ ಪರಿಹೀನಪರಾಕ್ರಮಃ ।
ಸಾಂಪ್ರತಂ ಕಾಲಮಸ್ಮಾಕಂ ಭವಾನ್ ಸರ್ವಗುಣಾನ್ವಿತಃ ॥ ೩೬

ತದ್ವಿಜೃಂಭಸ್ವ ವಿಕ್ರಾಂತಃ ಪ್ಲವತಾಮುತ್ತಮೋ ಹ್ಯಸಿ ।
ತ್ವದ್ವೀರ್ಯಂ ದ್ರಷ್ಟುಕಾಮೇಯಂ ಸರ್ವವಾನರವಾಹಿನೀ ॥ ೩೭

---

(೩೦-೩೧). ಓ ಅಂಜನಾತನಯ, ನಮ್ಮ ಪ್ರಾಣವನ್ನುಳಿಸುವ ಅಮೃತವಾಗು. ನೀನು ವಾಯುಪುತ್ರನಾಗಿ, ಲಂಘಿಸುವುದರಲ್ಲಿ ಅವನಿಗೆ ಎಣೆಯಾಗಿದ್ದೀಯೆ. ನಾವೀಗ ಪ್ರಾಣವನ್ನು ಬಿಡುವ ಸ್ಥಿತಿಯಲ್ಲಿದ್ದೇವೆ. ನಮ್ಮನ್ನು ನೀನೇ ಉಳಿಸಬೇಕು. ಕಾರ್ಯದಕ್ಷತೆಯಲ್ಲಿಯೂ ಪರಾಕ್ರಮದಲ್ಲಿಯೂ ನೀನು ಪಕ್ಷಿರಾಜನಾದ ಇನ್ನೊಬ್ಬ ವೈನತೇಯನೋ ಎಂಬಂತೆ ಇದ್ದೀಯೆ (೩೨-೩೩). ವತ್ಸ, ಹಿಂದೆ ವಿಷ್ಣುವು ವಾಮನಾವತಾರವನ್ನೆತ್ತಿದಾಗ ಗಿರಿಕಾನನಸಮೇತವಾದ ಈ ಭೂಮಂಡಲವನ್ನು ನಾನು ಇಪ್ಪತ್ತೊಂದುಸಲ ಪ್ರದಕ್ಷಿಣೆಮಾಡಿ ಬಂದೆನು! ಅಲ್ಲದೆ ಸಮುದ್ರಮಥನ ಕಾಲದಲ್ಲಿ ದೇವತೆಗಳು ಹೇಳಿಕಳಿಸಿದ ಮೇರೆಗೆ ನಾನಾ ಮೂಲಿಕೆಗಳನ್ನು ನಾನು ಸಂಗ್ರಹಿಸಿ ತಂದೆನು. ಅವುಗಳನ್ನು ಹಾಕಿ ಕಡೆದುದರಿಂದ ಸಮುದ್ರದಲ್ಲಿ ಅಮೃತವು ಹುಟ್ಟಿತು. ಅಂಥ ಒಂದು ಮಹಾಸಾಮರ್ಥ್ಯವು ನಮ್ಮಲ್ಲಿತ್ತು! (೩೪-೩೫). ಈಗಲಾದರೋ ನಾನು ವೃದ್ಧನಾಗಿದ್ದೇನೆ. ಆ ಸಾಮರ್ಥ್ಯವು ಈಗ ಇಲ್ಲ. ನೀನೇ ನಮ್ಮಲ್ಲಿ ಸಮಸ್ತಯೋಗ್ಯತೆಗಳಿಂದಲೂ ಯುಕ್ತನಾದವನು. ಆದ್ದರಿಂದ ಹೆಜ್ಜೆಯನ್ನು ಮುಂದಿಟ್ಟು ವಿಜೃಂಭಿಸು!

ಉತ್ತಿಷ್ಠ ಹರಿಶಾರ್ದೂಲ ಲಂಘಯಸ್ವ ಮಹಾರ್ಣವಮ್ ।
ಪರಾ ಹಿ ಸರ್ವಭೂತಾನಾಂ ಹನುಮನ್ ಯಾ ಗತಿಸ್ತವ ॥ ೩೮

ವಿಷಣ್ಣಾ ಹರಯಃ ಸರ್ವೇ ಹನೂಮನ್ ಕಿಮುಪೇಕ್ಷಸೇ ।
ವಿಕ್ರಮಸ್ವ ಮಹಾವೇಗೋ ವಿಷ್ಣುಸ್ತ್ರೀನ್ ವಿಕ್ರಮಾನಿವ ॥ ೩೯

ತತಸ್ತು ವೈ ಜಾಂಬವತಾ ಪ್ರಚೋದಿತಃ
ಪ್ರತೀತವೇಗಃ ಪವನಾತ್ಮಜಃ ಕಪಿಃ ।
ಪ್ರಹರ್ಷಯಂಸ್ತಾಂ ಹರಿವೀರವಾಹಿನೀಂ
ಚಕಾರ ರೂಪಂ ಮಹದಾತ್ಮನಸ್ತದಾ ॥ ೪೦

ಇತಿ ಶ್ರೀಮದ್ರಾಮಾಯಣೇ ಕಿಷ್ಕಿಂಧಾಕಾಂಡೇ ಷಟ್‌ಷಷ್ಟಿತಮಃ ಸರ್ಗಃ



ಹಾರುವವರಲ್ಲಿ ಶ್ರೇಷ್ಠನಾದವನು ನೀನು ಈ ನಿಖಿಲ ವಾನರಸೇನೆಯೂ ನಿನ್ನ ಶೌರ್ಯವನ್ನು ನೋಡಲು ತವಕಗೊಂಡಿದೆ (೩೬-೩೭). ಎಲೈ ಕಪಿಶಾರ್ದೂಲನೆ, ಏಳು ! ಮಹಾಸಾಗರವನ್ನು ಲಂಘಿಸಿಹೋಗು ! ನಿನ್ನ ಗಮನವೇಗವು ಸಕಲಭೂತರಾಶಿಗಳಿಗಿಂತ ಮಿಗಿಲಾದುದು. ಎಲ್ಲ ವಾನರರೂ ವಿಷಣ್ಣರಾಗಿ ಕುಳಿತಿದ್ದಾರೆ. ಹನುಮಂತ, ಉಪೇಕ್ಷಿಸುವೆ ಏಕೆ ? ಮಹಾವಿಷ್ಣುವು ಮೂರುಹೆಜ್ಜೆಗಳನ್ನಿಟ್ಟು ತ್ರಿವಿಕ್ರಮನಾಗಿ ವಿಜೃಂಭಿಸಿದಂತೆ ವಿಜೃಂಭಿಸು !" ಎಂದು ಹೇಳಿದನು (೩೮-೩೯). ಜಾಂಬವಂತನು ಈ ಪ್ರಕಾರವಾಗಿ ಪ್ರಚೋದಿಸಲು, ಆ ವಾಯುತನಯನಿಗೆ ತನ್ನ ಗತಿವೇಗ ವೆಷ್ಟಿದೆಯೆಂಬುದು ನೆನಪಾಯಿತು ! ಅವನು ತನ್ನ ದೇಹವನ್ನು ಅದ್ಭುತಾಕಾರವಾಗಿ ಬೆಳೆಸತೊಡಗಿದನು. ಅದನ್ನು ಕಂಡು ಕಪಿಸೇನೆಯು ಹರ್ಷದಿಂದ ಉಬ್ಬಿತು (೪೦).

ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಅರುವತ್ತಾರನೆಯ ಸರ್ಗ



## ಸಪ್ತಷಷ್ಟಿತಮಃ ಸರ್ಗಃ

ಲಂಘನಾವಷ್ಟಂಭಃ

ಸಂಸ್ತೂಯಮಾನೋ ಹನುಮಾನ್ ವ್ಯವರ್ಧತ ಮಹಾಬಲಃ ।
ಸಮಾವಿಧ್ಯ ಚ ಲಾಂಗೂಲಂ ಹರ್ಷಾಚ್ಚ ಬಲಮೇಯಿವಾನ್ ॥ ೧

ತಸ್ಯ ಸಂಸ್ತೂಯಮಾನಸ್ಯ ವೃದ್ಧೈರ್ವಾನರಪುಂಗವೈಃ ।
ತೇಜಸಾಪೂರ್ಯಮಾಣಸ್ಯ ರೂಪಮಾಸೀದನುತ್ತಮಮ್ ॥ ೨

ಯಥಾ ವಿಜೃಂಭತೇ ಸಿಂಹೋ ವಿವೃದ್ಧೋ ಗಿರಿಗಹ್ವರೇ ।
ಮಾರುತಸ್ಯೌರಸಃ ಪುತ್ರಸ್ತಥಾ ಸಂಪ್ರತಿ ಜೃಂಭತೇ ॥ ೩

ತಂ ದೃಷ್ಟ್ವಾ ಜೃಂಭಮಾಣಂ ತೇ ಕ್ರಮಿತುಂ ಶತಯೋಜನಮ್ ।
ವೀರ್ಯೇಣಾಪೂರ್ಯಮಾಣಂ ಚ ಸಹಸಾ ವಾನರೋತ್ತಮಾಃ ॥ ೪

### ಸರ್ಗ ೬೭

ಹನುಮಂತನು ತನ್ನ ಬಲಪರಾಕ್ರಮಗಳನ್ನು ಹೇಳಿಕೊಂಡು ವಾನರರನ್ನು ಉತ್ಸಾಹಗೊಳಿಸುವುದು. ಸಮುದ್ರಲಂಘನಕ್ಕಾಗಿ ಸಿದ್ಧತೆ. ಮಹೇಂದ್ರಪರ್ವತಾರೋಹಣ.

ಈ ರೀತಿಯಲ್ಲಿ ಜಾಂಬವಂತನು ಕೊಂಡಾಡಲು, ಬಲಾಢ್ಯನಾದ ಹನುಮಂತನು ಮೇಲೆದ್ದನು! ಹರ್ಷದಿಂದ ಬಾಲವನ್ನೊಮ್ಮೆ ನೆಲಕ್ಕಪ್ಪಳಿಸಿ ಸಮಸ್ತ ಬಲವನ್ನೂ ತನ್ನಲ್ಲಿ ಆವೇಶಿಸಿಕೊಂಡು ಬೃಹದಾಕಾರನಾಗಿ ಬೆಳೆಯು ತೊಡಗಿದನು. ಹಿರಿಯರಾದ ವಾನರೋತ್ತಮರು ಹನುಮಂತನನ್ನು ಹೊಗಳುತ್ತಿರಲಾಗಿ, ಅವನಲ್ಲಿ ತೇಜಸ್ಸು ತುಂಬತೊಡಗಿತು. ಅವನ ರೂಪವು ಅದ್ಭುತವಾಗಿ ವರ್ಧಿಸಿತು (೧-೨). ಗಿರಿಗುಹೆಯಲ್ಲಿ ವಾಸಿಸುವ ಕೊಬ್ಬಿದ ಸಿಂಹವು ಹೇಗೆ ವಿಜೃಂಭಿಸುವುದೋ, ಹಾಗೆ ಮಾರುತನ ಔರಸಪುತ್ರನು ವಿಜೃಂಭಿಸತೊಡಗಿದನು. ನೂರುಯೋಜನಗಳನ್ನು ಲಂಘಿಸುವುದಕ್ಕಾಗಿ, ವೀರ್ಯೋದಾರನಾಗಿ ವಿಕ್ರಮಿಸಿ ಉಬ್ಬುತ್ತಿದ್ದ ವಾಯುಪುತ್ರನನ್ನು ಕಂಡು

ಸಹಸಾ ಶೋಕಮುತ್ಸೃಜ್ಯ ಪ್ರಹರ್ಷೇಣ ಸಮನ್ವಿತಾಃ ।
ವಿನೇದುಸ್ತುಷ್ಟುವುಶ್ಚಾಪಿ ಹನುಮಂತಂ ಮಹಾಬಲಮ್ ॥ ೫

ಪ್ರಹೃಷ್ಟಾ ವಿಸ್ಮಿತಾಶ್ಚೈವ ವೀಕ್ಷಂತೇ ಸ್ಮ ಸಮಂತತಃ ।
ತ್ರಿವಿಕ್ರಮಕೃತೋತ್ಸಾಹಂ ನಾರಾಯಣಮಿವ ಪ್ರಜಾಃ ॥ ೬

ಅಶೋಭತ ಮುಖಂ ತಸ್ಯ ಜೃಂಭಮಾಣಸ್ಯ ಧೀಮತಃ ।
ಅಂಬರೀಷಮಿವಾದೀಪ್ತಂ ವಿಧೂಮ ಇವ ಪಾವಕಃ ॥ ೭

ಹರೀಣಾಮುತ್ಥಿತೋ ಮಧ್ಯಾತ್ ಸಂಪ್ರಹೃಷ್ಟತನೂರುಹಃ ।
ಅಭಿವಾದ್ಯ ಹರೀನ್ ವೃದ್ಧಾನ್ ಹನೂಮಾನಿದಮಬ್ರವೀತ್ ॥ ೮

ಅರುಜತ್ ಪರ್ವತಾಗ್ರಾಣಿ ಹುತಾಶನಸಖೋಽನಿಲಃ ।
ಬಲವಾನಪ್ರಮೇಯಶ್ಚ ವಾಯುರಾಕಾಶಗೋಚರಃ ॥ ೯

ತಸ್ಯಾಹಂ ಶೀಘ್ರವೇಗಸ್ಯ ಶೀಘ್ರಗಸ್ಯ ಮಹಾತ್ಮನಃ ।
ಮಾರುತಸ್ಯೌರಸಃ ಪುತ್ರಃ ಪ್ಲವನೇ ನಾಸ್ತಿ ಮತ್ಸಮಃ ॥ ೧೦

---

ವಾನರರ ಶೋಕವಡಗಿತು (೩-೪). ಅವರು ಹರ್ಷದಿಂದ ಸಿಂಹನಾದ ಮಾಡಿದರು. ಬಲಾಢ್ಯನಾದ ಹನುಮಂತನನ್ನು ಕೊಂಡಾಡಿದರು. ಮೂರುಹೆಜ್ಜೆಗಳಿಂದ ಜಗತ್ತನ್ನಳೆಯಲು ತ್ರಿವಿಕ್ರಮನಾಗಿ ಬೆಳೆದ ಶ್ರೀಮನ್ನಾರಾಯಣನನ್ನು ಕಂಡು ಪ್ರಜೆಗಳು ಆಶ್ಚರ್ಯಚಕಿತರಾದಂತೆ, ಉತ್ಸಾಹದಿಂದ ಅದ್ಭುತಾಕಾರನಾಗಿ ಬೆಳೆಯುತ್ತಿದ್ದ ಆಂಜನೇಯನನ್ನು ನೋಡಿ ವಾನರರು ವಿಸ್ಮಿತರಾದರು; ಸಂತುಷ್ಟರಾದರು; ಸುತ್ತಲೂ ಅವನನ್ನು ನೋಡುತ್ತ ನಿಂತರು (೫-೬) ಧೀಮಂತನಾದ ಹನುಮಂತನು ವಿಜೃಂಭಿಸಿ ಬೆಳೆಯುತ್ತಿರಲಾಗಿ, ಅವನ ಮುಖವು ಕೆಂಪಗೆ ಕಾದ ಕಬ್ಬಿಣದ ಬಾಣಲೆಯಂತೆಯೂ ಹೊಗೆಯಿಲ್ಲದ ಬೆಂಕಿಯಂತೆಯೂ ಕಂಗೊಳಿಸಿತು. ರೋಮಾಂಚಿತಾಂಗನಾದ ಹನುಮಂತನು ಕಪಿಗಳ ಮಧ್ಯದಿಂದೆದ್ದು ಬಂದು, ಜಾಂಬವಂತನೇ ಮೊದಲಾದ ಹಿರಿಯರಿಗೆ ಅಭಿವಾದನೆಮಾಡಿ ಇಂತೆಂದನು (೭-೮) : "ಕಪಿಶ್ರೇಷ್ಠರೆ, ಯಾರು ಅಗ್ನಿದೇವನಿಗೆ ಮಿತ್ರನಾಗಿ, ಊಹಾತೀತ ಬಲಶಾಲಿಯಾಗಿ, ಆಕಾಶಮಾರ್ಗದಲ್ಲಿ ಸಂಚರಿಸುತ್ತ ಪರ್ವತಶಿಖರಗಳನ್ನು ಉರುಳಿಸಿ ಕೆಡಹಬಲ್ಲನೋ, ಅಂಥ ಮಹಾವೇಗವುಳ್ಳವನೂ ಶೀಘ್ರ

ಉತ್ಸಹೇಯಂ ಹಿ ವಿಸ್ತೀರ್ಣಮಾಲಿಖಂತಮಿವಾಂಬರಮ್ ।
ಮೇರುಂ ಗಿರಿಮಸಂಗೇನ ಪರಿಗಂತುಂ ಸಹಸ್ರಶಃ ॥ ೧೧

ಬಾಹುವೇಗಪ್ರಣುನ್ನೇನ ಸಾಗರೇಣಾಹಮುತ್ಸಹೇ ।
ಸಮಾಪ್ಲಾವಯಿತುಂ ಲೋಕಂ ಸಪರ್ವತನದೀಹ್ರದಮ್ ॥ ೧೨

ಮಮೋರುಜಂಘಾವೇಗೇನ ಭವಿಷ್ಯತಿ ಸಮುತ್ಥಿತಃ ।
ಸಮುಚ್ಛ್ರಿತಮಹಾಗ್ರಾಹಃ ಸಮುದ್ರೋ ವರುಣಾಲಯಃ ॥ ೧೩

ಪನ್ನಗಾಶನಮಾಕಾಶೇ ಪತಂತಂ ಪಕ್ಷಿಸೇವಿತೇ ।
ವೈನತೇಯಮಹಂ ಶಕ್ತಃ ಪರಿಗಂತುಂ ಸಹಸ್ರಶಃ ॥ ೧೪

ಉದಯಾತ್ ಪ್ರಸ್ಥಿತಂ ವಾಪಿ ಜ್ವಲಂತಂ ರಶ್ಮಿಮಾಲಿನಮ್ ।
ಅನಸ್ತಮಿತಮಾದಿತ್ಯಮಭಿಗಂತುಂ ಸಮುತ್ಸಹೇ ॥ ೧೫

---

ಗಾಮಿಯೂ ಆದ ಮಾರುತನಿಗೆ ಔರಸಪುತ್ರ ನಾನು ! ನನಗೆ ಸಮಾನನಾದ ವೀರನು ಮತ್ತೊಬ್ಬನಿಲ್ಲ ! (೯–೧೦). ಅಂಬರವನ್ನು ಚುಂಬಿಸುವಂತೆ ಅತ್ಯುನ್ನತವಾಗಿ ವಿಸ್ತೀರ್ಣವಾಗಿರುವ ಮೇರುಗಿರಿಯನ್ನು ಎಲ್ಲಿಯೂ ನಿಲ್ಲದೆ ಸಾವಿರಾರುಸಲ ಸುತ್ತಿಬರಬಲ್ಲೆನು ! ನನ್ನ ತೋಳ್ಬಲದಿಂದ ಕಡಲನ್ನು ಈಡಾಡಿ, ಗಿರಿನದೀಸರೋವರಸಹಿತವಾದ ಈ ಭೂಮಂಡಲವನ್ನು ನೀರಿನಲ್ಲಿ ತೇಲಿಸಬಲ್ಲೆನು ! (೧೧–೧೨). ನನ್ನ ತೊಡೆಗಳ ಮತ್ತು ಕಣಕಾಲುಗಳ ಹೊಡೆತದ ವೇಗಕ್ಕೆ, ವರುಣಾಲಯವೆನಿಸಿದ ಕಡಲು ಉಕ್ಕಿ ತುಳುಕಿ ಹೋದೀತು ! ತಿಮಿತಿಮಿಂಗಿಲಾದಿ ಮಹಾಗ್ರಾಹಗಳು ಹೊರಗೆ ಹಾರಿ ಬಂದಾವು ! ಮಹಾಸರ್ಪಗಳನ್ನು ಹಿಡಿಯಲು ಗಗನಮಾರ್ಗದಲ್ಲಿ ರಭಸದಿಂದೆರಗುವ ಗರುಡನಿಗೆ ಸಾವಿರಪಟ್ಟು ವೇಗದಿಂದ ಹಾರಿ, ಅವನನ್ನು ಸುತ್ತುವ ಸಾಮರ್ಥ್ಯ ನನಗುಂಟು ! (೧೩–೧೪). ಆದಿತ್ಯನೊಡನೆ ಉದಯಗಿರಿಯಿಂದ ಹೊರಟು, ಅವನು ಅಸ್ತಾಚಲವನ್ನು ಸೇರುವುದಕ್ಕೆ ಮೊದಲೇ ನಾನು ಅಸ್ತಾಚಲವನ್ನು ಸೇರಿ ಹಿಂದಿರುಗಿ ಬಂದು, ಆದಿತ್ಯನು ಆಕಾಶಮಧ್ಯದಲ್ಲಿ ಪ್ರಜ್ವಲಿಸುತ್ತಿರುವಾಗಲೇ ಅವನನ್ನು ಎದುರುಗೊಳ್ಳಬಲ್ಲೆ ! (೧೫). ಪ್ರಚಂಡವೇಗದಿಂದ ಮತ್ತೆ ಭೂಮಿಗೆ ಬಂದು ಇಲ್ಲಿ ವಿಶ್ರಮಿಸದೆಯೇ

ತತೋ ಭೂಮಿಮಸಂಸ್ಪೃಶ್ಯ ಪುನರಾಗಂತುಮುತ್ಸಹೇ ।
ಪ್ರವೇಗೇನೈವ ಮಹತಾ ಭೀಮೇನ ಪ್ಲವಗರ್ಷಭಾಃ ॥ ೧೬

ಉತ್ಸಹೇಯಮತಿಕ್ರಾಂತುಂ ಸರ್ವಾನಾಕಾಶಗೋಚರಾನ್ ।
ಸಾಗರಂ ಕ್ಷೋಭಯಿಷ್ಯಾಮಿ ದಾರಯಿಷ್ಯಾಮಿ ಮೇದಿನೀಮ್ ॥ ೧೭

ಪರ್ವತಾನ್ ಕಂಪಯಿಷ್ಯಾಮಿ ಪ್ಲವಮಾನಃ ಪ್ಲವಂಗಮಾಃ ।
ಹರಿಷ್ಯಾಮ್ಯೂರುವೇಗೇನ ಪ್ಲವಮಾನೋ ಮಹಾರ್ಣವಮ್ ॥ ೧೮

ಲತಾನಾಂ ವಿವಿಧಂ ಪುಷ್ಪಂ ಪಾದಪಾನಾಂ ಚ ಸರ್ವಶಃ ।
ಅನುಯಾಸ್ಯತಿ ಮಾಮದ್ಯ ಪ್ಲವಮಾನಂ ವಿಹಾಯಸಾ ॥ ೧೯

ಭವಿಷ್ಯತಿ ಹಿ ಮೇ ಪಂಥಾಃ ಸ್ವಾತೇಃ ಪಂಥಾ ಇವಾಂಬರೇ ।
ಚರಂತಂ ಘೋರಮಾಕಾಶಮುತ್ಪತಿಷ್ಯಂತಮೇವ ವಾ ॥ ೨೦

ದ್ರಕ್ಷ್ಯಂತಿ ನಿಪತಂತಂ ಚ ಸರ್ವಭೂತಾನಿ ವಾನರಾಃ ।
ಮಹಾಮೇಘಪ್ರತೀಕಾಶಂ ಮಾಂ ಚ ದ್ರಕ್ಷ್ಯಥ ವಾನರಾಃ ॥ ೨೧

---

ಮೇಲೇರಿ ಪುನಃ ಸೂರ್ಯನ ಬಳಿಗೆ ಹೋಗಬಲ್ಲೆ! ಎಲೈ ವಾನರೋತ್ತಮರೆ, ಆಕಾಶದಲ್ಲಿರುವ ಸಕಲ ಗ್ರಹನಕ್ಷತ್ರಾದಿಗಳನ್ನು ದಾಟಿಹೋಗುವ ಶಕ್ತಿ ನನಗಿದೆಯೆಂದು ತಿಳಿಯಿರಿ. ಮಹಾಸಾಗರವನ್ನು ಅಲ್ಲೋಲಕಲ್ಲೋಲವಾಗಿಸಿಯೇನು! ಪೃಥಿವಿಯನ್ನು ಒಡೆದು ಚೆಲ್ಲಿಯೇನು! (೧೬-೧೭). ನಾನು ನೆಗೆಯುವ ವೇಗಕ್ಕೆ ಪರ್ವತಗಳನ್ನು ಅಲ್ಲಾಡಿಸಿಬಿಡುವೆನು! ಮೇಲೆ ಹಾರಿಹೋಗುವಾಗ ತೊಡೆಗಳ ವೇಗದಿಂದ ಸಮುದ್ರವನ್ನು ಸೆಳೆದೊಯ್ಯುವೆನು! ಈಗ ನಾನು ಗಗನಮಾರ್ಗದಲ್ಲಿ ಲಂಘಿಸಿಹೋಗುವಾಗ, ಈ ಲತಾವೃಕ್ಷಗಳ ವಿವಿಧ ಪುಷ್ಪಗಳು ನನ್ನ ವೇಗಕ್ಕೆ ಸಿಕ್ಕಿ ತೂರಾಡಿ ಹಾರಾಡುತ್ತ ನನ್ನೊಡನೆ ಬರುವುವು (೧೮-೧೯) ಆಗ ನನ್ನ ಆಕಾಶ ಮಾರ್ಗವು ವಿವಿಧ ತಾರೆಗಳಿಂದ ತುಂಬಿದ ಸ್ವಾತೀನಕ್ಷತ್ರದ ತಾರಾಪಥದಂತೆ ಕಂಗೊಳಿಸೀತು. ಎಲೈ ವಾನರೋತ್ತಮರೆ, ಇಂದು ನಾನು ಮಹಾಮೇಘದಂತೆ ಘೋರಾಕಾಶವನ್ನಡರಿ, ಏರುತ್ತ ಇಳಿಯುತ್ತ ನೇರವಾಗಿ ಚಲಿಸುತ್ತ ಸಾಗುವುದನ್ನು ನೀವೇ ಕಣ್ಣಾರೆ ನೋಡುವಿರಿ! (೨೦-೨೧).

ದಿನಮಾವೃತ್ಯ ಗಚ್ಛಂತಂ ಗ್ರಸಮಾನಮಿವಾಂಬರಮ್ ।
ವಿಧಮಿಷ್ಯಾಮಿ ಜೀಮೂತಾನ್ ಕಂಪಯಿಷ್ಯಾಮಿ ಪರ್ವತಾನ್ ॥ ೨೨

ಸಾಗರಂ ಕ್ಷೋಭಯಿಷ್ಯಾಮಿ ಪ್ಲವಮಾನಃ ಸಮಾಹಿತಃ ।
ವೈನತೇಯಸ್ಯ ಸಾ ಶಕ್ತಿರ್ಮಮ ವಾ ಮಾರುತಸ್ಯ ವಾ ॥ ೨೩

ಋತೇ ಸುಪರ್ಣರಾಜಾನಂ ಮಾರುತಂ ವಾ ಮಹಾಜವಮ್ ।
ನ ತದ್ಭೂತಂ ಪ್ರಪಶ್ಯಾಮಿ ಯನ್ಮಾಂ ಪ್ಲುತಮನುವ್ರಜೇತ್ ॥ ೨೪

ನಿಮೇಷಾಂತರಮಾತ್ರೇಣ ನಿರಾಲಂಬನಮಂಬರಮ್ ।
ಸಹಸಾ ನಿಪತಿಷ್ಯಾಮಿ ಘನಾದ್ವಿದ್ಯುದಿವೋತ್ಥಿತಾ ॥ ೨೫

ಭವಿಷ್ಯತಿ ಹಿ ಮೇ ರೂಪಂ ಪ್ಲವಮಾನಸ್ಯ ಸಾಗರೇ ।
ವಿಷ್ಣೋರ್ವಿಕ್ರಮಮಾಣಸ್ಯ ಪುರಾ ತ್ರೀನ್ ವಿಕ್ರಮಾನಿವ ॥ ೨೬

ಬುದ್ಧ್ಯಾ ಚಾಹಂ ಪ್ರಪಶ್ಯಾಮಿ ಮನಶ್ಚೇಷ್ಟಾ ಚ ಮೇ ತಥಾ ।
ಅಹಂ ದ್ರಕ್ಷ್ಯಾಮಿ ವೈದೇಹೀಂ ಪ್ರಮೋದಧ್ವಂ ಪ್ಲವಂಗಮಾಃ ॥ ೨೭

---

ಅಂಬರವನ್ನು ನುಂಗುತ್ತಿರುವೆನೋ ಎಂಬಂತೆ ಆಕಾಶವನ್ನು ಆಚ್ಛಾದಿಸುತ್ತ ಹೋಗುವುದನ್ನು ಕಾಣುವಿರಿ! ಮೋಡಗಳನ್ನು ಹರಿದು ಈಡಾಡುವೆನು. ಪರ್ವತಗಳನ್ನು ನಡುಗಿಸುವೆನು. ಕಡಲನ್ನು ಉರುಬುವೆನು ಆದರೆ ಎಚ್ಚರಿಕೆಯಿಂದಲೇ ಹಾರಿಹೋಗುವೆನೆಂದು ತಿಳಿಯಿರಿ! ನನಗಿರುವ ಶಕ್ತಿ ಆ ಗರುಡನಿಗಿದ್ದೀತು! (ನನ್ನ ತಂದೆಯಾದ) ಮಾರುತನಿಗಿದ್ದೀತು! (೨೨-೨೩). ಮಹಾರಭಸದಿಂದ ಲಂಘಿಸಿಹೋಗುವ ನನ್ನನ್ನು, ಆ ಗರುಡನೊಬ್ಬನು ಮಹಾಜವನಾದ ವಾಯುದೇವನೊಬ್ಬನು—ಇವರೀರ್ವರು ಹಿಂಬಾಲಿಸಿ ಬಂದಾರು. ಅವರನ್ನುಳಿದು ನನ್ನೊಡನೆ ಸಾಗಬಲ್ಲ ಇನ್ನೊಂದು ಭೂತವನ್ನು ,ನಾನು ಕಾಣೆನು! (೨೪). ಗೆಳೆಯರೆ, ಮೇಘದಿಂದ ಮಿಂಚು ಹೊಮ್ಮುವಂತೆ, ಒಂದು ಕ್ಷಣಮಾತ್ರದಲ್ಲಿ ನಾನು ನಿರಾಲಂಬವಾದ ಅಂಬರದಲ್ಲಿ ಸಿಡಿದು ಸಾಗುವುದನ್ನು ನೀವೇ ನೋಡುವಿರಿ. ಸಾಗರದಮೇಲೆ ಹಾರಿಹೋಗುವ ನನ್ನ ರೂಪವು ಮೂರು ಹೆಜ್ಜೆಗಳನ್ನಿಟ್ಟ ತ್ರಿವಿಕ್ರಮನ ರೂಪದಂತೆ ಅತ್ಯದ್ಭುತವಾಗಿ ಕಂಗೊಳಿಸುವುದು (೨೫-೨೬). ಮಿತ್ರರೆ, ನನ್ನ ಬುದ್ಧಿಗೆ ಹೀಗೆನಿಸುವುದು ; ನನ್ನ ಅಂತರಂಗವೂ ನನಗಾಗುವ ಶುಭಶಕುನವೂ ಅದಕ್ಕೆ

ಮಾರುತಸ್ಯ ಸಮೋ ವೇಗೇ ಗರುಡಸ್ಯ ಸಮೋ ಜವೇ ।
ಅಯುತಂ ಯೋಜನಾನಾಂ ತು ಗಮಿಷ್ಯಾಮೀತಿ ಮೇ ಮತಿಃ ॥ ೨೮

ವಾಸವಸ್ಯ ಸವಜ್ರಸ್ಯ ಬ್ರಹ್ಮಣೋ ವಾ ಸ್ವಯಂಭುವಃ ।
ವಿಕ್ರಮ್ಯ ಸಹಸಾ ಹಸ್ತಾದಮೃತಂ ತದಿಹಾನಯೇ ॥ ೨೯

ಲಂಕಾಂ ವಾಪಿ ಸಮುತ್ಕ್ಷಿಪ್ಯ ಗಚ್ಛೇಯಮಿತಿ ಮೇ ಮತಿಃ ।
ತಮೇವಂ ವಾನರಶ್ರೇಷ್ಠಂ ಗರ್ಜಂತಮಮಿತೌಜಸಮ್ ॥ ೩೦

ಪ್ರಹೃಷ್ಟಾ ಹರಯಸ್ತತ್ರ ಸಮುದೈಕ್ಷಂತ ವಿಸ್ಮಿತಾಃ ।
ತಸ್ಯ ತದ್ವಚನಂ ಶ್ರುತ್ವಾ ಜ್ಞಾತೀನಾಂ ಶೋಕನಾಶನಮ್ ॥ ೩೧

ಉವಾಚ ಪರಿಸಂಹೃಷ್ಟೋ ಜಾಂಬವಾನ್ ಹರಿಸತ್ತಮಮ್ ।
ವೀರ ಕೇಸರಿಣಃ ಪುತ್ರ ಹನುಮನ್ ಮಾರುತಾತ್ಮಜ ॥ ೩೨

ಜ್ಞಾತೀನಾಂ ವಿಪುಲಃ ಶೋಕಸ್ತ್ವಯಾ ತಾತ ವಿನಾಶಿತಃ ।
ತವ ಕಲ್ಯಾಣರುಚಯಃ ಕಪಿಮುಖ್ಯಾಃ ಸಮಾಗತಾಃ ॥ ೩೩

---

ಅನುಗುಣವಾಗಿದೆ ಏನೆಂದರೆ, ನಾನು ವೈದೇಹಿಯನ್ನು ನಿಶ್ಚಯವಾಗಿ ಕಾಣುವೆನು. ಆದ್ದರಿಂದ, ವಾನರರೆ, ನೀವು ಸಂತೋಷದಿಂದಿರಿ (೨೭). ವೇಗದಲ್ಲಿ ಮಾರುತನಿಗೂ ಗರುಡನಿಗೂ ಸಮನಾದ ನಾನು ಹತ್ತುಸಾವಿರ ಯೋಜನಗಳವರೆಗಾದರೂ ಹೋಗಬಲ್ಲೆನೆಂದು ನಂಬಿಕೆ ಇದೆ. ವಜ್ರಧಾರಿಯಾಗಿ ಇಂದ್ರನೇ ಬರಲಿ, ಸ್ವಯಂಭುವಾದ ಬ್ರಹ್ಮನೇ ಅಡ್ಡಗಟ್ಟಲಿ— ಅವರನ್ನು ಗೆದ್ದು ಅಮೃತವನ್ನೇ ಇಲ್ಲಿಗೆ ತರಬಲ್ಲೆನು (೨೮-೨೯). ಮಿತ್ರರೆ, ಸಮಯ ಬಂದರೆ ಲಂಕಾನಗರವನ್ನೇ ಇಲ್ಲಿಗೆ ಹೊತ್ತುತರುವೆನು, ಇದು ನಿಶ್ಚಯ!" ಎಂದು ಹೇಳಿದನು. ಹೀಗೆ ಹೇಳಿ ಅಸದೃಶಪರಾಕ್ರಮಿಯಾದ ಆ ಕಪಿಶ್ರೇಷ್ಠನು ಸಿಂಹನಾದಮಾಡಿದನು. ವಾನರರೆಲ್ಲರೂ ಅತ್ಯಾನಂದದಿಂದ ಬೆಕ್ಕಸಬೆರಗಾಗಿ ಹನುಮಂತನನ್ನು ನೋಡುತ್ತ ನಿಂತರು (೩೦-೩೧). ಸಕಲವಾನರಬಂಧುಗಳ ಚಿಂತೆಯು ನಿವೃತ್ತವಾಗುವಂತೆ ಆಡಿದ ಹನುಮಂತನ ನುಡಿಯನ್ನು ಕೇಳಿ ಜಾಂಬವಂತನು ಸಂಪ್ರೀತನಾದನು. ಅವನು "ವೀರಾಗ್ರಣಿ—ಹನುಮಂತ, ನೀನು ಕೇಸರಿಯ ಪುತ್ರನಲ್ಲವೆ? ಮಾರುತನ ಆತ್ಮಜನಲ್ಲವೆ? ವಾನರಬಂಧುಗಳ ಅಪಾರವಾದ ಶೋಕವನ್ನು ನೀನು

ಮಂಗಲಂ ಕಾರ್ಯಸಿದ್ಧ್ಯರ್ಥಂ ಕರಿಷ್ಯಂತಿ ಸಮಾಹಿತಾಃ ।
ಋಷೀಣಾಂ ಚ ಪ್ರಸಾದೇನ ಕಪಿವೃದ್ಧಮತೇನ ಚ ॥ ೩೪

ಗುರೂಣಾಂ ಚ ಪ್ರಸಾದೇನ ಪ್ಲವಸ್ವ ತ್ವಂ ಮಹಾರ್ಣವಮ್ ।
ಸ್ಥಾಸ್ಯಾಮಶ್ಚೈಕಪಾದೇನ ಯಾವದಾಗಮನಂ ತವ ॥ ೩೫

ತ್ವದ್ಗತಾನಿ ಚ ಸರ್ವೇಷಾಂ ಜೀವಿತಾನಿ ವನೌಕಸಾಮ್ ।
ತತಸ್ತು ಹರಿಶಾರ್ದೂಲಸ್ತಾನುವಾಚ ವನೌಕಸಃ ॥ ೩೬

ನೇಯಂ ಮಮ ಮಹೀ ವೇಗಂ ಲಂಘನೇ ಧಾರಯಿಷ್ಯತಿ ।
ಏತಾನೀಹ ನಗಸ್ಯಾಸ್ಯ ಶಿಲಾಸಂಕಟಶಾಲಿನಃ ॥ ೩೭

ಶಿಖರಾಣಿ ಮಹೇಂದ್ರಸ್ಯ ಸ್ಥಿರಾಣಿ ಚ ಮಹಾಂತಿ ಚ ।
ಏಷು ವೇಗಂ ಕರಿಷ್ಯಾಮಿ ಮಹೇಂದ್ರಶಿಖರೇಷ್ವಹಮ್ ॥ ೩೮

ನಾನಾದ್ರುಮವಿಕೀರ್ಣೇಷು ಧಾತುನಿಷ್ಯಂದಶೋಭಿಷು ।
ಏತಾನಿ ಮಮ ನಿಷ್ಪೇಷಂ ಪಾದಯೋಃ ಪ್ಲವತಾಂ ವರಾಃ ॥ ೩೯

---

ಪರಿಹರಿಸಿದೆ. ಈ ಕಪಿಮುಖ್ಯರು ನಿನಗೆ ಕಲ್ಯಾಣವಾಗಲೆಂದು ಹರಸುತ್ತಿದ್ದಾರೆ (೩೨-೩೩). ನಿನ್ನ ಕಾರ್ಯವು ಸಿದ್ಧಿಸಲೆಂದು ಇವರೆಲ್ಲರೂ ಏಕಾಗ್ರತೆಯಿಂದ ಮಂಗಳಾಶಾಸನವನ್ನು ಮಾಡುವರು ವತ್ಸ, ಋಷಿಗಳ ಅನುಗ್ರಹಬಲದಿಂದಲೂ ಕಪಿವೃದ್ಧರ ಆಶೀರ್ವಾದದಿಂದಲೂ ಗುರುಗಳ ಪ್ರಸಾದಮಹಿಮೆಯಿಂದಲೂ ಮಹಾಸಾಗರವನ್ನು ಸುಖವಾಗಿ ದಾಟಿ ಹೋಗು ! ನೀನು ಬರುವವರೆಗೂ ಒಂಟಿಗಾಲಲ್ಲಿ ನಿಂತು ನಿನ್ನನ್ನು ನಿರೀಕ್ಷಿಸುತ್ತಿರುವೆವು ! (೩೪-೩೫). ನಿಖಿಲವಾನರರ ಬದುಕು ನಿನ್ನ ಕೈಯಲ್ಲಿದೆ" ಎಂದನು. ಆಗ ಕಪಿಶಾರ್ದೂಲನಾದ ಆಂಜನೇಯನು ಆ ಕಪಿನಾಯಕರನ್ನು ನೋಡಿ "ನನ್ನ ಲಂಘನವೇಗವನ್ನು ಈ ನೆಲವು ತಡೆದುಕೊಳ್ಳಲಾರದು ! ದೊಡ್ಡದೊಡ್ಡ ಶಿಲೆಗಳಿಂದ ನಿಬಿಡವಾದ ಮಹೇಂದ್ರಪರ್ವತದ ಶಿಖರ ಪ್ರದೇಶವು ಗಟ್ಟಿಯಾಗಿಯೂ ವಿಶಾಲವಾಗಿಯೂ ಇದೆ ಅಲ್ಲಿ ನನ್ನ ಲಂಘನ ವೇಗವನ್ನು ಪ್ರದರ್ಶಿಸುವೆನು ! (೩೬-೩೮). ಆ ಶಿಖರಪ್ರದೇಶವು ನಾನಾ ವೃಕ್ಷಗಳಿಂದ ಸಾಂದ್ರವಾಗಿ ಗೈರಿಕಧಾತುಗಳಿಂದ ಶೋಭಿಸುತ್ತಿದೆ. ಎಲೈ ವಾನರೋತ್ತಮರೆ, ಇಲ್ಲಿಂದ ನೂರುಯೋಜನಗಳ ದೂರ ಹಾರುವಾಗ ನನ್ನ

ಪ್ಲವತೋ ಧಾರಯಿಷ್ಯಂತಿ ಯೋಜನಾನಾಮಿತಃ ಶತಮ್ ।
ತತಸ್ತಂ ಮಾರುತಪ್ರಖ್ಯಃ ಸ ಹರಿರ್ಮಾರುತಾತ್ಮಜಃ ॥ ೪೦

ಆರುರೋಹ ನಗಶ್ರೇಷ್ಠಂ ಮಹೇಂದ್ರಮರಿಮರ್ದನಃ ।
ವೃತಂ ನಾನಾವಿಧೈರ್ವೃಕ್ಷೈರ್ಮೃಗಸೇವಿತಶಾದ್ವಲಮ್ ॥ ೪೧

ಲತಾಕುಸುಮಸಂಬಾಧಂ ನಿತ್ಯಪುಷ್ಪಫಲದ್ರುಮಮ್ ।
ಸಿಂಹಶಾರ್ದೂಲಚರಿತಂ ಮತ್ತಮಾತಂಗಸೇವಿತಮ್ ॥ ೪೨

ಮತ್ತದ್ವಿಜಗಣೋದ್ಘುಷ್ಟಂ ಸಲಿಲೋತ್ಪೀಡಸಂಕುಲಮ್ ।
ಮಹದ್ಭಿರುಚ್ಛ್ರಿತಂ ಶೃಂಗೈರ್ಮಹೇಂದ್ರಂ ಸ ಮಹಾಬಲಃ ॥ ೪೩

ವಿಚಚಾರ ಹರಿಶ್ರೇಷ್ಠೋ ಮಹೇಂದ್ರಸಮವಿಕ್ರಮಃ ।
ಪಾದಾಭ್ಯಾಂ ಪೀಡಿತಸ್ತೇನ ಮಹಾಶೈಲೋ ಮಹಾತ್ಮನಃ ॥ ೪೪

---

ಕಾಲುಗಳ ತುಳಿತದ ಒತ್ತಡವನ್ನು ಆ ಪರ್ವತಶಿಖರಗಳು ಮಾತ್ರವೇ ತಡೆದು ಕೊಳ್ಳಬಲ್ಲವು !" ಎಂದು ನುಡಿದನು (೩೯-೪೦). ಅನಂತರ ಶತ್ರುಮರ್ದನನಾದ ಆ ಮಾರುತಾತ್ಮಜನು ಝಂಝಾವಾತದಂತೆ ರಭಸದಿಂದ ಮಹೇಂದ್ರ ಪರ್ವತವನ್ನು ಹತ್ತಿಹೋದನು. ಆ ಪರ್ವತವು ನಾನಾವೃಕ್ಷಗಳಿಂದ ನಿಬಿಡವಾಗಿತ್ತು. ಹುಲ್ಲೆಗಳು ಹಸಿರುಹುಲ್ಲಿನ ಮೈದಾನದಲ್ಲಿ ವಿಹರಿಸುತ್ತಿದ್ದವು (೪೧). ಬಳ್ಳಿಗಳಲ್ಲಿ ಹೂಗಳು ದಟ್ಟವಾಗಿ ಅರಳಿದ್ದವು. ಮರಗಳಲ್ಲಿ ಹೂಹಣ್ಣುಗಳು ತುಂಬಿದ್ದವು. ಸಿಂಹಶಾರ್ದೂಲಗಳೂ ಮತ್ತಗಜಗಳೂ ಸಂಚರಿಸುತ್ತಿದ್ದವು. ಮದವೇರಿದ ಹಕ್ಕಿಗಳು ಹಿಂಡುಹಿಂಡಾಗಿ ನಲಿಯುತ್ತ ಕೂಗುತ್ತಿದ್ದವು. ಬೆಟ್ಟದ ಸುತ್ತಲೂ ಗಿರಿನದಿಗಳು ಹರಿಯುತ್ತಿದ್ದವು. ದೊಡ್ಡ ಶಿಖರಗಳಿಂದ ಅತ್ಯುನ್ನತವಾಗಿದ್ದ ಆ ಮಹೇಂದ್ರಗಿರಿಯನ್ನು ಮಹಾಬಲನಾದ ಹನುಮಂತನು ಹತ್ತಿದನು (೪೨-೪೩). ಮಹೇಂದ್ರನಂತೆ ಬಲೋದ್ಧತನಾದ ಆ ಕಪಿಶ್ರೇಷ್ಠನು ಮಹೇಂದ್ರಶಿಖರವನ್ನೇರಿ ಇಲ್ಲಿಂದಲ್ಲಿಗೆ ಸ್ವಲ್ಪಹೊತ್ತು ಸುತ್ತಾಡಿದನು. ಮಹಾಕಾಯನಾದ ಹನುಮಂತನ ಕಾಲ್ಗಳ ತುಳಿತದ ರಭಸಕ್ಕೆ ಆ ಮಹಾಪರ್ವತವು ಕಿರ್ರೆಂದು ಶಬ್ದಮಾಡಿತು ! ಸಿಂಹದ ಆಕ್ರಮಣಕ್ಕೆ ತುತ್ತಾದ ಮದಿಸಿದ ಮಹಾಗಜವು ಕೂಗಿಕೊಳ್ಳುವಂತೆ

ರರಾಸ ಸಿಂಹಾಭಿಹತೋ ಮಹಾನ್ ಮತ್ತ ಇವ ದ್ವಿಪಃ ।
ಮುಮೋಚ ಸಲಿಲೋತ್ಪೀಡಾನ್ ವಿಪ್ರಕೀರ್ಣಶಿಲೋಚ್ಚಯಃ ॥

ವಿತ್ರಸ್ತಮೃಗಮಾತಂಗಃ ಪ್ರಕಂಪಿತಮಹಾದ್ರುಮಃ ।
ನಾಗಗಂಧರ್ವಮಿಥುನೈಃ ಪಾನಸಂಸರ್ಗಕರ್ಕಶೈಃ ॥ ೪೬

ಉತ್ಪತದ್ಭಿಶ್ಚ ವಿಹಗೈರ್ವಿದ್ಯಾಧರಗಣೈರಪಿ ।
ತ್ಯಜ್ಯಮಾನಮಹಾಸಾನುಃ ಸಂನಿಲೀನಮಹೋರಗಃ ॥ ೪೭

ಚಲಶೃಂಗಶಿಲೋದ್ಘಾತಸ್ತದಾಭೂತ್ ಸ ಮಹಾಗಿರಿಃ ।
ನಿಃಶ್ವಸದ್ಭಿಸ್ತದಾರ್ತೈಸ್ತು ಭುಜಂಗೈರರ್ಧನಿಃಸೃತೈಃ ॥ ೪೮

ಸಪತಾಕ ಇವಾಭಾತಿ ಸ ತದಾ ಧರಣೀಧರಃ ।
ಋಷಿಭಿಸ್ತ್ರಾಸಸಂಭ್ರಾಂತೈಸ್ತ್ಯಜ್ಯಮಾನಶಿಲೋಚ್ಚಯಃ ॥ ೪೯

ಸೀದನ್ ಮಹತಿ ಕಾಂತಾರೇ ಸಾರ್ಥಹೀನ ಇವಾಧ್ವಗಃ ॥

---

ಶಬ್ದವಾಯಿತು ! ಬೆಟ್ಟದಿಂದ ನೀರಿನ ಚಿಲುಮೆಗಳು ಚಿಮ್ಮಿದವು. ಬಂಡೆಗಳು ಉರುಳಾಡಿದವು ! (೪೪-೪೫) ಆನೆಯೇ ಮೊದಲಾದ ವನ್ಯಮೃಗಗಳು ಕಂಗಾಲಾದವು. ದೊಡ್ಡದೊಡ್ಡ ಮರಗಳು ಅಲ್ಲಾಡಿದವು. ಮಧುಪಾನದಿಂದ ಮದಿಸಿದ ನಾಗಗಂಧರ್ವದಂಪತಿಗಳು ಹೆದರಿ ಬೆಟ್ಟದ ತಪ್ಪಲನ್ನು ಬಿಟ್ಟು ಚದರಿದರು ಹಕ್ಕಿಗಳು ಮೇಲೆ ಹಾರಿದವು. ವಿದ್ಯಾಧರರು ಪರ್ವತವನ್ನು ತ್ಯಜಿಸಿ ಗಗನವನ್ನಡರಿದರು. ಮಹಾಸರ್ಪಗಳು ಬಿಲದಲ್ಲಡಗಿದವು (೪೬-೪೭). ಮಹೇಂದ್ರಶಿಖರದ ಶಿಲೆಗಳು ಸಡಲಿದವು ಆ ಸಮಯದಲ್ಲಿ ಬಿಲಗಳಿಂದ ಹೊರಗೆ ತಲೆಯಿಟ್ಟಿದ್ದ ಸರ್ಪಗಳು ಭಯದಿಂದ ಬುಸುಗುಟ್ಟುತ್ತ ಹೆಡೆಯೆತ್ತಿ ನಿಂತಿರಲು, ಮಹೇಂದ್ರಪರ್ವತಕ್ಕೆ ಅಲ್ಲಲ್ಲಿ ಧ್ವಜಪಟಗಳನ್ನು ಎತ್ತಿಕಟ್ಟಿದಂತೆ ಕಾಣಿಸಿತು. ಭಯೋದ್ವಿಗ್ನರಾದ ಋಷಿಗಳು ಆ ಗಿರಿಯನ್ನು ತ್ಯಜಿಸಿ ತೆರಳುತ್ತಿರಲು, ಮಹಾರಣ್ಯದಲ್ಲಿ ಸಂಗಡಿಗರು ಬಿಟ್ಟುಹೋಗಲು ಒಂಟಿಯಾದ ದಾರಿಗನಂತೆ, ಮಹೇಂದ್ರಪರ್ವತವು ಶೋಚನೀಯಾವಸ್ಥೆಯನ್ನು ಪಡೆಯಿತು (೪೮-೪೯). ಆಗ ವೇಗಶಾಲಿಯೂ ಶತ್ರುಸೂದನನೂ

ಸ ವೇಗವಾನ್ ವೇಗಸಮಾಹಿತಾತ್ಮಾ
ಹರಿಪ್ರವೀರಃ ಪರವೀರಹಂತಾ ।
ಮನಃ ಸಮಾಧಾಯ ಮಹಾನುಭಾವೋ
ಜಗಾಮ ಲಂಕಾಂ ಮನಸಾ ಮನಸ್ವೀ ॥ ೫೦

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ ಚತುರ್ವಿಂಶತಿ ಸಹಸ್ರಿಕಾಯಾಂ ಸಂಹಿತಾಯಾಂ ಕಿಷ್ಕಿಂಧಾಕಾಂಡೇ ಸಪ್ತಷಷ್ಟಿತಮಃ ಸರ್ಗಃ

**ಕಿಷ್ಕಿಂಧಾಕಾಂಡಃ ಸಂಪೂರ್ಣಃ**



ಆದ ಆ ಕಪಿವೀರನು ವೇಗೋದ್ಧತವಾದ ತನ್ನ ಲಂಘನಗತಿಯು ಹೇಗಿರಬೇಕೆಂದು ಆಲೋಚಿಸುತ್ತಿದ್ದನು ಮಹಾಮಹಿಮನಾದ ಆ ಧೀರನು ಒಂದು ನಿಶ್ಚಯಕ್ಕೆ ಬಂದು ಶಾಂತಚಿತ್ತನಾಗಿ ತನ್ನ ಮನಸ್ಸಿನಲ್ಲಿಯೇ ಲಂಕಾನಗರವನ್ನು ತಲುಪಿದನು ! (೫೦).

**ಇಲ್ಲಿಗೆ ಶ್ರೀಮದ್ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಅರುವತ್ತೇಳನೆಯ ಸರ್ಗ**

— ಕಿಷ್ಕಿಂಧಾಕಾಂಡವು ಸಂಪೂರ್ಣವಾಯಿತು —

**ಸುಗ್ರೀವಾದಿಯುತಂ ಶ್ರೀಶಂ ಭಸ್ಮಾಂಗಾವೃತಮೀಶ್ವರವತ್ ।**
**ಮಹೇಶ್ವರಸಮಂ ಧ್ಯಾಯೇತ್ ಕಿಷ್ಕಿಂಧಾಕಾಂಡ ಉತ್ತಮೇ ॥**



# ಅನುಬಂಧ

## ೧

**ಉರಃಸ್ಥಂ ಕಂಠಗಂ ವಾಕ್ಯಂ ವರ್ತತೇ ಮಧ್ಯಮೋ ಸ್ವರೇ**

—ಪುಟ ೩೬

ಶಿಕ್ಷಾಗ್ರಂಥದಲ್ಲಿ ಶಬ್ದೋಚ್ಚಾರಣೆಯ ವಿಧಾನವನ್ನು ವಿವರಿಸಿದೆ. ಪಾಠಕನ ಮತ್ತು ಉಚ್ಚಾರಣೆಯ ಗುಣದೋಷಗಳನ್ನು ವರ್ಣಿಸಿದೆ.

**ಇವು ಪಾಠಕನಲ್ಲಿರಬೇಕಾದ ಗುಣಗಳು :**

ಮಾಧುರ್ಯಮಕ್ಷರವ್ಯಕ್ತಿಃ ಪದಚ್ಛೇದಸ್ತು ಸುಸ್ವರಃ |
ಧೈರ್ಯಂ ಲಯಸಮರ್ಥಂ ಚ ಷಡೇತೇ ಪಾಠಕಾ ಗುಣಾಃ ||

ಕೇಳಲು ಇಂಪಾಗಿರುವುದು, ಸ್ಫುಟವಾದ ಅಕ್ಷರೋಚ್ಚಾರಣೆ, ಅರ್ಥವಾಗುವಂತೆ ಪದವಿಭಾಗ, ಸದಸ್ಯರಿಗೆ ಕೇಳುವಷ್ಟು ಗಟ್ಟಿಯಾದ ಧ್ವನಿ ಅಥವಾ ಪದ್ಯವಾದಲ್ಲಿ ಸರಿಯಾದ ಸ್ವರ, ಸಭಾಕಂಪವಿಲ್ಲದಿರುವಿಕೆ, ಲಯಬದ್ಧವಾಗಿರುವುದು—ಇವು ಆರು ಪಾಠಕನಲ್ಲಿರಬೇಕಾದ ಗುಣಗಳು.

**ಇವು ಪಾಠಕನಲ್ಲಿರಬಾರದ ದೋಷಗಳು :**

ಗೀತೀ ಶೀಘ್ರೀ ಶಿರಃಕಂಪೀ ಯಥಾಲಿಖಿತಪಾಠಕಃ |
ಅನರ್ಥಜ್ಞೋಽಲ್ಪಕಂಠಶ್ಚ ಷಡೇತೇ ಪಾಠಕಾಧಮಾಃ ||

ರಾಗವಾಗಿ ಎಳೆದು ಮಾತನಾಡತಕ್ಕವನು, ತ್ವರೆಯಿಂದ ಹೇಳುವವನು, ತಲೆಯಲ್ಲಾಡಿಸುವವನು, ಪುಸ್ತಕದಲ್ಲಿ ತಪ್ಪಾಗಿದ್ದರೂ ತಿದ್ದಿಕೊಳ್ಳದೆ ಹಾಗೆಯೇ ಓದುವವನು, ಅರ್ಥವನ್ನರಿತುಕೊಳ್ಳದಿರುವವನು, ಸದಸ್ಯರಿಗೆ ಕೇಳದಂತೆ ಕುಗ್ಗಿದ ಧ್ವನಿಯಲ್ಲಿ ಹೇಳುವವನು—ಈ ಆರು ಜನರು ಪಾಠಕಾಧಮರು (ರಾಗವಾಗಿ ಎಳೆದು ಮಾತನಾಡುವುದು ಮೊದಲಾದವು ದೋಷಗಳು).

**ಇವು ಶಬ್ದೋಚ್ಚಾರಣೆಯ ದೋಷಗಳು :**

ಶಂಕಿತ–ಹೌದೋ ಅಲ್ಲವೋ ಎಂಬ ಸಂದೇಹದಿಂದ ಉಚ್ಚರಿಸುವುದು, ಭೀತ–ಹೆದರುತ್ತ ಮಾತನಾಡುವುದು, ಉದ್ಘೃಷ್ಟ–ವಿರಾಮವಿಲ್ಲದೆ ಉದ್ದಕ್ಕೆ

ಹೇಳುತ್ತ ಹೋಗುವುದು, ಅವ್ಯಕ್ತ=ಅಸ್ಪಷ್ಟ, ಅನುನಾಸಿಕ=ಅನುನಾಸಿಕ ವಲ್ಲದ ವರ್ಣಗಳನ್ನು ಅನುನಾಸಿಕಗಳಂತೆ ಉಚ್ಚರಿಸುವುದು, ಕಾಕಸ್ವರ= ಕರ್ಣಕಠೋರಧ್ವನಿ, ಶಿರಸಿಗತ=ಎಲ್ಲ ಅಕ್ಷರಗಳನ್ನೂ ಮೇಲಕ್ಕೇರಿಸಿ ಸ್ವರಿತ ದಂತೆ ಉಚ್ಚರಿಸುವುದು, ಸ್ಥಾನವಿವರ್ಜಿತ = ಅಸ್ಥಾನದಲ್ಲಿ ಅಕ್ಷರವನ್ನು ಹೊರಡಿಸುವುದು (ಹಲ್ಲಿಲ್ಲದವನು ತಕಾರವನ್ನು ಉಚ್ಚರಿಸಿದಂತೆ), ಉಪಾಂಶು= ಇನ್ನೊಬ್ಬನಿಗೆ ಕೇಳದಂತೆ ಮೆಲ್ಲಗೆ ಹೇಳುವುದು, ದಷ್ಟ= ಸರಿಯಾಗಿ ಬಾಯನ್ನು ತೆರೆಯದೆ (ಇಕ್ಕಳದಲ್ಲಿ ಸಿಕ್ಕಿಸಿಕೊಂಡಂತೆ) ಉಚ್ಚರಿಸುವುದು, ತ್ವರಿತ=ಅತಿ ಶೀಘ್ರವಾದ ಉಚ್ಚಾರ, ನಿರಸ್ತ=ಅಕ್ಷರಗಳನ್ನು ಹೊರಗೆ ಎಸೆಯುವಂತೆ ಮಾತನಾಡುವುದು, ವಿಲಂಬಿತ = ಬಹಳ ತಡವಾಗಿ ಉಚ್ಚರಿಸುವುದು, ಗದ್ಗದಿತ=ಬಿಕ್ಕುವಂತೆ ಮಾತಾಡುವುದು, ಪ್ರಗೀತ=ಸಾಮಗಾನದಂತೆ ರಾಗ ವಾಗಿ ಮಾತಾಡುವುದು, ನಿಷ್ಪೀಡಿತ=ಅಕ್ಷರಗಳನ್ನು ಹಿಚುಕುವಂತೆ ಒತ್ತಿ ಹೇಳುವುದು, ಗ್ರಸ್ತಪದ=ವಾಕ್ಯದಲ್ಲಿರುವ ಪದಗಳನ್ನು ನುಂಗುವುದು, ಗ್ರಸ್ತಾಕ್ಷರ=ಅಕ್ಷರಗಳನ್ನು ನುಂಗುವುದು, ದೀನ=ದೈನ್ಯವನ್ನು ತೋರ್ಪಡಿಸು ವಂತೆ ಹೇಳುವುದು, ಸಂವೃತ=ಹ್ರಸ್ವ ಅಕಾರವೊಂದನ್ನು ಬಿಟ್ಟು ಉಳಿದ ಸ್ವರ ಗಳನ್ನು ಸಂವೃತವಾಗಿ—ಬಾಯನ್ನು ಸ್ವಲ್ಪ ಮುಚ್ಚಿ ಉಚ್ಚರಿಸುವುದು, ಧ್ಮಾತ=ಹ್ರಸ್ವವನ್ನು ದೀರ್ಘದಂತೆ ಎಳೆದು ಹೇಳುವುದು, ಏಣೀಕೃತ = ಅಕಾರವೋ ಓಕಾರವೋ ಎಂಬ ಸಂದೇಹಬರುವಂತೆ ಹೇಳುವುದು, ಅಂಬೂಕೃತ = ಅಸ್ಫುಟವಾಗಿ—ಬಾಯಲ್ಲಿ ಎಂಜಲನ್ನು ತುಂಬಿಕೊಂಡಿರು ವಂತೆ ಹೇಳುವುದು, ಅರ್ಧಕ=ದೀರ್ಘವನ್ನು ಹ್ರಸ್ವದಂತೆ ಹೇಳುವುದು ಇತ್ಯಾದಿ.

೨

## ನ ಜಾನೇ ನಿಲಯಂ ತಸ್ಯ ಸರ್ವಥಾ ಪಾಪರಕ್ಷಸಃ

—ಪುಟ ೫೬

ರಾವಣನ ವಾಸಸ್ಥಾನವು ತನಗೆ ತಿಳಿಯದೆಂದು ಸುಗ್ರೀವನು ಹೇಳಿ ದ್ದಾನೆ. ಇದು ಹೇಗೆ ಯುಕ್ತವಾದೀತು? ಮುಂದೆ ಸೀತಾನ್ವೇಷಣಕ್ಕಾಗಿ ವಾನರರನ್ನು ದಕ್ಷಿಣದಿಕ್ಕಿಗೆ ಕಳಿಸುವಾಗ—

ಸ ಹಿ ದೇಶಸ್ತು ವಧ್ಯಸ್ಯ ರಾವಣಸ್ಯ ದುರಾತ್ಮನಃ |
ರಾಕ್ಷಸಾಧಿಪತೇರ್ವಾಸಃ ಸಹಸ್ರಾಕ್ಷಸಮದ್ಯುತೇಃ ||

—ಕಿಷ್ಕಿ. ಸ. ೪೨, ಶ್ಲೋ. ೨೫

ಎಂದು ಹೇಳಿ ಲಂಕೆಯು ರಾವಣನ ವಾಸಸ್ಥಾನವೆಂದೂ ಅದು ದಕ್ಷಿಣ ಸಮುದ್ರದ ಮಧ್ಯದಲ್ಲಿದೆಯೆಂದೂ ಸ್ಪಷ್ಟವಾಗಿ ಸುಗ್ರೀವನು ಹೇಳುತ್ತಾನೆ. ಅಲ್ಲದೆ ವಾಲಿಯ ಹಿಂಸೆಯನ್ನು ತಡೆಯಲಾರದೆ ಭೂಮಂಡಲವನ್ನೆಲ್ಲ ಸುತ್ತಿ ಸಕಲ ಪ್ರದೇಶಗಳನ್ನೂ ಸ್ವತಃ ನೋಡಿದ್ದೇನೆಂದು ಶ್ರೀರಾಮನಿಗೆ ತಿಳಿಸಿದ್ದಾನೆ ರಾವಣನು ಸೀತೆಯನ್ನು ಅಪಹರಿಸಿಕೊಂಡು ದಕ್ಷಿಣದಿಕ್ಕಿಗೆ ಹೋಗುವುದನ್ನು ಸುಗ್ರೀವನು ನೋಡಿದ್ದಾನೆ. 'ಹ್ರಿಯಮಾಣಾ ಮಯಾ ದೃಷ್ಟಾ ರಕ್ಷಸಾ ರೌದ್ರಕರ್ಮಣಾ' ಎಂದು ಅವನೇ ಶ್ರೀರಾಮನಿಗೆ ಹೇಳಿದ್ದಾನೆ. ಕಬಂಧನು ಶಾಪಮುಕ್ತನಾದಮೇಲೆ ಸುಗ್ರೀವನ ಸಾಮರ್ಥ್ಯವನ್ನು ಶ್ರೀರಾಮನಿಗೆ ತಿಳಿಸುತ್ತ ಜಗತ್ತಿನ ಸಕಲ ಸ್ಥಳಗಳನ್ನೂ ಸುಗ್ರೀವನು ಬಲ್ಲನೆಂದು ಹೇಳಿ 'ನ ತಸ್ಯಾವಿದಿತಂ ಲೋಕೇ ಕಿಂಚಿದಸ್ತಿ ಹಿ ರಾಘವ' ಎಂದಿದ್ದಾನೆ. ಹೀಗಿರುವಾಗ, 'ನ ಜಾನೇ ನಿಲಯಂ ತಸ್ಯ ಸರ್ವಥಾ ಪಾಪರಕ್ಷಸಃ' ಎಂದು ನುಡಿದು ರಾವಣನ ಕುಲವು ಕೂಡ ತನಗೆ ಗೊತ್ತಿಲ್ಲವೆಂದು ಹೇಳುವ ಸುಗ್ರೀವನ ಆಶಯವೇನು ?

ಇದಕ್ಕೆ ಈ ರೀತಿಯಲ್ಲಿ ಸಮಾಧಾನ ಹೇಳಬಹುದೆಂದು ತೋರುತ್ತದೆ :

ಸುಗ್ರೀವನು ಉದ್ದೇಶಪೂರ್ವಕವಾಗಿಯೇ ಸತ್ಯವನ್ನು ಮರೆಮಾಚಿದ್ದಾನೆ. ರಾವಣನ ವಾಸಸ್ಥಳವನ್ನು ಹೇಳಿಬಿಟ್ಟರೆ, ಶೋಕಸಂತಪ್ತನಾದ ಶ್ರೀರಾಮನು ನೇರವಾಗಿ ಲಂಕೆಯ ಕಡೆಗೆ ಪ್ರಯಾಣಮಾಡಬಹುದು. ಅಥವಾ ಸುಗ್ರೀವನ ಬಳಿಯಲ್ಲಿ ಸಹಾಯಸಂಪತ್ತು ಇಲ್ಲದುದರಿಂದ ವಾಲಿಯ ನೆರವನ್ನು ಕೇಳಬಹುದು. ಉಭಯವಿಧದಲ್ಲಿಯೂ ತನ್ನ ಕಾರ್ಯವು ಕೈಗೂಡುವುದಿಲ್ಲವೆಂದು ಸುಗ್ರೀವನಿಗೆ ನಿಶ್ಚಯವಾದ್ದರಿಂದ, ಅವನು ಸತ್ಯವನ್ನು ಮರೆಮಾಚಿ ತನಗೆ ರಾವಣನ ವಿಷಯ ಗೊತ್ತಿಲ್ಲವೆಂದು ಹೇಳಿದನು. ಮೊದಲು ವಾಲಿಯನ್ನು ಸಂಹರಿಸಿ ತನ್ನ ಕಾರ್ಯವನ್ನು ಮಾಡಿಸಿಕೊಂಡು, ಅನಂತರ ಕಪಿಬಲದ ನೆರವಿನಿಂದ ಶ್ರೀರಾಮನ ಕಾರ್ಯವನ್ನು ಸಾಧಿಸೋಣವೆಂದು ನಿರ್ಧರಿಸಿಕೊಂಡನು.

ವಸ್ತುತಃ ಶ್ರೀಮದ್ರಾಮಾಯಣದಲ್ಲಿ ಅದೃಷ್ಟಲೀಲೆಯ ಒಂದು ಎಳೆ ಕಥಾಕುಸುಮಗಳನ್ನು ಉದ್ದಕ್ಕೆ ಜೋಡಿಸಿಕೊಂಡುಹೋಗಿದೆ. ಋಷಿಗಳೂ ದೇವತೆಗಳೂ ರಾವಣಾದಿ ರಾಕ್ಷಸರ ವಧೆಗೆ ಒಂದು ಹಂಚಿಕೆಯನ್ನೇ ಹೂಡಿದ್ದಾರೆ. ಭರದ್ವಾಜಮುನಿಗಳು—

ದೇವಾನಾಂ ದಾನವಾನಾಂ ಚ ಋಷೀಣಾಂ ಭಾವಿತಾತ್ಮನಾಮ್ |
ಹಿತಮೇವ ಭವಿಷ್ಯದ್ಧಿ ರಾಮಪ್ರವ್ರಜನಾದಿಹ ||

—ಅಯೋಧ್ಯಾ ಸ. ೯೩, ಶ್ಲೋ. ೩೧

ಎಂದು ಸಂಕ್ಷೇಪವಾಗಿ ಈ ಹಂಚಿಕೆಯನ್ನು ಸೂಚಿಸಿದ್ದಾರೆ. ಶ್ರೀರಾಮನನ್ನು ಉಪಾಯದಿಂದ ಪಂಚವಟಿಗೆ ಕಳಿಸಿದವರೂ ಋಷಿಗಳೇ. ಶರಭಂಗ, ಸುತೀಕ್ಷ್ಣ, ಅಗಸ್ತ್ಯರ ಪ್ರಕರಣಗಳಲ್ಲಿ ಈ ವಿಷಯವನ್ನು ಸೂಕ್ಷ್ಮವಾಗಿ ಮನಗಾಣಬಹುದು. ಜಟಾಯುವಿಗೆ ರಾವಣನ ಪರಿಚಯ ಚೆನ್ನಾಗಿದ್ದಿತೆಂದು ಅವನು ಶ್ರೀರಾಮನಿಗೆ ಕೊಟ್ಟ ವಿವರಗಳಿಂದ ತಿಳಿದುಬರುತ್ತದೆ. ಶ್ರೀರಾಮನ ಪ್ರಶ್ನೆಗೆ ಅವನು ಯಾವ ಯಾವುದೋ ಉತ್ತರವನ್ನು ಕೊಟ್ಟನೇ ಹೊರತು ರಾವಣನ ವಾಸಸ್ಥಾನವಾದ ಲಂಕೆಯ ವಿಷಯವನ್ನು ಹೇಳಲಿಲ್ಲ! ಕಬಂಧನು ಶಾಪ ಮುಕ್ತನಾದಮೇಲೆ ದಿವ್ಯಜ್ಞಾನವನ್ನು ಪಡೆದಿದ್ದರೂ ಸುಗ್ರೀವನ ವಿಷಯವನ್ನು ತಿಳಿಸಿ ಅವನೊಡನೆ ಸಖ್ಯವನ್ನು ಬೆಳೆಸಬೇಕೆಂದು ಹೇಳಿದನೇ ಹೊರತು ರಾವಣನ ವಾಸಸ್ಥಾನವನ್ನು ತಿಳಿಸಲಿಲ್ಲ! ರಾವಣನ ಪರಿಚಯವನ್ನು ಹೇಳದೆ, ಅವನ ಪರಿಚಯವುಳ್ಳವನನ್ನು ತಿಳಿಸುತ್ತೇನೆ ಎಂದು ಹೇಳುತ್ತಾನೆ! ವಾಲಿಯ ಸಹಾಯವನ್ನು ಪಡೆಯೆಂದು ಹೇಳದೆ, ಏಕಾಕಿಯಾಗಿ ತೊಳಲುತ್ತಿದ್ದ ಸುಗ್ರೀವನ ಸಖ್ಯವನ್ನು ಬೆಳೆಸಿಕೊ ಎಂದು ಉಪದೇಶಿಸುತ್ತಾನೆ! ಸುಗ್ರೀವನು ಹನುಮಂತ ನನ್ನು ದಕ್ಷಿಣದಿಕ್ಕಿಗೆ ಕಳಿಸಿದ್ದು ಲಂಕೆಯಲ್ಲಿ ಸೀತೆಯಿದ್ದಾಳೆಂದು ಸುಗ್ರೀವನಿಗೆ ನಿಶ್ಚಯವಾದ್ದರಿಂದಲೇ ಇರಬೇಕು. ಉಳಿದ ದಿಕ್ಕುಗಳಿಗೆ ಕಪಿಸೇನೆಯನ್ನು ಕಳಿಸಿದ್ದು ನಟನೆ ಮಾತ್ರವೇ.

ಇವೆಲ್ಲವೂ ದೈವಿಕವಾಗಿ ಒದಗಿದ ಘಟನೆಗಳು. ರಾವಣನು ಮಹಾ ತಪಸ್ವಿಯಾದ್ದರಿಂದ ಅವನ ಆಯುಸ್ಸು ದೃಢವಾಗಿ ಚಿರಕಾಲ ಇರತಕ್ಕದ್ದೇ. ಕಾಲವು ಬಂದ ಹೊರತು ಅವನ ಸಂಹಾರ ಯಾರಿಂದಲೂ ಶಕ್ಯವಲ್ಲ. ಅವನ ಪುಣ್ಯಸಂಚಯವು ಕ್ಷೀಣಿಸಿ ಮರಣಕ್ಕೆ ಕಾಲವು ಪಕ್ವವಾಗಬೇಕಾಗಿದೆ. ಒಂದು

ವರ್ಷದ ಅವಧಿಯನ್ನು ರಾವಣನು ಸೀತೆಗೆ ಗೊತ್ತುಮಾಡಿದ್ದೂ ದೈವಪ್ರೇರಣೆಯಿಂದಲೇ. ಆದ್ದರಿಂದ ಸುಗ್ರೀವನು ತನಗೆ ರಾವಣನ ನಿಲಯವು ತಿಳಿಯದೆಂದು ಹೇಳುವುದು ದೈವಪ್ರಚೋದನೆಯಿಂದ ಎಂದು ತಿಳಿಯಬೇಕಾಗಿದೆ.

೩

## ಯತ್ರೈಕಂ ಘಟತೇ ವಾಲೀ ನಿಷ್ಪತ್ರಯಿತುಮೋಜಸಾ

—ಪುಟಗಳು ೯೧-೯೨

**ಇದಕ್ಕೆ ಅನೇಕ ಬಗೆಯಲ್ಲಿ ಅರ್ಥ ಹೇಳುತ್ತಾರೆ :**

೧ ವಾಲಿಯು ಒಂದು ಸಾಲವೃಕ್ಷವನ್ನು ಅಲ್ಲಾಡಿಸಿ ಎಲೆಗಳೆಲ್ಲವೂ ಉದುರಿಹೋಗುವಂತೆ ಮಾಡಬಲ್ಲ.

೨ ಧನುಸ್ಸಿಲ್ಲದೆ ಬರಿಯ ದೇಹಬಲದಿಂದ ಬಾಣವನ್ನು ಚುಚ್ಚಿ ಆಚೆಗೆ ತೂರಿಹೋಗುವಂತೆ ಮಾಡಬಲ್ಲ.

೩ ಧನುಸ್ಸಿನಿಂದಲೇ ಬಾಣವನ್ನು ಹೊಡೆದು ಅದು ಮರದಲ್ಲಿ ತೂರಿ ಆಚೆಗೆ ಹೋಗುವಂತೆ ಮಾಡಬಲ್ಲ.

ಇವುಗಳಲ್ಲಿ ಮೊದಲನೆಯ ಅರ್ಥವು ಯುಕ್ತವಾಗಿ ಕಾಣುವುದಿಲ್ಲ. ಮರವನ್ನು ಅಲ್ಲಾಡಿಸಿ ಎಲೆಗಳೆಲ್ಲವನ್ನೂ ಉದುರಿಸುವುದು ದೇಹಬಲದಿಂದ ಶಕ್ಯವಾದದ್ದೇ ಅಲ್ಲ. ಶಕ್ಯವಾಗುವುದೆಂದು ಒಪ್ಪಿದರೂ ಪ್ರಕೃತಸಂದರ್ಭದಲ್ಲಿ ಸಮಂಜಸವಾಗದು. ಮುಂದೆ ಶ್ರೀರಾಮನ ಬಾಣವು ಸಪ್ತಸಾಲಗಳನ್ನೂ ತೂರಿಹೋದ್ದರಿಂದ ಸುಗ್ರೀವನಿಗೆ ಅವನ ಸಾಮರ್ಥ್ಯದಲ್ಲಿ ನಂಬಿಕೆಯಾಯಿತೆಂದು ವರ್ಣನೆ ಇದೆ. ಶ್ರೀರಾಮನು ಮರವನ್ನಲ್ಲಾಡಿಸಿ ಎಲೆಗಳನ್ನು ಉದುರಿಸಲಿಲ್ಲ. ಆದ್ದರಿಂದ ಅವರಿಬ್ಬರ ಸಾಮರ್ಥ್ಯವನ್ನು ಹೋಲಿಸಿ ಅಳೆಯುವುದು ಹೇಗೆ ?

ಮೂರನೆಯ ಅರ್ಥದಲ್ಲಿ ವಾಲಿಯ ಬಳಿ ಧನುಸ್ಸಿದ್ದಿತೆ ? ಅವನು ಬಿಲ್ಲುಗಾರನೆ ? ಎಂಬ ಪ್ರಶ್ನೆಗೆ ಅವಕಾಶ ಉಂಟು. ವಾಲಿಗೆ ಧನುರ್ವಿದ್ಯೆಯ ಪರಿಚಯವಿದ್ದಿತೆಂದು ಒಪ್ಪಿದರೆ ಬಾಧಕವೇನೂ ಇಲ್ಲ. ಆದ್ದರಿಂದ ಎರಡನೆಯ ಮತ್ತು ಮೂರನೆಯ ಅರ್ಥ ಸಮಂಜಸವಾಗಿ ತೋರುತ್ತದೆ.

ವಸ್ತುತಃ ಶ್ರೀಮದ್ರಾಮಾಯಣದಲ್ಲಿ ಅದೃಷ್ಟಲೀಲೆಯ ಒಂದು ಎಳೆ ಕಥಾಕುಸುಮಗಳನ್ನು ಉದ್ದಕ್ಕೆ ಜೋಡಿಸಿಕೊಂಡುಹೋಗಿದೆ. ಋಷಿಗಳೂ ದೇವತೆಗಳೂ ರಾವಣಾದಿ ರಾಕ್ಷಸರ ವಧೆಗೆ ಒಂದು ಹಂಚಿಕೆಯನ್ನೇ ಹೂಡಿದ್ದಾರೆ. ಭರದ್ವಾಜಮುನಿಗಳು—

ದೇವಾನಾಂ ದಾನವಾನಾಂ ಚ ಋಷೀಣಾಂ ಭಾವಿತಾತ್ಮನಾಮ್ |
ಹಿತಮೇವ ಭವಿಷ್ಯದ್ಧಿ ರಾಮಪ್ರವ್ರಜನಾದಿಹ ||

—ಅಯೋಧ್ಯಾ ಸ. ೯೨, ಶ್ಲೋ. ೩೧

ಎಂದು ಸಂಕ್ಷೇಪವಾಗಿ ಈ ಹಂಚಿಕೆಯನ್ನು ಸೂಚಿಸಿದ್ದಾರೆ. ಶ್ರೀರಾಮನನ್ನು ಉಪಾಯದಿಂದ ಪಂಚವಟಿಗೆ ಕಳಿಸಿದವರೂ ಋಷಿಗಳೇ. ಶರಭಂಗ, ಸುತೀಕ್ಷ್ಣ, ಅಗಸ್ತ್ಯರ ಪ್ರಕರಣಗಳಲ್ಲಿ ಈ ವಿಷಯವನ್ನು ಸೂಕ್ಷ್ಮವಾಗಿ ಮನಗಾಣಬಹುದು. ಜಟಾಯುವಿಗೆ ರಾವಣನ ಪರಿಚಯ ಚೆನ್ನಾಗಿದ್ದಿತೆಂದು ಅವನು ಶ್ರೀರಾಮನಿಗೆ ಕೊಟ್ಟ ವಿವರಗಳಿಂದ ತಿಳಿದುಬರುತ್ತದೆ. ಶ್ರೀರಾಮನ ಪ್ರಶ್ನೆಗೆ ಅವನು ಯಾವ ಯಾವುದೋ ಉತ್ತರವನ್ನು ಕೊಟ್ಟನೇ ಹೊರತು ರಾವಣನ ವಾಸಸ್ಥಾನವಾದ ಲಂಕೆಯ ವಿಷಯವನ್ನು ಹೇಳಲಿಲ್ಲ! ಕಬಂಧನು ಶಾಪ ಮುಕ್ತನಾದಮೇಲೆ ದಿವ್ಯಜ್ಞಾನವನ್ನು ಪಡೆದಿದ್ದರೂ ಸುಗ್ರೀವನ ವಿಷಯವನ್ನು ತಿಳಿಸಿ ಅವನೊಡನೆ ಸಖ್ಯವನ್ನು ಬೆಳೆಸಬೇಕೆಂದು ಹೇಳಿದನೇ ಹೊರತು ರಾವಣನ ವಾಸಸ್ಥಾನವನ್ನು ತಿಳಿಸಲಿಲ್ಲ! ರಾವಣನ ಪರಿಚಯವನ್ನು ಹೇಳದೆ, ಅವನ ಪರಿಚಯವುಳ್ಳವನನ್ನು ತಿಳಿಸುತ್ತೇನೆ ಎಂದು ಹೇಳುತ್ತಾನೆ! ವಾಲಿಯ ಸಹಾಯವನ್ನು ಪಡೆಯೆಂದು ಹೇಳದೆ, ಏಕಾಕಿಯಾಗಿ ತೊಳಲುತ್ತಿದ್ದ ಸುಗ್ರೀವನ ಸಖ್ಯವನ್ನು ಬೆಳೆಸಿಕೊ ಎಂದು ಉಪದೇಶಿಸುತ್ತಾನೆ! ಸುಗ್ರೀವನು ಹನುಮಂತ ನನ್ನು ದಕ್ಷಿಣದಿಕ್ಕಿಗೆ ಕಳಿಸಿದ್ದು ಲಂಕೆಯಲ್ಲಿ ಸೀತೆಯಿದ್ದಾಳೆಂದು ಸುಗ್ರೀವನಿಗೆ ನಿಶ್ಚಯವಾದ್ದರಿಂದಲೇ ಇರಬೇಕು. ಉಳಿದ ದಿಕ್ಕುಗಳಿಗೆ ಕಪಿಸೇನೆಯನ್ನು ಕಳಿಸಿದ್ದು ನಟನೆ ಮಾತ್ರವೇ.

ಇವೆಲ್ಲವೂ ದೈವಿಕವಾಗಿ ಒದಗಿದ ಘಟನೆಗಳು. ರಾವಣನು ಮಹಾ ತಪಸ್ವಿಯಾದ್ದರಿಂದ ಅವನ ಆಯುಸ್ಸು ದೃಢವಾಗಿ ಚಿರಕಾಲ ಇರತಕ್ಕದ್ದೇ. ಕಾಲವು ಬಂದ ಹೊರತು ಅವನ ಸಂಹಾರ ಯಾರಿಂದಲೂ ಶಕ್ಯವಲ್ಲ. ಅವನ ಪುಣ್ಯಸಂಚಯವು ಕ್ಷೀಣಿಸಿ ಮರಣಕ್ಕೆ ಕಾಲವು ಪಕ್ವವಾಗಬೇಕಾಗಿದೆ. ಒಂದು

ತಸ್ಮಾನ್ಮಹಾಸರೋಜಂ ಶಂಕುಂ ಸರಿತಾಂ ಪತಿಂ ತ್ವಂತಮ್ |
ಮಧ್ಯಂ ಪರಾರ್ಧಮಾಹುರ್ಯಥೋತ್ತರಂ ದಶಗುಣಂ ತಥಾ
ಜ್ಞೇಯಮ್ ||

'ಒಂದು' ಎಂಬ ಸಂಖ್ಯೆಯಿಂದ 'ಪರಾರ್ಧ'ದವರೆಗೆ ಸಂಖ್ಯಾಗಣನೆ. ಅದರ ಮೌಲ್ಯವು ಕ್ರಮವಾಗಿ ಹತ್ತರಷ್ಟು ಹೆಚ್ಚುತ್ತ ಹೋಗುತ್ತದೆ.

| | |
|---|---|
| ಅಯುತ=ಹತ್ತು ಸಾವಿರ | ಮಹಾಸರೋಜ=ಹತ್ತು ನಿಖರ್ವ |
| ಪ್ರಯುತ=ಹತ್ತು ಲಕ್ಷ | ಶಂಕು=ನೂರು ನಿಖರ್ವ |
| ಅರ್ಬುದ=ಹತ್ತು ಕೋಟಿ | ಸಮುದ್ರ=ಹತ್ತು ಶಂಕು |
| ವೃಂದ (ನ್ಯರ್ಬುದ)=ನೂರು ಕೋಟಿ | ಅಂತ=ನೂರು ಶಂಕು |
| ಖರ್ವ=ಹತ್ತುನೂರು ಕೋಟಿ | ಮಧ್ಯ=ಹತ್ತು ಅಂತ |
| ನಿಖರ್ವ=ನೂರುನೂರು ಕೋಟಿ | ಪರಾರ್ಧ=ನೂರು ಅಂತ |

(ಒಂದರ ಮುಂದೆ ಹದಿನೇಳು ಸೊನ್ನೆಗಳನ್ನಿಟ್ಟರೆ ಪರಾರ್ಧವಾಗುತ್ತದೆ)

೬

## ಯದಾ ತು ದುಂದುಭಿಂ ನಾಮ ದಾನವಂ ಮಹಿಷಾಕೃತಿಮ್

—ಪುಟ ೩೭೧

ಹಿಂದೆ ಒಂಬತ್ತನೆಯ ಸರ್ಗದಲ್ಲಿ 'ಮಾಯಾವೀ ನಾಮ ತೇಜಸ್ವೀ ಪೂರ್ವಜೋ ದುಂದುಭೇಃ ಸುತಃ' ಎಂದು ದುಂದುಭಿಯ ಮಗನಾದ ಮಾಯಾವಿಯ ವೃತ್ತಾಂತವನ್ನು ಹೇಳಿದೆ. ಈಗ ದುಂದುಭಿಯೇ ಯುದ್ಧಕ್ಕೆ ಬಂದಿದ್ದನೆಂದು ಹೇಳಿದರೆ ಪೂರ್ವಾಪರವಿರೋಧವಾಗುವುದಿಲ್ಲವೆ ?

ಶ್ರೀ ಗೋವಿಂದರಾಜರು ಹೀಗೆ ಅಭಿಪ್ರಾಯವನ್ನು ಹೇಳುತ್ತಾರೆ :

"ಆ ಸಮಯದಲ್ಲಿ ದುಂದುಭಿ, ಅವನ ಮಗನಾದ ಮಾಯಾವಿ— ಇಬ್ಬರೂ ಯುದ್ಧಕ್ಕೆ ಬಂದಿದ್ದರು. ಆಗ ದುಂದುಭಿಯು ಯಾವುದೋ ಕಾರಣದಿಂದ ಅಡಗಿಕೊಂಡಿದ್ದು, ವಾಲಿಯು ಬಿಲದಿಂದ ಹೊರಗೆ ಬಂದಮೇಲೆ ಪುನಃ ಯುದ್ಧಕ್ಕೆ ಬಂದು ವಾಲಿಯಿಂದ ಹತನಾದನು. ಹೀಗೆ ವರ್ಣಿಸುವುದು ವಾಲ್ಮೀಕಿಮುನಿಗಳ ಸ್ವಭಾವ. ಸುಂದರಕಾಂಡದಲ್ಲಿ ರಾವಣನು ಸೀತೆಯನ್ನು

ಹಿಂಸಿಸಲು ಹೊರಟಾಗ ಮಂಡೋದರಿಯು ತಡೆದಳೆಂದು ಹೇಳಿದೆ. ಅನಂತರ ಹನುಮಂತನು ಆ ಸಂದರ್ಭವನ್ನು ಕಪಿಗಳಿಗೆ ಹೇಳುವಾಗ ಧಾನ್ಯಮಾಲಿನಿಯು ರಾವಣನನ್ನು ತಡೆದಳೆಂದು ಉಕ್ತವಾಗಿದೆ ” ಅಲ್ಲಿ ರಾವಣನನ್ನು ಆ ಸ್ತ್ರೀಯರಿಬ್ಬರೂ ತಡೆದರೆಂದು ಊಹಿಸಿಕೊಳ್ಳಬೇಕು. ಹಾಗೆಯೇ ಪ್ರಕೃತದಲ್ಲಿ ಇಬ್ಬರು ದಾನವರೂ ಬಂದಿದ್ದರೆಂದು ಹೇಳಿದರೆ ವಿರೋಧವು ತಪ್ಪುವುದೆಂದು ಗೋವಿಂದ ರಾಜರ ಆಶಯ.

ಆದರೆ ‘ ಯದಾ ತು ದುಂದುಭಿಂ ನಾಮ…… ’ ಎಂಬ ಗ್ರಂಥದ ಶೈಲಿಯನ್ನು ನೋಡಿದರೆ, ಸುಗ್ರೀವನು ಹಿಂದಿನ ಪ್ರಕರಣವನ್ನೇ ಅನುವಾದ ಮಾಡುವಂತೆ ತೋರುತ್ತದೆ. ದುಂದುಭಿಯು ‘ ಮಹಿಷಾಕೃತಿ ’ಯಾಗಿದ್ದನೆಂದು ಇಲ್ಲಿ ವರ್ಣಿಸಿದೆ. ಅವನೇ ಗುಹೆಯನ್ನು ಹೊಕ್ಕನೆಂದೂ ಅವನ ರಕ್ತವೇ ಹರಿದು ಬಂದಿತೆಂದೂ ಹೇಳಿದೆ. ಆದ್ದರಿಂದ ದುಂದುಭಿಯೆಂದರೆ, ಅವನ ಮಗನಾದ ಮಾಯಾವಿಯೆಂದು ಇಲ್ಲಿ ಅರ್ಥಮಾಡಬಹುದು. ಅರಣ್ಯಕಾಂಡದಲ್ಲಿ ದನುಪುತ್ರನಾದ ಕಬಂಧನನ್ನು ದನುವೆಂದು ವ್ಯವಹರಿಸಿದಂತೆ, ಇಲ್ಲಿ ತಂದೆಯ ಹೆಸರಿನಿಂದ ಮಗನನ್ನು ದುಂದುಭಿಯೆಂದೇ ಕರೆದಿರಬೇಕು. ತಂದೆಯು ಮಹಿಷಾಕೃತಿಯಾದ್ದರಿಂದ ಮಗನೂ ಮಹಿಷಾಕೃತಿಯಾಗಿರಬಹುದು. ಅಲ್ಲದೆ ವಾಲಿಯು ದುಂದುಭಿಯನ್ನು ಕೊಂದು ಅವನ ಕಳೇಬರವನ್ನು ಮತಂಗಾಶ್ರಮಕ್ಕೆ ಎಸೆದನೆಂದು ಹಿಂದೆ ವರ್ಣಿಸಿದೆ. ಇಲ್ಲಿ ಮಹಿಷನನ್ನು ಗುಹೆಯಲ್ಲಿ ಕೊಂದನೆಂದೂ, ಬಿಲವನ್ನು ಸುಗ್ರೀವನು ಮುಚ್ಚಿಬಂದನೆಂದೂ ಹೇಳಿದೆ. ಆದ್ದರಿಂದ ದುಂದುಭಿಯೆಂದರೆ, ಅವನ ಮಗನಾದ ಮಾಯಾವಿ ಎಂದು ಹೇಳಬೇಕು. ಇದೊಂದು ಸಮಾಧಾನಾಂತರ.

೭

## ವಯಮಾಶ್ವಯುಜೇ ಮಾಸಿ ಕಾಲಸಂಖ್ಯಾವ್ಯವಸ್ಥಿತಾಃ

—ಪುಟ ೪೦೯

ಹನುಮಂತನಿಂದ ಪ್ರೇರಿತನಾದ ಸುಗ್ರೀವನು ಹದಿನೈದು ದಿನಗಳಲ್ಲಿ ಸಮಸ್ತ ಕಪಿಸೇನೆಯೂ ಬರಬೇಕೆಂದು ಆಶ್ವಯುಜಮಾಸದಲ್ಲಿ ಆಜ್ಞಾಪಿಸಿದನು. ಆಮೇಲೆ ಮಾರ್ಗಶೀರ್ಷದಲ್ಲಿ ಲಕ್ಷ್ಮಣನಿಂದ ಪ್ರೇರಿತನಾಗಿ, ಹತ್ತುರಾತ್ರಿಗಳಲ್ಲಿ

ಎಲ್ಲರೂ ಸಮಾವೇಶಗೊಳ್ಳಬೇಕೆಂದು ಪುನಃ ಸುಗ್ರೀವನು ಆಜ್ಞೆಯನ್ನಿತ್ತನು. ಪುಷ್ಯಮಾಸವು ಸೀತಾನ್ವೇಷಣೆಗೆ ಗೊತ್ತಾದ ಮಾಸ. ಮಾಘದಲ್ಲಿ ವಸಂತ ಕಾಲದ ಪುಷ್ಪಗಳು ಅರಳಲಾರಂಭಿಸಿದವು. ಋತುವ್ಯತ್ಯಯದಿಂದ ಮಾಘದಲ್ಲಿಯೇ ವಸಂತಚಿಹ್ನೆಗಳು ಕಾಣಿಸಿದ್ದು ಉತ್ಪಾತದಿಂದ ಆಗಿರಬಹುದು. ರಾಮಾಯಣದಲ್ಲಿ ಬರುವ ಸಂದರ್ಭಗಳ ಕಾಲನಿರ್ಣಯದ ವಿಷಯವಾಗಿ ವ್ಯಾಖ್ಯಾನಕಾರರಲ್ಲಿ ಬಹಳ ಮತಭೇದಗಳಿವೆ. ಸೀತಾನ್ವೇಷಣೆಗಾಗಿ ಸುಗ್ರೀವನು ಗೊತ್ತುಪಡಿಸಿದ ತಿಂಗಳು ಕಾರ್ತಿಕವೆಂದೂ, ಮಾರ್ಗಶೀರ್ಷವೆಂದೂ, ಪುಷ್ಯವೆಂದೂ, ಮಾಘವೆಂದೂ ಅಭಿಪ್ರಾಯಪಡುತ್ತಾರೆ. ಯುದ್ಧಕಾಂಡದ ಅನುಬಂಧದಲ್ಲಿ ಈ ಅಂಶವನ್ನು ವಿಸ್ತರವಾಗಿ ಚರ್ಚಿಸಲಾಗುವುದು.

೮

**ಬುದ್ಧ್ಯಾ ಹ್ಯಷ್ಟಾಂಗಯಾ ಯುಕ್ತಂ ಚತುರ್ಬಲಸಮನ್ವಿತಮ್ ।**
**ಚತುರ್ದಶಗುಣಂ ಮೇನೇ ಹನುಮಾನ್ ವಾಲಿನಃ ಸುತಮ್ ॥**

—ಪುಟ ೪೧೪

**೧. ಬುದ್ಧಿಯ ಅಷ್ಟಗುಣಗಳು :**

ಶುಶ್ರೂಷಾ ಶ್ರವಣಂ ಚೈವ ಗ್ರಹಣಂ ಧಾರಣಂ ತಥಾ ।
ಊಹಾಪೋಹಾರ್ಥವಿಜ್ಞಾನಂ ತತ್ತ್ವಜ್ಞಾನಂ ಚ ಧೀಗುಣಾಃ ॥

**೨. ಚತುರ್ಬಲಗಳು :**

ಸಾಮ, ದಾನ, ಭೇದ, ದಂಡ ಅಥವಾ ಬಾಹುಬಲ, ಮನೋಬಲ, ಉಪಾಯಬಲ, ಬಂಧುಬಲ.

**೩. ಚತುರ್ದಶಗುಣಗಳು :**

ದೇಶಕಾಲಜ್ಞತಾ ದಾರ್ಢ್ಯಂ ಸರ್ವಕ್ಲೇಶಸಹಿಷ್ಣುತಾ ।
ಸರ್ವವಿಜ್ಞಾನಿತಾ ದಾಕ್ಷ್ಯಮೂರ್ಜಃ ಸಂವೃತಮಂತ್ರತಾ ॥

ಅವಿಸಂವಾದಿತಾ ಶೌರ್ಯಂ ಶಕ್ತಿಜ್ಞತ್ವಂ ಕೃತಜ್ಞತಾ ।
ಶರಣಾಗತವಾತ್ಸಲ್ಯಮಮರ್ಷಿತ್ವಮಚಾಪಲಮ್ ॥

## ೯

## ಶುಶ್ರೂಷಮಾಣಂ ತಾರಸ್ಯ ಶುಕ್ರಸ್ಯೇವ ಪುರಂದರಮ್

—ಪುಟ ೪೧೫

ಇಂದ್ರನು ಶುಕ್ರನ ಉಪದೇಶವನ್ನು ಕೇಳುವ ಸಂದರ್ಭ ಯಾವುದು ? ಶುಕ್ರನೆಂದರೆ ಶುದ್ಧಸ್ವಭಾವದವನು. ಬೃಹಸ್ಪತಿಯೆಂದು ಕೆಲವರು ಅರ್ಥ ಮಾಡುತ್ತಾರೆ ಒಂದಾನೊಂದು ಸಂದರ್ಭದಲ್ಲಿ ಇಂದ್ರನಿಗೆ ಶುಕ್ರನು ಹಿತೋಪದೇಶವನ್ನು ಮಾಡಿರಬಹುದೆಂದು ಕೆಲವರು ಊಹಿಸುತ್ತಾರೆ. ' ಗುರೋರಿವ ಪುರಂದರಮ್ ' ಎಂದು ಪಾಠಾಂತರವೂ ಉಂಟು.

**ಮಹಾಭಾರತದ ಆದಿಪರ್ವದಲ್ಲಿ—**

ಯೋಗಾಚಾರ್ಯೋ ಮಹಾಬುದ್ಧಿರ್ದೈತ್ಯಾನಾಮಭವದ್ಗುರುಃ ।
ಸುರಾಣಾಂ ಚಾಪಿ ಮೇಧಾವೀ ಬ್ರಹ್ಮಚಾರೀ ಯತವ್ರತಃ ॥
—ಅ. ೬೬, ಶ್ಲೋ. ೪೩

ಎಂಬ ಶ್ಲೋಕದ ನೀಲಕಂಠೀಯವ್ಯಾಖ್ಯಾನದಲ್ಲಿ ಹೀಗೆ ಬರೆದಿದೆ : " ದೇವತೆಗಳ ಗುರುವಾದ ಬೃಹಸ್ಪತಿಯು ಯೋಗಬಲದಿಂದ ಎರಡು ದೇಹಗಳನ್ನು ಧರಿಸಿ ದೈತ್ಯರಿಗೂ ಗುರುವಾಗಿದ್ದನು (ಬೃಹಸ್ಪತಿಯೇ ಶುಕ್ರನಾಗಿದ್ದನು). ಮೈತ್ರಾಯಣೀಯಶ್ರುತಿಯಲ್ಲಿ ಈ ರೀತಿ ಇದೆ : ' ಬೃಹಸ್ಪತಿರ್ಹಿ ಶುಕ್ರೋ ಭೂತ್ವಾ ಇಂದ್ರಸ್ಯಾಭಯಾಯ ಅಸುರೇಭ್ಯಃ ಕ್ಷಯಾಯ ಇಮಾಮವಿದ್ಯಾಮಸೃಜತ್ ' "

ಬೃಹಸ್ಪತಿಯೇ ಶುಕ್ರನಾಗಿದ್ದರೂ ಪ್ರಕೃತದಲ್ಲಿ ' ಶುಕ್ರಸ್ಯೇವ ' ಎಂಬುದು ಬೃಹಸ್ಪತಿಯೆಂಬ ಅರ್ಥದಲ್ಲಿ ಸ್ವರಸವಾಗಿ ಹೊಂದುವುದಿಲ್ಲ. ಆದ್ದರಿಂದ ಈ ಉಪಮಾನದ ಆಶಯ ಹೀಗಿರಬಹುದು :

" ದೈತ್ಯಗುರುವಾದ ಶುಕ್ರನು ಇಂದ್ರನಿಗೆ ಹೇಳುವ ಬುದ್ಧಿವಾದವು ಇಂದ್ರನಿಗೆ ಹಿತಕರವಾಗದು. ಅದರಂತೆ ನಡೆದರೆ ಇಂದ್ರನಿಗೆ ಕೇಡು ಸಂಭವಿಸುವುದು ನಿಶ್ಚಯ. ಅದರಂತೆ ತಾರನ ಉಪದೇಶವು ಅಂಗದನಿಗೆ ಹಿತಕರವಲ್ಲ. ಶುಕ್ರನು ಇಂದ್ರನಿಗೆ ಹೇಳುವ ಬುದ್ಧಿವಾದದಂತೆ ತಾರನ ಮಾತು ಅಂಗದನ ವಿಪತ್ತಿಗೆ ಕಾರಣವಾಗಿತ್ತು." ವಿಪರೀತೋಪದೇಶಕ್ಕೆ ಇದು ಹೋಲಿಕೆ.

# ಅವಶಿಷ್ಟ

ಅರಣ್ಯಕಾಂಡದಲ್ಲಿ ೨೯೫ನೆಯ ಪುಟಕ್ಕೆ ಸಂಬಂಧಿಸಿದಂತೆ ಬರೆಯಬೇಕಾಗಿದ್ದ ಒಂದು ಅನುಬಂಧವು ಬಿಟ್ಟುಹೋಗಿದೆ. ಅದನ್ನು ಇಲ್ಲಿ ಬರೆಯಲಾಗಿದೆ :

**ಸರ್ವಲಕ್ಷಣಸಂಪನ್ನಂ ನ್ಯಗ್ರೋಧಪರಿಮಂಡಲಮ್**

**— ಅರಣ್ಯಕಾಂಡ, ಪುಟ ೨೯೫**

ನ್ಯಗ್ರೋಧಪರಿಮಂಡಲ ಎಂದರೇನು ? ಇದು ಶ್ರೀರಾಮನ ಆಕೃತಿಯ ವರ್ಣನೆ. ಈ ಶಬ್ದಕ್ಕೆ ಅನೇಕಬಗೆಯಲ್ಲಿ ತಾತ್ಪರ್ಯಾರ್ಥವನ್ನು ಹೇಳಿದ್ದಾರೆ. ನ್ಯಗ್ರೋಧವೆಂದರೆ ಆಲದಮರ. "ಆಲದಮರದಂತೆ ವಿಶಾಲವಾದ ಪುಷ್ಟ ಶರೀರ; ಆಲದಮರದಂತೆ ಸರ್ವರಿಗೂ ಆಶ್ರಯದಾತ ; ಆಶ್ರಿತರ ತಾಪವನ್ನು ಪರಿಹರಿಸತಕ್ಕವನು ; ಸರ್ವಕಾಲದಲ್ಲಿಯೂ ಸರ್ವರಿಗೂ ಅನುಕೂಲನಾದವನು."

ಆದರೆ ನ್ಯಗ್ರೋಧಪರಿಮಂಡಲ ಎಂಬುದು ಸಾಮುದ್ರಿಕಶಾಸ್ತ್ರದ ಒಂದು ಪಾರಿಭಾಷಿಕಶಬ್ದ. ಎರಡು ತೋಳುಗಳನ್ನೂ ನೀಳವಾಗಿ ಚಾಚಿದರೆ ಎಷ್ಟು ಉದ್ದವಾಗುವುದೋ ಅಷ್ಟೇ ಎತ್ತರವಿರುವ ಮನುಷ್ಯನು ನ್ಯಗ್ರೋಧ ಪರಿಮಂಡಲ. ಇದು ಮಹಾಪುರುಷಲಕ್ಷಣ. ಮಾತ್ಸ್ಯಪುರಾಣದ ೧೧೮ನೆಯ ಅಧ್ಯಾಯದಲ್ಲಿ—

ಮಹಾಧನುರ್ಧರಾಶ್ಚೈವ ತ್ರೇತಾಯಾಂ ಚಕ್ರವರ್ತಿನಃ |
ಸರ್ವಲಕ್ಷಣಸಂಪನ್ನಾ ನ್ಯಗ್ರೋಧಪರಿಮಂಡಲಾಃ ||

ನ್ಯಗ್ರೋಧೌ ತು ಸ್ಮೃತೌ ಬಾಹೂ ವ್ಯಾಮೋ ನ್ಯಗ್ರೋಧ ಉಚ್ಯತೇ |
ವ್ಯಾಮೇನ ಉಚ್ಛ್ರಯೋ ಯಸ್ಯ ಅಧ ಊರ್ಧ್ವಂ ಚ ದೇಹಿನಃ |
ಸಮೋಚ್ಛ್ರಯಪರೀಣಾಹೋ ನ್ಯಗ್ರೋಧಪರಿಮಂಡಲಃ ||

ಎಂದು ಹೇಳಿದೆ. ಭಟ್ಟಿಕಾವ್ಯದ ಟೀಕೆಯಲ್ಲಿ ಭರತಮಲ್ಲಿಕನು ಸಾಮುದ್ರಿಕ ಶಾಸ್ತ್ರದ ಈ ಶ್ಲೋಕವನ್ನು ಉದಾಹರಿಸಿದ್ದಾನೆ :

ಪ್ರಸಾರಿತಭುಜಸ್ಯೇಹ ಮಧ್ಯಭಾಗದ್ವಯಾಂತರಮ್ |
ಉಚ್ಛ್ರಾಯೇಣ ಸಮಂ ಯಸ್ಯ ನ್ಯಗ್ರೋಧಪರಿಮಂಡಲಃ ||

---

